ಶ್ರೀ ರ ಸ್ತು.

ಶ್ರೀಸೀತಾ ಲಕ್ಷ್ಮಣಸಮೇತ ಶ್ರೀರಾಮಚಂದ್ರ ಪರಬ್ರಹ್ಮಣೇ ನಮಃ.

# ಅ ವ ತಾ ರಿ ಕೆ.

ಇದುವರೆಗೆ ಸುಂದರಕಾಂಡದಲ್ಲಿ ಪುರುಷಕಾರಭೂತೆಯಾದ ಲಕ್ಷ್ಮೀದೇವಿಯ ಕೃತ್ಯವು ಹೇಳಲ್ಪಟ್ಟಿತು. ಈ ಯುದ್ಧಕಾಂಡದಲ್ಲಿ ಉಪಾಯಭೂತನಾದ ಈಶ್ವರನ ಕೃತ್ಯವು ಹೇಳಲ್ಪಡುವುದು. ಇದಲ್ಲದೆ ಈ ಕಾಂಡದಿಂದ ಲೋಕಕ್ಕುಪದೇಶಿಸಲ್ಪಡುವ ಸದಾಚಾರಗಳೂ, ರಾಜನೀತಿಗಳೂ ಮಹಾದ್ಭುತಗಳಾಗಿರುವುವು. ಆರಂಭದಲ್ಲಿಯೇ ರಾಮನು, ಸೀತಾನ್ವೇಷಣವೆಂಬ ಕಾರ್ಯವನ್ನು ನಡೆಸಿಬಂದ ಹನುಮಂತನನ್ನು ಬಹಳವಾಗಿ ಕೊಂಡಾಡಿ ಮನ್ನಿಸಿರುವುದರಿಂದ "ಪ್ರತ್ಯಕ್ಷೇ ಗುರವಃ ಸ್ತುತ್ಯಾಃ ಪರೋಕ್ಷೇ ಮಿತ್ರಬಾಂಧವಾಃ| ಕರ್ಮಾನ್ತೇ ದಾಸಭೃತ್ಯಾಶ್ಚ ನ ಕದಾಚನ ಪುತ್ರಕಾಃ"ಎಂಬ ನ್ಯಾಯವನ್ನನುಸರಿಸಿ, ಕಾರ್ಯವನ್ನು 'ಸಾಧಿಸಿಬಂದ ಭೃತ್ಯನನ್ನು ಸ್ವಾಮಿಯಾದವನು ಹೇಗೆ ಮನ್ನಿಸಬೇಕೆಂಬ ಲೋಕನೀತಿಯು ಬೋಧಿತವಾಗುವುದು. ಇತ್ತಲಾಗಿ ಸುಗ್ರೀವಾದಿವಾನರರ ದಂಡಯಾತ್ರೆ, ಅತ್ತಲಾಗಿ ರಾವಣನ ಮಂತ್ರಾಲೋಚನೆ, ಇತ್ಯಾದಿಪ್ರಕರಣಗಳಿಂದ ರಾಜರಿಗಿರಬೇಕಾದ ಸೇನಾಬಲಮಂತ್ರಬಲಾದಿಗಳ ಪ್ರಾಧಾನ್ಯವು ತೋರಿಸಲ್ಪಡುವುದು. ಇತ್ತಲಾಗಿ ವಾನರಿಗೆ ರಾಮಕಾರ್ಯವನ್ನು ನಡೆಸುವುದರಲ್ಲಿದ್ದ ಮಹೋತ್ಸಾಹವನ್ನೂ, ಅತ್ತಲಾಗಿ ಲಂಕೆಯಿಂದ ವಿಭೀಷಣನ ನಿರ್ಗಮನವನ್ನೂ ವಿವರಿಸುವ ಸಂದರ್ಭಗಳಲ್ಲಿ "ಯಾಂತಿ ನ್ಯಾಯಪ್ರವೃತ್ತಸ್ಯ ತಿರ್ಯಂಚೋಪಿ ಸಹಾಯತಾಂ|ಅಪಂಥಾನಂತು ಗಚ್ಛಂತಂ:ಸೋದರೋಪಿ ವಿಮುಂಚತಿ||"ನ್ಯಾಯದಲ್ಲಿ ಪ್ರವರ್ತಿಸುವವನಿಗೆ ತಿರ್ಯಗ್ಜಂತುಗಳೂ ಸಹಾಯವಾಗಿ ಬರುವುವು. ದುರ್ಮಾರ್ಗಪ್ರವರ್ತಕನನ್ನು ಒಡಹುಟ್ಟಿದವರೂ ತೊರೆಯುವರೆಂಬ ಅಮೂಲ್ಯ

ವಾದ ನೀತಿಯು ನಿದರ್ಶಿಸಲ್ಪಡುವುದು. ರಾವಣನಿಗೆ ವಿಭೀಷಣನು ಹೇಳ
ಹಿತವಾದಗಳೂ, ಇತರದುರ್ಮಂತ್ರಿಗಳು ಮಾಡಿದ ದುರ್ಬೋಧನೆಗಳ
ಲೋಕಕ್ಕೆ ಸದಸದ್ವಿವೇಕಗಳ ತಾರತಮ್ಯಕ್ಕೆ ಪ್ರಧಾನನಿದರ್ಶನಗಳು.
ವಣಪ್ರಯುಕ್ತವಾದ ಶಕ್ತಿಯಿಂದ ಲಕ್ಷ್ಮಣನು ಮೂರ್ಛಿತನಾಗಿದ್ದ
ದರ್ಭದಲ್ಲಿ, ರಾಮನ ವಿಲಾಪವೂ, ನಂದಿಗ್ರಾಮದಲ್ಲಿ ಭರತನ ಅಗ್ನಿಪ್ರವೇ
ಸನ್ನಾಹವೂ ಸಹೋದರರಲ್ಲಿರಬೇಕಾದ ಪರಸ್ಪರವಾತ್ಸಲ್ಯವನ್ನು ತೋ
ಸುವುವು. ಸೀತೆಯ ಅಗ್ನಿಪ್ರವೇಶದಿಂದ ಸ್ತ್ರೀಯರ ಪಾತಿವ್ರತ್ಯಮಹಿಮೆಯ
ಬೋಧಿತವಾಗುವುದು. ಇದರಂತೆಯೇ ಅಲ್ಲಲ್ಲಿನ ಕಥಾಸಂದರ್ಭಗಳಿಂದ
ನ್ನೂ ಅನೇಕನೀತಿಗಳೂ, ತತ್ವಾರ್ಥಗಳೂ ಸೂಚಿಸಲ್ಪಡುವುವು.

ಮುಖ್ಯವಾಗಿ ಈ ಕಾಂಡದಲ್ಲಿ ರಾಮಾಯಣಕ್ಕೆಲ್ಲಾ ಸಾರಭೂತವಾದ
ಭೀಷಣಶರಣಾಗತಿಯೂ, ಶ್ರೀರಾಮನ ಅಭಯಪ್ರದಾನವೂ ವಿಶೇಷಜ್ಞಾ
ನಬೋಧಕವಾಗಿರುವುದರಿಂದ, ಆ ಸಂದರ್ಭಗಳಲ್ಲಿ ಪೂರ್ವಾಚಾರ್ಯರು ವಿ
ರಿಸಿರುವ ಅರ್ಥವಿಶೇಷಗಳೂ, ಅಪೂರ್ವವಿಷಯಗಳೂ, ರಹಸ್ಯಭಾಗಗಳೂ
ಬಹಳ ಮನೋರಂಜಕಗಳಾಗಿ, ಮುಮುಕ್ಷುಗಳಿಗೆ ದಿವ್ಯಾಮೃತಪ್ರಾಯ
ಗಿರುವುವು. ಈ ಅರ್ಥವಿಶೇಷಗಳೆಲ್ಲವೂ ಅಭಯಪ್ರದಾನಸಾರವೆಂಬ ಪ್ರತ್ಯೇ
ಕಭಾಗವಾಗಿ ವಿವರಿಸಲ್ಪಟ್ಟಿವೆ.

---

ಸಳೆ, ಮೊಸಳೆ ಮೊದಲಾದ ಕ್ರೂರಜಂತುಗಳಿಗೆ ನಿತ್ಯಾಶ್ರಯವಾಗಿಯೂ
ರುವ ದೊಡ್ಡಕಂದಕವುಂಟು. ಅದರಮೇಲೆಸಂಚಾರಾರ್ಥವಾಗಿ ಹಲಗೆಗ
ಂದ ಮಾಡಿದ ಸೇತುವೆಗಳುಂಟು. ಅವು ಬಹಳ ವಿಸ್ತಾರವಾಗಿರುವುವಲ್ಲದೆ, ಆ
ಶ್ಯವಿದ್ದಾಗ ಹಲಗೆಗಳನ್ನು ಮೇಲಕ್ಕೆಹಾರಿಸಿ ಸಂಚಾರಕ್ಕವಕಾಶವಿಲ್ಲದಂತೆ
ಾಡುವುದಕ್ಕಾಗಿ ದೊಡ್ಡ ಯಂತ್ರಗಳಲ್ಲಿ ತಗುಲಿಸಲ್ಪಟ್ಟಿರುವುವು. ಆಯಂ
ಗಳೇ ಕಂದಕಗಳಮೇಲೆ ಸಂಚಾರಾರ್ಥವಾಗಿ ಮಾಡಲ್ಪಟ್ಟ ಹಲಗೆಗಳನ್ನು
ೇಲಕ್ಕೆ ಹಾರಿಸಿ, ಅಲ್ಲಿಗೆ ಶತ್ರುಸೈನ್ಯಗಳು ಬಂದಾಗ, ಅವುಗಳ ಪ್ರವೇಶ
ಕಾಶವಿಲ್ಲದಂತೆ ಲಂಕಾಪಟ್ಟಣವನ್ನು ರಕ್ಷಿಸುತ್ತಿರುವುವು.ಮತ್ತು ಅಲ್ಲಿ
ವಲಿರುವ ರಾಕ್ಷಸಭಟರಿಗಾಗಿ ಅನೇಕಗೃಹಗಳೂ ಏರ್ಪಡಿಸಲ್ಪಟ್ಟಿರುವು
ಅದರಲ್ಲಿಯೂ ಉತ್ತರದ್ವಾರದಲ್ಲಿರುವ ಹಲಗೆಯು ಬಹಳ ಸ್ಥೂಲ
ಯೂ, ದೃಢವಾಗಿಯೂ ನಿರ್ಮಿಸಲ್ಪಟ್ಟಿರುವುದು. ಅದನ್ನು ಕದಲಿಸು
ಕ್ಕೆ ಯಾರಿಂದಲೂ ಸಾಧ್ಯವಲ್ಲ. ಅದಕ್ಕಾಧಾರವಾಗಿ ಕಂದಕದಲ್ಲಿ ಅನೇ
ವರ್ಣಸ್ತಂಭಗಳು ನಿಲ್ಲಿಸಲ್ಪಟ್ಟಿರುವುವು.ಅಲ್ಲಲ್ಲಿ ಕಾವಲಿರುವ ರಾಕ್ಷಸರು
ರುವುದಕ್ಕಾಗಿ ನಡುನಡುವೆ ಬಂಗಾರದ ಜಗತಿಗಳು ಶೋಭಿಸುತ್ತಿರುವು
ರಾಮಾ! ರಾವಣನು ದ್ಯೂತಮದ್ಯಾದಿವ್ಯಸನಗಳಲ್ಲಿ ನಿತ್ಯಾಸಕ್ತನಾಗಿದ್ದ
ತನ್ನ ಸೈನ್ಯಗಳನ್ನು ನೋಡುವ ವಿಷಯದಲ್ಲಿಮಾತ್ರ ಎಚ್ಚರಿಕೆಯನ್ನು
ದೆ, ಪ್ರತಿದಿನವೂ ಅವುಗಳನ್ನು ಜಾಗರೂಕನಾಗಿ ನೋಡುತ್ತ, ಯಾವಾ
ೂ ಯುದ್ಧೋತ್ಸಾಹದಲ್ಲಿಯೇ ಇರುವನು.ಮತ್ತು ಆ ಲಂಕೆಯು ತ್ರಿಕೂ
ರ್ವತಶಿಖರದಲ್ಲಿರುವುದರಿಂದ, ಅದನ್ನೇರಿ ಮೇಲೆ ಹೋಗುವುದಕ್ಕೂ ತ
ಆಧಾರವಿಲ್ಲ! ದೇವತೆಗಳು ಅಂತರಿಕ್ಷಮಾರ್ಗದಿಂದಾದರೂ ಬಂದು ಅದ
ಪ್ರವೇಶಿಸುವುದಕ್ಕೆ ಸಾಧ್ಯವಲ್ಲ! ನೋಡುವಾಗಲೇ ಭಯವನ್ನು ಹುಟ್ಟಿ
ದು! ಜಲದುರ್ಗ, ವನದುರ್ಗ, ಪರ್ವತದುರ್ಗ,ಕೃತ್ರಿಮದುರ್ಗಗಳೆಂಬ
ಲ್ಕುದುರ್ಗಗಳೂ ಅದನ್ನು ರಕ್ಷಿಸುತ್ತಿರುವುವು. ಈ ದುರ್ಗರಕ್ಷಣವೂ
ರಲಿ ! ಆ ಲಂಕೆಯು ಅಪಾರವಾದ ಸಮುದ್ರಕ್ಕೆ ಆಚೆಯ ತೀರದ
ವುದರಿಂದ, ಸಹಜವಾಗಿಯೇ ಇತರರಿಗೆ ದುರ್ಗಮವಾಗಿರುವುದು. ಆದ
ಹಡಗಿನಿಂದ ಸಮುದ್ರವನ್ನು ದಾಟಿಹೋಗುವುದಕ್ಕೂ ದಾರಿಯಿಲ್ಲ!ಬೇರೆ

ಯವರಿಗೆ ಅಲ್ಲಿನ ವೃತ್ತಾಂತವು ತಿಳಿಯುವುದಕ್ಕೂ ಉಪಾಯವಿಲ್ಲ! ಆ ಮಹಾಸ ಮುದ್ರವೇ ಲಂಕೆಗೆ ಜಲದುರ್ಗಪ್ರಾಯವಾಗಿರುವುದು. ದೇವಪುರದಂತಿರುವ ಆ ಲಂಕೆಯು ತ್ರಿಕೂಟಪರ್ವತಾಗ್ರದಲ್ಲಿರುವುದರಿಂದ ಅದಕ್ಕೆ ಅದೇ ಪರ್ವತದು ರ್ಗವಾಗಿ, ಆನೆಕುದುರೆಗಳಿಂದ ತುಂಬಿ ಶತ್ರುಗಳಿಗೆ ಜಯಿಸಲಸಾಧ್ಯವಾಗಿರು ವುದು. ಹೀಗೆ ಅವಕ್ಕೆ ಸಹಜವಾಗಿಯೇ ವನಪರ್ವತದುರ್ಗಗಳೆರಡೂ ರಕ್ಷಕಗ ಳಾಗಿರುವುವು. ದುರಾತ್ಮನಾದ ಆ ರಾವಣನ ನಗರಿಯಲ್ಲಿ ಯಾವಕಡೆಯಲ್ಲಿನೋ ಡಿದರೂ ಶತ್ರುಗಳನ್ನು ಸಂಹರಿಸತಕ್ಕ ಶತಘ್ನಿಗಳೂ, ನಾನಾವಿಧಯಂತ್ರಗ ಳೂ, ಕಂದಕಗಳೂ ತುಂಬಿರುವುವಲ್ಲದೆ, ಅವೆಲ್ಲವೂ ಅದಕ್ಕೆ ಒಂದು ಅಪೂ ರ್ವಶೋಭೆಯನ್ನೂ ಉಂಟುಮಾಡುತ್ತಿರುವುವು. ಆ ಲಂಕೆಯ ಪೂರ್ವದ್ವಾರದ ಲ್ಲಿ ಹತ್ತುಸಾವಿರಮಂದಿ ರಾಕ್ಷಸರು ಯಾವಾಗಲೂ ಕಾವಲಿರುವರು. ಒಬ್ಬೊ ಬ್ಬರೂ ಶೂಲಗಳನ್ನು ಹಿಡಿದಿರುವರು! ಒಬ್ಬೊಬ್ಬರೂ ಖಡ್ಗಯುದ್ಧದಲ್ಲಿ ನಿ ಪುಣರು! ಅವರನ್ನು ದಾಟುವುದು ಯಾರಿಗೂ ಸಾಧ್ಯವಲ್ಲ! ಅದರ ದಕ್ಷಿಣದ್ವಾರ ದಲ್ಲಿ ಚತುರಂಗಸೈನ್ಯದೊಡನೆ ಲಕ್ಷರಾಕ್ಷಸರು ಕಾದಿರುವರು! ಆ ಸೈನ್ಯಕ್ಕೆ ಸೇ ರಿದ ಪದಾತಿಗಳೇ ಲೋಕೈಕವೀರರೆನಿಸಿಕೊಂಡಿರುವರು. ಅದರ ಪಶ್ಚಿಮದ್ವಾ ರದಲ್ಲಿ ಹತ್ತು ಲಕ್ಷರಾಕ್ಷಸರು ಕಾವಲಾಗಿರುವರು! ಅವರಲ್ಲಿ ಒಬ್ಬೊಬ್ಬರೂ ಸರ್ವಾಸ್ತ್ರವಿಶಾರದರಾಗಿ, ಕತ್ತಿಗಳನ್ನೂ, ಗುರಾಣಿಗಳನ್ನೂ ಹಿಡಿದು ನಿಂತಿರು ವರು! ಉತ್ತರದ್ವಾರದಲ್ಲಿ ನೂರುಕೋಟಿ ರಾಕ್ಷಸರಿರುವರು. ಅವರಲ್ಲಿ ಕೆಲವ ರು ರಥಿಕರಾಗಿಯೂ, ಕೆಲವರು ರಾವುತರಾಗಿಯೂ, ಕೆಲವರು ಆನೆಗಳಮೇಲೆ ಯುದ್ಧಮಾಡುವವರಾಗಿಯೂ ಇರುವರು. ಅವರೆಲ್ಲರೂ ಸತ್ಕುಲದಲ್ಲಿ ಹುಟ್ಟಿ, ರಾವಣನ ವಿಶ್ವಾಸಕ್ಕೂ ಗೌರವಕ್ಕೂ ಪಾತ್ರರಾಗಿರುವರು. ಇದಲ್ಲದೆ ಆ ಲಂಕೆಯ ನಡುವೆ ಅಲ್ಲಲ್ಲಿ ಸಾವಿರಸಾವಿರವಾಗಿ ರಾಕ್ಷಸರು ಕಾವಲಿರುವ ರು. ಅವರನ್ನು ಧಿಕ್ಕರಿಸುವುದಕ್ಕಾದರೂ ಯಾರಿಗೂ ಸಾಧ್ಯವಲ್ಲ. ಅಲ್ಲಿ ಕಾವಲಿರುವ ರಾಕ್ಷಸರ ಸಂಖ್ಯೆಯೆಲ್ಲವೂ ಸೇರಿ ಒಂದುಕೋಟಿಯವರೆಗೂ ಇರುವುದು. ರಾಮಾ! ಅದರೇನು? ನಾನು ಲಂಕೆಯನ್ನು ಪ್ರವೇಶಿಸಿದಾಗಲೇ ಆ ಲಂಕೆಯ ಸುತ್ತಿನ ಕಂದಕಗಳಮೇಲಿರುವ ಮರದ ಸೇತುವೆಗಳೆಲ್ಲವನ್ನೂ ಮುರಿದಿರುವೆನು. ಅಲ್ಲಿನ ಬಾಗಿಲುಗುಳಿಗಳೆಲ್ಲವನ್ನೂ ಪುಡಿಮಾಡಿರುವೆನು. ಆ ಲಂ

ಕೆಯುನ್ನೂ ಸುಟ್ಟಿರುವೆನು.ಅಲ್ಲಿನ ಪ್ರಾಕಾರಗಳನ್ನೂ ಕೆಡಹಿ ಬಂದಿರುವೆನು.ಆ ದುದರಿಂದ ಇನ್ನು ಮುಂದೆ ನಿಮಗೆ ಅಷ್ಟಾಗಿ ಕಷ್ಟವೇನೂ ತೋರದು! ಮ ತ್ತು ನಾನು ಅಲ್ಲಿನ ರಾವಣಸೈನ್ಯದಲ್ಲಿ ಕೆಲವು ಭಾಗವನ್ನು ಕೊಂದೂ ಬಂದಿರು ವೆನು. ಇನ್ನುಮೇಲೆ ಏನಾದರೂ ಒಂದುಪಾಯದಿಂದ ನಾವೆಲ್ಲರೂ ಸೇರಿ ಸ ಮುದ್ರವನ್ನು ದಾಟಿಯೇ ಬಿಡಬೇಕು. ನಾವು ಸಮುದ್ರವನ್ನು ದಾಟುವುದೊಂ ದೇ ತಡೆ! ಅದನ್ನು ದಾಟಿದಮೇಲೆ ಲಂಕೆಯು ಹತವಾದಂತೆಯೇ ತಿಳಿ! ರಾ ಮಾ! ಈ ಅಂಗದನು! ಈ ಮೈಂದನು! ಈ ದ್ವಿವಿದನು ! ಈ ಜಾಂಬವಂತ ನು! ಈ ಪನಸನು! ಈ ನಲನು! ಸೇನಾಪತಿಯಾದ ಈ ನೀಲನು! ಇವರಿಷ್ಟು ಮಂದಿಯೇ ಸಾಕು! ಇತರ ವಾನರಸೈನ್ಯದಿಂದ ನಮಗೆ ನಡೆಯಬೇಕಾದ ಕೆ ಲಸವೇಇಲ್ಲ.ಇವರೆಲ್ಲರೂ ಒಂದೇನೆಗೆತಕ್ಕೆ ಈಮಹಾಸಮುದ್ರವನ್ನು ಹಾರಬ ಲ್ಲರು.ಇವರು ಆ ಸಮುದ್ರವನ್ನು ಹಾರಿದ ಮಾತ್ರಕ್ಕೆ, ಆ ಲಂಕೆಯನ್ನು ಅದಕ್ಕೆ ಸೇರಿದ ಪರ್ವತಗಳೊಡನೆಯೂ,ಅಲ್ಲಿನ ಕಾಡುಗಳೊಡನೆಯೂ,ಅಲ್ಲಿನ ತೋರಣಪ್ರಾಕಾರಗಳೊಡನೆಯೂ, ಅಲ್ಲಿನ ರಾಕ್ಷಸಗೃಹಗಳೊಡನೆಯೂ, ಅದರ ಕಂದಕದೊಡನೆಯೂ ಕಿತ್ತು ತರಬಲ್ಲರು. ಈ ಸಮಸ್ತವಾನರಸೈನ್ಯಗ ಳಲ್ಲಿಯೂ,ಸಾರಭೂತರಾದ ಈ ಅಂಗದಾದಿಗಳಿಗೆ ಮಾತ್ರ, ಈಗಲೇ ನೀನು ಆಜ್ಞೆಯನ್ನು ಮಾಡು! ಅನುಕೂಲವಾದ ಶುಭಮುಹೂರ್ತದಲ್ಲಿ ಜಯಪ್ರ ಯಾಣಕ್ಕೆ ನಮಗೂ ಅನುಮತಿಯನ್ನು ಕೊಡು" ಎಂದನು. ಇಲ್ಲಿಗೆ ಮೂರ ನೆಯ ಸರ್ಗವು.

---

ರಾಮಾಜ್ಞೆಯಿಂದ ಸುಗ್ರೀವನು ಸೇನಾಸನ್ನಾಹಗ ಳನ್ನು ಮಾಡಿಕೊಂಡು ದಂಡಯಾತ್ರೆಗೆ ಹೊರಟುದು. ಹನುಮಂತನಮೇಲೆ ರಾಮನೂ, ಅಂಗದನಮೇಲೆ ಲ ಕ್ಷ್ಮಣನೂ ಏರಿ ಪ್ರಯಾಣಹೊರಟುದು. ಮಾರ್ಗದಲ್ಲಿ ಶುಭನಿಮಿತ್ತಗಳೊಡನೆ ಸಮುದ್ರತೀರವನ್ನು ಸೇರಿದಮೇ ಲೆ, ಅಲ್ಲಿ ನೀಲನು ಸೇನೆಗಳನ್ನು ನಿಲ್ಲಿಸಿದುದು.

ಮಹಾತೇಜಸ್ವಿಯಾಗಿಯೂ, ಸತ್ಯಪರಾಕ್ರಮನಾಗಿಯೂ ಇರುವ ರಾಮನು, ಕ್ರಮವಾಗಿ ಹನುಮಂತನು ಹೇಳಿದುದೆಲ್ಲವನ್ನೂ ಕೇಳಿ, ತಿರುಗಿ

ಅವನನ್ನು ಕುರಿತು, "ಎಲೆ ವಾಯುಪುತ್ರನೆ ! ಭಯಂಕರವಾದ ಆ ರಾವಣ
ನಗರಿಯ ಸ್ಥಿತಿಯೆಲ್ಲವನ್ನೂ ನೀನು ಹೇಳಿದಂತಾಯಿತು ? ಆದರೇನು ? ಇರಲಿ?
ಶೀಘ್ರದಲ್ಲಿಯೇ ಅದನ್ನು ನಾನು ಧ್ವಂಸಮಾಡುವೆನು ನೋಡು ! ಇದು
ಸತ್ಯವೆಂದು ತಿಳಿ !" ಎಂದು ಹೇಳಿ, ಸುಗ್ರೀವನ ಕಡೆಗೆ ತಿರುಗಿ, "ಸುಗ್ರೀ
ವಾ! ಈ ಮುಹೂರ್ತದಲ್ಲಿಯೇ ಪ್ರಯಾಣಹೊರಡಬೇಕೆಂಬುದು ನನ್ನ ಉ
ದ್ದೇಶವು. ಈಗ ಸೂರ್ಯನು ನಡುಹಗಲಲ್ಲಿರುವುದರಿಂದ, ಈ ಅಭಿಜಿನ್ಮುಹೂ
ರ್ತವೇ ನಮ್ಮ ಪ್ರಯಾಣಕ್ಕೆ ಯುಕ್ತಕಾಲವು. ಇದೇ ಜಯಸೂಚಕವಾದ
ಶುಭಮುಹೂರ್ತವು.ಸೂರ್ಯನು ಮಧ್ಯಗತನಾಗಿರುವಾಗ,ಈ ಅಭಿಜಿನ್ಮುಹೂ
ರ್ತದಲ್ಲಿಯೇ ನಾವು ಪ್ರಯಾಣಮಾಡಿದರೆ ನಮಗೆ ಜಯವೇ ಸಿದ್ಧವು. ನಾ
ವು ಈ ಜಯಕಾಲದಲ್ಲಿ ಪ್ರಯಾಣಹೊರಟರೆ ಸೀತೆಯನ್ನು ಕದ್ದುಯ್ದ
ಆ ರಾಕ್ಷಸನು ಎಲ್ಲಿ ಹೋದರೆತಾನೇ ಇನ್ನೆಂದಿಗೆ ತಪ್ಪಿಸಿಕೊಳ್ಳಬಲ್ಲನು ?
ವಿಷವನ್ನು ಕುಡಿದು ಸಾಯುವ ಸ್ಥಿತಿಯಲ್ಲಿರುವವನೂಕೂಡ,ಸಾಯುವಕಾಲ
ದಲ್ಲಿ ಅಮೃತಸ್ಪರ್ಶವನ್ನು ಹೊಂದಿ ಬದುಕುವಂತೆ, ಪ್ರಾಣಾಂತಕರವಾದ
ಅಷ್ಟು ಕಷ್ಟದಲ್ಲಿ ಸಿಕ್ಕಿಬಿದ್ದಿರುವ ಸೀತೆಯು, ನಮ್ಮ ಈ ದಂಡಯಾತ್ರೆಯ
ನ್ನು ಕೇಳಿದರೆ, ಸ್ವಲ್ಪವಾದರೂ ಆಶೋತ್ತರವನ್ನು ಹೊಂದಬಹುದು. ಎಲೆ
ಸುಗ್ರೀವಾ ! ಈಗ [1] ಉತ್ತರಾನಕ್ಷತ್ರವಾದುದರಿಂದ ಪುನರ್ವಸುವಿನಲ್ಲಿ ಹು
ಟ್ಟಿದ ನನಗೆ ಇದು ಸಾಧನತಾರೆಯು. ನಾಳೆ ಚಂದ್ರನು ಹಸ್ತನಕ್ಷತ್ರ
ದೊಡನೆ ಸೇರುವನು.ಅದು ನನಗೆ ವಧತಾರೆಯಾಗುವುದು. ಆದುದರಿಂದ ಸ
ಮಸ್ತಸೈನ್ಯಗಳೊಡನೆ ಈ ದಿನವೇ ಪ್ರಯಾಣಮಾಡುವೆವು. ಇದೋ ! ಆಗ
ಲೇ ನನಗೆ ಶುಭನಿಮಿತ್ತಗಳೂ ತೋರುತ್ತಿರುವುವು. ಈಗ ಹೊರಟರೆ ರಾವ
ಣನನ್ನು ಕೊಂದು ಸೀತೆಯನ್ನು ತರುವುದೇ ನಿಜವು. ಇದೋ ! ಈಗ ನನ್ನ
ನೇತ್ರವು ಮೇಲಕ್ಕದರುತ್ತಿರುವುದರಿಂದ, ನನ್ನ ಕೋರಿಕೆಗೆ ಜಯವು ಸಿದ್ಧ
ವೆಂಬುದನ್ನೇ ಸೂಚಿಸುವಂತಿರುವುದು." ಎಂದನು. ರಾಮನು ಹೇಳಿದ
ಈ ಮಾತನ್ನು ವಾನರರಾಜನಾದ ಸುಗ್ರೀವನೂ,ಲಕ್ಷ್ಮಣನೂ ಸಂತೋಷ

---

1 ಉತ್ತರಫಲ್ಗುನಿಯಲ್ಲಿ ಪ್ರಯಾಣವನ್ನು ಹೇಳಿರುವುದರಿಂದ, ಫಾಲ್ಗುನಮಾಸದ
ಪೂರ್ಣಿಮೆಯಲ್ಲಿ ರಾಮನ ಪ್ರಯಾಣವೆಂದು ತಿಳಿಯಬೇಕು.

ಧಿಂದನುಮೋದಿಸಲು, ಕಾರ್ಯನಿಪುಣನಾದ ರಾಮನು ತಿರುಗಿ ಸುಗ್ರೀವನನ್ನು ಕುರಿತು “ಎಲೆ ವಾನರೇಂದ್ರನೆ ! ಮುಂದೆ ದಾರಿಯನ್ನು ನೋಡುವುದಕ್ಕಾಗಿ ನೀಲನು ಈ ಸಮಸ್ತವಾನರಸೈನ್ಯಕ್ಕೂ ಮುಂದಾಗಿ ಹೋಗಲಿ ! ವೇಗಶಾಲಿಗಳಾದ ನೂರುಸಾವಿರಮಂದಿ ವಾನರರು ಅವನ ಸಹಾಯಕ್ಕಾಗಿ ಅವನ ಸಂಗಡಲೇ ಹೋಗಬೇಕು !” ಎಂದನು. ಇಷ್ಟರಲ್ಲಿಯೇ ನೀಲನು ಸಮೀಪದಲ್ಲಿ ಬಂದು ನಿಲ್ಲಲು, ಅವನನ್ನು ನೋಡಿ ರಾಮನು “ಎಲೆ ಸೇನಾಪತೀ ! ಫಲಮೂಲಸಮೃದ್ಧಿಯಿಂದಲೂ, ತಂಪಾದ ಮರಗಳ ಸಾಲಿನಿಂದಲೂ, ಶೀತಲವಾದ ನೀರಿನಿಂದಲೂ ಕೂಡಿ, ವಿಶೇಷವಾಗಿ ಜೇನು ಸಿಕ್ಕತಕ್ಕ ದಾರಿಯನ್ನು ನೋಡಿ, ಆ ದಾರಿಯಿಂದಲೇ ಈ ನಮ್ಮ ಸಮಸ್ತವಾನರಸೈನ್ಯವನ್ನೂ ಸಾಗಿಸಬೇಕು. ನಾವು ಬರುವುದನ್ನು ತಿಳಿದರೆ, ದುರಾತ್ಮರಾದ ರಾಕ್ಷಸರು, ದಾರಿಯಲ್ಲಿ ಸಿಕ್ಕಬಹುದಾದ ಫಲಮೂಲಗಳಿಗೂ, ಪಾನದ್ರವ್ಯಗಳಿಗೂ ವಿಷಾದಿಗಳನ್ನು ಸೇರಿಸಿ ಕೆಡಿಸಬಹುದು. ಅದಕ್ಕವಕಾಶವಿಲ್ಲದಂತೆ ನೀನು ಯಾವಾಗಲೂ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಮತ್ತು ನಮ್ಮ ಶತ್ರುಗಳು ನಾವು ಬರುವುದನ್ನು ತಿಳಿದರೆ ಅಲ್ಲಲ್ಲಿ ರಹಸ್ಯವಾದ ನಿಮ್ನಪ್ರದೇಶಗಳಲ್ಲಿಯೂ, ಜಲದುರ್ಗಗಳಲ್ಲಿಯೂ, ಕಾಡುಗಳಲ್ಲಿಯೂ, ಅವಕಾಶವನ್ನು ನೋಡಿ ನಮ್ಮನ್ನು ಕೊಲ್ಲುವುದಕ್ಕಾಗಿ ತಮ್ಮ ಸೈನ್ಯಗಳನ್ನಿರಿಸಬಹುದು. ಆದುದರಿಂದ ನಮ್ಮ ವಾನರರು ಮೇಲೆ ಹಾರಿ ಆಕಾಶದಿಂದಲೇ ಆಯಾಸ್ಥಳಗಳನ್ನು ಚೆನ್ನಾಗಿ ಪರೀಕ್ಷಿಸಿ ನೋಡುತ್ತ ಎಚ್ಚರಿಕೆಯಿಂದ ಹೋಗಬೇಕು. ನಮ್ಮ ಸೈನ್ಯದಲ್ಲಿ ಯಾವುದು ನಿಸ್ಸಾರವೆಂದು ನಿನಗೆ ತೋರಬಹುದೋ ಅದನ್ನು ಇಲ್ಲಿನ ಕಾರ್ಯಕ್ಕಾಗಿ ಇಲ್ಲಿಯೇ ನಿಲ್ಲಿಸಿಡು? ನೀಲಾ! ಈಗನಾವು ಪ್ರಯತ್ನಿಸುವ ಕಾರ್ಯವೇನೋ ಬಹಳ ಭಯಂಕರವಾದುದು! ಆದುದರಿಂದ ನಮ್ಮ ಸೈನಿಕರೆಲ್ಲರೂ ತಪ್ಪದೆ ಎಚ್ಚರಿಕೆಯಿಂದ ತಮ್ಮತಮ್ಮ ವೀರ್ಯವನ್ನು ಪಯೋಗಿಸಬೇಕು. ಸಮುದ್ರಪ್ರವಾಹದಂತೆ ವಿಸ್ತಾರವಾಗಿಯೂ ಭಯಂಕರವಾಗಿಯೂ ಇರುವ ನಮ್ಮ ಮುಖ್ಯಸೈನ್ಯವನ್ನು ನಡೆಸಿಕೊಂಡು ಹೋಗುವುದಕ್ಕಾಗಿ, ಮಹಾಬಲಾಢ್ಯರಾದ ಸಾವಿರಾರುಮಂದಿ ವಾನರವೀರರನ್ನು ನಿಯಮಿಸಬೇಕು. ಗೋಸನುಖನ ಮುಂದೆ ಹೋಗುವ ಮಹಾವೃಷ

ಭೆಗಳಂತೆ, ಪರ್ವತಾಕಾರವುಳ್ಳ ಗಜನೂ,ಮಹಾಬಲಾಢ್ಯನಾದ ಗವಯನೂ, ಗವಾಕ್ಷನೂ ಆ ಸೇನೆಯ ಮುಂಭಾಗದಲ್ಲಿ ಹೊರಡಲಿ ! ವಾನರೋತ್ತಮ ನಾದ ಋಷಭನು ಆ ಸೇನೆಯ ಬಲಭಾಗದಲ್ಲಿ ನಿಂತು ಅದನ್ನು ರಕ್ಷಿಸುತ್ತಿ ರಲಿ! ಮದದಾನೆಯಂತೆ ಇತರರಿಂದ ಇದಿರಿಸಲಾಗದ ಮಹಾಬಲವುಳ್ಳ ಗಂಧಮಾದನನು, ಆ ಸೇನೆಗೆ ಎಡಭಾಗದಲ್ಲಿದ್ದು ಅದನ್ನು ರಕ್ಷಿಸುತ್ತಿರಲಿ! ನಾ ನು ಐರಾವತವನ್ನೇರಿದ ಇಂದ್ರನಂತೆ ಈ ಹನುಮಂತನ ಹೆಗಲಮೇಲೆ ಕುಳಿ ತು, ಸಮಸ್ತಸೈನಿಕರಿಗೂ ಉತ್ಸಾಹವನ್ನು ಕೊಡುತ್ತ, ಸೇನೆಯ ಮಧ್ಯದಲ್ಲಿ ಬರುವೆನು. ಯಕ್ಷರಾಜನಾದ ಕುಬೇರನು ಸಾರ್ವಭೌಮವೆಂಬ ದಿಗ್ಗಜವನ್ನೇರಿ ಬರುವಂತೆ ಈ ಲಕ್ಷ್ಮಣನು ಅಂಗದನಮೇಲೇರಿ ನನ್ನ ಪಕ್ಕದಲ್ಲಿ ಬರಲಿ ! ಜಾಂ ಬವಂತನೂ,ಸುಷೇಣನೂ,ವೇಗದರ್ಶಿಯೂ ಈ ಮೂವರೂ ಆ ಸೇನೆಯ ಉ ದರಪ್ರದೇಶವನ್ನು ರಕ್ಷಿಸುತ್ತಬರಲಿ!ಮಹಾಬಲವುಳ್ಳ ಋಕ್ಷರಾಜನು ಆ ಮೂ ವರಿಗೂ ಸಹಾಯಕನಾಗಿರಲಿ" ಎಂದನು. ರಾಮನು ಹೇಳಿದ ಈ ಮಾತ ನ್ನುಕೇಳಿ ಸಮಸ್ತವಾನರಸೈನ್ಯಕ್ಕೂ ಅಧಿರಾಜನಾದ ಸುಗ್ರೀವನು, ಅಲ್ಲಿದ್ದ ವಾನರರನ್ನು ಕರೆದು, ಆಗಲೇ ಪ್ರಯಾಣಹೊರಡುವಂತೆ ನಿಯಮಿಸಿದನು. ಆಗಲೇ ಅಲ್ಲಲ್ಲಿನ ಗುಹೆಗಳಲ್ಲಿಯೂ, ಪರ್ವತಶಿಖರಗಳಲ್ಲಿಯೂ ಅಡಗಿದ್ದ ಮ ಹಾವೀರ್ಯವುಳ್ಳ ಸಮಸ್ತವಾನರರೂ ಮೇಲೆ ಹಾರಿ ಯುದ್ಧೋತ್ಸಾಹದಿಂದ ಹೊರಟರು. ರಾಮನೂಕೂಡ, ಸುಗ್ರೀವನಿಂದಲೂ, ಲಕ್ಷ್ಮಣನಿಂದಲೂ ಪು ರಸ್ಕರಿಸಲ್ಪಡುತ್ತ, ಆ ಸೈನ್ಯದೊಡನೆ ದಕ್ಷಿಣಾಭಿಮುಖವಾಗಿ ಹೊರಟನು. ಹೀಗೆ ಪ್ರಯಾಣಹೊರಟ ರಾಮನ ಸುತ್ತಲೂ ಕೊಬ್ಬಿದ ಆನೆಯ ಹಿಂ ಡಿನಂತೆ ಅನೇಕವಾನರಸೈನ್ಯವು ನೂರುನೂರಾಗಿಯೂ, ಸಾವಿರಸಾವಿರವಾಗಿ ಯೂ,ಲಕ್ಷಲಕ್ಷವಾಗಿಯೂ,ಕೋಟಿಕೋಟಿಯಾಗಿಯೂ ಹೊರಡುಬಂದಿತು. ಮತ್ತೊಂದು ದೊಡ್ಡವಾನರಸೈನ್ಯವು ಅವನನ್ನು ಹಿಂಬಾಲಿಸಿಹೊರಟಿತು.ವೀ ರ್ಯದಿಂದ ಕೊಬ್ಬಿದ ಆ ವಾನರರಾದರೋ ಮಹೋತ್ಸಾಹಗೊಂಡವರಾಗಿ ಒಮ್ಮೆ ಮೇಲೆ ನೆಗೆಯುವರು! ಒಮ್ಮೆ ಹಾರುವರು! ಒಮ್ಮೆ ಗರ್ಜಿಸುವರು! ಆಗಾಗ ಸಿಂಹನಾದವನ್ನು ಮಾಡುವರು! ಒಬ್ಬರಿಗೊಬ್ಬರು ಹಠದಿಂದೋ ಡುವರು! ದಾರಿಯಲ್ಲಿ ಅಲ್ಲಲ್ಲಿ ಸಿಕ್ಕಿದ ಹಣ್ಣುಗಳನ್ನು ಕಿತ್ತು ತಿನ್ನುವರು !

ಅಲ್ಲಲ್ಲಿ ಸುವಾಸನೆಯುಳ್ಳ ಜೇನನ್ನು ಕುಡಿಯುವರು. ಹೀಗೆ ಸಂತೋಷದಿಂದ ದಕ್ಷಿಣಾಭಿಮುಖವಾಗಿ ನಡೆದು ಬಂದರು. ಮತ್ತು ಆ ವಾನರಸೈನ್ಯದಲ್ಲಿ, ವಿನೋದಾರ್ಥವಾಗಿ ಫಲಪುಷ್ಪಗಳಿಂದ ತುಂಬಿದ ದೊಡ್ಡ ಮರಗಳನ್ನೇ ಕೈಯಿಂದ ಕಿತ್ತು ಅವುಗಳನ್ನು ಹೊತ್ತುತರುವವರು ಕೆಲವರು! ತಮ್ಮ ಬಲದ ಕೊಬ್ಬಿನಿಂದ ಒಬ್ಬರನ್ನೊಬ್ಬರು ಹಿಡಿದು ಮೇಲಕ್ಕೆತ್ತಿ ಹಾಕುವವರು ಕೆಲವರು! ಬಿಳುವವರನ್ನು ಕೈಯಿಂದಾತುಕೊಳ್ಳುವವರು ಕೆಲವರು! ನಿಂತಿದ್ದವರನ್ನು ಕೆಳಕ್ಕೆ ತಳ್ಳುವವರು ಕೆಲವರು! ಹೀಗೆ ಆ ವಾನರರೆಲ್ಲರೂ ಬಹಳ ವಿನೋದದಿಂದಲೇ ಪ್ರಯಾಣಮಾಡಿ ಬರುತಿದ್ದರು. ಮತ್ತು ಕೆಲವು ವಾನರರು ಆಗಾಗ ರಾಮನ ಸಮೀಪಕ್ಕೆ ಬಂದು "ನಾವು ಲಂಕೆಯಲ್ಲಿ ರಾವಣನನ್ನೂ, ಅಲ್ಲಿನ ಸಮಸ್ತರಾಕ್ಷಸರನ್ನೂ ಕೊಂದೇಬರಬೇಕು" ಎಂದು ವೀರವಾದದಿಂದ ಗರ್ಜಿಸುತಿದ್ದರು. ವೀರನಾದ ನೀಲನೂ, ಋಷಭನೂ, ಕುಮುದನೂ, ಅನೇಕವಾನರಸಮೂಹದೊಡನೆ ಸೇನೆಗೆ ಮುಂಭಾಗದಲ್ಲಿ ಹೊರಟುದಾರಿಯನ್ನು ಶೋಧಿಸುತ್ತಬಂದರು. ವಾನರರಾಜನಾದ ಸುಗ್ರೀವನೂ, ರಾಮನೂ, ಲಕ್ಷ್ಮಣನೂ, ಬಲಾಢ್ಯರಾಗಿಯೂ, ಭಯಂಕರರಾಗಿಯೂ ಇದ್ದ ಬಹಳಮಂದಿ ವಾನರರೊಡನೆ ಸೇನೆಯ ಮಧ್ಯಭಾಗದಲ್ಲಿ ಬರುತಿದ್ದರು. ವೀರನಾದ ಶತಬಲಿಯೆಂಬ ವಾನರನು ಹತ್ತುಕೋಟಿವಾನರಸೈನ್ಯವನ್ನು ತನ್ನ ಸಹಾಯಕ್ಕಿಟ್ಟುಕೊಂಡು ಅಲ್ಲಿನ ಸಮಸ್ತಸೈನ್ಯಕ್ಕೂ ತಾನೇ ಮುಖ್ಯರಕ್ಷಕನಾಗಿ ನಿಂತಿದ್ದನು. ಕೇಸರಿಯೆಂಬ ವಾನರೋತ್ತಮನೂ, ಪನಸನೂ, ಗಜನೂ, ಬಲಾಢ್ಯನಾದ ಅರ್ಕನೂ ನೂರುಕೋಟಿ ವಾನರರೊಡಗೂಡಿ, ಒಂದು ಪಕ್ಕದಲ್ಲಿ ಆ ಸೈನ್ಯವನ್ನು ರಕ್ಷಿಸುತಿದ್ದನು. ಸುಷೇಣ ಜಾಂಬವಂತರಿಬ್ಬರೂ ಅನೇಕಭಲ್ಲೂಕಗಳೊಡನೆ ಸೇರಿ ಸುಗ್ರೀವನನ್ನು ಮುಂದಿಟ್ಟುಕೊಂಡು ಆ ವಾನರಸೇನೆಯ ಹಿಂಭಾಗವನ್ನು ಕಾಯುತಿದ್ದರು. ಈ ಸಮಸ್ತವಾನರಸೈನ್ಯಕ್ಕೂ ಮುಖ್ಯಾಧಿಪತಿಯಾದ ವೀರನಾದ ನೀಲನು, ಆ ಸೈನ್ಯದ ನಾಲ್ಕುಕಡೆಗಳಿಗೂ ತಿರುಗುತ್ತ, ಸುತ್ತಲೂ ಎಚ್ಚರಿಕೆಯಿಂದ ಕಾಯುತಿದ್ದನು. ದರೀಮುಖನೂ, ಪ್ರಜಂಘನೂ, ರಂಭನೂ, ರಭಸನೂ, ಆ ಸೇನೆಯನ್ನು ಸುತ್ತಿಸುತ್ತಿ ಆಗಾಗ ಆ ಸೈನಿಕರನ್ನು ತ್ವರೆಪಡಿಸುತ್ತಬಂದರು. ಹೀಗೆ

ವೀರ್ಯದಿಂದ ಕೊಬ್ಬಿದ ಆ ವಾನರರೆಲ್ಲರೂ ಪ್ರಯಾಣಹೊರಟುಬರು ವಾಗ, ಮುಂದೆ ಸ್ವಲ್ಪದೂರದಲ್ಲಿ, ಬಗೆಬಗೆಯ ಗಿಡುಬಳ್ಳಿಗಳಿಂದ ತುಂಬಿ ದ ಸಹ್ಯಪರ್ವತವನ್ನೂ,ಅರಳಿದ ತಾವರೆಗಳಿಂದ ತುಂಬಿದ ಅಲ್ಲಿನ ಕೆರೆಕೊಳ ಗಳನ್ನೂ ಕಂಡರು. ಸಮುದ್ರಪ್ರವಾಹದಂತೆ ಅಪಾರವಾಗಿಯೂ, ಭಯಂ ಕರವಾಗಿಯೂ ಇದ್ದ ಆ ದೊಡ್ಡ ವಾನರಸೈನ್ಯವು, ರೌದ್ರಕೋಪವುಳ್ಳ ರಾಮನ ಆಜ್ಞೆಗೆ ಭಯಪಟ್ಟು, ಅಕ್ಕಪಕ್ಕಗಳಲ್ಲಿರುವ ಗ್ರಾಮಗಳಿಗಾಗಲಿ, ನಗರಗಳಿಗಾಗಲಿ ಪ್ರವೇಶಿಸದೆ, ನೆಟ್ಟಗೆ ತನ್ನ ದಾರಿಯನ್ನು ಹಿಡಿದು, ಸ ಮುದ್ರದ ಮೊರೆತದಂತೆ ದೊಡ್ಡಗರ್ಜನೆಗಳನ್ನು ಮಾಡುತ್ತ ಮುಂದೆಸಾ ಗಿತು. ರಾಮನ ಪಕ್ಕದಲ್ಲಿ ಬರುತಿದ್ದ ವಾನರವೀರರೆಲ್ಲರೂ ಅವನ ಮುಖೋ ಲ್ಲಾಸಕ್ಕಾಗಿ, ಕಶೆಯಿಂದ ಹೊಡೆದ ಕುದುರೆಗಳಂತೆ ಹಾರಿಹಾರಿ ನಡೆಯು ತ್ತಿದ್ದರು. ಆಂಜನೇಯನ ಮತ್ತು ಅಂಗದನ ಹೆಗಲನ್ನೇರಿ ಕುಳಿತಿದ್ದ ರಾಮಲಕ್ಷ್ಮಣರಿಬ್ಬರೂ, [1]ಶುಕ್ರಬೃಹಸ್ಪತಿಗಳೆಂಬ ದೊಡ್ಡ ಗ್ರಹಗಳೊಡನೆ ಸೇರಿದ ಚಂದ್ರಸೂರ್ಯರಂತೆ ಶೋಭಿಸುತಿದ್ದರು. ಧರ್ಮಾತ್ಮನಾದ ರಾ ಮನು, ಸುಗ್ರೀವನಿಂದಲೂ, ಲಕ್ಷ್ಮಣನಿಂದಲೂ ಗೌರವಿಸಲ್ಪಡುತ್ತ, ಸ ಮಸ್ತವಾನರಸೇನೆಯೊಡನೆ ದಕ್ಷಿಣಾಭಿಮುಖವಾಗಿ ಬರುತಿದ್ದನು. ಹೀಗೆ ಎ ಲ್ಲರೂಸೇರಿ ಬರುತ್ತಿರುವಾಗ, ಶಕುನಶಾಸ್ತ್ರಗಳಲ್ಲಿ ಚೆನ್ನಾಗಿ ನೆನಪುಳ್ಳವನಾ ಗಿಯೂ,ಕಾಲೋಚಿತಪ್ರತಿಭೆಯುಳ್ಳವನಾಗಿಯೂ ಇರುವ ಲಕ್ಷ್ಮಣನು,ಅಂ ಗದನಮೇಲೆ ಕುಳಿತು ಬರುತಿದ್ದಹಾಗೆಯೇ ಸಮೀಪದಲ್ಲಿದ್ದ ರಾಮನನ್ನು ಕುರಿತು, ಶುಭವಾಕ್ಯದಿಂದ “ಅಣ್ಣಾ ! ಇನ್ನುಮೇಲೆ ನೀನು ಕೈತಪ್ಪಿ ಹೋ ಗಿರುವ ಸೀತೆಯನ್ನೂ ಪಡೆದು, ರಾವಣನನ್ನೂ ಕೊಂದು,ನಿನ್ನ ಇಷ್ಟಾರ್ಥವ ನ್ನೂ ಕೈಗೂಡಿಸಿಕೊಂಡು,ಭಾಗ್ಯಸಮೃದ್ಧವಾದ ನಮ್ಮ ಅಯೋಧ್ಯೆಗೆ ಹಿಂತಿ ರುಗುವುದರಲ್ಲಿ ಸಂದೇಹವೇ ಇಲ್ಲ! ಆಕಾಶದಲ್ಲಿಯೂ, ಭೂಮಿಯಲ್ಲಿಯೂ, ಕಾಣಬರುವಾದ ಈ ದೊಡ್ಡದೊಡ್ಡ ಶುಭಶಕುನಗಳೆಲ್ಲವೂ, ನಿನ್ನ ಕಾರ್ಯಸಿ

---

1 ಇಲ್ಲಿ ಶುಕ್ರಬೃಹಸ್ಪತಿಗಳೊಡಗೂಡಿದ ಚಂದ್ರಸೂರ್ಯರೆಂಬುದರಿಂದ, ನಾಲ್ಕು ಗ್ರಹಗಳ ಸೇರುವೆಯು ಬಹುಜನವಿನಾಶಹೇತುವಾಗುವಂತೆ, ರಾಮಲಕ್ಷ್ಮಣರಿಬ್ಬ ರಿಗೂ ಹನುಮದಂಗದರೊಡನೆ ಸಂಬಂಧವು ಅನೇಕಶತ್ರುವಿನಾಶಹೇತುವೆಂದು ಸೂ ಚಿತವು.

ದ್ಧಿಯನ್ನೇ ಕಣ್ಣಿದಿರಾಗಿ ತೋರಿಸುವಂತಿರುವುವು. ನಮ್ಮ ಸೇನೆಯಲ್ಲಿ, ಮಂಗಳಕರವಾಗಿಯೂ, ಹಿತವಾಗಿಯೂ, ಸುಖಕರವಾಗಿಯೂ ಇರುವ ಗಾಳಿಯು ಮೆಲ್ಲಗೆ ಬೀಸುತ್ತಿರುವುದು! ಇದೋ ಇಲ್ಲಿ ಮೃಗಗಳೂ, ಪಕ್ಷಿಗಳೂ, ಮಧುರಧ್ವನಿಯಿಂದ ಕೂಗುವುವು. ದಿಕ್ಕುಗಳೆಲ್ಲವೂ ಪ್ರಸನ್ನವಾಗಿರುವುವು. ಸೂರ್ಯಬಿಂಬವು ಶುದ್ಧವಾಗಿ ಪ್ರಕಾಶಿಸುವುದು. ಸಕಲವೇದವಿತ್ತಾದ ಶುಕ್ರನು, ಪಾಪಗ್ರಹಸಂಬಂಧವಿಲ್ಲದೆ ಪ್ರಸನ್ನತೇಜಸ್ಸುಳ್ಳವನಾಗಿ ನಿನ್ನ ಹಿಂದೆ ಪ್ರಕಾಶಿಸುತ್ತಿರುವನು. ಅದೋ! ಪರಿಶುದ್ಧವಾದ ಸಪ್ತಋಷಿಮಂಡಲವು ಕಾಂತಿವಿಶಿಷ್ಟವಾಗಿ ದಕ್ಷಿಣದಿಕ್ಕಿನಿಂದ ಹಿಂತಿರುಗಿ ಬರುತ್ತ (ಧ್ರುವನಿಗೆ ಪ್ರದಕ್ಷಿಣವಾಗಿ ಸುತ್ತುತ್ತ) ಪ್ರಕಾಶಿಸುವುದು. ಮಹಾತ್ಮರಾದ ನಮ್ಮ ಇಕ್ಷ್ವಾಕುವಂಶದವರಿಗೆ ಪ್ರಧಾನಕೂಟಸ್ಥನಾಗಿಯೂ, ರಾಜಋಷಿಯಾಗಿಯೂ ಇರುವ ತ್ರಿಶಂಕುವು, ಪೂರ್ವದಲ್ಲಿ ವಿಶ್ವಾಮಿತ್ರನಿಂದ ಸೃಷ್ಟಿಸಲ್ಪಟ್ಟ ಸಪ್ತಋಷಿಗಳೊಡನೆ ಸೇರಿದ ವಸಿಷ್ಠನೊಡಗೂಡಿ ನಿರ್ಮಲವಾಗಿ ಪ್ರಕಾಶಿಸುತ್ತಿರುವನು. ಮಹಾತ್ಮರಾದ ನಮ್ಮ ಇಕ್ಷ್ವಾಕುವಂಶದವರಿಗೆ ಮುಖ್ಯನಕ್ಷತ್ರಗಳಾದ ವಿಶಾಖಾನಕ್ಷತ್ರಗಳೆರಡೂ, ಕ್ರೂರಗ್ರಹಬಾಧೆಯಿಲ್ಲದೆ ಶುದ್ಧವಾಗಿ ಪ್ರಕಾಶಿಸುವುವು. ರಾಕ್ಷಸರಿಗೆ ಪ್ರಧಾನನಕ್ಷತ್ರವಾಗಿ ನಿಋತಿದೇವತಾತ್ಮಕವಾದ ಮೂಲಾನಕ್ಷತ್ರವು, ತನಗೆ ಸಮೀಪದಲ್ಲಿರುವ ಧೂಮಕೇತುವಿನಿಂದ ಸ್ಪರ್ಶಿಸಲ್ಪಟ್ಟು ಬಹಳವಾಗಿ ಕಂದಿರುವುದು. ಇವೆಲ್ಲವೂ ರಾಕ್ಷಸರ ವಿನಾಶಕ್ಕೇ ಹೊರತು ಬೇರೆಯಲ್ಲ! ಮೃತ್ಯುವಶರಾದವರ ನಕ್ಷತ್ರವು, ಅವರ ಅಂತ್ಯಕಾಲದಲ್ಲಿ ಹೀಗೆ ದುಷ್ಟಗ್ರಹಗಳಿಂದ ಪೀಡಿತವಾಗುವುದುಂಟು! ರಾಮಾ! ಅದೋ! ಅಲ್ಲಲ್ಲಿ ಕಾಣುವ ನೀರೆಲ್ಲವೂ ಸ್ವಚ್ಛವಾಗಿಯೂ, ರುಚಿಯುಳ್ಳುದಾಗಿಯೂ ಇರುವುದು. ಇಲ್ಲಿನ ಕಾಡುಗಳೆಲ್ಲವೂ ಫಲಭರಿತಗಳಾಗಿರುವುವು. ಒಂದೊಂದು ವೃಕ್ಷವೂ ಋತುಮರ್ಯಾದೆಯನ್ನತಿಕ್ರಮಿಸದೆ ಚೆನ್ನಾಗಿ ಪುಷ್ಪಿಸಿ, ವಿಶೇಷವಾದ ಸುಗಂಧವನ್ನು ಹೊರಡಿಸುತ್ತಿರುವುದು. ಮತ್ತು ವ್ಯೂಹಗಳಾಗಿ ಏರ್ಪಡಿಸಲ್ಪಟ್ಟ ಈ ವಾನರಸೈನ್ಯಗಳು, ಮೊದಲು ತಾರಕಾಸುರಯುದ್ಧದಲ್ಲಿ (ಚಂದ್ರನು ಬೃಹಸ್ಪತಿಭಾರ್ಯೆಯಾದ ತಾರೆಯನ್ನು ಕೈವಶಮಾಡಿಕೊಂಡಾಗ, ಆ ನಿಮಿತ್ತವಾಗಿ ನಡೆದ ಯುದ್ಧದಲ್ಲಿ) ದೇವಸೇನೆಯು ಹೇಗೋಹಾಗೆ ಪ್ರಕಾಶಿಸುತ್ತಿರುವುವು. ಎಲೈ

ಆರ್ಯನೆ! ಈ ಶುಭನಿಮಿತ್ತಗಳೆಲ್ಲವನ್ನೂ ನೋಡಿದಮೇಲೆ'ನಾವು ಅವಶ್ಯವಾಗಿ ಸಂತೋಷಿಸಬೇಕಲ್ಲವೆ?"ಎಂದನು.ಹೀಗೆ ಲಕ್ಷ್ಮಣನು ಸಂತೋಷದಿಂದ ತನ್ನ ಣ್ಣನಾದ ರಾಮನಿಗೆ ಆಗಾಗ ದುಃಖಸಮಾಧಾನವನ್ನು ಮಾಡುತ್ತಿರಲು,ಹಾಗೆಯೇ ನಖದಂಷ್ಟ್ರಾಯುಧಗಳುಳ್ಳ ಕಪಿಗಳಿಂದಲೂ, ಕರಡಿಗಳಿಂದಲೂ, ಹುಲಿಗಳಿಂದಲೂ ತುಂಬಿದ ಆ ದೊಡ್ಡ ಸೈನ್ಯವು, ಅಲ್ಲಿನ ಸಮಸ್ತಪ್ರದೇಶವನ್ನೂ ವ್ಯಾಪಿಸುವಂತೆ ಮುಂದೆಮುಂದೆ ಸಾಗಿಬರುತಿತ್ತು. ಈ ದೊಡ್ಡ ಕಪಿಸೈನ್ಯವು ಹೊರಟುಬರುವಾಗ, ಅದರ ಕೈಕಾಲುಗಳಬಡಿತಕ್ಕೆ ನೆಲದಿಂದೆದ್ದ ಧೂಳಿಯು ಸೂರ್ಯತೇಜಸ್ಸನ್ನೂ ಮರೆಸುವಂತೆ ಮಹಾಭಯಂಕರವಾಗಿ ಸಮಸ್ತಲೋಕವನ್ನೂ ವ್ಯಾಪಿಸಿತು. ಮೇಘಗಳು ಆಕಾಶವನ್ನು ಮರೆಸುವಂತೆ, ಭಯಂಕರವಾ ಆ ವಾನರಸೈನ್ಯವು ಪರ್ವತಗಳಿಂದಲೂ, ವನಗಳಿಂದಲೂ ಕೂಡಿದ ದಕ್ಷಿಣದಿಗ್ಭಾಗವೆಲ್ಲವನ್ನೂ ಎಡೆಬಿಡದೆ ಮರೆಸಿತು. ಮತ್ತು ಆ ವಾನರಸೈನ್ಯವು ಅಲ್ಲಲ್ಲಿ ಅಡ್ಡಲಾಗಿದ್ದ ನದಿಗಳಲ್ಲಿಳಿದು, ಸಾಲಾಗಿ ಎಡೆಬಿಡದೆ ನಡೆದು ಹೋಗುವಾಗ,ಆ ನದೀಪ್ರವಾಹಕ್ಕೆ ಅಣೆಕಟ್ಟುಕಟ್ಟಿದಂತಾಗಿ, ಆ ಪ್ರವಾಹಗಳು ಮುಂದೆ ಹೋಗುವುದಕ್ಕೆ ದಾರಿಯಿಲ್ಲದೆ, ಹಿಂಮೊಗವಾಗಿ ತಿರುಗಿ,ಬಹುಯೋಜನಗಳವರೆಗೆ ಹಿಂದಕ್ಕೇ ಪ್ರವಹಿಸುತಿದ್ದುವು. ಆ ವಾನರರೋ, ಅಲ್ಲಲ್ಲಿ ದಾರಿಗಡ್ಡಲಾದ ಕೊಳಗಳನ್ನು ಕಂಡಾಗ, ನಡುನೀರಿನಲ್ಲಿಯೇ ಈಜಿಹೋಗುವರು! ದೊಡ್ಡಕಾಡುಳ್ಳ ಬೆಟ್ಟಗಳು ಸಿಕ್ಕಿದಾಗ ಅವುಗಳನ್ನು ಪಕ್ಕಕ್ಕೆ ಬಿಟ್ಟು ಸುತ್ತಿಕೊಂಡು ಹೋಗುವರು. ಸಮಪ್ರದೇಶಗಳಲ್ಲಿ ಧಾರಾಳವಾಗಿ ಸುತ್ತಿಸುತ್ತಿನೋಡುತ್ತ ನಡೆಯುವರು. ಫಲವೃಕ್ಷಗಳನ್ನು ಕಂಡಾಗ ಅವುಗಳ ಕೆಳಗೆ ನುಗ್ಗಿಹೋಗುವರು. ಹೀಗೆ ಆ ದೊಡ್ಡವಾನರಸೈನ್ಯವೇ ಅಲ್ಲಿನ ಪ್ರದೇಶವೆಲ್ಲವನ್ನೂ ವ್ಯಾಪಿಸಿ ದಾರಿನಡೆಯುತಿತ್ತು. ಮೊದಲೇ ವಾಯುವಿಗೆ ಸಮವಾದ ವೇಗವುಳ್ಳ ಆ ವಾನರರಿಗೆ,ರಾಮಕಾರ್ಯವನ್ನು ನಡೆಸುವುದರಲ್ಲಿ ಉಂಟಾದ ಮಹೋತ್ಸಾಹವು, ಅವರ ಪರಾಕ್ರಮವನ್ನೂ ಸಂತೋಷವನ್ನೂ ಮತ್ತಷ್ಟುವಿಶೇಷವಾಗಿಹೆಚ್ಚಿಸಲು,ದಾರಿಯಲ್ಲಿ ನಡೆಯುವಾಗ ಆ ವಾನರರು ಒಬ್ಬರಿಗೊಬ್ಬರು ತಮ್ಮ ಹರ್ಷವನ್ನೂ, ವೀರ್ಯವನ್ನೂ, ಬಲವನ್ನೂ ತೋರಿಸಿಕೊಳ್ಳುತ್ತ, ಪ್ರಾಯದ ಕೊಬ್ಬಿನಿಂದುಂಟಾದ ನಾನಾಚೇಷ್ಟೆಗಳನ್ನಾರಂಭಿಸಿಬಿಟ್ಟರು. ಮುಂದಾಗಿ ಓಡುವವರು ಕೆಲವ

ರು! ಹಾರುವವರು ಕೆಲವರು ! ಕಿಲಕಿಲಧ್ವನಿಯನ್ನು ಮಾಡುವವರು ಕೆಲವರು! ತಮ್ಮ ಬಾಲಗಳನ್ನೆತ್ತಿ, ನೆಲಕ್ಕಪ್ಪಳಿಸುವವರು ಕೆಲವರು! ಕಾಲನ್ನು ನೆಲಕ್ಕೆ ಬಡಿಯುವವರು ಕೆಲವರು! ತೋಳುಗಳನ್ನು ಬೀಸಿ ಬೆಟ್ಟಗಳನ್ನುರುಳಿಸುವವರು ಕೆಲವರು! ಮರಗಳನ್ನು ಮುರಿಯುವವರು ಕೆಲವರು! ಮತ್ತು ಪರ್ವತವಾಸಿಗಳಾದ ಕೆಲವು ವಾನರರು ಅಲ್ಲಲ್ಲಿ ಬೆಟ್ಟದ ತುದಿಯನ್ನೇರಿ ನಿಂತು ಕೇಕೆಹಾಕುವರು! ಕೆಲವರು ಸಿಂಹನಾದವನ್ನು ಮಾಡುವರು! ಕೆಲವರು ತಮ್ಮ ತೊಡೆಯವೇಗದಿಂದಲೇ ಅಲ್ಲಲ್ಲಿ ದಾರಿಗಡ್ಡಲಾಗಿದ್ದ ಬಳ್ಳಿಗಳನ್ನು ನಾನಾವಿಧವಾಗಿ ತಿಕ್ಕಿ ಕೆಡಹುವರು! ಕೆಲವರು ವೀರ್ಯದ ಕೊಬ್ಬಿನಿಂದ ಕಲ್ಲುಗಳನ್ನೂ, ಮರಗಳನ್ನೂ ಕೈಗೆತ್ತಿಕೊಂಡು ಅದರಿಂದಲೇ ನಾನಾವಿಧವಾಗಿ ಆಟವಾಡುವರು! ಹೀಗೆ ಭಯಂಕರಸ್ವರೂಪವುಳ್ಳ ಅನೇಕವಾನರಸೈನ್ಯವು, ನೂರುನೂರಾಗಿಯೂ, ಸಾವಿರಸಾರವಿವಾಗಿಯೂ, ಲಕ್ಷಲಕ್ಷವಾಗಿಯೂ, ಕೋಟಿಕೋಟಿಯಾಗಿಯೂ, ಅಲ್ಲಲ್ಲಿ ಗುಂಪುಕಟ್ಟಿಕೊಂಡು ಬರುತ್ತಿರಲು, ಆ ಭೂಭಾಗವೆಲ್ಲವೂ ಕಪಿಮಯವಾದಂತೆ ಅಪೂರ್ವಶೋಭೆಯನ್ನು ಹೊಂದಿತು. ಸುಗ್ರೀವನಿಂದ ಸುರಕ್ಷಿತವಾದ ಆ ದೊಡ್ಡ ವಾನರಸೈನ್ಯವು, ಪ್ರಭುವಾದ ರಾಮನ ಸಹವಾಸದಿಂದ ಮತ್ತಷ್ಟು ಸಂತೋಷವನ್ನು ಹೊಂದಿ, ಹಗಲು ರಾತ್ರಿಯನ್ನದೆ ಎಡೆಬಿಡದೆ ಪ್ರಯಾಣಮಾಡಿ ಬರುತಿತ್ತು. ಮೊದಲೇ ಆ ವಾನರರೆಲ್ಲರೂ ಬಹಳವಾದ ಯುದ್ಧೋತ್ಸಾಹದಿಂದ ಬೇಗಬೇಗನೆ ಹಜ್ಜೆಯಿಡುತಿದ್ದುದಲ್ಲದೆ, ಅವರಲ್ಲಿ ಒಬ್ಬೊಬ್ಬರಿಗೂ ಸೀತೆಯ ಸೆರೆಯನ್ನು ಬಿಡಿಸಬೇಕೆಂಬ ಆತುರವೂ ಮೇಲೆಮೇಲೆ ಹೆಚ್ಚುತಿದ್ದುದರಿಂದ, ಎಲ್ಲಿಯೂ, ಮುಹೂರ್ತಮಾತ್ರವೂ ನಿಲ್ಲದೆ ದಾರಿನಡೆಯುತಿದ್ದರು. ಹೀಗೆ ವಾನರರೆಲ್ಲರೂ ಪ್ರಯಾಣಮಾಡಿ ಬರುತ್ತ, ಮುಂದೆ ಅನೇಕವೃಕ್ಷಗಳಿಂದ ನಿಬಿಡವಾಗಿಯೂ, ಬಗೆಬಗೆಯ ಮೃಗಗಳಿಂದ ತುಂಬಿದುದಾಗಿಯೂ ಇದ್ದ ಸಹ್ಯಪರ್ವತವನ್ನೂ ಮಲಯಪರ್ವತವನ್ನೂ ಸೇರಿದರು. ರಾಮನೂ ಆ ಸಹ್ಯಮಲಯಪರ್ವತಗಳ ಮೇಲಿನ ವಿಚಿತ್ರಾರಣ್ಯಗಳನ್ನೂ, ನದಿಗಳನ್ನೂ, ಗಿರಿನದಿಗಳನ್ನೂ ನೋಡುತ್ತ ಮುಂದೆ ಹೋಗುತಿದ್ದನು. ವಾನರರು ಅಲ್ಲಿನ ಕಾಡುಗಳಲ್ಲಿ, ಹೋಗುವಾಗ ದಾರಿಯಲ್ಲಿ ಸಿ

ಕ್ಕಿದ ಪಗಡೆಯಮರಗಳನ್ನೂ, ತಿಲಕವೃಕ್ಷಗಳನ್ನೂ, ಮಾವು, ಅಸುಗೆ, ದಾಸವಾಳ, ಸೀಲಿ, ಕಣಿಗಿಲೆ, ನೇವಿ, ಅಂಕೋಲೆ, ಕರಂಜಕ, ಆಲ, ಬಸರಿ, ಸ್ಫೂರ್ಜಕ, ಸೇರಳೆ, ನೆಲ್ಲಿ,ಕಡವು, ಮುಂತಾದ ಮರಗಳನ್ನೂ ಮುರಿದುಹಾಕುತ್ತ ಹೋದರು. ಮನೋಹರಗಳಾದ ಆ ಪರ್ವತಪ್ರಾಂತಗಳಲ್ಲಿದ್ದ ಬಗೆಬಗೆಯ ಕಾಡುಮರಗಳು ಗಾಳಿಯಿಂದಲುಗುತ್ತ, ಆ ವಾನರರಮೇಲೆ ಪುಷ್ಪವರ್ಷವನ್ನು ಕರೆಯುತಿದ್ದುವು. ಮದ್ಯಗಂಧವುಳ್ಳ ಅಲ್ಲಿನ ಕಾಡುಗಳಲ್ಲಿ ಚಂದನದಂತೆ ಶೀತಲವಾದ ವಾಯುವು ಭ್ರಮರಧ್ವನಿಗಳೊಡನೆ ಸುಖಸ್ಪರ್ಶವಾಗಿ ಬೀಸುತಿತ್ತು. ಅಲ್ಲಲ್ಲಿ ಕಾಣುತಿದ್ದ ಗೈರಿಕಾದಿಧಾತುಗಳ ವಿಚಿತ್ರವರ್ಣಗಳಿಂದ ಆ ಪರ್ವತವೇ ಅಲಂಕೃತವಾದಂತೆ ತೋರುತಿತ್ತು. ಗಾಳಿಯ ಬಡಿತದಿಂದ ಮೇಲಕ್ಕೆಹೊರಟ ಆ ಧಾತುರೇಣುಗಳೇ ದೊಡ್ಡವಾನರಸೇನೆಯನ್ನು ಸುತ್ತಲೂ ಆವರಿಸಿ ಮುಚ್ಚಿದಂತೆ ಕಾಣುತಿತ್ತು. ಆ ಪರ್ವತದ ತಪ್ಪಲುಗಳ ಸುತ್ತಲೂ ಚೆನ್ನಾಗಿ ಪುಷ್ಪಿಸಿದ ತಾಳೆ, ನೀರುಗಂಟೆ, ಅಂದವಾದ ವಾಸಂತಿಕೆ, ಸುವಾಸನೆಯುಳ್ಳ ಮಾಧವೀಲತೆಗಳು, ಪುಷ್ಪಭರಿತಗಳಾದ ಮೊಲ್ಲೆಯ ಪೊದರುಗಳು, ನಕ್ತಮಾಲಗಳು, ಮಧೂಕವೃಕ್ಷಗಳು, ವಾಸೀರವೃಕ್ಷಗಳು, ಬಂಧೂಕಗಳು, ಸ್ಫೂರ್ಜಕಗಳು, ನಾಗಕೇಸರಿ, ಪಾದರಿ, ಕೋವಿದಾರ, ಖರ್ಜೂರ, ಅರ್ಜುನವೃಕ್ಷಗಳು, ತಿಂಶುಪಾವೃಕ್ಷಗಳು, ಗಿರಿಮಲ್ಲಿಕೆಗಳು, ಹಿಪ್ಪೆ, ಮತ್ತಿ, ಬೂರಗ, ಕೆಂಪುಗೋರಂಟೆ, ಶ್ರೀತಾಳೆ, ನೇವಿ, ಹಿಂತಾಳೆ, ಕಡವು, ಚೂರ್ಣಕ, ದೀಪಕ, ಅಂಕೋಲೆ, ನೆಲ್ಲಿ, ಪದ್ಮಕ,ಮುಂತಾದ ಗಿಡಗಳೆಲ್ಲವೂ ಈ ವಾನರರ ಹಾರಾಟದಿಂದ ತುಂಡುತುಂಡಾಗಿ ಮುರಿದು ಬೀಳುತಿದ್ದುವು.ಆ ಪರ್ವತದಮೇಲಿದ್ದ ಕೆರೆ,ಕಟ್ಟೆ,ಬಾವಿ ಮುಂತಾದ ಜಲಪ್ರದೇಶಗಳೆಲ್ಲವೂ, ತಂಪಾದ ನೀರುಳ್ಳದಾಗಿ, ಚಕ್ರವಾಕಗಳಿಂದಲೂ, ಹಂಸಕಾರಂಡವಗಳಿಂದಲೂ, ಇನ್ನೂ ನೀರುಕಾಗೆಗಳು, ಕ್ರೌಂಚಗಳು, ಮೊದಲಾದ ನಾನಾಜಲಚರಪಕ್ಷಿಗಳಿಂದಲೂ ಶೋಭಿಸುತಿದ್ದುವು. ಅವುಗಳ ಸುತ್ತಿನ ತೀರಪ್ರದೇಶಗಳಲ್ಲಿ,ಹಂದಿ, ಹುಲ್ಲೆ, ಕರಡಿ,ಶಿವಂಗಿ, ಸಿಂಹ, ಭಯಂಕರರೂಪವುಳ್ಳ ಹುಲಿ, ಬಗೆಬಗೆಯ ಹಾವುಗಳು, ಮದದಾನೆಗಳು ಇವೇ ಮುಂತಾದ ಅನೇಕಕ್ರೂರಮೃಗಗಳು ತುಂಬಿದ್ದುವು. ಮತ್ತು ಅಲ್ಲಿನ ಬಂ

ದೊಂದು ಜಲಾಧಾರಪ್ರದೇಶವೂ, ಅಂಡವಾಗಿ ಅರಳಿದ ತಾವರೆಗಳಿಂದ
ಲೂ, ಕರೀನೈದಿಲೆಗಳಿಂದಲೂ, ಬಿಳೀ ನೈದಿಲೆಗಳಿಂದಲೂ, ಸೌಗಂಧಿಕವೇ
ಮೊದಲಾದ ಇನ್ನೂ ವಿಧವಿಧವಾದ ನೀರುಹೂಗಳಿಂದಲೂ ರಮ್ಯವಾ
ಗಿದ್ದಿತು. ಆ ಬೆಟ್ಟದ ತಪ್ಪಲುಗಳಲ್ಲಿ ಬಗೆಬಗೆಯ ಹಕ್ಕಿಗಳು ಇಂಪಾದ ಧ್ವ
ನಿಯಿಂದ ಕೂಗುತಿದ್ದುವು. ಈ ವಾನರರಾದರೋ ಆಕೊಳಗಳಲ್ಲಿ ಸ್ನಾನಪಾ
ನಗಳನ್ನುಮಾಡಿ ವಿನೋದದಿಂದ ವಿಹರಿಸುತ್ತ, ಒಬ್ಬರನ್ನೊಬ್ಬರು ಮೇಲ
ಕ್ಕೆತ್ತಿ ನೀರಿನಲ್ಲಿ ಬಿಸುಟು ಜಲಕ್ರೀಡೆಗಳನ್ನಾಡುವರು. ಬೆಟ್ಟದ ತಪ್ಪಲುಗ
ಳನ್ನೇರಿ ಅಲ್ಲಿನ ಗಿಡಗಳಿಂದ ಅಮೃತಗಂಧವುಳ್ಳ ಹಣ್ಣುಗಳನ್ನೂ, ಕಂದಮೂ
ಲಗಳನ್ನೂ ಹೂಗಳನ್ನೂ ಕಿತ್ತು ತಿನ್ನುವರು. ಅಲ್ಲಲ್ಲಿ ಮರಗಳಮೇಲೆ ಒಂ
ದೊಂದು ಕೊಳಗದಷ್ಟು ಜೇನಿನಿಂದ ತುಂಬಿ ತೂಗಾಡುತ್ತಿರುವ ಜೇನು
ಗೂಡನ್ನು ಕೈಯಿಂದ ಕಿತ್ತು ಕುಡಿಯುವರು. ಕಣ್ಣಿಗೆ ಕಂಡ ಮರಗಳನ್ನು
ಮುರಿಯುವರು. ಕಂಡಕಂಡ ಬಳ್ಳಿಗಳನ್ನು ಕಿತ್ತೆಸೆಯುವರು. ಅಲ್ಲಲ್ಲಿ ಬೆಟ್ಟ
ಗಳಿಗೆ ಬೆಂಕಿಯನ್ನಿಟ್ಟು ಉರಿಸುವರು. ಹೀಗೆ ಮದದಿಂದ ಕೊಬ್ಬಿದ ಆ ವಾ
ನರರೆಲ್ಲರೂ ಪಾನಮದದಿಂದ ಕೊಬ್ಬಿ ಕೂಗಿಡುತ್ತ, ಪರಮಸಂತೋ
ಷದಿಂದಲೇ ಮುಂದೆಮುಂದೆ ಪ್ರಯಾಣಮಾಡುತಿದ್ದರು. ಅವರಲ್ಲಿ ಕೆಲ
ವರು ಮರಗಳಿಲ್ಲದ ಕಡೆಯನ್ನೇ ನೋಡಿ ಸುತ್ತಿಸುತ್ತಿ ನಡೆಯುವರು. ಕೆಲ
ವರು ಮರದಿಂದ ಮರಕ್ಕೆ ಹಾರಿಹೋಗುವರು. ಕೆಲವರು ಮರವನ್ನೇರಿ
ಧುಮುಕುವರು. ಹೀಗೆ ವಿಚಿತ್ರಗತಿಯಿಂದ ಹೋಗುವಾಗ ಅಲ್ಲಿನ ಸಮ
ಸ್ತಪ್ರದೇಶವೂ ಪಕ್ವವಾದ ಪೈರುಗಳಿಂದ ತುಂಬಿದ ಬತ್ತದ ಗದ್ದೆಯಂತೆ
ಆ ಕಪಿಗಳಿಂದಲೇ ದಟ್ಟವಾಗಿ ತುಂಬಿಹೋಯಿತು. ಹೀಗೆ ರಾಮನು ಆ ಕಪಿ
ಗಳೊಡನೆ ಪ್ರಯಾಣಮಾಡಿ, ಕೊನೆಗೆ ಮಹೇಂದ್ರಪರ್ವತವನ್ನು ಸೇರಿ, ಅ
ನೇಕವೃಕ್ಷಸಮೂಹಗಳಿಂದ ಶೋಭಿತವಾದ ಆ ಪರ್ವತಶಿಖರವನ್ನೇರಿದನು.
ದಶರಥಪುತ್ರನಾದ ರಾಮನು ಆ ಪರ್ವತಶಿಖರದಲ್ಲಿ ನಿಂತು ನೋಡುವಾಗ,
ಮುಂದೆ ಮತ್ಸ್ಯಕೂರ್ಮಾದಿಜಲಜಂತುಗಳಿಂದ ತುಂಬಿದ ಮಹಾಸಮುದ್ರ
ವು ಕಾಣಿಸಿತು. ಹಾಗೆಯೇ ಸಮಸ್ತವಾನರಸೈನ್ಯವೂ ಕ್ರಮವಾಗಿ ಸಹ್ಯ
ಮಲಯಪರ್ವತಗಳನ್ನುದಾಟಿ ಭಯಂಕರಧ್ವನಿಯಿಂದ ಮೊರೆಯುತ್ತಿರುವ

ಆ ಸಮುದ್ರವನ್ನು ಕಂಡಿತು. ಲೋಕರಂಜಕನಾದ ಶ್ರೀರಾಮನು ಆ ಸಮುದ್ರವನ್ನು ಕಂಡೊಡನೆ ಕುತೂಹಲಗೊಂಡು, ಲಕ್ಷ್ಮಣಸುಗ್ರೀವರೊಡಗೂಡಿ ಆಗಲೇ ಆ ಪರ್ವತಶಿಖರದಿಂದ ಬೇಗನೆ ಕೆಳಕ್ಕಿಳಿದು ಸಮುದ್ರತೀರದ ಕಾಡಿಗೆ ಬಂದನು. ಆಗಾಗ ಅಲೆಗಳು ಬಂದು ಹೊಡೆಯುವುದರಿಂದ ಶುದ್ಧವಾಗಿ ತೊಳೆಯಲ್ಪಟ್ಟ ಕಲ್ಲುಬಂಡೆಗಳುಳ್ಳ ಆ ತೀರಪ್ರದೇಶವನ್ನು ಸೇರಿದಮೇಲೆ ರಾಮನು ಸುಗ್ರೀವನನ್ನು ಕುರಿತು, "ಎಲೆ ಮಿತ್ರನೆ! ಇದೋ! ನಾವು ಸಮುದ್ರದ ಸಮೀಪಕ್ಕೂ ಬಂದುಬಿಟ್ಟೆವು. ನಾವು ಮೊದಲು ಮಾಡಿದ ಆಲೋಚನೆಯನ್ನು ಈಗ ಮುಗಿಸಬೇಕಾಗಿರುವುದು. ಈ ಸಮುದ್ರವೋ ಅತ್ತಲಾಗಿ ತೀರವೇ ಇಲ್ಲದಂತೆ ಅಪಾರವಾಗಿ ಕಾಣುತ್ತಿರುವುದು. ಉಪಾಯದಿಂದಲ್ಲದೆ ಇದನ್ನು ದಾಟುವುದು ಸಾಧ್ಯವಲ್ಲ! ಆದುದರಿಂದ ಇಲ್ಲಿಯೇ ನಮ್ಮ ಸೈನ್ಯವನ್ನಿಳಿಸಿ, ಮುಂದೆ ಈ ವಾನರಸೈನ್ಯವೆಲ್ಲವನ್ನೂ ದಾಟಿಸುವುದಕ್ಕೆ ಮಾರ್ಗವನ್ನು ಯೋಚಿಸಬೇಕು." ಎಂದನು. ಸೀತಾವಿರಹದಿಂದ ಬಹಳವಾಗಿ ಕೃಶಿಸಿದ ಮಹಾಬಾಹುವಾದ ಆ ರಾಮನು ಅಲ್ಲಿಯೇ ಸೈನ್ಯವನ್ನಿಳಿಸುವುದಕ್ಕಾಗಿ ಸುಗ್ರೀವನನ್ನು ಕುರಿತು, "ಎಲೈ ಕಪಿರಾಜನೆ! ನಮ್ಮ ಸೈನ್ಯವೆಲ್ಲವನ್ನೂ ಇಲ್ಲಿಯೇ ನಿಲ್ಲುವಂತೆ ನಿಯಮಿಸು! ನಾವು ಈ ಸಮುದ್ರವನ್ನು ದಾಟುವುದಕ್ಕಾಗಿ ತಕ್ಕ ಉಪಾಯವನ್ನು ಚೆನ್ನಾಗಿ ಆಲೋಚಿಸಿ ನಿಶ್ಚಯಿಸಬೇಕಾದ ಕಾಲವು ಬಂದಿರುವುದು. ಅದುವರೆಗೆ ಇಲ್ಲಿ ಯಾವ ವಾನರಯೂಥಪತಿಯಾಗಲಿ, ತನ್ನತನ್ನ ಸೇನೆಯನ್ನಗಲಿ ಅತ್ತಿತ್ತ ಕದಲಕೂಡದು. ಶೂರರಾದ ಕೆಲವು ವಾನರರು ಅಲ್ಲಲ್ಲಿ ಎಚ್ಚರಿಕೆಯಿಂದ ಸುತ್ತಿ ತಿರುಗುತ್ತ, ನಮ್ಮ ವಿಷಯದಲ್ಲಿ ಶತ್ರುಗಳು ರಹಸ್ಯವಾಗಿ ಅಲ್ಲಲ್ಲಿ ಕಲ್ಪಿಸಿರಬಹುದಾದ ಅಪಾಯಗಳನ್ನು ತಿಳಿಯುತ್ತಿರಬೇಕು." ಎಂದನು. ಇದನ್ನು ಕೇಳಿ ಸುಗ್ರೀವನು ಲಕ್ಷ್ಮಣಸಹಿತನಾಗಿ ಹೊರಟು, ತನ್ನ ಸಮಸ್ತ ಸೈನ್ಯವನ್ನೂ ನಾನಾವೃಕ್ಷಗಳಿಂದ ನಿಬಿಡವಾದ ಆ ಸಮುದ್ರತೀರದಲ್ಲಿ ಅಲ್ಲಲ್ಲಿ ನಿಲ್ಲಿಸಿಟ್ಟನು. ಮಹಾಸಾಗರದ ಸಮೀಪದಲ್ಲಿದ್ದ ಆ ದೊಡ್ಡವಾನರಸೈನ್ಯವು, ಜೇನಿನಂತೆ ಹೊಂಬಣ್ಣವಾದ ನೀರುಳ್ಳ ಬೇರೊಂದು ಮಹಾಸಮುದ್ರವೋ ಎಂಬಂತೆ ತೋರಿತು. ಹೀಗೆ ಆ ಸಮಸ್ತ ವಾನರಸೈನ್ಯವೂ ಸಮು

ದ್ರವನ್ನು ದಾಟಬೇಕೆಂಬ ನಿರೀಕ್ಷೆಯಿಂದ ಅಲ್ಲಿನ ತೀರಾರಣ್ಯವನ್ನೆಲ್ಲಾ ವ್ಯಾಪಿಸಿ ನಿಂತಿತು. ಅಲ್ಲಿ ಸೈನ್ಯವನ್ನಿಳಿಸಿದಾಗ ಆ ಸೇನಾಸನ್ನಾಹದಿಂದುಂಟಾದ ಮಹಾಧ್ವನಿಯು ಸಮುದ್ರಘೋಷವನ್ನೇ ಮರೆಸುವಂತೆ ಕೇಳಿಸುತಿತ್ತು. ಸುಗ್ರೀವರಕ್ಷಿತವಾದ ಆ ಮಹಾಸೈನ್ಯವು ಮೂರುಸುತ್ತಾಗಿ (ಅಥವಾ ಕಪಿಗಳು, ಕರಡಿಗಳು,ಸಿಂಗಳಿಕಗಳೆಂಬ ಮೂರುಭಾಗಗಳಾಗಿ ಬೇರ್ಪಡಿಸಲ್ಪಟ್ಟು) ರಾಮಕಾರ್ಯವನ್ನು ನಿರ್ವಹಿಸಬೇಕೆಂಬ ಮಹೋತ್ಸಾಹದಿಂದಿದ್ದಿತು. ಹೀಗೆ ಆ ದೊಡ್ಡ ವಾನರಸೈನ್ಯವು ಸಮುದ್ರತೀರದಲ್ಲಿ ನಿಂತು, ವಾಯುವೇಗದಿಂದ ಬಹಳವಾಗಿ ತೂಗಾಡುತಿದ್ದ ಆ ಸಮುದ್ರವನ್ನು ನೋಡಿ ಸಂತೋಷದಿಂದುಬ್ಬುತಿತ್ತು. ಆ ಸಮುದ್ರವಾದರೋ ಕೊನೆಮೊದಲಿಲ್ಲದಷ್ಟು ವಿಸ್ತಾರವಾಗಿಯೂ, ಅಕ್ಷೋಭ್ಯವಾಗಿಯೂ, ಅನೇಕರಾಕ್ಷಸರಿಗೆಡೆಯಾಗಿಯೂ ಜಲಾಧಿಪತಿಯಾದ ವರುಣನಿಗೆ ಮುಖ್ಯವಾಸಸ್ಥಾನವಾಗಿಯೂ ಇರುವುದು. ಅಲ್ಲಲ್ಲಿ ಸುತ್ತುತ್ತಿರುವ ಕ್ರೂರನಕ್ರಗಳಿಂದಲೂ, ಸಾಯಂಕಾಲದಲ್ಲಿ ಉಬ್ಬಿಬರುವ ಅಲೆಗಳಿಂದಲೂ ಮಹಾಭಯಂಕರವಾಗಿರುವುದು. ನೊರೆಗಳಿಂದ ನಗುವಂತೆಯೂ, ಅಲೆಗಳಿಂದ ನರ್ತಿಸುವಂತೆಯೂ ಕಾಣುವುದು. ಚಂದ್ರೋದಯಸಂಬಂಧದಿಂದ ಮೇಲೆಮೇಲೆ ಉಕ್ಕಿ ಬರುತ್ತಿರುವುದಲ್ಲದೆ,ತರಂಗತರಂಗಗಳಿಗೂ ಪ್ರತಿಫಲಿಸಿದ ಸಾವಿರಾರು ಚಂದ್ರಬಿಂಬಗಳಿಂದ ಶೋಭಿಸುವುದು. (ಸಮುದ್ರರಾಜನು ಅಲೆಗಳೆಂಬ ತನ್ನ ಕೈಗಳಿಂದ ಚಂದನವನ್ನು ತೇದಿಡುವಂತೆ ಸುತ್ತಲೂ ನೊರೆಯೇಳುತ್ತಿರಲು, ಅದನ್ನು ಚಂದ್ರನು ಕಿರಣಗಳೆಂಬ ತನ್ನ ಕೈಗಳಿಂದೆತ್ತಿ ದಿಗಂಗನೆಯರಿಗೆ ತೊಡೆಯುವಂತೆ ಚಂದ್ರಿಕೆಯು ಪ್ರಸರಿಸಿರುವುದು.) ಮತ್ತು ಆ ಸಮುದ್ರದಮೇಲೆ ಅಲ್ಲಲ್ಲಿ ಪ್ರಚಂಡವಾಯುವಿನಂತೆ ಮಹಾವೇಗವುಳ್ಳ ಮೊಸಳೆಗಳೂ, ಅಲ್ಲಲ್ಲಿ ತಿಮಿತಿಮಿಂಗಿಲಾದಿಕ್ರೂರಜಂತುಗಳೂ,ಅಲ್ಲಲ್ಲಿ ದೇದೀಪ್ಯಮಾನವಾದ ಫಣಾರತ್ನಗಳುಳ್ಳ ವಿಷಸರ್ಪಗಳೂ ತಲೆಯೆತ್ತುತ್ತಿರುವುವು.ಕೆಳಗೆ ನೀರಾನೆಗಳೇ ಮೊದಲಾದ ದೊಡ್ಡದೊಡ್ಡ ಜಲಜಂತುಗಳೂ, ಮಹೋನ್ನತಗಳಾದ ಪರ್ವತಗಳೂ ಮುಳುಗಿರುವುವು. ಹಡಗುಗಳ ಸಂಚಾರಕ್ಕೂ ದಾರಿಯಿಲ್ಲದಂತೆ ದುರ್ಗಮವಾಗಿರುವುದು. ಅದರ ಆಳವನ್ನು ಇಷ್ಟೆಂದು ನಿರ್ಣಯಿಸುವುದಕ್ಕೆ ಸಾಧ್ಯವಲ್ಲ ! ಎಲ್ಲಿನೋಡಿದರೂ ಘೋರರಾಕ್ಷಸರು ! ಎಲ್ಲಿ ನೋಡಿದರೂ ಬಿರುಗಾಳಿಯ ಬಡಿತದಿಂ

ದುಬ್ಬಿಬರುವ ಮಹಾತರಂಗಗಳು ! ಎಲ್ಲಿ ನೋಡಿದರೂ ಮೊಸಳೆಗಳು ! ಎ
ಲ್ಲಿ ನೋಡಿದರೂ ಕ್ರೂರಸರ್ಪಗಳು! ಎಲ್ಲಿ ನೋಡಿದರೂ ವಾಯುವೇಗದಿಂ
ದ ಮೇಲಕ್ಕೆ ಹಾರಿಬೀಳುತ್ತಿರುವ ದೊಡ್ಡದೊಡ್ಡ ಅಲೆಗಳು ! ಹೀಗೆ ಭಯಂ
ಕರವಾದ ಆ ಸಮುದ್ರವನ್ನು ನೋಡಿದೊಡನೆ ಅಲ್ಲಿದ್ದ ವಾನರರಿಗೆ ಆ ಸ
ಮುದ್ರವನ್ನು ದಾಟುವ ಉಪಾಯವೇನೆಂಬ ಚಿಂತೆಯು ಬಹಳವಾಗಿ ಹು
ಟ್ಟಿತು.ಮತ್ತು ಆ ಕಾಲದಲ್ಲಿ ರಾತ್ರಿಯಾದುದರಿಂದ ಸಮುದ್ರಾಕಾಶಗಳೆರಡ
ನ್ನೂ ಏಕಾಕಾರವಾಗಿ ಕಾಣಿಸುವಂತೆ, ಕೆಳಗೆ ಸಮುದ್ರದಲ್ಲಿ ಅಗ್ನಿಕಣ
ಗಳಂತೆ ಹೊಳೆಯುವ ಜಲಬಿಂದುಗಳು ! ಅದರಂತೆಯೇ ಆಕಾಶದಲ್ಲಿ ನಕ್ಷ
ತ್ರಗಳು ! ಸಮುದ್ರದಲ್ಲಿ ಮಹಾಸರ್ಪಗಳು! ಆಕಾಶದಲ್ಲಿ ನಾಗಜಾತಿಯ
ದೇವತೆಗಳು. ಸಮುದ್ರದಲ್ಲಿ ರಾಕ್ಷಸರು. ಆಕಾಶದಲ್ಲಿ ದೈತ್ಯರು. ಎರ
ಡೂ ಪಾತಾಳದಂತೆ ಗಂಭೀರವಾಗಿರುವುವು ! ಎರಡೂ ಭಯಂಕರವಾ
ಗಿರುವುವು. ಸಮುದ್ರವು ಆಕಾಶವನ್ನು ಹೋಲುವುದು. ಆಕಾಶವು
ಸಮುದ್ರವನ್ನು ಹೋಲುವುದು! ಸಮುದ್ರವಾವುದು, ಆಕಾಶವಾವುದೆಂಬ
ಭೇದವೇ ಕಾಣುವುದಿಲ್ಲ. ಸಮುದ್ರಜಲವು ಆಕಾಶದೊಡನೆ ಸೇರಿಹೋಗಿರು
ವುದು. ಆಕಾಶವು ಸಮುದ್ರಜಲದೊಡನೆ ಒಂದಾಗಿರುವುದು. ಕೆಳಗೆ ಸಮು
ದ್ರದೊಳಗಿನ ರತ್ನಗಳೊಡನೆ ಆಕಾಶದ ನಕ್ಷತ್ರಗಳೂ, ಕೆಳಗಿನ ತರಂಗಪ
ರಂಪರೆಗಳೊಡನೆ ಆಕಾಶದ ಮೇಘಪರಂಪರೆಗಳೂ ಏಕಾಕಾರವಾಗಿ ಕಾಣು
ತಿದ್ದುದರಿಂದ, ಸಮುದ್ರಾಕಾಶಗಳೆರಡಕ್ಕೂ ಸ್ವಲ್ಪಮಾತ್ರವೂ ಭೇದವಿರ
ಲ್ಲ. ಅಲೆಗಳ ಬಡಿತದಿಂದುಂಟಾದ ಮಹಾಧ್ವನಿಯು ರಣಭೇರಿಯಂತೆ ಭಯಂ
ಕರವಾಗಿ ಮೊಳಗುತ್ತಿರುವುದು. ಮತ್ತು ಆ ಮಹಾಸಾಗರವು ರತ್ನರಾಶಿಗ
ಳೊಡನೆ ಮೇಲೆದ್ದು ಮೊರೆಯುತ್ತಿರುವ ಅಲೆಗಳಿಂದ ವಾಯುಮಂಡಲದ
ಲ್ಲಿ ಐಕ್ಯಹೊಂದಿದಂತೆಯೂ, ಅಲ್ಲಲ್ಲಿ ತಲೆಯೆತ್ತುತ್ತಿರುವ ಜಲಜಂತುಗಳಿಂದ
ಕೋಪಗೊಂಡು ಮೇಲೆ ಹಾರುವಂತೆಯೂ ಕಾಣುವುದು. ಹೀಗೆ ಬಿರುಗಾ
ಳಿಯಿಂದೊಡರಲ್ಪಟ್ಟು, ಮೇಲೇಳುವ ಜಲಪ್ರವಾಹದಿಂದ ಆಕಾಶವನ್ನು
ಮೆಟ್ಟುವಂತೆ ಉಲ್ಲೋಲಕಲ್ಲೋಲವಾದ ಆ ಸಮುದ್ರವನ್ನು ನೋಡುತಿದ್ದ
ಹಾಗೆಲ್ಲಾ ಆ ವಾನರರ ಮನಸ್ಸಿನಲ್ಲಿಯೂ ಮಹೋತ್ಸಾಹವು ಹೆಚ್ಚುತಿತ್ತು.

ಜಲಪ್ರವಾಹಗಳ ವೊರೆತದಿಂದ ಮಹಾಧ್ವನಿಯನ್ನು ಬೀರುತ್ತ ಉದ್ಭ್ರಾಂತ ವಾದಂತಿರುವ ಆ ಸಮುದ್ರವನ್ನು ನೋಡಿ ಎಲ್ಲರೂ ಆಶ್ಚರ್ಯದಿಂದ ಬೆರಗಾಗಿ ನಿಂತರು. ಇಲ್ಲಿಗೆ ನಾಲ್ಕನೆಯ ಸರ್ಗವು.

---

{ಶ್ರೀರಾಮನು ಸಮುದ್ರವನ್ನು ನೋಡುವಾಗ ಸೀತೆಯನ್ನು ಸ್ಮರಿಸಿಕೊಂಡು ದುಃಖಿಸುತ್ತಿರಲು, ಲಕ್ಷ್ಮಣನು ಅವನನ್ನು ಸಮಾಧಾನಪಡಿಸಿದುದು.}

ಆಮೇಲೆ ವಾನರಸೇನಾಪತಿಯಾದ ನೀಲನು, ಆ ಸೇನೆಯೆಲ್ಲವನ್ನೂ ರಾಜನೀತಿಶಾಸ್ತ್ರಕ್ರಮದಿಂದ ಸಮುದ್ರದ ಉತ್ತರತೀರದಲ್ಲಿಳಿಸಿ, ಆ ಸೇನೆಗೆ ಅಲ್ಲಲ್ಲಿ ತಕ್ಕ ರಕ್ಷಕರನ್ನೂ ನಿಯಮಿಸಿದನು. ಮೈಂದದ್ವಿವಿದರೆಂಬ ವಾನರೋತ್ತಮರಿಬ್ಬರೂ ಆ ಸೇನೆಯ ಸುತ್ತಲೂ ಎಚ್ಚರಿಕೆಯಿಂದ ಕಾವಲಾಗಿ ಸುತ್ತುತಿದ್ದರು. ಹೀಗೆ ಸಮಸ್ತವಾನರಸೈನ್ಯವೂ ಆ ತೀರದಲ್ಲಿಳಿದಮೇಲೆ, ರಾಮನು ತನ್ನ ಸಮೀಪದಲ್ಲಿದ್ದ ಲಕ್ಷ್ಮಣನನ್ನು ನೋಡಿ "ವತ್ಸ ಲಕ್ಷ್ಮಣಾ! ಲೋಕದಲ್ಲಿ ಯಾವ ಮನುಷ್ಯಂಗಾದರೂ ಕಾಲವು ಕಳೆಯುತ್ತಬಂದ ಹಾಗೆಲ್ಲಾ ವ್ಯಸನವೂ ತಗ್ಗಿಹೋಗುವುದುಂಟು! ನನಗಾದರೋ ನನ್ನ ಪ್ರಿಯಪತ್ನಿಯನ್ನು ಕಾಣದ ದುಃಖವು ದಿನದಿನಕ್ಕೂ ಮೇಲಮೇಲೆ ಹೆಚ್ಚುತ್ತಲೇ ಇರುವುದು ! ಆ ನನ್ನ ಪ್ರಿಯೆಯು ಅಷ್ಟುದೂರದಲ್ಲಿರುವಳೆಂದೂ ನಾನು ದುಃಖಿಸುವವನಲ್ಲ! ಅವಳನ್ನು ರಾಕ್ಷಸನು ಕದ್ದುಯ್ದಿರುವುದಕ್ಕೂ ನನಗೆ ದುಃಖವಿಲ್ಲ! ಎಷ್ಟು ದೂರದಲ್ಲಿದ್ದರೂ ನಾನು ಅವಳನ್ನು ಕರೆಸಿಕೊಳ್ಳುವೆನು. ಯಾವರಾಕ್ಷಸನನ್ನಾದರೂ ಕೊಲ್ಲಬಲ್ಲೆನು ! ಆದರೆ ಅವಳ ಯೌವನವೆಲ್ಲವೂ ಹೀಗೆಯೇ ವ್ಯರ್ಥವಾಗಿ ಕಳೆದುಹೋಗುವುದೆಂಬ ಈ ಚಿಂತೆಯೊಂದೇ ನನ್ನನ್ನು ಬಹಳವಾಗಿ ಸಂಕಟಪಡಿಸುತ್ತಿರುವುದು." ಎಂದು ಹೇಳುತ್ತ, ವಿರಹದುಃಖದಿಂದ ಪರವಶನಾಗಿ ಸಮುದ್ರದ ಗಾಳಿಗಿದಿರಾಗಿ ನಿಂತು "ಎಲೆ ಗಾಳಿಯೆ! ನೀನಾದರೂ ಈಗ ನನ್ನ ಪ್ರಿಯೆಯಾದ ಸೀತೆಯಿರುವ ಕಡೆಯಿಂದ ಬೀಸು!ಅವಳನ್ನು ಸ್ಪರ್ಶಿಸಿ ನನ್ನನ್ನೂ ಸ್ಪರ್ಶಿಸು! ಬೇರೆವಿಧದಿಂದ ನನಗೆ ಅವಳ ಸ್ಪರ್ಶವು ದೊರಕದು! ಆಕೆಯು ತನ್ನ ಕಣ್ಣು

ಗಳಿಂದ ನೋಡುತ್ತಿರುವ ಚಂದ್ರನನ್ನೇ ಈಗ ನಾನೂ ನನ್ನ ಕಣ್ಣುಗಳಿಂದ ನೋಡುತ್ತಿರುವೆನಲ್ಲವೆ ! ಈ ಮೂಲಕವಾಗಿ ನಮ್ಮಿಬ್ಬರಿಗೂ ದೃಷ್ಟಿಸಂಬಂಧವಾಗುತ್ತಿರುವುದು. ಅದರಂತೆಯೇ ಅವಳನ್ನು ಸ್ಪರ್ಶಿಸಿಬಂದ ನೀನು ನನ್ನನ್ನು ಸ್ಪರ್ಶಿಸಿದರೆ, ನಮ್ಮಿಬ್ಬರಿಗೂ ನಿನ್ನಮೂಲಕವಾಗಿ ಗಾತ್ರಸ್ಪರ್ಶವೂ ಉಂಟಾಗುವುದು. ಸಮಸ್ತಭೋಗಗಳನ್ನೂ ತೊರೆದು ನನ್ನೊಡನೆ ಕಾಡಿಗೆ ಹೊರಟುಬಂದ ಆ ನನ್ನ ಪ್ರಿಯೆಯು, ರಾವಣನು ತನ್ನನ್ನು ಕದ್ದುಯ್ಯುವಾಗ, ತನ್ನ ಪಾತಿವ್ರತ್ಯಾಗ್ನಿಯಿಂದಲೇ ಅವನನ್ನು ದಹಿಸಬಲ್ಲವಳಾಗಿದ್ದರೂ, ನನ್ನಲ್ಲಿ ಭಕ್ತಿಯಿಂದ, ನನ್ನನ್ನೇ ಗತಿಯನ್ನಾಗಿ ನಂಬಿ "ಹಾ ನಾಥಾ" ಎಂದು ಮೊರೆಯಿಟ್ಟಳಲ್ಲವೆ ! ಆ ದೀನಧ್ವನಿಯೇ ಈಗಲೂ ನನ್ನ ಹೃದಯದಲ್ಲಿ ನಾಟಿ, ವಿಷವನ್ನು ಕುಡಿದಂತೆ ನನ್ನ ಸರ್ವಾವಯವಗಳನ್ನೂ ದಹಿಸುತ್ತಿರುವುದು. ಆಕೆಯ ವಿರಹವೆಂಬ ಕಟ್ಟಿಗೆಯಿಂದಲೂ, ಆಕೆಯ ಚಿಂತೆಯೆಂಬ ಜ್ವಾಲೆಯಿಂದಲೂ ಕೂಡಿದ ಕಾಮಾಗ್ನಿಯು, ಹಗಲು ರಾತ್ರಿಯೂ ನನ್ನ ದೇಹವನ್ನು ಬಹಳವಾಗಿ ದಹಿಸುತ್ತಿರುವುದು. ವತ್ಸ ಲಕ್ಷ್ಮಣಾ! ಈ ನನ್ನ ತಾಪವನ್ನು ತಗ್ಗಿಸುವುದಕ್ಕೆ ಬೇರೆ ಉಪಾಯವೇಇಲ್ಲ! ನಿನ್ನನ್ನು ನೋಡುತಿದ್ದಹಾಗೆಲ್ಲಾ ನನಗೆ ಆ ಸೀತೆಯ ಸ್ಮರಣವುಂಟಾಗುವುದು. ಆದುದರಿಂದ[1] ಈಗ ನಾನು ನಿನ್ನನ್ನೂ ಬಿಟ್ಟು, ಈ ಸಮುದ್ರಜಲದಲ್ಲಿ ಮುಳುಗಿ ಮಲಗಿಬಿಡುವೆನು. ಹೀಗೆ ಎಡೆಬಿಡದೆ ನನ್ನನ್ನು ದಹಿಸುತ್ತಿರುವ ಕಾಮಾಗ್ನಿಯು ನೀರಿನಲ್ಲಿ ಮಲಗುವುದರಿಂದಾದರೂ ಸ್ವಲ್ಪವಾಗಿ ಶಾಂತವಾಗಬಹುದು! ಹೇಗಾದರೂ ಆಗಲಿ! ಮುಖ್ಯವಾಗಿ ಸೀತೆಯು ಇನ್ನೂ ಬದುಕಿರುವ ಸಂಗತಿಯನ್ನು ಕೇಳಿದೆನು. ಈಗ ನಾನೂ, ಆಕೆಯೂ, ಒಂದೇ ಭೂಮಿಯನ್ನಾಶ್ರಯಿಸಿದಂತಾಯಿತಲ್ಲವೆ ? ಹೀಗೆ ಬಹಳ ದುಃಖಾಕ್ರಾಂತ

---

1 ಇಲ್ಲಿ ರಾಮನು, ತಾನು ಲಕ್ಷ್ಮಣನನ್ನು ಬಿಟ್ಟು ಸಮುದ್ರದಲ್ಲಿ ಮಲಗುವುದನ್ನು ವಿಪರೀತಪ್ರಕ್ರಿಯೆಯನ್ನಾಗಿ ಹೇಳಿರುವನು. ಇದರಿಂದ ಸಮುದ್ರದಲ್ಲಿಯೂ ತಾನು ಲಕ್ಷ್ಮಣನೊಡನೆ ಸೇರಿ ಮಲಗುವುದೇ ಸಹಜಪ್ರಕ್ರಿಯೆಯಾಗಿ ಧ್ವನಿಸುವುದು. ವಿಷ್ಣುವು ಸಮುದ್ರದಲ್ಲಿ ಶೇಷಶಾಯಿಯಾದುದರಿಂದ ಲಕ್ಷ್ಮಣನು ಶೇಷಾವತಾರವೆಂದು ಇದರಿಂದ ಸೂಚಿತವಾಗುವುದು.

ನಾಗಿರುವ ನನ್ನ ಪ್ರಾಣಗಳನ್ನು ನಿಲ್ಲಿಸಿಡುವುದಕ್ಕೆ, ಈಗ ಇದೊಂದೇ ದೊಡ್ಡ ಸಾಧನವಾಗಿರುವುದು. ಏಕಶಯ್ಯೆಯಲ್ಲಿ ಮಲಗುವಂತೆ ಈಗ ನಾವಿಬ್ಬರೂ ಈ ಒಂದೇ ಭೂಮಿಯನ್ನಾಶ್ರಯಿಸಿರುವುದರಿಂದ, ಇದೇ ನಮ್ಮಿಬ್ಬರಿಗೂ ಜೀವನಸಾಧನವಾಗಿರುವುದು. ಚೆನ್ನಾಗಿ ಜಲಸಮೃದ್ಧಿಯುಳ್ಳ ಗದ್ದೆಯ ಸಮೀಪದಲ್ಲಿರುವುದರಿಂದ, ನೀರಿಲ್ಲದ ಗದ್ದೆಗೂ ತೇವವೇರುವಂತೆ, ಆ ನನ್ನ ಪ್ರಿಯೆಯು ಬದುಕಿರುವಳೆಂಬ ಸುದ್ದಿಯನ್ನು ಕೇಳಿಯೇ ನಾನೂ ಈಗ ಬದುಕಿರುವೆನು. ವತ್ಸ ಲಕ್ಷ್ಮಣಾ! ನಾನು ಆ ನನ್ನ ಶತ್ರುಗಳನ್ನು ಯಾವಾಗ ಜಯಿಸುವೆನು? ಅಂದವಾದ ನಿಂತಂಬದಿಂದಲೂ, ಕಮಲದಂತೆ ವಿಸ್ತಾರವಾದ ಕಣ್ಣುಗಳಿಂದಲೂ ಶೋಭಿಸುವ ಆ ಸೀತೆಯನ್ನು, ತುಂಬಿದ ಭಾಗ್ಯಲಕ್ಷ್ಮಿಯನ್ನು ಪಡೆಯುವಂತೆ ಯಾವಾಗ ಪಡೆಯುವೆನು? ರೋಗಿಯು ರಸಾಯನವನ್ನು ಕುಡಿಯುವಂತೆ ತಾವರೆಯಂತಿರುವ ಆಕೆಯ ಮುಖವನ್ನು ಸ್ವಲ್ಪವಾಗಿ ಮೇಲಕ್ಕೆತ್ತಿ, ತೊಂಡೆಯ ಹಣ್ಣಿನಂತಿರುವ ಆಕೆಯ ತುಟಿಯನ್ನು ನಾನು ಯಾವಾಗ ಪಾನಮಾಡುವೆನು? [1] ಆ ನನ್ನ ಪ್ರಿಯೆಯು ಬಂದು ನನ್ನನ್ನು ಪ್ರೀತಿಯಿಂದಪ್ಪುವಾಗ, ತಾಳೆಯ ಹಣ್ಣುಗಳಂತೆ ಉಬ್ಬಿ ಒತ್ತಾಗಿ ಬೆಳೆದ ಆಕೆಯ ಸ್ತನಗಳೆರಡೂ ನನ್ನ ಮೈಯನ್ನು ಯಾವಾಗ ಸೋಕುವುವು? ನನ್ನನ್ನೇ ದಿಕ್ಕಾಗಿ ನಂಬಿದ್ದ ಆ ನೀಲಲೋಚನೆಯು, ಈಗ ರಾಕ್ಷಸರ ಕೈಯಲ್ಲಿ ಸಿಕ್ಕಿಬಿದ್ದು, ಹೀಗೆ ನಾನು ಬದುಕಿರುವಾಗಲೂ ಅನಾಥೆಯಂತೆ ದಿಕ್ಕುಗಾಣದೆ ಕೂಗಿಡುವುದರಲ್ಲಿ ಸಂದೇಹವಿಲ್ಲ! ಹಾ ಕಷ್ಟವೇ! ಜನಕರಾಜನಿಗೆ ಮಗಳಾಗಿ, ನನಗೆ ಕೈಹಿಡಿದ ಹೆಂಡತಿಯಾಗಿ, ದಶರಥರಾಜನಿಗೆ ಸೊಸೆಯೆನಿಸಿಕೊಂಡ ಆ ಸೀತೆಯೂ ಹೀಗೆ ಘೋರರಾಕ್ಷಸಿಯರ ನಡುವೆ ಮಲಗುವುದೆಂದರೇನು? ಶರತ್ಕಾಲದಲ್ಲಿ ನೀಲಮೇಘಗಳನ್ನೊದರಿಕೊಂಡು ಹೊರಕ್ಕೆ ಬರುವ ಚಂದ್ರರೇಖೆಯಂತೆ, ಆ ಸೀತೆಯು ಯಾರಿಗೂ ಅಡ

---

1 "ರಾಮನು ತಮ್ಮನಾದ ಲಕ್ಷ್ಮಣನೊಡನೆ ಹೀಗೆ ತನ್ನ ಕಾಮಾವಸ್ಥೆಗಳನ್ನು ಹೇಳಿಕೊಳ್ಳುವುದುಂಟೆ" ಎಂದರೆ, ಲಕ್ಷ್ಮಣನು ರಾಮನಿಗೆ ಸರ್ವವಿಧಸೇವಕನಾದುದರಿಂದ, ಅವನೊಡನೆ ಯಾವ ವಿಷಯವನ್ನು ಹೇಳುವುದೂ ಅನುಚಿತವಲ್ಲವೆಂದು ಗ್ರಾಹ್ಯವು.

ಗವ ಆ ಘೋರರಾಕ್ಷಸಿಯರನ್ನೂ ಧೈರ್ಯದಿಂದೊದರಿಕೊಂಡು ಯಾ
ವಾಗ ನನ್ನ ಮುಂದೆ ಗೋಚರಿಸುವಳೋ! ಆ ಸೀತೆಯೋ ಸಹಜವಾಗಿ
ಯೇ ಕೃಶವಾದ ಮೈಯುಳ್ಳವಳು! ಇದರಮೇಲೆ ಕಾಲದೇಶಸ್ಥಿತಿಯು
ಹೀಗೆ ವಿಪರೀತವಾಗಿ ಬಂದು, ದುಃಖದಿಂದಲೂ, ಉಪವಾಸದಿಂದಲೂ
ಇನ್ನೂ ಬಹಳವಾಗಿ ಕೃಶಿಸಿರುವಳು! ಇದರಲ್ಲಿ ಸಂದೇಹವಿಲ್ಲ. ನಾನು
ಆ ರಾವಣನ ಎದೆಗೆ ಬಾಣಗಳನ್ನು ನಾಟಿ, ತಿರುಗಿ ಸೀತೆಯನ್ನು ಪಡೆದು,
ನನ್ನ ಮನೋವ್ಯಾಧಿಯನ್ನು ಯಾವಾಗ ನೀಗಿಸಿಕೊಳ್ಳುವೆನೋ? ದೇವಕ
ನ್ಯೆಯಂತಿರುವ ಆ ಸಾಧ್ವಿಯು ಪ್ರೀತಿಯಿಂದ ಬಂದು, ನನ್ನಿಂದಾಲಿಂಗಿತ
ಳಾಗಿ ಯಾವಾಗ ಆನಂದಬಾಷ್ಪವನ್ನು ಬಿಡುವಳೋ! ಕೊಳೆಬಟ್ಟೆಯನ್ನು
ತೆಗೆದು ಬಿಸುಡುವಂತೆ ಯಾವಾಗ ನಾನು ಭಯಂಕರವಾದ ಈ ಸೀತಾವಿ
ಯೋಗದುಃಖವನ್ನು ನೀಗಿಬಿಡುವೆನೋ!" ಎಂದು ನಾನಾವಿಧವಾಗಿ ವಿಲಪಿ
ಸುತಿದ್ದನು. ಇಷ್ಟರಲ್ಲಿ ಹಗಲು ಕಳೆದು, ಸೂರ್ಯನ ಕಾಂತಿಯು ಕಂದಿ, ಅಸ್ತಮ
ಯವಾಯಿತು. ಆಗ ಲಕ್ಷ್ಮಣನು ರಾಮನಿಗೆ ನಾನಾವಿಧದಿಂದ ಸಮಾಧಾ
ನವಾಕ್ಯವನ್ನು ಹೇಳಿ, ಅವನಿಗೆ ದುಃಖಶಾಂತಿಯನ್ನು ಮಾಡಿದನು. ಆದರೂ
ರಾಮನು ಸೀತೆಯ ಚಿಂತೆಯನ್ನು ಬಿಡದೆ, ದುಃಖಿತನಾಗಿಯೇ ಆಗಿನ ಸಂ
ಧ್ಯಾಕಾರ್ಯವನ್ನು ನಡೆಸಿದನು. ಇಲ್ಲಿಗೆ ಐದನೆಯ ಸರ್ಗವು.

---

[1]ಅತ್ತಲಾಗಿ ಲಂಕೆಯಲ್ಲಿ ರಾವಣನು, ಹನುಮಂತನು
ನಡೆಸಿಹೋದ ಕಾರ್ಯಗಳಿಗಾಗಿ ಚಿಂತಿಸುತ್ತ, ಮುಂ
ದೆ ಶತ್ರುಗಳು ದಂಡೆತ್ತಿಬರುವುದಕ್ಕೆ ಮೊದಲು ತಾನು
ಮಾಡಬೇಕಾದ ಸನ್ನಾಹಗಳನ್ನು ಕುರಿತು ತನ್ನ
ಮಂತ್ರಿಗಳೊಡನೆ ಆಲೋಚಿಸಿದುದು.

ಇಂದ್ರಪರಾಕ್ರಮವುಳ್ಳ ಮಹಾತ್ಮನಾದ ಹನುಮಂತನು ಲಂಕೆಯ
ಲ್ಲಿ ನಡೆಸಿಹೋದ ಭಯಂಕರಕಾರ್ಯಗಳನ್ನು ಕುರಿತು ರಾವಣನ ಮನಸ್ಸಿನಲ್ಲಿ

1 ಇದುವರೆಗೆ ಇತ್ತಲಾಗಿ ರಾಮನ ವೃತ್ತಾಂತವನ್ನು ತಿಳಿಸಿ, ಇಲ್ಲಿಂದ ಮುಂದೆ ಅತ್ತಲಾಗಿ ಹನುಮಂತನು ಲಂಕೆಯನ್ನು ಬಿಟ್ಟು ಹೋದಮೇಲೆ ನಡೆದ ರಾವಣನ ವೃತ್ತಾಂತವನ್ನಾರಂಭಿಸುವುದಾಗಿ ತಿಳಿಯಬೇಕು.

ಬಹಳವಾದ ಕಳವಳವು ಹುಟ್ಟಿತು. ಆ ಕಾರ್ಯಗಳನ್ನು ನೆನೆಸಿಕೊಂಡು ತನಗೆ ತಾನೇ ಲಜ್ಜೆಯಿಂದ ತಲೆಯನ್ನು ತಗ್ಗಿಸಿ, ತನ್ನ ಮುಂದಿದ್ದ ರಾಕ್ಷಸಮಂತ್ರಿಗಳನ್ನು ಕುರಿತು “ಎಲೆ ಅಮಾತ್ಯರೆ? ಆಹಾ! ಏನಾಶ್ಚರ್ಯವು! ಯಾವುದೋ ಒಂದು ಸಾಮಾನ್ಯವಾದ ಕಾಡುಕಪಿಯಂತಿದ್ದ ಹನುಮಂತನು ದುರ್ಗಮವಾದ ಈ ನಮ್ಮ ಲಂಕೆಗೆ ಪ್ರವೇಶಿಸಿದನಲ್ಲವೆ? ಅದೂ ಹಾಗಿರಲಿ! ಈ ನಮ್ಮ ಪಟ್ಟಣವೆಲ್ಲವನ್ನೂ ಕಪಲಿಸಿ, ನಾವು ಎಷ್ಟೋ ರಹಸ್ಯವಾಗಿ ಬಚ್ಚಿಟ್ಟಿದ್ದ ಸೀತೆಯನ್ನೂ ಕಂಡುಹೋದನಲ್ಲಾ! ಇಷ್ಟೇ ಅಲ್ಲ! ನಮ್ಮ ಚೈತ್ಯಪ್ರಾಸಾದವನ್ನೂ ಮುರಿದು ಕೆಡಹಿದನು! ಎಷ್ಟೋ ಮಂದಿ ವೀರರಾಕ್ಷಸರನ್ನೂ ಕೊಂದನು! ಒಂದು ಕಾಡುಕಪಿಯೇ ಹೀಗೆ ಈ ನಮ್ಮ ಲಂಕೆಗೆ ಇಷ್ಟು ದುರವಸ್ಥೆಯನ್ನು ತಂದಿಟ್ಟಿತಲ್ಲಾ! ಇನ್ನು ನಾವು ಮುಂದೆ ನಡೆಸಬೇಕಾದುದೇನು? ನಮ್ಮೆಲ್ಲರಿಗೂ ಯಾವುದು ಮುಂದೆ ಹಿತವೋ, ಯಾವುದು ನಮ್ಮಿಂದ ಸಾಧ್ಯವೋ, ಮುಂದಿನ ಕಾರ್ಯಕ್ಕೆ ಯಾವುದು ಅನುಕೂಲವೋ ಅದನ್ನು ನೀವೆಲ್ಲರೂ ಯೋಚಿಸಿ ಹೇಳಿರಿ? ನಿಮಗೆ ಶುಭವಾಗಲಿ! ಒಂದುವೇಳೆ ನೀವು ಎಣೆಯಿಲ್ಲದ ವೀರ್ಯವುಳ್ಳ ನಮ್ಮಂತಹ ರಾಕ್ಷಸರಿಗೆ ಈ ಮಂತ್ರಾಲೋಚನೆಗಳೇಕೆಂದು ಶಂಕಿಸಬಹುದು. ಮಂತ್ರಾಲೋಚನೆಯೇ ಜಯಕ್ಕೆ ಮೂಲವೆಂದು ದೊಡ್ಡವರು ಹೇಳಿರುವರು. ಆದುದರಿಂದಲೇ ನಾನು ಈಗ ನಿಮ್ಮೊಡನೆ ರಾಮನ ವಿಷಯವಾಗಿ ಮಂತ್ರಾಲೋಚನೆಯನ್ನು ಮಾಡುತ್ತಿರುವೆನು. ಲೋಕದಲ್ಲಿ ಪುರುಷರು, ಉತ್ತಮರೆಂದೂ, ಮಧ್ಯಮರೆಂದೂ, ಅಧಮರೆಂದೂ ಮೂರು ಬಗೆಯಾಗಿರುವರು. ಇಂತವರೆಲ್ಲರೂ ಒಟ್ಟಾಗಿಯೇ ಕಲೆತಿರುವುದರಿಂದ, ಅವರವರ ಸ್ವರೂಪವನ್ನು ಪ್ರತ್ಯೇಕವಾಗಿ ತಿಳಿಯುವುದು ಸುಲಭವಲ್ಲ. ಆದುದರಿಂದ ಈಗ ನಾನು ನಿಮಗೆ ಅವರ ಗುಣದೋಷಗಳನ್ನು ತಿಳಿಸಬೇಕಾಗಿರುವುದು. ಯಾವನು ಮಂತ್ರಾಲೋಚನೆಗಳನ್ನು ನಿರ್ಣಯಿಸುವುದರಲ್ಲಿ ನಿಪುಣರಾಗಿಯೂ, ತನಗೆ ಹಿತೈಷಿಗಳಾಗಿಯೂ, ಇರುವ ಮಂತ್ರಿಗಳೊಡನೆಯಾಗಲಿ, ತನ್ನ ಸುಖದುಃಖಗಳನ್ನೇ ತಮ್ಮ ಸುಖದುಃಖಗಳೆಂದು ಭಾವಿಸುವ ಸ್ನೇಹಿತರೊಡನೆಯಾಗಲಿ, ಯಾವಾಗಲೂ ತನಗೆ ಹಿತವನ್ನು ಕೋರುವ ಬಂಧುಗಳೊಡನೆಯಾಗಲಿ ಸೇರಿ ಚೆನ್ನಾಗಿ ಆಲೋಚಿಸಿ

ಕಾರ್ಯಗಳನ್ನು ನಡೆಸುವನೋ, ಯಾವನು ಕೇವಲಪುರುಷಪ್ರಯತ್ನವನ್ನೇ ನಂಬದೆ ದೈವದಮೇಲೆಯೂ ಭಾರವನ್ನು ಹೊರಿಸುವನೋ, ಅಂತವನು ಪುರುಷರಲ್ಲಿ ಉತ್ತಮನೆನಿಸುವನು. ಯಾವನು ತಾನೊಬ್ಬನೇ ಕಾರ್ಯಗಳನ್ನಾ ಲೋಚಿಸಿ, ತಾನೊಬ್ಬನೇ ಮನಃಪೂರ್ವಕವಾಗಿ ದೈವವನ್ನು ನಂಬಿ, ತಾನೊ ಬ್ಬನೇ ನಿಂತು ಆ ಕಾರ್ಯಗಳನ್ನು ನಡೆಸುವನೋ ಅವನು ಮಧ್ಯಮನು. ಯಾವನು ಮುಂದೆ ಬರಬಹುದಾದ ಗುಣದೋಷಗಳನ್ನೂ ನಿಶ್ಚಯಿಸಿಕೊ ಳ್ಳದೆ, ದೈವವನ್ನೂ ನಂಬದೆ, ತಾನೊಬ್ಬನೇ ಕಾರ್ಯವನ್ನು ನಡೆಸುವುದಕ್ಕೆ ಪ್ರಯತ್ನಿಸಿ, ಅದನ್ನೂ ಅಲಕ್ಷ್ಯದಿಂದ ನಡೆಸುವನೋ ಅವನು ನರಾಧಮನು. ಹೀಗೆ ಮನುಷ್ಯರಲ್ಲಿ ಮೂರುವಿಭಾಗಗಳಿರುವಂತೆ ಮಂತ್ರಾಲೋಚನೆಗಳಲ್ಲಿ ಯೂ, ಉತ್ತಮಾಧಮಮಧ್ಯಮಗಳೆಂಬ ಮೂರು ಭೇದಗಳುಂಟು. ಮಂ ತ್ರಿಗಳೆಲ್ಲರೂ ಐಕಮತ್ಯದಿಂದಿದ್ದು, ಚೆನ್ನಾಗಿ ಶಾಸ್ತ್ರಜ್ಞಾನವನ್ನೂ ಹೊಂ ದಿ, ಮನಃಪೂರ್ವಕವಾದ ಆಸಕ್ತಿಯಿಂದ ಯಾವ ಆಲೋಚನೆಯನ್ನು ನಡೆ ಸುವರೋ ಅದು ಉತ್ತಮಮಂತ್ರವೆನಿಸುವುದು. ಒಂದು ಸಂಗತಿಯನ್ನು ನಿರ್ಣಯಿಸುವಾಗ ಮೊದಲೇ ಅನೇಕರು ಅನೇಕವಿಧವಾದ ಅಭಿಪ್ರಾಯಭೇ ದವುಳ್ಳವರಾಗಿ, ಕೊನೆಗೆ ಎಲ್ಲರೂ ಯಾವುದೋ ಒಂದುವಿಧದಿಂದ ಏಕಾಭಿ ಪ್ರಾಯಕ್ಕೆ ಬರುವರೋ ಅದು ಮಧ್ಯಮಮಂತ್ರವೆನಿಸುವುದು. ಯಾವ ವಿಷಯದಲ್ಲಿ ಮಂತ್ರಿಗಳೊಬ್ಬೊಬ್ಬರೂ ತಮ್ಮತಮ್ಮ ಅಭಿಪ್ರಾಯವನ್ನೇ ಮುಖ್ಯವಾಗಿಟ್ಟುಕೊಂಡು,ತಮ್ಮ ಹಟವನ್ನು ಬಿಡದೆ ವಾದಮಾಡುತ್ತ, ಪರ ಸ್ಪರಪ್ರೀತಿಯೂ ಇಲ್ಲದೆ,ಐಕಮತ್ಯದಲ್ಲಿಯೂ ದೃಷ್ಟಿಯಿಲ್ಲದಿರುವರೋ ಅವ ರಿಂದುಂಟಾದ ಆಲೋಚನೆಯು ಅಧಮಮಂತ್ರವೆನಿಸುವುದು. ಆದುದರಿಂದ ಬುದ್ಧಿವಂತರಾದ ನೀವೆಲ್ಲರೂ ಈ ವಿಷಯವನ್ನು ಐಕಮತ್ಯದಿಂದ ಚೆನ್ನಾಗಿ ಪರ್ಯಾಲೋಚಿಸಿ, ಮುಂದೆ ಯಾವುದು ಯುಕ್ತವೆಂಬುದನ್ನು ನಿಶ್ಚಯಿಸಿ ಹೇ ಳಬೇಕು. ಹೀಗೆ ನೀವೆಲ್ಲರೂ ಐಕಮತ್ಯದಿಂದ ನಿಶ್ಚಯಿಸಿದ ಕಾರ್ಯವೇ ನನಗೆ ಆವಶ್ಯಕೃತ್ಯವು.ಅದನ್ನೇ ನಡೆಸಬೇಕೆಂಬುದೂ ನನ್ನ ಮುಖ್ಯಾಭಿಪ್ರಾಯವು. ಇನ್ನು ನಾವು ಸುಮ್ಮನೆ ಉದಾಸೀನರಾಗಿರುವುದು ಯುಕ್ತವಲ್ಲ. ರಾಮನು ಮಹಾವೀರರಾದ ಸಾವಿರಾರುಮಂದಿ ವಾನರರೊಡನೆ ನಮ್ಮ ಈ ಲಂಕೆಗೆ

ಮುತ್ತಿಗೆ ಹಾಕುವುದಕ್ಕಾಗಿ ಬರುವನು. ಈ ಸಮುದ್ರವನ್ನು ದಾಟುವುದೂ ಅವನಿಗೊಂದು ಕಷ್ಟವಲ್ಲ. ಆತನು ತಮ್ಮನಾದ ಲಕ್ಷ್ಮಣನೊಡನೆಯೂ, ವಾನರಸೈನ್ಯಗಳೊಡನೆಯೂ, ಸುಗ್ರೀವನೇ ಮೊದಲಾದ ಅನುಚರರೊಡನೆಯೂ ಸೇರಿ ಬಂದು,ಇಲ್ಲಿ ತನ್ನ ಪೂರ್ಣಶಕ್ತಿಯನ್ನು ತೋರಿಸದೆ ಬಿಡನು. ಆತನು ತನ್ನವೀರ್ಯದಿಂದ ಈ ಸಮುದ್ರವನ್ನೇ ಶೋಷಿಸಿಯೋ, ಅಥವಾ ಸೇತುಬಂಧನವೇ ಮೊದಲಾದ ಬೇರೆ ಉಪಾಯದಿಂದಲೋ ಸುಖವಾಗಿ ಇಲ್ಲಿಗೆ ಬರಬಲ್ಲನೆಂದೂ ನನಗೆ ತೋರಿರುವುದು. ಹೀಗೆ ನಮಗೂ, ವಾನರರಿಗೂ ವಿರೋಧವು ಹೆಚ್ಚಿ ಬಂದಿರುವುದರಿಂದ, ಆ ಕಾಲಕ್ಕೆ ನಮ್ಮ ಪಟ್ಟಣಕ್ಕೂ ನಮ್ಮ ಸೈನ್ಯಕ್ಕೂ ಅಪಾಯವಿಲ್ಲದಂತೆ ಕಾಪಾಡಿಕೊಳ್ಳುವ ದಾರಿಯೇನೆಂದು ಈಗಲೇ ನೀವು ಚೆನ್ನಾಗಿ ನಿಶ್ಚಯಿಸಿ ಹೇಳಿರಿ" ಎಂದನು. ಇಲ್ಲಿಗೆ ಆರನೆಯ ಸರ್ಗವು.

---

{ಮಂತ್ರಿಗಳು ಶತ್ರುಬಲವನ್ನು ತಿಳಿಯದೆ, ಆ ರಾವಣನ ಪರಾಕ್ರಮಗಳನ್ನೇ ಹೊಗಳುತ್ತ, ಮುಖಸ್ತುತಿ ಮಾಡಿ ಅವನನ್ನು ಪ್ರೋತ್ಸಾಹಿಸಿದುದು.}

ಅಲ್ಲಿದ್ದ ರಾಕ್ಷಸರೆಲ್ಲರೂ ಬಹಳ ಬಲಾಢ್ಯರಾಗಿದ್ದರೂ,ರಾಜನೀತಿಯನ್ನರಿಯದವರಾಗಿಯೂ, ಬುದ್ಧಿಹೀನರಾಗಿಯೂ ಇದ್ದುದರಿಂದ, ಶತ್ರುಬಲವನ್ನು ತಿಳಿಯದೆ, ಅವರೆಲ್ಲರೂ ಒಟ್ಟಾಗಿ ಆ ರಾವಣನ ಮುಂದೆ ಕೈಮುಗಿದು ನಿಂತು, ಅವನ ಮಾತಿಗೆ ಪ್ರತ್ಯುತ್ತರವಾಗಿ "ಎಲೆ ಮಹಾರಾಜನೆ ! ಇದೀಗ ಚೆನ್ನಾಯಿತು! ನೀನೂ ಹೀಗೆ ಶತ್ರುಗಳಿಗೆ ಹೆದರುವುದೆಂದರೇನು? ನಮ್ಮಲ್ಲಿರುವ ಈ ಮಹಾಗದೆಗಳೇನು? ಈ ನಮ್ಮ ಈಟಿಗಳೇನು? ಈ ನಮ್ಮ ಖಡ್ಗಗಳೇನು? ಈ ನಮ್ಮ ಶೂಲಗಳೇನು? ನಮ್ಮ ಪಟ್ಟಸಗಳೇನು? ಹೀಗೆ ಅನೇಕ ಶಸ್ತ್ರಸಮೃದ್ಧಿಯುಳ್ಳ ಇಷ್ಟು ದೊಡ್ಡ ಸೈನ್ಯವು ನಿನ್ನ ವಶದಲ್ಲಿರುವಾಗಲೂ, ನೀನು ಹೀಗೆ ಭಯಪಡುವುದುಂಟೆ? ಈ ಸೈನ್ಯಗಳೂ ಹಾಗಿರಲಿ! ನೀನೊಬ್ಬನೇ ಸಾಲದೆ? ನೀನು ಹಿಂದೆ ಮಾಡಿರುವ ಕೆಲಸಗಳನ್ನಾದರೂ ನೆನೆಸಿಕೊಂಡು ನೋಡು!ಪಾತಾಳದಲ್ಲಿರುವ ಭೋಗವತಿಗೆ ಹೋಗಿ ಅಲ್ಲಿನ ಯುದ್ಧದಲ್ಲಿ ಎಷ್ಟೋಮಂದಿ ಪನ್ನಗರನ್ನು ಜಯಿಸಿಬಂದಿರುವೆ? ಅನೇಕಯಕ್ಷ

ರೊಡಗೂಡಿ ಕೈಲಾಸಶಿಖರದಲ್ಲಿದ್ದ ಕುಬೇರನೊಡನೆಯೂ ದೊಡ್ಡ ಯು
ದ್ಧವನ್ನುಮಾಡಿ, ಅವನನ್ನೂ ನಿನ್ನ ಕೈವಶಮಾಡಿಕೊಂಡಿರುವೆ? ಆ ಕುಬೇರ
ನೋ ಈಶ್ವರನಿಗೆ ಪರಮಮಿತ್ರನೆಂದು ಪ್ರಸಿದ್ಧನಾದವನು! ಲೋಕಪಾ
ಲಕನು! ಮಹಾಬಲಾಢ್ಯನು! ಅಂತಹ ಕುಬೇರನನ್ನೇ ನೀನು ಯುದ್ಧದಲ್ಲಿ
ಜಯಿಸಿಬಂದವನಲ್ಲವೆ? ಮತ್ತು ನೀನು ಅಲ್ಲಿನ ಯಕ್ಷರನ್ನು ಗುಂಪುಗುಂಪಾಗಿ
ಹಿಡಿದುತಂಪು, ಕೆಲವರನ್ನು ನಿಗ್ರಹಿಸಿ, ಕೆಲವರನ್ನು ಸೆರೆಹಿಡಿದು ಕೈಲಾ
ಸಶಿಖರದಿಂದ ಪುಷ್ಪಕವಿಮಾನವನ್ನೂ ತಂದವನಲ್ಲವೆ?ಎಲೆ ರಾಕ್ಷಸೇಂದ್ರನೆ!
ಪೂರ್ವದಲ್ಲಿ ದಾನವೇಂದ್ರನಾದ ಮಯನು, ನಿನ್ನ ಭಯಕ್ಕಾಗಿ ನಿನ್ನೊಡನೆ
ಸ್ನೇಹವನ್ನು ಬಯಸಿ, ತನ್ನ ಮಗಳಾದ ಮಂಡೋದರಿಯನ್ನು ನಿನಗೆ ಕೊ
ಟ್ಟು ಮದುವೆಮಾಡಲಿಲ್ಲವೆ? ಪರಾಕ್ರಮದಿಂದ ಕೊಬ್ಬಿ, ಎಂತವರಿಗೂ
ದುರ್ಜಯನೆನಿಸಿಕೊಂಡು, ನಿನ್ನತಂಗಿ ಕುಂಭೀನಸಿಗೆ ಪ್ರಿಯಪತಿಯಾದ ಮ
ಧುವೆಂಬ ದಾನವೇಂದ್ರನನ್ನೂ ನೀನು ಯುದ್ಧದಲ್ಲಿ ನಿಗ್ರಹಿಸಿ ಅವನನ್ನು
ನಿನ್ನ ವಶಪಡಿಸಿಕೊಂಡವನಲ್ಲವೆ? ಎಲೆ ಮಹಾಬಾಹೂ! ಇದಲ್ಲದೆ ನೀನು
ರಸಾತಲಕ್ಕೆ ಹೋಗಿ ಅಲ್ಲಿದ್ದ ವಾಸುಕಿಯನ್ನೂ,ತಕ್ಷಕನನ್ನೂ, ಶಂಖನನ್ನೂ
ಜಟಿಯನ್ನೂ,ಇನ್ನೂ ಅವನಕಡೆಯ ಅನೇಕನಾಗರನ್ನೂ ಜಯಿಸಿ ವಶಪಡಿಸಿ
ಕೊಂಡವನಲ್ಲವೆ? ತುಂಡುತುಂಡಾಗಿ ಕಡಿದರೂ ತಿರುಗಿ ಮೇಲೆದ್ದು ಯುದ್ಧ
ಕ್ಕೆ ನಿಲ್ಲುವಂತೆ ವರವನ್ನುಪಡೆದವರಾಗಿಯೂ, ನಾಶರಹಿತರಾಗಿಯೂ,ಬಲಾ
ಢ್ಯರಾಗಿಯೂ, ಶೂರರಾಗಿಯೂ ಇದ್ದ ಕಾಲಕೇಯರೆಂಬ ರಾಕ್ಷಸರು ನಿ
ನ್ನೊಡನೆ ಒಂದು ಸಂವತ್ಸರದವರೆಗೆ ಯುದ್ಧಮಾಡಿ, ಕೊನೆಗೂ ನಿನಗೆ
ಸೋತು ನಿನ್ನವಶರಾದುದನ್ನು ಮರೆತುಬಿಟ್ಟೆಯಾ? ಎಲೆ ರಾಜೇಂದ್ರನೆ? ಇ
ದಲ್ಲದೆ ಅವರಿಂದ ನೀನು ಎಷ್ಟೋವಿಧಗಳಾದ ಮಾಯೆಗಳನ್ನೂ ತಿಳಿದು
ಕೊಂಡಿರುವವನು ! ಬಲಾಢ್ಯರಾದ ಎಷ್ಟೋಮಂದಿ ದಿಕ್ಪಾಲಕರನ್ನೂ ಓಡಿ
ಸಿದವನು! ದೇವಲೋಕಕ್ಕೆ ಹೋಗಿ ದೇವೇಂದ್ರನನ್ನೂ ಜಯಿಸಿಬಂದವ
ನು! ಶೂರರಾಗಿಯೂ, ಬಲಾಢ್ಯರಾಗಿಯೂ, ಚತುರಂಗಬಲಸಹಿತರಾಗಿ
ಯೂ ಇದ್ದ ವರುಣಪುತ್ರರೂಕೂಡ ಯುದ್ಧದಲ್ಲಿ ನಿನ್ನಿಂದ ಪರಾಜಿತರಾಗಿ
ರುವರು! ಮಹಾಪ್ರಭೂ! ಇವೆಲ್ಲವೂ ಹಾಗಿರಲಿ! ಯಮದಂಡವೆಂಬ ದೊಡ್ಡ

ಮೊಸಳೆಯಿಂದಲೂ,ಶಾಲ್ಮಲಿಯೆಂದು ಹೆಸರುಗೊಂಡ ಆಯುಧಗಳೆಂಬ ವೃಕ್ಷಗಳಿಂದಲೂ, ಯಮಪಾಶವೆಂಬ ದೊಡ್ಡ ಅಲೆಗಳಿಂದಲೂ, ಯಮಕಿಂಕರರೆಂಬ ಕ್ರೂರಸರ್ಪಗಳಿಂದಲೂ ತುಂಬಿ, ಮಹಾಸಮುದ್ರದಂತಿದ್ದ ಯಮನ ಸೈನ್ಯವನ್ನೂ ಕೂಡ ನೀನು ಯುದ್ಧದಲ್ಲಿ ನಿರ್ಭಯವಾಗಿ ಪ್ರವೇಶಿಸಿ, ಆ ಯಮನನ್ನೂ ಓಡಿಸಿ ದೊಡ್ಡಜಯವನ್ನು ಪಡೆದು ಬಂದವನಲ್ಲವೆ?ಮೊದಲು ನೀನು ನಡೆಸಿದ ಸ್ವಲ್ಪಯುದ್ಧದಿಂದಲೇ ಸಮಸ್ತಲೋಕಗಳೂ ನಡುಗಿಹೋಗಿರುವುವು. ನೀನು ಹಿಂದೆ ಜಯಪ್ರಯಾಣಕ್ಕೆ ಹೊರಟಕಾಲದಲ್ಲಿಯೇ ಇಂದ್ರನಿಗೆಣೆಯಾದ ಪರಾಕ್ರಮವುಳ್ಳ ಎಷ್ಟೋಮಂದಿ ವೀರಕ್ಷತ್ರಿಯರು ಈ ಸಮಸ್ತಭೂಮಿಯನ್ನೂ ಎಡೆಬಿಡದೆ ತುಂಬಿದ್ದರು. ಅವರಲ್ಲಿ ಯಾರೊಬ್ಬರೂ ನಿನ್ನನ್ನು ಇದಿರಿಸಿ ನಿಲ್ಲಲಾರದೆ ಪರಾಜಿತರಾದರು. ಈ ರಾಮನು ಪರಾಕ್ರಮದಲ್ಲಿಯಾಗಲಿ, ಗುಣದಲ್ಲಿಯಾಗಲಿ, ಉತ್ಸಾಹದಲ್ಲಿಯಾಗಲಿ, ಎಷ್ಟುಮಾತ್ರವೂ ಅವರಿಗೆ ಸಮನಲ್ಲ. ಅಂತಹ ಕ್ಷತ್ರಿಯರನ್ನೇ ನೀನು ನಿನ್ನ ವೀರ್ಯದಿಂದ ಕೊಂದು ಬಂದಿರುವಾಗ,ಈ ರಾಮನು ನಿನಗೆ ಎಷ್ಟುಮಾತ್ರದವನು?ಆದುದರಿಂದ ಎಲೆ ಮಹಾರಾಜನೆ! ನೀನು ಇಲ್ಲಿಯೇ ಸುಮ್ಮನಿರು!ವ್ಯರ್ಥವಾಗಿ ಹೀಗೆ ಚಿಂತಿಸಿ ಶ್ರಮಪಡುವುದರಿಂದೇನು? ಆ ಕಪಿಗಳನ್ನಡಗಿಸುವುದಕ್ಕೆ ಇದೋ!ಮಹಾಬಾಹುವಾದ ಈ ಇಂದ್ರಜಿತ್ತೊಬ್ಬನೇ ಸಾಕು! ಈತನು ಪೂರ್ವದಲ್ಲಿ ಮಹೇಶ್ವರನನ್ನು ಕುರಿತು ಒಂದು ದೊಡ್ಡಯಜ್ಞವನ್ನುಮಾಡಿ, ಬೇರೊಬ್ಬರಿಗೆ ದುರ್ಲಭವಾದ ವರವನ್ನು ಪಡೆದು ಬಂದಿರುವನು. ಮತ್ತು ಈತನು ಶಕ್ತಿತೋಮರಗಳೆಂಬ ಮೀನುಗಳಿಂದಲೂ, ಕಿತ್ತುಬಿದ್ದ ನರಗಳೆಂಬ ಪಾಚಿಯಿಂದಲೂ, ಆನೆಗಳೆಂಬ ದೊಡ್ಡ ಆಮೆಗಳಿಂದಲೂ, ಕುದುರೆಗಳೆಂಬ ಕಪ್ಪೆಗಳಿಂದಲೂ, ರುದ್ರಾದಿತ್ಯರೆಂಬ ದೊಡ್ಡಮೊಸಳೆಗಳಿಂದಲೂ, ಮರುತ್ತುಗಳೆಂದೂ,ವಸುಗಳೆಂದೂ ಪ್ರಸಿದ್ಧರಾದ ದೇವತೆಗಳೆಂಬ ಮಹಾಸರ್ಪಗಳಿಂದಲೂ, ರಥಗಜತುರಗಗಳೆಂಬ ಜಲಸಮೂಹಗಳಿಂದಲೂ ಕಾಲಾಳುಗಳೆಂಬ ದೊಡ್ಡಮಳಲುದಿಣ್ಣೆಗಳಿಂದಲೂ ಕೂಡಿದ ದೇವಸೈನ್ಯವೆಂಬ ಮಹಾಸಾಗರವನ್ನೂ ಪ್ರವೇಶಿಸಿ, ಅಲ್ಲಿ ದೇವೇಂದ್ರನನ್ನು ಹಿಡಿದುಬಂಧಿಸಿ ನಮ್ಮ ಲಂಕೆಗೆ ತಂದಿಟ್ಟವನಲ್ಲವೆ? ಎಲೆ ರಾಜನೆ! ಆಗ ಬ್ರಹ್ಮನ ಮಾತಿನಂತೆ

ನೀನೇ ಆ ಇಂದ್ರನನ್ನು ಬಿಡಿಸಿ ಕಳುಹಿಸಿದೆ! ಆಮೇಲೆಯೇ ಇಂದ್ರನು ಸಮಸ್ತದೇವತೆಗಳಿಂದಲೂ ನಮಸ್ಕೃತನಾಗಿ ಸ್ವರ್ಗದಲ್ಲಿ ಸೇರಿಕೊಂಡನು. ಎಲೆ ಮಹಾರಾಜನೆ! ಈಗಲೂ ನೀನು ಅಂತಹ ಮಹಾವೀರ್ಯವುಳ್ಳ ನಿನ್ನ ಮಗನಾದ ಇಂದ್ರಜಿತ್ತನ್ನೇ ಯುದ್ಧಕ್ಕೆ ಕಳುಹಿಸು. ಇವನೇ ಆ ರಾಮನನ್ನೂ, ಅವನ ಕಡೆಯ ಕಪಿಸೈನ್ಯವನ್ನೂ ಕ್ಷಣಮಾತ್ರದಲ್ಲಿ ಕೊಂದುಬರುವನು. ಈ ಅಲ್ಪಕಾರ್ಯಕ್ಕಾಗಿ ನಿನಗೆ ಇಷ್ಟು ಚಿಂತೆಯೇಕೆ? ಕೇವಲಕ್ಷುದ್ರನಾದ ಯಾವನೋ ಒಬ್ಬ ವಾನರನಿಂದ ನಮಗೆ ಆಕಸ್ಮಾತ್ತಾಗಿ ಈ ಅಪಾಯವು ಬಂದೊದಗಿತು. ಆದರೇನು? ಇದಕ್ಕಾಗಿ ನೀನು ಮನಸ್ಸಿನಲ್ಲಿ ಎಷ್ಟುಮಾತ್ರವೂ ವಿಷಾದಪಡಕೂಡದು." ಎಂದರು. ಇಲ್ಲಿಗೆ ಏಳನೆಯ ಸರ್ಗವು.

---

{ ಪ್ರಹಸ್ತ, ದುರ್ಮುಖ, ವಜ್ರದಂಷ್ಟ್ರ, ನಿಕುಂಭ ರೆಂಬ ನಾಲ್ಕುಮಂದಿ ರಾಕ್ಷಸಸೇನಾಧಿಪತಿಗಳು ರಾವಣನ ಮುಂದೆ ತಮ್ಮ ಪರಾಕ್ರಮಗಳನ್ನು ಹೊಗಳಿಕೊಂಡದು. }

ಆಮೇಲೆ ಕಾಳಮೇಘದಂತೆ ಕಪ್ಪಾದ ಮೈಯುಳ್ಳ ಮಹಾಶೂರನಾದ ಪ್ರಹಸ್ತನೆಂಬ ರಾಕ್ಷಸಸೇನಾಪತಿಯು, ಕೋಪದಿಂದೆದ್ದು ರಾವಣನ ಮುಂದೆ ಕೈಮುಗಿದು ನಿಂತು "ಎಲೆ ಮಹಾರಾಜನೆ! ದೇವತೆಗಳಾಗಲಿ, ದಾನವರಾಗಲಿ, ಗಂಧರ್ವರಾಗಲಿ, ಪಿಶಾಚರಾಗಲಿ, ನಾಗರಾಗಲಿ, ಪನ್ನಗರಾಗಲಿ, ಯಾರೂ ನಿನ್ನನ್ನು ಯುದ್ಧದಲ್ಲಿ ಇದಿರಿಸಲಾರರು. ಇನ್ನು ಆ ಕಪಿಗಳ ಪಾಡೇನು? ಹಿಂದೆ ನಾವೆಲ್ಲರೂ ಅಷ್ಟಾಗಿ ಎಚ್ಚರಿಕೆಯಿಲ್ಲದೆ ನಮ್ಮನ್ನು ಯಾರೂ ಇದಿರಿಸಲಾರರೆಂಬ ನಂಬಿಕೆಯಿಂದ ಉದಾಸೀನರಾಗಿದ್ದು ಮೋಸಹೋದೆವು. ಆ ಸಮಯದಲ್ಲಿ ಹನುಮಂತನೆಂಬ ವಾನರನು ಆಕಸ್ಮಾತ್ತಾಗಿ ಲಂಕೆಗೆ ಪ್ರವೇಶಿಸಿ ನಮ್ಮನ್ನು ವಂಚಿಸಿಬಿಟ್ಟನು. ಹಾಗಿಲ್ಲದ ಪಕ್ಷದಲ್ಲಿ ನಾನು ಜೀವಿಸಿರುವಾಗ ಆ ಕಪಿಯು ಇಲ್ಲಿಂದ ಬದುಕಿಹೋಗುವುದೆಂದರೇನು? ಸ್ವಾಮೀ! ಈಗಲೂ ಚಿಂತೆಯಿಲ್ಲ! ಪರ್ವತಾರಣ್ಯಗಳಿಂದ ತುಂಬಿದ ಸಮುದ್ರಮೇಖಲೆಯಾದ ಈ ಸಮಸ್ತಭೂಮಿಯನ್ನೂ ವಾನರರ ಹುಟ್ಟೇ ಇಲ್ಲದಂತೆ ಮಾಡಿಬರುವೆನು ನೋಡು! ನನಗೆ ಆಜ್ಞೆಯನ್ನು ಕೊಡು! ನಾನೊ

ಬ್ಬನೇ ನಿಂತು, ಈ ಲಂಕೆಗೂ ಯಾವ ಅಪಾಯವೂ ಇಲ್ಲದಂತೆ ನೋಡಿಕೊ
ಳ್ಳುವೆನು!ನೀನು ಸೀತೆಯನ್ನು ಕದ್ದುತಂದ ತಪ್ಪಿಗಾಗಿ ಮನಸ್ಸಿನಲ್ಲಿ ಹೆದರಬೇ
ಕಾದುದೂ ಇಲ್ಲ! ನಿನ್ನ ಶತ್ರುಗಳಿಂದ ನಿನಗೆ ಯಾವ ಭಯವೂ ಇಲ್ಲ" ಎಂದ
ನು.ಆಮೇಲೆ ದುರ್ಮುಖನೆಂಬ ರಾಕ್ಷಸನು ಕೋಪದಿಂದೆದ್ದು, "ಎಲೆ ರಾಜೇಂ
ದ್ರನೆ! ಯಾವುದೋ ಒಂದು ಕಾಡುಕಪಿಯು ಬಂದು ನಮ್ಮೆಲ್ಲರಿಗೂ ಇ
ಷ್ಟು ತಿರಸ್ಕಾರವನ್ನು ಮಾಡಿತಲ್ಲವೆ ? ಇದನ್ನುಮಾತ್ರ ಎಂದಿಗೂ ನಾವು ಕ್ಷ
ಮಿಸಬಾರದು. ನಮ್ಮ ಪಟ್ಟಣಕ್ಕೂ ನಮ್ಮ ಅಂತಃಪುರಕ್ಕೂ ಮಹತ್ತಾದ
ಅವಮಾನವುಂಟಾಗಿರುವುದು. ರಾಕ್ಷಸಚಕ್ರವರ್ತಿಯೆನಿಸಿಕೊಂಡ ಶ್ರೀಮಂ
ತನಾದ ನಿನಗೂ ಆ ಕಾಡುಕಪಿಯಿಂದ ದೊಡ್ಡ ತಿರಸ್ಕಾರವುಂಟಾದಮೇಲೆ,
ಎಷ್ಟುಮಾತ್ರವೂ ಕ್ಷಮಿಸತಕ್ಕುದಲ್ಲ! ಆದರೇನು ? ಈ ಮುಹೂರ್ತ
ದಲ್ಲಿಯೇ ನಾನೊಬ್ಬನೇ ಹೋಗಿ ಆ ಕಪಿಗಳೆಲ್ಲರನ್ನೂ ಕೊಂದು ಹಿಂತಿರು
ಗಿ ಬರುವೆನು. ಆ ಕಪಿಗಳು ಭಯಂಕರವಾದ ಈ ಸಮುದ್ರದಲ್ಲಿ ಮುಳುಗಿ
ಕೊಂಡರೂ, ಆಕಾಶಕ್ಕೆ ಹಾರಿದರೂ, ಪಾತಾಳಕ್ಕೆ ಪ್ರವೇಶಿಸಿದರೂ
ನಾನು ಬಿಡುವವನಲ್ಲ!" ಎಂದನು. ಆಮೇಲೆ ಮಹಾಬಲಾಢ್ಯನಾದ ವಜ್ರ
ದಂಷ್ಟ್ರನೆಂಬ ಸೇನಾಪತಿಯು, ರಕ್ತಮಾಂಸಗಳಿಂದ ಭಯಂಕರವಾದ
ತನ್ನ ಪರಿಘಾಯುಧವನ್ನೆತ್ತಿ ಹಿಡಿದು, ರಾವಣನನ್ನು ನೋಡಿ, ಸ್ವಾಮಿ! ನ
ಮ್ಮ ಭಯಕ್ಕಾಗಿ ರಾತ್ರಿಯಲ್ಲಿ ರಹಸ್ಯವಾಗಿ ಈ ಲಂಕೆಗೆ ಬಂದು ಹೋದ
ಅತ್ಯಲ್ಪನಾದ ಆ ಹನುಮಂತನ ವಿಷಯದಲ್ಲಿ ನೀವು ನಡೆಸಬೇಕಾದ ಕಾರ್ಯ
ವೇನಿರುವುದು ? ಅಯ್ಯೋ ಪಾಪ ! ಗುಬ್ಬಿಯಮೇಲೆ ಬ್ರಹ್ಮಾಸ್ತ್ರದಂತೆ,
ಆ ಕಪಿಯಮೇಲೆ ನಿಮ್ಮ ಕೋಪವೆ?ಸುಗ್ರೀವನೊಡನೆಯೂ, ಲಕ್ಷ್ಮಣನೊ
ಡನೆಯೂ ಸೇರಿದ ಆ ರಾಮನು ನಮಗೆ ದುರ್ಜಯನಾಗಿರುವಾಗ, ಅವನನ್ನು
ಬಿಟ್ಟು ಆ ಕಪಿಯಮೇಲೆ ಕೋಪವನ್ನು ತೋರಿಸಿದುದರಿಂದೇನು ? ಎಲೆ ಮ
ಹಾರಾಜನೆ! ಇದೋ? ನಾನೊಬ್ಬನೇ ಈ ನನ್ನ ಪರಿಘದಿಂದ, ರಾಮನನ್ನೂ
ಅವನಿಗೆ ಬೆಂಬಲವಾಗಿರುವ ಲಕ್ಷ್ಮಣಸುಗ್ರೀವರನ್ನೂ ಕೊಂದು, ಅಲ್ಲಿನ ಕ
ಪಿಸೈನ್ಯವೆಲ್ಲವನ್ನೂ ಕ್ಷಣಮಾತ್ರದಲ್ಲಿ ಕದಲಿಸಿ ಬರುವೆನು. ಆದರೆ ನನ್ನ ಇ
ದೊಂದು ಮಾತನ್ನು ಲಾಲಿಸಿ ಕೇಳಬೇಕು. ಉಪಾಯಕುಶಲನಾಗಿ ಎಚ್ಚರಿಕೆ

ಯುಳ್ಳವನೇ ಶತ್ರುಗಳನ್ನು ಜಯಿಸುವನು. ಆದುದರಿಂದ ನಮ್ಮಲ್ಲಿ ಕಾಮ ರೂಪಿಗಳಾಗಿಯೂ, ಶೂರರಾಗಿಯೂ, ಕ್ರೂರಸ್ವಭಾವವುಳ್ಳವರಾಗಿಯೂ, ಭಯಂಕರಾಕಾರವುಳ್ಳವರಾಗಿಯೂ ಇರುವ ಕೆಲವು ರಾಕ್ಷಸರು ಒಂದಾಗಿ ಸೇರಿ, ಮನುಷ್ಯರೂಪವನ್ನು ಧರಿಸಿ ರಾಮನಬಳಿಗೆ ಹೋಗಲಿ ! ಅಲ್ಲಿ ಆವ ರೆಲ್ಲರೂ ಆವನ ಮುಂದೆ ನಿಂತು ಅವನನ್ನು ನೋಡಿ "ನಿನ್ನ ತಮ್ಮನಾದ ಭ ರತನು ನಮ್ಮನ್ನು ಕಳುಹಿಸಿರುವನು! ನಿನ್ನನ್ನು ಕರೆಸಿಕೊಳ್ಳುವುದಕ್ಕಾಗಿ ಬೇ ಕಾದ ಪ್ರಯತ್ನಗಳನ್ನೂ ನಡೆಸಿರುವನು." ಎಂದು ಹೇಳಲಿ! ಇದನ್ನು ಕೇಳಿ ರಾಮನು ತನ್ನ ಸೇನೆಯನ್ನು ಅಲ್ಲಿಯೇ ನಿಲ್ಲಿಸಿ ಶೀಘ್ರದಲ್ಲಿಯೇ ಹೊರಟು ಹೋಗುವನು. ಇಷ್ಟರಲ್ಲಿ ನಾವು ಇಲ್ಲಿಂದ ಶೂಲಗಳನ್ನೂ, ಶಕ್ತಿಗಳನ್ನೂ, ಗದೆಗಳನ್ನೂ, ಬಿಲ್ಲುಬಾಣಗಳನ್ನೂ, ಕತ್ತಿಗಳನ್ನೂ ಹಿಡಿದು ಬೇಗನೆ ಅಲ್ಲಿಗೆ ಹೋಗುವೆವು. ಅಲ್ಲಿ ಗುಂಪುಗುಂಪಾಗಿ ಆಕಾಶದಿಂದ, ಕಲ್ಲುಗಳನ್ನೂ, ಆ ಯುಧಗಳನ್ನೂ ವರ್ಷಿಸಿ, ಸಮಸ್ತವಾನರಸೈನ್ಯಗಳನ್ನೂ ಕೊಂದು ಯಮ ಪುರಿಗೆ ಕಳುಹಿಸುವೆವು. ಹೀಗಾದರೆ ಆ ರಾಮಲಕ್ಷ್ಮಣರಿಬ್ಬರೂ ನಮ್ಮನ್ನು ನಂಬಿ ಮೋಸಹೋಗುವರಲ್ಲದೆ, ತಮಗೆ ತಕ್ಕ ಸಹಾಯವಿಲ್ಲದುದಕ್ಕಾಗಿ ಕೊ ನೆಗೆ ತಾವೇ ಪ್ರಾಣವನ್ನೂ ಬಿಡುವರು" ಎಂದನು. ಆಮೇಲೆ ಕುಂಭಕರ್ಣನ ಮಗನಾದ ನಿಕುಂಭನೆಂಬ ಸೇನಾಪತಿಯು ಕೋಪದಿಂದೆದ್ದು, ರಾವಣನ ಮುಂದೆ ನಿಂತು, ಅಲ್ಲಿದ್ದ ಸಮಸ್ತರಾಕ್ಷಸರನ್ನೂ ನೋಡಿ "ಎಲೆ ರಾಕ್ಷಸರೆ! ನೀವೆಲ್ಲರೂ ನಮ್ಮ ಮಹಾರಾಜನೊಡನೆ ಇಲ್ಲಿಯೇ ಸುಮ್ಮನಿರಿ ! ನಾನೊ ಬ್ಬನೇ ಹೋಗಿ, ಲಕ್ಷ್ಮಣಸಹಿತನಾದ ರಾಮನನ್ನೂ, ಸುಗ್ರೀವನನ್ನೂ, ಹ ನುಮಂತನನ್ನೂ, ಸಮಸ್ತ ವಾನರರನ್ನೂ ಕೊಂದು ಬರುವೆನು" ಎಂದನು. ಆಮೇಲೆ ಪರ್ವತಾಕಾರವುಳ್ಳ ವಜ್ರಹನುವೆಂಬರಾಕ್ಷಸನು ಕೋಪದಿಂದೆದ್ದು, ನಾಲಗೆಯಿಂದ ತುಟಿಯನ್ನು ಸವರುತ್ತ "ಎಲೆ ರಾಕ್ಷಸರೆ! ನೀವೆಲ್ಲರೂ ಇಲ್ಲಿ ನಿಮಗಿಷ್ಟಬಂದಂತೆ ನಿಮ್ಮನಿಮ್ಮ ಕಾರ್ಯಗಳನ್ನು ನೋಡುತ್ತಿರಿ! ಹೆದರಬೇಡಿರಿ! ನಾನೊಬ್ಬನೇ ಆ ವಾನರರೆಲ್ಲರನ್ನೂ ತಿಂದು ತೀರಿಸುವೆನು. ನೀವು ನಿಶ್ಚಿಂತ

ರಾಗಿ ಮದ್ಯವನ್ನು ಕುಡಿಯುತ್ತ [1] ಸ್ವಸ್ಥರಾಗಿರಬಹುದು. ನಾನೊಬ್ಬನೇ ಹೋಗಿ ಸುಗ್ರೀವನನ್ನೂ, ಲಕ್ಷ್ಮಣನನ್ನೂ, ಅಂಗದನನ್ನೂ, ಹನುಮಂತನನ್ನೂ,ಮತ್ತು ಯುದ್ಧದಲ್ಲಿ ಕೊಬ್ಬಿದ ಆರಾಮನನ್ನೂ ಕೊಂದು ಬರುವೆನು." ಎಂದನು. ಇಲ್ಲಿಗೆ ಎಂಟನೆಯ ಸರ್ಗವು.

---

ನಿಕುಂಭನ ಮಾತಿನಂತೆ ಅಲ್ಲಿದ್ದ ಬೇರೆ ರಾಕ್ಷಸರರೂ ಯುದ್ಧೋದ್ಯುಕ್ತರಾಗಿ ನಿಲ್ಲಲು, ವಿಭೀಷಣನು ಅವರಿಗೆ ಹಿತವಾದವನ್ನು ಹೇಳಿ ತಡೆದುದು.

ಹೀಗೆ ನಿಕುಂಭನು ಯುದ್ಧಕ್ಕೆ ಮುಂದಾಗಿ ನಿಂತಿರುವುದನ್ನು ನೋಡಿ ಆಲ್ಲಿ, ರಭಸ, ಸೂರ್ಯಶತ್ರು, ಸುಪ್ತಘ್ನ, ಯಜ್ಞಹ, ಮಹಾಪಾರ್ಶ್ವ, ಮಹೋದರ, ಅಗ್ನಿಕೇತು, ದುರ್ಧರ್ಷ, ರಶ್ಮಿಕೇತು, ಪ್ರಹಸ್ತ, ವಿರೂಪಾಕ್ಷ, ವಜ್ರದಂಷ್ಟ್ರ, ಧೂಮ್ರಾಕ್ಷ, ಅತಿಕಾಯ, ದುರ್ಮುಖರೆಂಬ ಈ ರಾಕ್ಷಸರೆಲ್ಲರೂ, ಪರಿಘಗಳನ್ನೂ, ಪಟ್ಟಸಗಳನ್ನೂ, ಪ್ರಾಸಗಳನ್ನೂ, ಶಕ್ತಿಗಳನ್ನೂ, ಶೂಲಗನ್ನೂ, ಗಂಡುಗೊಡಲಿಗಳನ್ನೂ, ಘನ-ಬಾಣಗಳನ್ನೂ-ಹರಿತವಾದ ದೊಡ್ಡಕತ್ತಿಗಳನ್ನೂ ಕೈಗೆತ್ತಿಕೊಂಡು, ಕೋಪದಿಂದ ಯುದ್ಧೋದ್ಯುಕ್ತರಾಗಿ ಥಟ್ಟನೆ ಮೇಲೆದ್ದುನಿಂತರು. ಹಾಗೆಯೇ ತೇಜಸ್ವಿಯಾಗಿಯೂ, ಬಲಾಢ್ಯನಾಗಿಯೂ ಇದ್ದ ರಾವಣಪುತ್ರನಾದ ಇಂದ್ರಜಿತ್ತೂ ಯುದ್ಧಾತುರದಿಂದ ಮೇಲಕ್ಕೆದ್ದನು. ಇವರೆಲ್ಲರೂ ತೇಜಸ್ಸಿನಿಂದ ಜ್ವಲಿಸುವಂತೆ ರಾವಣನಮುಂದೆ ನಿಂತು ಅವನನ್ನು ನೋಡಿ "ಈಗಲೇ ನಾವೆಲ್ಲರೂ ಹೋಗಿ, ರಾಮನನ್ನೂ, ಸುಗ್ರೀವನನ್ನೂ, ನಮ್ಮ ಲಂಕೆಯನ್ನು ರಹಸ್ಯವಾಗಿ ಪ್ರವೇಶಿಸಿ ಕೆಡಿಸಿಹೋದ ನೀಚನಾದ ಆ ಹನುಮಂತನನ್ನೂ ಕೊಂದು ಬರುವೆವು" ಎಂದರು. ಹೀಗೆ ಆ ರಾಕ್ಷಸರು ಆಯುಧಗಳನ್ನೆತ್ತಿಕೊಂಡು ಯುದ್ಧಕ್ಕಾಗಿ ಕಾಲೆತ್ತಿ ನಿಂತಿರುವುದನ್ನು ನೋಡಿ,ವಿಭೀಷಣನು ಅವರನ್ನು ತ

---

1 ಇಲ್ಲಿ "ಸ್ವಸ್ಥ" ರೆಂಬುದರಿಂದ, ಸ್ವರ್ಗಸ್ಥರೆಂಬ ಅರ್ಥಾಂತರವೂ ತೋರುವುದರಿಂದ, ಇದು ರಾಕ್ಷಸರಿಗೆ ಮುಂದೆ ಬರಬಹುದಾದ ಅಶ್ಲೀಲವನ್ನು ಸೂಚಿಸುವುದಾಗಿ ಗ್ರಾಹ್ಯವು.

ಡೆದು ಕುಳ್ಳಿರಿಸಿ,ಅವರಿಗೆ ಕೈಮುಗಿದು, ‘‘ಅಪ್ಪಾ! ಹೀಗೆ ಆತುರಪಡಬಾರದು! ಸಾಮದಾನ ಭೇದಗಳೆಂಬ ಮೂರು ಉಪಾಯಗಳಿಂದಲೂ ಯಾವಾಗ ಕಾರ್ಯವು ಕೈಗೂಡದೆ ಹೋಗಬಹುದೋ,ಆಗಲೇ ನಾಲ್ಕನೆಯ ದಂಡೋಪಾಯರೂಪವಾದ ವೀರ್ಯವನ್ನು ತೋರಿಸಬೇಕೆಂದು ನೀತಿಶಾಸ್ತ್ರವಿಧಿಯುಂಟು. ಆಗಲೇ ದಂಡೋಪಾಯಕ್ಕೆ ತಕ್ಕ ಕಾಲವೆಂದು ಬುದ್ಧಿವಂತರೂ ಹೇಳುವರು. ಇನ್ನೂ ನಾವು ಸಾಮಾದ್ಯುಪಾಯಗಳನ್ನೇ ಪ್ರಯೋಗಿಸದಿರುವಾಗ, ಮೊದಲೇ ಹೀಗೆ ದಂಡವನ್ನು ಪಯೋಗಿಸಬಾರದು. ದಂಡಯಾತ್ರೆಗೆ ಇದು ಕಾಲವೂ ಅಲ್ಲ! ಇಷ್ಟೇ ಅಲ್ಲದೆ ನಮ್ಮ ಶತ್ರುವೂ ಈಗ ನಮ್ಮ ದಂಡೋಪಾಯಕ್ಕೆ ವಶನಾಗುವಹಾಗಿಲ್ಲ. [1]ವಿಷಯಲೋಲರಾಗಿ ಎಚ್ಚರಿಕೆ ತಪ್ಪಿದವರಲ್ಲಿಯೂ ವಿರಕ್ತಿಹೊಂದಿ ಜ್ಞಾನಿಗಳಾಗಿರುವವರಲ್ಲಿಯೂ, ಶತ್ರುರಾಜರಿಂದ ಮುತ್ತಲ್ಪಟ್ಟವರಲ್ಲಿಯೂ, ದೈವಪ್ರಾತಿಕೂಲ್ಯದಿಂದ ಕ್ಷೀಣಿಸಿದವರಲ್ಲಿಯೂ, ಮುದುಕರು, ಮಕ್ಕಳು ಮೊದಲಾದವರಲ್ಲಿಯೂ, ದಂಡವನ್ನು ಪಯೋಗಿಸಬೇಕು. ಅದನ್ನೂ ನೀತಿಶಾಸ್ತ್ರಪ್ರಕಾರವಾಗಿ ಚೆನ್ನಾಗಿ ವಿಮರ್ಶಿಸಿ ಪ್ರಯೋಗಿಸಬೇಕು. ಅಂತಹ ವಿಕ್ರಮಗಳೇ ಸಿದ್ಧಿಯನ್ನು ಹೊಂದುವುವಲ್ಲದೆ, ಬೇರೆ ವಿಧದಲ್ಲಿ ಅವು ಸಿದ್ಧಿಯನ್ನು ಹೊಂದವು. ಈಗ ರಾಮನೋ ನಮ್ಮ ವಿಷಯವಾಗಿ ಬಹಳ ಎಚ್ಚರಗೊಂಡಿರುವನೇ ಹೊರತು ಪ್ರಮಾದವಶನಲ್ಲ. ಜಯಾಪೇಕ್ಷೆಯಿಂದಲೂ ಇರುವನು. ಸ್ಥಿರವಾದ ಸೇನಾಬಲವುಳ್ಳವನು! ಕೋಪಕ್ಕೆ ವಶನಾಗುವವನಲ್ಲ. ಈಗ ಯಾರಿಂದಲೂ ಅವನನ್ನಿದಿರಿಸುವುದು ಸಾಧ್ಯ

---

1 ಇಲ್ಲಿ ‘‘ ಬಾಲೋ ವೃದ್ಧೋ ದೀರ್ಘರೋಗೀ ತಥಾ ಜ್ಞಾತಿಬಹಿಷ್ಕೃತಃ। ಭೀರುಕೋ ಭೀರುಜನಕೋ ಲುಬ್ಧೋ ಲುಬ್ಧಜನಸ್ತಥಾ ’’ ವಿರಕ್ತಪ್ರಕೃತಿಶ್ಚೈವ ವಿಷಯೇಷ್ವತಿಸಕ್ತಿಮಾನ್ । ಅನೇಕಚಿತ್ತಮಂತ್ರಶ್ಚ ದೇವಬ್ರಾಹ್ಮಣನಿಂದಕಃ ॥ ದೈವೋಪಹತಕಶ್ಚೈವ ದೈವಚಿಂತಕ ಏವಚ । ದುರ್ಭಿಕ್ಷವ್ಯಸನೋಪೇತೋ ಬಲವ್ಯಸನಸಂಯುತಃ ॥ ಅದೇಶಸ್ಥೋ ಬಹುರಿಪುರ್ಯುಕ್ತೋಽಕಾಲೇನ ಯಶ್ಚ ಸಃ । ಸತ್ಯಧರ್ಮವ್ಯಪೇತಶ್ಚ ವಿಂಶತಿಃ ಪುರುಷಾ ಅಮೀ । ಏತೈಸ್ಸಂಧಿಂ ನಕುರ್ವೀತ ,ನಿಗೃಹ್ಣೀಯಾತ್ತು ಕೇವಲಂ ’’ ಎಂಬುದಾಗಿ ಈ ಇಪ್ಪತ್ತುಬಗೆಯ ಮನುಷ್ಯರೊಡನೆ ಸಂಧಿಯನ್ನು ಮಾಡದೆ ಅವರನ್ನು ನಿಗ್ರಹಿಸಬೇಕೆಂದು ಕಾಮಂದಕನೀತಿಯು.

ವಲ್ಲ. ಹೀಗಿರುವಾಗ ಅಂತವನನ್ನು ನೀವು ಹೇಗೆ ಇದಿರಿಸಬೇಕೆಂದಪೇಕ್ಷಿಸು ವಿರಿ ? ಎಲೆ ರಾಕ್ಷಸರೆ ! ಆ ಹನುಮಂತನೊಬ್ಬನೇ ಈ ಭಯಂಕರವಾದ ಮಹಾಸಮುದ್ರವನ್ನು ದಾಟಿಬಂದು, ಅಷ್ಟು ದುಷ್ಕರವಾದ ಕಾರ್ಯವನ್ನು ನಡೆಸಿ ಹೋದನಲ್ಲವೆ ? ಹೀಗಾಗುವುದೆಂದು ನಮ್ಮಲ್ಲಿ ಯಾವನಾದರೂ ಎ ಣಿಸಿದ್ದನೆ ? ಆದುದರಿಂದ ಈಗ ರಾಮನಿಗೆ ದೈವವೂ ಅನುಕೂಲವಾಗಿರುವು ದೇ ಹೊರತು ಪ್ರತಿಕೂಲವಲ್ಲ. ಈಗ ಆ ನಮ್ಮ ಶತ್ರುವಿನ ಬಲಪರಾಕ್ರಮಗ ಳಿಗೆ ಎಣೆಯೇ ಇಲ್ಲವೆಂದೂ ತೋರಿರುವುದು. ಹೀಗಿರುವಾಗಲೂ ನೀವು ಹಿಂ ದುಮುಂದು ನೋಡದೆ,ಅವರನ್ನು ಅಲ್ಪಬಲವುಳ್ಳವರೆಂದು ತಿರಸ್ಕರಿಸಬಾರದು. ಇದಲ್ಲದೆ ನಮ್ಮ ಪ್ರಭುವಾದ ಈ ರಾವಣನ ವಿಷಯದಲ್ಲಿ ರಾಮನು ಮಾ ಡಿರುವ ಅಪಕಾರವೇನು ? ಈತನೇ ನಿಷ್ಕಾರಣವಾಗಿ ಯಶಸ್ವಿಯಾದ ಆ ರಾಮನ ಭಾರ್ಯೆಯನ್ನು ಕದ್ದುತಂದುದೇಕೆ ? ಒಂದುವೇಳೆ ಅವನು ಖರನನ್ನು ಕೊಂದುದಕ್ಕಾಗಿ ರಾವಣನು ಹೀಗೆ ಮಾಡಿದನೆಂದು ಹೇಳುವಿರಾ ? ಅದೂ ಸರಿಯಾದ ಕಾರಣವಲ್ಲ! ಆ ಖರನು ತಾನಾಗಿಯೇ ಅತಿಕ್ರಮಿಸಿ ರಾಮನನ್ನು ಕೊಲ್ಲುವುದಕ್ಕಾಗಿ ಹೋಗಲು, ಅವನನ್ನು ರಾಮನು ಯುದ್ಧದಲ್ಲಿ ಕೊಲ್ಲ ಬೇಕಾಯಿತು. ಇದರಿಂದ ದೋಷವೇನು ? ಯಾವ ಪ್ರಾಣಿಗಳಿಗಾದರೂ ತ ಮ್ಮತಮ್ಮ ಶಕ್ತ್ಯನುಸಾರವಾಗಿ ಪ್ರವರ್ತಿಸಿ, ತಮ್ಮ ಜೀವವನ್ನುಳಿಸಿಕೊಳ್ಳ ಬೇಕಾದುದವಶ್ಯವಲ್ಲವೆ ? ಆದುದರಿಂದ ಯಾವವಿಧದಲ್ಲಿಯೂ ನಿರ್ದೋ ಷಿಯಾದ ಆ ರಾಮನು ನಮಗೆ ಎಂದಿಗೂ ದಂಡ್ಯನಲ್ಲ. ಒಂದುವೇಳೆ ರಾಮ ನು ನಮಗೆ ಅಪಕಾರವನ್ನೇ ನಡೆಸಿದ್ದರೂ,ಅವನ ಪತ್ನಿಯನ್ನು ಕದ್ದುತಂದು ದು ನ್ಯಾಯವೇಅಲ್ಲ? ಪರದಾರಸ್ಪರ್ಶವೆಂಬುದು ದೊಡ್ಡ ಅಪಕೀರ್ತಿಗೆ ಕಾ ರಣವಲ್ಲದೆ, ಆಯುಃಕ್ಷಯವನ್ನೂ ಉಂಟುಮಾಡುವುದು. ಸಮಸ್ತಭಾಗ್ಯ ವನ್ನೂ ಕೆಡಿಸುವುದು. ಈ ಕಾರಣದಿಂದ ನಮಗೆ ಆ ಸೀತೆಯಿಂದಲೇ ದೊ ಡ್ಡ ಅನರ್ಥವು ಸಂಭವಿಸುವುದು. ಈಗ ಸೀತೆಯನ್ನಂತೂ ತಂದುದಾಯಿತು! ಇನ್ನಾದರೂ ಆಕೆಯನ್ನು ಹಿಂತಿರುಗಿ ರಾಮನವಶಕ್ಕೊಪ್ಪಿಸುವುದುತ್ತಮವು. ಎಷ್ಟೇ ಉತ್ತಮವಸ್ತುವಾಗಿದ್ದರೂ ಕಲಹಕ್ಕೆ ಕಾರಣವಾದ ವಿಷಯಗಳ ಲ್ಲಿ ಎಷ್ಟು ಸಾಹಸವನ್ನು ನಡೆಸಿದರೂ ಪ್ರಯೋಜನವಿಲ್ಲ. ಆ ರಾಮನೋ

ಬಹಳ ಪರಾಕ್ರಮಶಾಲಿಯು ಧರ್ಮನಿರತನು. ಅಂತವನೊಡನೆ ನಿಷ್ಕಾರ
ಣವಾಗಿ ವೈರವನ್ನಿಟ್ಟುಕೊಳ್ಳುವುದೇ ಎಂದಿಗೂ ನಮಗೆ ಯುಕ್ತವಲ್ಲ. ಆತ
ನಿಗೆ ಸೀತೆಯನ್ನೊಪ್ಪಿಸಿಬಿಡಿರಿ ! ರಾಮನು ಇಲ್ಲಿಗೆ ದಂಡೆತ್ತಿ ಬಂದು ಆನೆ
ಕುದುರೆಗಳಿಂದಲೂ, ರತ್ನಸಮೂಹಗಳಿಂದಲೂ ತುಂಬಿದ ನಮ್ಮ ಲಂಕೆ
ಯನ್ನು ತನ್ನ ಬಾಣಗಳಿಂದ ಭೇದಿಸುವುದಕ್ಕೆ ಮೊದಲೇ ಅವನಿಗೆ ಸೀತೆಯ
ನ್ನೊಪ್ಪಿಸಿಬಿಡಿರಿ ? ಅತಿಭಯಂಕರವಾಗಿಯೂ, ಇತರರಿಗೆ ದುರ್ಜಯವಾ
ಗಿಯೂ ಇರುವ ಆ ದೊಡ್ಡ ವಾನರಸೈನ್ಯವು ಬಂದು ನಮ್ಮ ಲಂಕೆಯನ್ನು
ಮುತ್ತುವುದರೊಳಗಾಗಿಯೇ ಸೀತೆಯನ್ನು ಕೊಟ್ಟುಬಿಡಿರಿ ? ಈಗ ನಾವೇ
ಹೋಗಿ ರಾಮನಿಗೆ ಆತನ ಪ್ರಿಯಪತ್ನಿಯನ್ನೊಪ್ಪಿಸದಿದ್ದಪಕ್ಷದಲ್ಲಿ ಈ
ನಮ್ಮ ಲಂಕೆಯೆಲ್ಲವೂ ನಾಶಹೊಂದುವುದು! ಇಲ್ಲಿನ ಶೂರರಾದ ಸಮಸ್ತ
ರಾಕ್ಷಸರೂ ನಾಶಹೊಂದುವರು. ಅಣ್ಣಾ ! ಬಂಧುತ್ವಾಭಿಮಾನದಿಂದ
ನಾನು ಈಗ ಹೇಳುವ ಮಾತು ಹಿತವೆಂದೂ ಪಥ್ಯವೆಂದೂ ತಿಳಿ? ರಾಮನಿಗೆ
ಸೀತೆಯನ್ನೊಪ್ಪಿಸಿ ಬಿಡು ? ಮುಂದೆ ರಾಜಕುಮಾರನಾದ ಆ ರಾಮನು ಶರ
ತ್ಕಾಲದ ಸೂರ್ಯಕಿರಣದಂತೆ ಅತಿತೀಕ್ಷ್ಣವಾಗಿಯೂ,ಹೊಸದಾದಅಲಗುಳ್ಳು
ದಾಗಿಯೂ, ಬಹಳ ದೃಢವಾಗಿಯೂ, ಅಮೋಘವಾಗಿಯೂ ಇರುವ ತ
ನ್ನ ಬಾಣಸಮೂಹವನ್ನು ನಿನ್ನ ವಧಕ್ಕಾಗಿ ಪ್ರಯೋಗಿಸುವುದಕ್ಕೆ ಮೊದ
ಲೇ ರಾಮನಿಗೆ ಸೀತೆಯನ್ನೊಪ್ಪಿಸಿಬಿಡು. ಸುಖವನ್ನೂ, ಧರ್ಮವನ್ನೂ ಕೆಡಿ
ಸತಕ್ಕ ನಿನ್ನ ಈ ಕೋಪವನ್ನು ಬಿಟ್ಟುಬಿಡು. ಸಂತೋಷವನ್ನೂ,ಕೀರ್ತಿಯ
ನ್ನೂ ಹೆಚ್ಚಿಸತಕ್ಕ ಧರ್ಮವನ್ನೇ ಅವಲಂಬಿಸು. ನನ್ನಲ್ಲಿ ಪ್ರಸನ್ನನಾಗಿ ನ
ನ್ನ ಮಾತನ್ನು ನಡೆಸಿಕೊಡು ! ಹಾಗೆ ನಡೆಸಿದರೆಮಾತ್ರವೇ ನಾವೆಲ್ಲರೂ
ನಮ್ಮ ಮನೆಮಂದಿಮಕ್ಕಳೊಡನೆ ಇನ್ನೂ ಕೆಲವು ಕಾಲದವರೆಗೆ ಸುಖವಾ
ಗಿ ಬದುಕಿರಬಹುದು!ರಾಮನಿಗೆ ಸೀತೆಯನ್ನೊಪ್ಪಿಸಿಬಿಡು! ನನ್ನ ಮಾತನ್ನು
ಕೇಳು." ಎಂದನು. ರಾಕ್ಷಸೇಶ್ವರನಾದ ರಾವಣನು ವಿಭೀಷಣನು ಹೇಳಿದ
ಈ ಮಾತನ್ನು ಕೇಳಿದಮೇಲೆ ಕದಲಿದ ಮನಸ್ಸುಳ್ಳವನಾಗಿ, ಆ ಸಭಿಕರೆಲ್ಲರ
ನ್ನೂ ಕಳುಹಿಸಿ,ತಾನೂ ತನ್ನ ಅಂತಃಪುರಕ್ಕೆ ಹೋದನು. ಇಲ್ಲಿಗೆ ಒಂಬತ್ತನೆ
ಯ ಸರ್ಗವು.

---

ವಿಭೀಷಣನು ರಾವಣಗೃಹಕ್ಕೆ ಹೋಗಿ, ಸೀತೆಯನ್ನು ತಂದುದುವೊದಲು ಲಂಕೆಯಲ್ಲಿ ಕಾಣುತ್ತಿರುವ ನಾನಾದುರ್ನಿಮಿತ್ತಗಳನ್ನು ರಾವಣನಿಗೆ ತಿಳಿಸಿ, ರಾಮನಿಗೆ ಸೀತೆಯನ್ನೊಪ್ಪಿಸುವಂತೆ ಬುದ್ಧಿ ವಾದವನ್ನೂ ಹೇಳಿದುದು.

ರಾತ್ರಿಯು ಕಳೆದು [1]ಬೆಳಗಾಯಿತು. ಆ ರಾತ್ರಿಯೆಲ್ಲವೂ ವಿಭೀಷಣನು ತನಗೆ ತಾನೇ ಧರ್ಮಾರ್ಥಸ್ವರೂಪಗಳನ್ನು ವಿಚಾರಮಾಡಿ ನಿಶ್ಚಯಿಸಿಕೊಂಡು, ಪರಮಮೂರ್ಖನಾದ ರಾವಣನಿಗೆ ಹಿತೋಪದೇಶವೆಂಬ ಭಯಂಕರಕಾರ್ಯಕ್ಕೂ ಪ್ರಯತ್ನಿಸಿ, ನೆಟ್ಟಗೆ ರಾವಣನ ಮನೆಗೆ ಹೊರಟನು. ಪರ್ವತಶಿಖರಸಮೂಹದಂತೆ ಅನೇಕಗೋಪುರಗಳುಳ್ಳುದಾಗಿಯೂ, ಬೆಟ್ಟದ ಕೋಡಿನಂತೆ ಮಹೋನ್ನತವಾಗಿಯೂ, ಪ್ರತ್ಯೇಕವಾಗಿ ವಿಭಾಗಿಸಲ್ಪಟ್ಟ ದೊಡ್ಡದೊಡ್ಡ ತೊಟ್ಟಿಗಳುಳ್ಳುದಾಗಿಯೂ ಇರುವ ರಾವಣನ ಅರಮನೆಯನ್ನು ಪ್ರವೇಶಿಸಿದನು. ಆ ಅರಮನೆಯಲ್ಲಿಯೋ ಅಲ್ಲಲ್ಲಿ ಶಾಸ್ತ್ರಜ್ಞರಾದ ಬಹಳಮಂದಿ ಪಂಡಿತಜನರು ನೆರೆದಿರುವರು. ಅಲ್ಲಲ್ಲಿ ಬುದ್ಧಿವಂತರಾಗಿಯೂ, ಪ್ರಭುವಿನಲ್ಲಿ ವಿಶ್ವಾಸವುಳ್ಳವರಾಗಿಯೂ ಕಾರ್ಯನಿಪುಣರಾಗಿಯೂ ಇರುವ ಮಹಾಪ್ರಧಾನಿಗಳು ತುಂಬಿರುವರು. ಅಲ್ಲಲ್ಲಿ ಕಾವಲಿಗಾಗಿ ಅನೇಕ ರಾಕ್ಷಸರು ಶಸ್ತ್ರಧಾರಿಗಳಾಗಿ ನಿಂತಿರುವರು. ಮತ್ತು ಅಲ್ಲಿನ ಗಾಳಿಯು, ಮದಾನೆಗಳ ಪೂತ್ಕಾರದಿಂದ ತುಂಬಿ ಸುಳಿಗಾಳಿಯಂತೆ ವೇಗದಿಂದ ಬೀಸುವುದು. ಅಲ್ಲಲ್ಲಿ ಶಂಖಧ್ವನಿಗಳು ಮಹಾಘೋಷದಿಂದ ಮೊರೆಯುತ್ತಿರುವುವು. ಅಲ್ಲಲ್ಲಿ ವಾದ್ಯಧ್ವನಿಗಳು ಪ್ರತಿಧ್ವನಿಯನ್ನು ಕೊಡುತ್ತಿರುವುವು. ಅಲ್ಲಲ್ಲಿ ಸ್ತ್ರೀಯರು ಗುಂಪುಗುಂಪಾಗಿ ಸೇರಿ ಬೀದಿಬೀದಿಗಳಲ್ಲಿ ಕಲಕಲಧ್ವನಿಯಿಂದ ಮಾತಾಡುವರು. ಅಲ್ಲಲ್ಲಿ ಬಂಗಾರದ ಜಗತಿಗಳೂ, ಉತ್ತಮಾಲಂಕಾರಗಳೂ ಶೋಭಿಸುತ್ತಿರುವುವು. ಇದರಿಂದ ಆ ಅರಮನೆಯು ಗಂಧರ್ವರ ವಾಸಸ್ಥಳದಂತೆಯೂ, ದೇವತೆಗಳ ನಿವಾಸದಂತೆಯೂ ಕಾಣುವುದಲ್ಲದೆ, ಅಲ್ಲಲ್ಲಿ ನವರತ್ನಸಮೂಹಗಳಿಂದ ನಿಬಿಡವಾಗಿ ಭೋಗವತೀಪುರದಂತೆಯೂ ತೋರುವುದು. ವೀ

---

1 ಇಲ್ಲಿ ಬೆಳಗಾಯಿತೆಂಬುದರಿಂದ, ಹನುಮಂತನು ಲಂಕೆಯನ್ನು ಬಿಟ್ಟುಹೋಗಿ ಹಿಂದುದಿನವಾಯಿತೆಂದು ತಿಳಿಯಬೇಕು.

ರನಾಗಿಯೂ, ತೇಜಸ್ವಿಯಾಗಿಯೂ ಇರುವ ವಿಭೀಷಣನು, ಕಾಂತಿವಿಶಿಷ್ಟ
ನಾದ ಸೂರ್ಯನು ಮಹಾಮೇಘವನ್ನು ಪ್ರವೇಶಿಸುವಂತೆ, ತನ್ನಣ್ಣನಾದ
ರಾವಣನ ಮನೆಯನ್ನು ಪ್ರವೇಶಿಸಿದನು. ಹೀಗೆ ವಿಭೀಷಣನು ಪ್ರವೇಶಿಸುವ
ಷ್ಟರಲ್ಲಿ ಅಲ್ಲಲ್ಲಿ ವೇದವಿತ್ತುಗಳಾದ ಬ್ರಹ್ಮರಾಕ್ಷಸರು,ರಾವಣನ ಜಯಕ್ಕಾಗಿ
ಪರಿಶುದ್ಧವಾದ ಪುಣ್ಯಾಹಘೋಷವನ್ನು ಉಚ್ಚರಿಸುತಿದ್ದರು. ಅಲ್ಲಲ್ಲಿ
ಮಂತ್ರಗಳನ್ನೂ, ವೇದಗಳನ್ನೂ ತಿಳಿದ ಬ್ರಾಹ್ಮಣರು,ಮೊಸರು, ತುಪ್ಪ,
ಅಕ್ಷತೆ, ಹೂ, ಮುಂತಾದ ಪೂಜಾದ್ರವ್ಯಗಳಿಂದ ಪೂಜಿಸಲ್ಪಡುತಿದ್ದರು.
ತೇಜಸ್ಸಿನಿಂದ ದೇದೀಪ್ಯಮಾನನಾದ ಈ ವಿಭೀಷಣನು, ಅಲ್ಲಿನ ರಾಕ್ಷ
ಸರಿಂದ ಮನ್ನಿಸಲ್ಪಡುತ್ತ ಅರಮನೆಯೊಳಗೆ ಪ್ರವೇಶಿಸಿ, ಸಿಹ್ಮಾಸನದ ಮೇ
ಲಿದ್ದ ಕುಬೇರನ ತಮ್ಮನಾದ ರಾವಣನಿಗೆ ವಿನಯದಿಂದ ನಮಸ್ಕರಿಸಿದನು.
ಸಂಪ್ರದಾಯಸಿದ್ಧವಾದ ಸದಾಚಾರವನ್ನು ಚೆನ್ನಾಗಿ ಬಲ್ಲ ವಿಭೀಷಣನು,
ಪ್ರಭುವಾದ ರಾವಣನ ಮುಂದೆ ನಿಂತು,ಮೊದಲು ತಾನು ರಾಜಮರ್ಯಾದೆಯ
ನ್ನನುಸರಿಸಿ ನುಡಿಯಬೇಕಾದ ಜಯಶಬ್ದವನ್ನು ನುಡಿದು, ತನಗೆ ರಾವಣನು
ಕಣ್ಣುಸನ್ನೆಯಿಂದ ತೋರಿಸಿದ ಒಂದು ಸುವರ್ಣಪೀಠದಮೇಲೆ ಕುಳಿತನು.
ಆಮೇಲೆ ವಿಭೀಷಣನು ಆ ರಾಜಾಸ್ಥಾನದಲ್ಲಿ ಬೇರೊಬ್ಬರೂ ಇಲ್ಲದೆ ಪ್ರಧಾ
ನಮಂತ್ರಿಗಳುಮಾತ್ರ ರಾವಣನ ಸಮೀಪದಲ್ಲಿರುವುದನ್ನು ನೋಡಿ, ರಾ
ವಣನನ್ನು ಕುರಿತು,. ಯುಕ್ತಾಯುಕ್ತವಿವೇಚನೆಯಿಂದ ನಿಶ್ಚಿತವಾಗಿಯೂ
ಹಿತವಾಗಿಯೂ ಇರುವ ಮಾತುಗಳನ್ನು ಹೇಳತೊಡಗಿದನು. ಈ ವಿಭೀಷ
ಣನಾದರೋ ಮಾತಿನ ಕ್ರಮವನ್ನು ಚೆನ್ನಾಗಿ ಬಲ್ಲವನು. ದೇಶವನ್ನೂ, ಕಾ
ಲವನ್ನೂ, ಪ್ರಯೋಜನವನ್ನೂ ಅನುಸರಿಸಿ ನುಡಿಯತಕ್ಕವನು. ಲೋಕದ
ಲ್ಲಿ ಉತ್ಕೃಷ್ಟವಾವುದು, ನಿಕೃಷ್ಟವಾವುದೆಂಬ ವಿವೇಕಜ್ಞಾನವನ್ನು ಬಲ್ಲ
ವನು. ಇಂತಹ ಮಹಾಧೀಮಂತನಾದ ವಿಭೀಷಣನು, ಮೊದಲು ಬಹಳ
ಮೃದುವಾದ ಮಾತಿನಿಂದ ತನ್ನಣ್ಣನನ್ನು ಸ್ತುತಿಸಿ, ಅವನ ಮನಸ್ಸು ತನ್ನಲ್ಲಿ
ಪ್ರಸನ್ನವಾಗುವಂತೆ ಮಾಡಿಕೊಂಡು, ಆಮೇಲೆ ಅವನನ್ನು ಕುರಿತು “ಅ
ಣ್ಣಾ! ಸೀತೆಯು ಈ ನಿನ್ನ ಪಟ್ಟಣಕ್ಕೆ ಬಂದುದು ಮೊದಲು, ನಮಗೆ ಬಹ
ಳವಾದ ದುಶ್ಯಕುನಗಳೇಕಾಣುವುವು.ಮಂತ್ರಯುಕ್ತವಾದ ಹವಿಸ್ಸುಗಳಿಂದ

ಅಗ್ನಿಯನ್ನು ಹುತಮಾಡಿದರೂ, ಆ ಅಗ್ನಿಯು ತನ್ನ ಜ್ವಾಲೆಯೊಡನೆ ಕಿಡಿಗಳ ನ್ನೂ ಹೊಗೆಯನ್ನೂ ಹೊರಡಿಸುತ್ತ, ಆಗಾಗ ಹೊಗೆಯಿಂದ ಮುಚ್ಚಿ ನಂದಿಹೋಗುವುದೇ ಹೊರತು,ಕ್ರಮವಾಗಿ ಜ್ವಲಿಸುವುದಿಲ್ಲ. ಅಡಿಗೆ ಮನೆಗಳ ಲ್ಲಿಯೂ, ಅಗ್ನಿಶಾಲೆಗಳಲ್ಲಿಯೂ, ವೇದಾಧ್ಯಯನ ಸ್ಥಳಗಳಲ್ಲಿಯೂ, ಹಾವು ಗಳು ತಲೆದೋರುತ್ತಿರುವುವು. ದೇವಯೋಗ್ಯವಾದ ಹವ್ಯಪದಾರ್ಥಗಳನ್ನು ಸಂಗ್ರಹಿಸಿಟ್ಟಕಡೆಗಳಲ್ಲಿ, ಆ ಹವಿಸ್ಸುಗಳಿಗೆ ಇರುವೆಗಳು ಮುತ್ತುತ್ತಿರುವುವು. ಪಶುಗಳ ಕೆಚ್ಚಲೆಲ್ಲವೂ ಹಾಲಿಲ್ಲದೆ ಬತ್ತಿಹೋಗುತ್ತಿರುವುವು. ಮದದಾನೆಗ ಳೆಲ್ಲವೂ ಮದವುಡುಗಿರುವುವು. ಕುದುರೆಗಳು ಆಹಾರದಲ್ಲಿ ರುಚಿಯಿಲ್ಲದೆ, ದೀನಧ್ವನಿಯಿಂದ ಕೂಗುವುವು. ನಮ್ಮ ಸೇನೆಯಲ್ಲಿರುವ, ಕತ್ತೆ, ಒಂಟೆ ಹೇಸ ರಗತ್ತೆ ಮುಂತಾದ ಪ್ರಾಣಿಗಳೆಲ್ಲವೂ ಕೂದಲುದಿರಿ,ಕಣ್ಣೀರುಬಿಡುತ್ತ,ಯಾ ವಯಾವಚಿಕಿತ್ಸೆಗಳನ್ನು ಮಾಡಿದರೂ ಅವು ತಮ್ಮ ಮೊದಲಿನ ಸ್ಥಿತಿಗೆ ಬಾರದಿ ರುವುವು. ಕಾಗೆಗಳು ನಮ್ಮ ವಿಮಾನಗಳ ಮೇಲೆ ಸುತ್ತಲೂ ಗುಂಪುಗುಂ ಪಾಗಿ ಕ್ರೂರಧ್ವನಿಯಿಂದ ಕೂಗುತ್ತಿರುವುವು. ನಮ್ಮ ಪಟ್ಟಣದ ಮನೆಮನೆ ಗಳ ಮೇಲೆಯೂ, ಹದ್ದುಗಳು ಗುಂಪುಗೂಡಿ ಮಂಡಲಾಕಾರವಾಗಿ ಸು ತ್ತುತ್ತಿರುವುವು. ಎರಡುಸಂಜೆಗಳಲ್ಲಿಯೂ ನರಿಗಳು ನಮ್ಮ ಪಟ್ಟಣದಬಾಗಿಲಿ ಗೆ ಬಂದು ಅಮಂಗಳವಾಗಿ ಊಳಿಡುತ್ತಿರುವುವು. ಮಾಂಸಭಕ್ಷಕಗಳಾದ ಕ್ರೂರಮೃಗಗಳು ನಮ್ಮ ಪುರದ್ವಾರದಲ್ಲಿ ಗುಂಪಾಗಿ ಸೇರಿ ಸಿಡಿಲಿನಂತೆ ಮಹಾಧ್ವನಿಯಿಂದ ಅರಚುತ್ತಿರುವುವು.ಅಣ್ಣಾ!ಇಷ್ಟುದುರ್ನಿಮಿತ್ತಗಳೂ ನ ಮಗೆ ಕಾಣುವುದರಿಂದ, ನಮಗೆ ಯಾವುದೋ ಮಹಾವಿಪತ್ತು ಸಂಭವಿಸು ವುದರಲ್ಲಿ ಸಂದೇಹವಿಲ್ಲ. ಆದರೇನು?ಈಗಲೂ ಇದಕ್ಕೆ ತಕ್ಕ ಪ್ರಾಯಶ್ಚಿತ್ತ ವುಂಟು. ನಿನಗೆ ಸಮ್ಮತವಾಗಿದ್ದರೆ ಈಗಲೂ ರಾಮನಿಗೆ ಸೀತೆಯನ್ನೊಪ್ಪಿ ಸಿಬಿಡು! ಎಲೆ ಮಹಾರಾಜನೆ! ಈಗ ನಾನು ರಾಜಕಾರ್ಯವನ್ನು ತಿಳಿಯದ ಅಜ್ಞಾನದಿಂದಲೋ, ಪ್ರಾಣದಾಸೆಯಿಂದಲೋ ಹೀಗೆ ನಿನ್ನಲ್ಲಿ ಸ್ವತಂತ್ರಿಸಿ ಈ ಮಾತುಗಳನ್ನು ಹೇಳುತ್ತಿರುವೆನು. ಆದರೂ ಇದನ್ನು ನೀನು ತಪ್ಪಾಗಿ ಭಾವಿಸಕೂಡದು. ಈ ದುರ್ನಿಮಿತ್ತಗಳನ್ನು ನೋಡಿ ನಾನು ಹೀಗೆ ಹೇಳಬೇ ಕಾಯಿತು. ಈ ಅನರ್ಥಸೂಚನೆಗಳನ್ನು ನಾನೊಬ್ಬನೇ ಅಲ್ಲದೆ, ಇಲ್ಲಿನ ಸ

ಮಸ್ತರಾಕ್ಷಸರೂ, ರಾಕ್ಷಸಸ್ತ್ರೀಯರೂ, ಅಂತಃಪುರಸ್ತ್ರೀಯರೂ, ಇನ್ನೂ ಈ ಪಟ್ಟಣದಲ್ಲಿರುವ ಸಮಸ್ತಪ್ರಜೆಗಳೂ ಚೆನ್ನಾಗಿ ನೋಡಿರುವರು. ಯಾರುನೋಡಿದರೇನು?ನಿನ್ನ ಮಂತ್ರಿಗಳೆಲ್ಲರೂ ನಿನ್ನ ಮುಖೋಲ್ಲಾಸವನ್ನನುಸರಿಸಿಯೇ ನಡೆಯತಕ್ಕವರಾದುದರಿಂದ,ಇದೊಂದನ್ನೂ ನಿನ್ನ ಕಿವಿಗೆ ಹಾಕದೆ ಸುಮ್ಮನೆ ಹೋಗುತ್ತಿರುವರು. ನಾನಾದರೋ ನಿನಗೆ ಒಡಹುಟ್ಟಿದ ತಮ್ಮನು. ಈ ಕರುಳಿನ ಸಂಬಂಧವು ನನ್ನನ್ನು ಬಾಧಿಸುತ್ತಿರುವುದರಿಂದ ನಾನು ಕಂಡು ಕೇಳಿದುದೆಲ್ಲವನ್ನೂ ನಿನ್ನೊಡನೆ ಯಥಾಸ್ಥಿತವಾಗಿ ಹೇಳದೆ ತೀರದು. ನೀನೂ ನಿನ್ನ ಮನಸ್ಸಿನಲ್ಲಿ ನ್ಯಾಯರೀತಿಯಿಂದ ಪರ್ಯಾಲೋಚಿಸಿ ನೋಡು.ನಿನ್ನ ಮನಸ್ಸಿನಲ್ಲಿಯೂ ಚೆನ್ನಾಗಿ ನಿರ್ಧರಿಸಿಕೊಂಡು ಕಾಲೋಚಿತವಾದ ಕಾರ್ಯವನ್ನು ನಡೆಸು"ಎಂದನು. ಹೀಗೆ ಅನೇಕಮಂತ್ರಿಗಳ ಮಧ್ಯದಲ್ಲಿ ವಿಭೀಷಣನು ರಾವಣನಮುಂದೆ ಹಿತವಾಗಿಯೂ,ಮಹಾಫಲಪ್ರದವಾಗಿಯೂ ಯುಕ್ತಿಯುಕ್ತವಾಗಿಯೂ, ಭೂತಭವಿಷ್ಯದ್ವರ್ತಮಾನಗಳೆಂಬ ಮೂರುಕಾಲಗಳಲ್ಲಿಯೂ ಶ್ರೇಯಸ್ಕರವಾಗಿಯೂ ಇರುವ ಮಾತನ್ನು ಎಷ್ಟೋಮೃದುವಾಗಿ ಹೇಳಿದರೂ,ಅದನ್ನು ಕೇಳಿದೊಡನೆ ರಾವಣನಿಗೆ ಅತ್ಯಾಕ್ರೋಶವು ಹುಟ್ಟಿತು. ಆಗಲೂ ತನ್ನ ಹಟವನ್ನು ಬಿಡದೆ ವಿಭೀಷಣನನ್ನು ಕುರಿತು "ವಿಭೀಷಣಾ ! ಸಾಕು ಸುಮ್ಮನಿರು ! ನನಗೆ ಲೇಶಮಾತ್ರವೂ ಯಾರಿಂದಲೂ ಭಯವಿಲ್ಲವು. ನನ್ನ ಕೈಗೆ ಸಿಕ್ಕಿಬಿದ್ದಿರುವ ಸೀತೆಯನ್ನು ರಾಮನು ಇನ್ನೆಂದಿಗೂ ಬಿಡಿಸಿಕೊಳ್ಳಲಾರನು. ಇಂದ್ರಾದಿದೇವತೆಗಳನ್ನೇ ತನಗೆ ಬೆಂಬಲವಾಗಿ ಕರೆತಂದರೂ ನನ್ನಮುಂದೆ ನಿಲ್ಲಲಾರನು. ಇನ್ನು ಆತನಿಗೆ ಯುದ್ಧದಾಸೆಯೇಕೆ? ಇನ್ನುಮೇಲೆ ಅವನಿಗೆ ಸೀತೆಯು ಸಿಕ್ಕುವುದೆಂದರೇನು?" ಎಂದನು. ಅನೇಕ ದೇವಸೈನ್ಯಗಳನ್ನು ಧ್ವಂಸಮಾಡಿದವನಾಗಿಯೂ, ಮಹಾಬಲನಾಗಿಯೂ, ಯುದ್ಧದಲ್ಲಿ ಭಯಂಕರಪರಾಕ್ರಮವುಳ್ಳವನಾಗಿಯೂ ಇದ್ದ ರಾವಣನು, ತನಗೆ ಹಿತವನ್ನುಪದೇಶಿಸುವುದಕ್ಕಾಗಿ ಬಂದ ತಮ್ಮನಾದ ವಿಭೀಷಣನಿಗೆ ಹೀಗೆಂದು ಹೇಳಿ, ಆಗಲೇ ಆತನನ್ನು ಹಿಂದಕ್ಕೆ ಕಳುಹಿಸಿಬಿಟ್ಟನು. ಇಲ್ಲಿಗೆ ಹತ್ತನೆಯ ಸರ್ಗವು.

---

ರಾವಣನು ವಿಭೀಷಣನ ಮಾತಿನಿಂದ ಕೆದಲಿದ ಮನಸ್ಸುಳ್ಳವನಾಗಿ ಎರಿಗಿ ಮಂತ್ರಿಗಳೊಡನೆ ಆ ಲೋಚಿಸುವುದಕ್ಕಾಗಿ ಮಂತ್ರಸಭೆಯನ್ನು ಪ್ರವೇಶಿಸಿದುದು.

ಪಾಪಿಯಾದ ರಾವಣನಿಗಾದರೋ ಅತ್ತಲಾಗಿ [1] ಸೀತೆಯವಿಷಯವಾದ ಕಾಮವೊಂದು! ಇತ್ತಲಾಗಿ ತನಗೆ ಹಿತರಾದ ವಿಭೀಷಣಾದಿಗಳು ತನ್ನ ದಾರಿಗೆ ಬಾರದೆ ತನ್ನಲ್ಲಿ ಅನಾದರವನ್ನು ತೋರಿಸುವುದೊಂದು! ತಾನು ಸೀತೆಯನ್ನು ಕದ್ದು ತಂದ ಪಾಪಭಯವೊಂದು! ಇವುಗಳಿಂದ ಬಹಳವಾದ ಚಿಂತೆಯು ಹುಟ್ಟಿತು. [2] ಕಾಲವು ಮಿಂಚುತ್ತ ಯುದ್ಧವು ಸಮೀಪಿಸುತ್ತಿರುವುದರಿಂದ ಮಂತ್ರಿಗಳೊಡನೆಯೂ, ಸ್ನೇಹಿತರೊಡನೆಯೂ ಕಲೆತು, ಮಂತ್ರಾಲೋಚನೆಯನ್ನು ನಡೆಸುವುದಕ್ಕೆ ಅದೇ ಉಚಿತಕಾಲವೆಂದೂ ಆತನ ಮನಸ್ಸಿಗೆ ತೋರಿತು. ಆಗಲೇ ಮಹಾರಥನಾದ ಆ ರಾವಣನು, ಸುತ್ತಲೂ ಬಂಗಾರದ ಕಿಟಕಿಗಳಿಂದ ಕೂಡಿ, ಮುತ್ತುಗಳಿಂದಲೂ, ಹವಳಗಳಿಂದಲೂ ಅಲಂಕೃತವಾಗಿ, ಸುಶಿಕ್ಷಿತವಾದ ಕುದುರೆಗಳಲ್ಲಿ ಹೂಡಿದ ತನ್ನ ಮಹಾರಥದಬಳಿಗೆ ಬಂದು, ಅದಕ್ಕೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ, ಅದನ್ನೇರಿ ಕುಳಿತನು. ರಾಕ್ಷಸೋತ್ತಮನಾದ ರಾವಣನು ಆ ಉತ್ತಮರಥವನ್ನೇರಿ,

---

1 ಇಲ್ಲಿ "ಮೈಥಿಲೀಕಾಮಮೋಹಿತ:" ಎಂದು ಮೂಲವು. ಸೀತಾವಿಷಯವಾದ ಕಾಮವೆಂದರೆ, ಆಕೆಗೆ ತಾನು ಭೃತ್ಯನಾಗಬೇಕೆಂಬ ಆಶೆಯೆಂದು ವಾಸ್ತವಾರ್ಥವು. ಹೀಗೆಯೇ ಅಲ್ಲಲ್ಲಿ ಸಾಮಾನ್ಯವಾಗಿ ತೋರುವ ಅರ್ಥಗಳಿಗೆಲ್ಲಾ ಭಕ್ತಿವಿಷಯಕವಾಗಿ ವಾಸ್ತವಾರ್ಥವನ್ನು ಗ್ರಹಿಸಬೇಕು. (ಮಹೇಶ್ವರತೀರ್ಥರು.)

2 ಇಲ್ಲಿ "ಅತೀತಸಮಯೇ ಕಾಲೇ ತಸ್ಮಿನ್ ವೈ ಯುಧಿ ರಾವಣ:। ಅಮಾತ್ಯೈಶ್ಚ ಸುಹೃದ್ಭಿಶ್ಚ ಮಂತ್ರಕಾಲಮನ್ಮತ" ಎಂದು ಮೂಲವು. ಇದಕ್ಕೆ (ಕಾಲೇ ಅತೀತಸಮಯೇ) ರಾವಣನು, ತನಗೆ ಆಯು:ಕಾಲವು ಮಿಂಚಿಹೋಗುತ್ತಿರಲು (ಯುಧಿ) ಯುದ್ಧದಲ್ಲಿ (ಅಮಾತ್ಯೈಶ್ಚ ಸುಹೃದ್ಭಿಶ್ಚ ಸಹ ಆತ್ಮಾನಂ) ಅಮಾತ್ಯಮಂತ್ರಿಗಳೊಡಗೂಡಿದ ತನ್ನನ್ನು (ಪ್ರಾಪ್ತಕಾಲಂ) ಸನ್ನಿಹಿತಮೃತ್ಯುವುಳ್ಳವನನ್ನಾಗಿ ತಿಳಿದನು. ಎಂದರೆ ರಾವಣನು ತನಗೆ ಆಯುಷ್ಕಾಲವು ತೀರಿದುದರಿಂದ, ತನಗೂ ತನ್ನ ಅಮಾತ್ಯಾದಿಗಳಿಗೂ ಮೃತ್ಯುವು ಸನ್ನಿಹಿತವಾದಂತೆಯೇ ತಿಳಿದುದಾಗಿ ವಾಲ್ಮೀಕಿಯ ಹೃದಯವು. (ಗೋವಿಂದರಾಜರು.)

ಮೇಘಗರ್ಜನದಂತೆ ಮೊರೆಯುತ್ತಿರುವ ರಥಚಕ್ರಧ್ವನಿಯೊಡನೆ ಮಂತ್ರಸ ಭೆಗೆ ಹೊರಟನು. ಅನೇಕಾನೇಕರಾಕ್ಷಸಯೋಧರೂ ಅವನೊಡನೆ ಹೊರಟ ರು. ಕೆಲವರು ಕತ್ತಿಗಳನ್ನೂ,ಕೆಲವರು ಗುರಾಣಿಗಳನ್ನೂ, ಇನ್ನು ಕೆಲವರು ಬೇರೆ ಆಯುಧಗಳನ್ನೂ ಹಿಡಿದು ಮುಂದೆ ನಡೆದರು.ರಥದ ಹಿಂದೆಯೂ, ಪ ಕ್ಕಗಳಲ್ಲಿಯೂ ವಿಕಾರವಾದ ನಾನಾವೇಷಭೂಷಣಗಳುಳ್ಳ ಅನೇಕರಾಕ್ಷಸ ರು ಸುತ್ತಿಬರುತಿದ್ದರು.ಅತಿರಥರಾದ ಕೆಲವು ರಾಕ್ಷಸರು ರಥಾರೂಢರಾಗಿಬಂ ದರು.ಹಾಗೆಯೇಕೆಲವರು ಮದದಾನೆಗಳನ್ನೂ,ಬೇರೆಕೆಲವರು ಚಿತ್ರಗತಿಯು ಳ್ಳ ಕುದುರೆಗಳನ್ನೂ ಏರಿ ರಾವಣನನ್ನು ಹಿಂಬಾಲಿಸಿದರು. ಮತ್ತೆ ಕೆಲವರು ಗದೆಗಳನ್ನೂ,ಕೆಲವರು ಪರಿಘಗಳನ್ನೂ,ಕೆಲವರು ಶಕ್ತ್ಯಾಯುಧಗಳನ್ನೂ, ಕೆಲವರು ತೋಮರಗಳನ್ನೂ, ಕೆಲವರು ಗಂಡುಗೊಡಲಿಗಳನ್ನೂ, ಕೆಲವ ರು ಶೂಲಗಳನ್ನೂ ಹಿಡಿದು ಬರುತಿದ್ದರು. ಹೀಗೆ ರಾವಣನು ಸಭಾಸ್ಥಾನಕ್ಕೆ ಹೊರಟಾಗ, ಸಾವಿರಾರುವಾದ್ಯಗಳು ಮಹಾಧ್ವನಿಯಿಂದ ಮೊಳಗುತಿದ್ದು ವು.ಶಂಖಗಳು ನುಡಿಸಲ್ಪಡುತಿದ್ದುವು.ರಾವಣನು ರಾಜಮಾರ್ಗದಲ್ಲಿ ಬರುತ್ತಿ ರುವಾಗ ಅವನ ಮಹಾರಥದ ಚಕ್ರಧ್ವನಿಯೇ ನಾನಾದಿಕ್ಕುಗಳಲ್ಲಿಯೂ, ಪ್ರತಿಧ್ವನಿಯನ್ನು ಹೊರಡಿಸುವಂತೆ ಮೊಳಗುತಿತ್ತು. ರಥದಮೇಲೆ ರಾಜಚಿ ಹ್ನವಾಗಿ ಹಿಡಿದ ಶ್ವೇತಚ್ಛತ್ರವು ಪೂರ್ಣಚಂದ್ರನಂತೆ ಶೋಭಿಸುತಿತ್ತು. ಆತನ ಎಡಬಲಪಕ್ಕಗಳಲ್ಲಿ ಸುವರ್ಣಸೂತ್ರದಿಂದ ಬಿಗಿಯಲ್ಪಟ್ಟ ಶುದ್ಧ ಸ್ಫಟಿಕದಂತೆ ಸ್ವಚ್ಛವಾದ ಎರಡು ಚಾಮರಗಳು ಶೋಭಿಸುತಿದ್ದುವು. ರಾವಣನು ಬರುವಾಗ ಅಲ್ಲಲ್ಲಿ ರಾಕ್ಷಸರು ಕೈಜೋಡಿಸಿ ಮುಂದೆ ನಿಂತು ಆ ತನಿಗೆ ತಲೆಬಗ್ಗಿ ನಮಸ್ಕರಿಸುತಿದ್ದರು. ಕೆಲವರು ಜಯಶಬ್ದವನ್ನು ಹೇಳು ತಿದ್ದರು. ಕೆಲವು ವೃದ್ಧರಾಕ್ಷಸರು ಆಶೀರ್ವಚನಗಳನ್ನು ಹೇಳುತಿದ್ದರು. ಹೀಗೆ ಸಮಸ್ತರಾಕ್ಷಸರಿಂದ ಸ್ತುತಿಸಲ್ಪಡುತ್ತ ರಾವಣನು ತನ್ನ ಸಭಾಸ್ಥಾ ನವನ್ನು ಸೇರಿದನು. ಆ ಸಭಾಸ್ಥಾನದಲ್ಲಿಯೋ ನಡುನಡುವೆ ಚಿನ್ನ ಬೆಳ್ಳಿಯ ಕಂಬಗಳು! ಶುದ್ಧಸ್ಫಟಿಕಮಯವಾದ ನೆಲಗಟ್ಟುಗಳು! ಅವುಗಳಮೇಲೆ ಬಂಗಾರದ ಸರಿಗೆಗಳಿಂದ ಚಿತ್ರಕೆಲಸಮಾಡಲ್ಪಟ್ಟ ಪಟ್ಟೆಮಡಿಯ ದಿವ್ಯಾ ಸನಗಳು! ಹೀಗೆ ಮಹಾವೈಭವದಿಂದ ಕೂಡಿ, ಸಾಕ್ಷಾದ್ವಿಶ್ವಕರ್ಮನಿಂದ

ನಿರ್ಮಿತವಾಗಿ, ಆರುನೂರು ಮಂದಿ ಘೋರಪಿಶಾಚಗಳಿಂದ ರಕ್ಷಿತವಾದ ತನ್ನ ಸಭಾಸ್ಥಾನವನ್ನು ಪ್ರವೇಶಿಸಿ,ಅಲ್ಲಿ ವೈಡೂರ್ಯಮಯವಾಗಿಯೂ, [1] ಪ್ರಿಯಕಮೃಗದ ಚರ್ಮದಿಂದ ಹೊದ್ದಿಸಲ್ಪಟ್ಟುದಾಗಿಯೂ, ಅಂದವಾದ ದಿಂಬುಳ್ಳುದಾಗಿಯೂ ಇದ್ದ ತನ್ನ ಸಿಂಹಾಸನವನ್ನೇರಿ ಕುಳಿತನು. ಆಮೇಲೆ ರಾವಣನು ಅಲ್ಲಿ ವೇಗಶಾಲಿಗಳಾದ ಕೆಲವು ರಾಕ್ಷಸದೂತರನ್ನು ಕರೆದು, ತನ್ನ ಅಧಿಕಾರದರ್ಪಕ್ಕೆ ತಕ್ಕ ಮಾತಿನಿಂದ ಅವರನ್ನು ಕುರಿತು, “ಎಲೆ ದೂತರೆ ! ಈಗ ನಾವು ಮಹಾಪ್ರಯತ್ನದಿಂದ ನಿರ್ವಹಿಸಬೇಕಾದ [2] ದೊಡ್ಡಕಾರ್ಯವೊಂದಿರುವುದು! ಈ ಪಟ್ಟಣದಲ್ಲಿರುವ ಸಮಸ್ತ ರಾಕ್ಷಸರನ್ನೂ ಈ ಕ್ಷಣವೇ ನನ್ನಲ್ಲಿಗೆ ಕರೆತರಬೇಕು” ಎಂದನು. ಈ ಮಾತನ್ನು ಕೇಳಿದೊಡನೆ ರಾಕ್ಷಸದೂತರೆಲ್ಲರೂ ಆ ಪಟ್ಟಣದಲ್ಲಿ ಮನೆಮನೆಗೆ ತಿರುಗಿ, ಅಲ್ಲಲ್ಲಿನ ವಿಹಾರಸ್ಥಳಗಳಲ್ಲಿಯೂ, ಶಯನಗೃಹಗಳಲ್ಲಿಯೂ ಉದ್ಯಾನಗಳಲ್ಲಿಯೂ, ವಿಹರಿಸುತಿದ್ದ ಒಬ್ಬೊಬ್ಬರಾಕ್ಷಸನನ್ನೂ ನೋಡಿ ನಿರ್ಭಯವಾಗಿ ಅವರಿಗೆ ರಾಜಾಜ್ಞೆಯನ್ನು ತಿಳಿಸುತ್ತ ಬಂದರು. ಈ ರಾಜಾಜ್ಞೆಯನ್ನು ಕೇಳಿದೊಡನೆ ಆ ಪುರವಾಸಿಗಳಾದ ಸಮಸ್ತರಾಕ್ಷಸರೂ ಅಲ್ಲಿಂದ ರಾವಣಸಭೆಗೆ ಹೊರಟರು. ಕೆಲವರು ರಥಗಳನ್ನೇರಿ ಬಂದರು. ಕೆಲವರು ಕುದುರೆಗಳನ್ನೇರಿ ಬಂದರು. ಕೆಲವರು ಆನೆಗಳನ್ನೇರಿ ಹೊರಟರು. ಕೆಲವರು ಕಾಲುನಡೆಯಿಂದಲೇ ಬಂದು ಸೇರಿದರು. ಹೀಗೆ ರಥಗಜತುರುಗಾದಿಗಳಿಂದ ತುಂಬಿದ ಆ ಪುರಪ್ರದೇಶವೆಲ್ಲವೂ, ಪಕ್ಷಿಗಳಿಂದ ನಿಬಿಡವಾದ ಆಕಾಶದಂತೆ ಕಾಣುತಿತ್ತು. ಆ ರಾಕ್ಷಸರು ಪಲ್ಲಕ್ಕಿ ಮೊದಲಾದ ಪ್ರಯಾಣಸಾಧನಗಳಿಂದಲೂ, ಆನೆ ಕುದುರೆ ಮೊದಲಾದ ವಾಹನಗಳಿಂದಲೂ,ಆ ಸಭಾದ್ವಾರದವರೆಗೂ ಬಂದು, ತಮ್ಮವಾಹನಗಳನ್ನು ಅಲ್ಲಿಯೇ ಹೊರಗೆ ನಿಲ್ಲಿಸಿ,ಸಿಂಹಗಳು ಪರ್ವತಗುಹೆಯ

---

1 ಪ್ರಿಯಕಮೃಗವೆಂದರೆ, ನುಣುಪಾಗಿಯೂ, ಮೃದುವಾಗಿಯೂ ಇರುವ ಕೂದಲುಳ್ಳ ಒಂದು ಜಾತಿಯ ಮೃಗವು.

2 ಇಲ್ಲಿ ಬಹಳ ದೊಡ್ಡಕಾರ್ಯವೆಂದು ಹೇಳಿದುದರಿಂದ, ರಾವಣನು ಚಾರರ ಮೂಲಕವಾಗಿ ರಾಮಾದಿಗಳು ಸಮುದ್ರತೀರಕ್ಕೆ ಬಂದಿರುವುದನ್ನು ಆಗಲೇ ತಿಳಿದುಕೊಂಡಿರುವುದಾಗಿ ಸೂಚಿತವು.

ನ್ನು ಪ್ರವೇಶಿಸುವಂತೆ ಕಾಲುನಡೆಯಿಂದಲೇ ಸಭೆಯನ್ನು ಪ್ರವೇಶಿಸಿದರು. ಈ ಸಮಸ್ತರಾಕ್ಷಸರೂ ಅಲ್ಲಿ ಮೊದಲು ರಾವಣನ ಪಾದಗಳನ್ನು ಹಿಡಿದು ನಮಸ್ಕರಿಸಲು, ರಾಕ್ಷಸೇಂದ್ರನೂ ಅವರೆಲ್ಲರನ್ನೂ ಯಥೋಚಿತವಾಗಿ ಮನ್ನಿಸಿದನು. ಆಮೇಲೆ ರಾಜಾಜ್ಞೆಯಿಂದ ಅವರಲ್ಲಿ ಕೆಲವರು ಪೀಠಗಳಲ್ಲಿಯೂ, ಶ್ರೋತ್ರಿಯರಾದ ಕೆಲವರು ದರ್ಭಾಸನಗಳಲ್ಲಿಯೂ, ಸಾಮಾನ್ಯರಾದ ಕೆಲವರು ಬರೀನೆಲದಲ್ಲಿಯೂ ತಮ್ಮತಮ್ಮ ಸ್ಥಿತಿಗೆ ತಕ್ಕಂತೆ ಕುಳಿತರು. ಹೀಗೆ ರಾಜಾಜ್ಞೆಗೆ ಬದ್ಧರಾಗಿ ಬಂದ ಲಂಕಾನಿವಾಸಿಗಳೆಲ್ಲರೂ ತಮ್ಮತಮ್ಮ ಗೌರವಕ್ಕೆ ತಕ್ಕಂತೆ,ರಾವಣನಸುತ್ತಲೂ ಸೇರಿದರು.ಮತ್ತು ಅಲ್ಲಿ ಕಾರ್ಯಾಕಾರ್ಯಗಳನ್ನು ನಿಶ್ಚಯಿಸುವುದರಲ್ಲಿ ನಿಪುಣರಾಗಿಯೂ, ಪ್ರಮುಖರಾಗಿಯೂ ಇರುವ ಕೆಲವು[1]ಮಂತ್ರಿಗಳೂ, ಗುಣಾಢ್ಯರಾಗಿಯೂ, ವ್ಯವಹಾರಗಳನ್ನು ಚೆನ್ನಾಗಿ ಬಲ್ಲವರಾಗಿಯೂ, ಸೂಕ್ಷ್ಮಬುದ್ಧಿಯುಳ್ಳವರಾಗಿಯೂ ಇದ್ದ ಅಮಾತ್ಯರೂ ನೂರಾರುಮಂದಿ ಸೇರಿದ್ದರು. ಸುವರ್ಣಕಾಂತಿಯಿಂದ ಮನೋಹರವಾದ ಆ ರಾಕ್ಷಸೇಂದ್ರನ ಮನೆಯಲ್ಲಿ ರಾವಣನ ಕ್ಷೇಮವನ್ನು ವಿಚಾರಿಸುವುದಕ್ಕಾಗಿ ಇನ್ನೂ ಅನೇಕಮಂದಿ ಶೂರರೂ, ಗುಂಪುಗುಂಪಾಗಿ ಬಂದು ಸೇರಿದ್ದರು. ಈ ಸಮಸ್ತ ರಾಕ್ಷಸರೂ ರಾವಣನನ್ನು ಸುತ್ತಿ ಕುಳಿತಿರಲು, ಇಷ್ಟರಲ್ಲಿ ಮಹಾತ್ಮನಾದ ವಿಭೀಷಣನೂ, ಬಂಗಾರದಿಂದ ಚಿತ್ರಕೆಲಸಮಾಡಲ್ಪಟ್ಟ ಸರ್ವೋತ್ತಮವಾದ ಒಂದು ದೊಡ್ಡ ರಥವನ್ನೇರಿ ರಾವಣನ ಸಭೆಗೆ ಬಂದು ಸೇರಿದನು. ಅಲ್ಲಿ ವಿಭೀಷಣನು ತನ್ನಣ್ಣನಾದ ರಾವಣನ ಪಾದಗಳನ್ನು ಹಿಡಿದು ತನ್ನ ಹೆಸರನ್ನು ಹೇಳಿ ನಮಸ್ಕರಿಸಿದನು. ಹಾಗೆಯೇ ಶುಕನೂ, ಪ್ರಹಸ್ತನೂ ಮುಂದೆ ಬಂದು ರಾವಣನಿಗೆ ನಮಸ್ಕರಿಸಿದರು. ಆ ಮೂವರನ್ನೂ ರಾವಣನು ಯಥೋಚಿತವಾಗಿ ಮನ್ನಿಸಿ, ಅವರಿಗೆ ತಕ್ಕ ಆಸನಗಳನ್ನುಕೊಟ್ಟು ಕುಳ್ಳಿರಿಸಿದನು. ಆ ಸಭೆಯಲ್ಲಿ ನಾನಾರತ್ನಖಚಿತಗಳಾದ ಸುವರ್ಣಾಭರಣಗಳನ್ನು ಧರಿಸಿ, ಉತ್ತಮವಸ್ತ್ರಗಳನ್ನುಟ್ಟು, ಮೇಲಾದ ಅಗರುಚಂದನಗಳನ್ನು ಪೂಸಿ, ಸುಗಂಧಪುಷ್ಪಗಳನ್ನು ಧರಿಸಿದ್ದ ರಾಕ್ಷಸರೆ

---

1 ಇಲ್ಲಿ ಮಂತ್ರಿಗಳೆಂದರೆ ಬುದ್ಧಿ ಸಹಾಯರೆಂದೂ, ಅಮಾತ್ಯರೆಂದರೆ ಕಾರ್ಯಸಹಾಯರೆಂದೂ ಭೇದವನ್ನು ಗ್ರಹಿಸಬೇಕು.

ಲ್ಲರೂ ನೆರೆದಿರಲು, ಆ ಸಭಾಸ್ಥಾನವೆಲ್ಲವೂ ಗಂಧಪುಷ್ಪಾದಿಗಳ ಸುವಾಸ ನೆಯಿಂದಲೇ ತುಂಬಿದಂತಾಯಿತು. ಅಷ್ಟು ಮಹಾಸಭೆಯು ನೆರೆದಿರುವಾಗ ಲೂ, ರಾವಣಭಯದಿಂದ ಒಬ್ಬನಾದರೂ ಸಪ್ಪುಮಾಡುವವನಿಲ್ಲ ! ಒಬ್ಬ ನಾದರೂ ಅಕ್ರಮವಾಗಿ ಮಾತೆತ್ತುವನಿಲ್ಲ ! ಒಬ್ಬನಾದರೂ ಉಸಿರೆತ್ತಿ ಗ ಟ್ಟಿಯಾಗಿ ಮಾತಾಡುವವನಿಲ್ಲ ! ಆ ರಾಕ್ಷಸರಲ್ಲಿಯೋ ಒಬ್ಬೊಬ್ಬರೂ ತ ಮತಮಗೆ ಬೇಕಾದ ಕೋರಿಕೆಗಳನ್ನು ಪಡೆದವರು ! ಒಬ್ಬೊಬ್ಬರೂ ಕ್ರೂ ರಪರಾಕ್ರಮವುಳ್ಳವರು! ಇಂತಹ ರಾಕ್ಷಸರೆಲ್ಲರೂ ರಾವಣಾಜ್ಞೆಯನ್ನು ನಿರೀಕ್ಷಿಸುತ್ತ ಆತನ ಮುಖವನ್ನೇ ನೋಡುತಿದ್ದರು. ಹೀಗೆ ಬಲಾಢ್ಯರಾಗಿ ಯೂ, ಧೀರರಾಗಿಯೂ, ಶಸ್ತ್ರಧಾರಿಗಳಾಗಿಯೂ ಇದ್ದ ಅನೇಕರಾಕ್ಷಸರು ನೆರೆದಿರಲು, ಅವರ ನಡುವೆ ರಾವಣನು, ವಸುಗಳ ನಡುವೆ ದೇವೇಂದ್ರನಂತೆ ಆ ಸಭೆಯಲ್ಲಿ ತನ್ನ ದೇಹಕಾಂತಿಯಿಂದ ಬೆಳಗುತಿದ್ದನು. ಇಲ್ಲಿಗೆ ಹನ್ನೊಂ ದನೆಯಸರ್ಗವು.

---

ರಾಮನಿಗೆ ಸೀತೆಯನ್ನೊಪ್ಪಿಸದಂತೆಯೇ ಆತನನ್ನು ಜಯಿಸುವುದಕ್ಕುಪಾಯವೇನೆಂದು ರಾವಣನು ರಾಕ್ಷ ಸರೊಡನೆ ಆಲೋಚಿಸಿದುದು. ಕುಂಭಕರ್ಣನು ಆ ಕಾರ್ಯಕ್ಕೆ ತನ್ನ ಪರಾಕ್ರಮವೊಂದೇ ಸಾಕಾಗಿರುವುದೆಂ ದು ಹೇಳಿಕೊಂಡುದು.

ಆಮೇಲೆ ರಣವೀರನಾದ ರಾವಣನು ಆ ಸಭೆಯ ಸುತ್ತಲೂ ಕಣ್ಣಿ ಟ್ಟು ನೋಡಿ, ಅಲ್ಲಿದ್ದ ಸೇನಾಪತಿಯಾದ ಪ್ರಹಸ್ತನನ್ನು ಕುರಿತು, "ಎಲೆ ಸೇನಾಪತೀ ! ಈಗ ನಾವು ಗೂಢವಾಗಿ ಕೆಲವು ಮಂತ್ರಾಲೋಚನೆಗಳ ನ್ನು ನಡೆಸಬೇಕಾಗಿರುವುದು. ಆದುದರಿಂದ ನೀನು,ನಮ್ಮಲ್ಲಿ ಧನುರ್ವಿದ್ಯೆಯ ನ್ನು ಚೆನ್ನಾಗಿ ಅಭ್ಯಸಿಸಿದ ರಥಿಕರನ್ನೂ,ಮಾವುತರನ್ನೂ,ಅಶ್ವಯೋಧರನ್ನೂ ಪದಾತಿಗಳನ್ನೂ ಕರೆದು, ಈ ನಾಲ್ಕು ಬಗೆಯ ಚತುರಂಗಸೈನ್ಯಗಳನ್ನೂ ಮೊದಲಿಗಿಂತಲೂ ಹೆಚ್ಚು ಜಾಗರೂಕತೆಯಿಂದ ನಮ್ಮ ಪಟ್ಟಣವನ್ನು ರ ಕ್ಷಿಸಿಕೊಳ್ಳುವಂತೆ ಆಜ್ಞಾಪಿಸಬೇಕು." ಎಂದನು. ರಾವಣನಿಗೆ ಬಹಳ ವಿ ಶ್ವಾಸಪಾತ್ರನಾದ ಪ್ರಹಸ್ತನು, ಆ ರಾಜಾಜ್ಞೆಯಲ್ಲಿ ದೃಢವಾದ ವಿಶ್ವಾಸ ವನ್ನಿಟ್ಟು, ತನ್ನ ಸೈನ್ಯವೆಲ್ಲವನ್ನೂ ಆ ರಾವಣನ ಅರಮನೆಯೊಳಗೂ, ಹೊ

ರಗೂ ಕ್ರಮವಾಗಿ ಕಾವಲಿರಿಸಿ, ಅಂತಃಪುರರಕ್ಷಣಕ್ಕಾಗಿಯೂ ಬೇರೆ ಕೆಲವು ಸೈನ್ಯವನ್ನಿಟ್ಟು, ಆಮೇಲೆ ರಾವಣನ ಸಮ್ಮುಖಕ್ಕೆ ಬಂದು ಅವನೊಡನೆ "ಸ್ವಾಮಿ! ಮಹಾಬಲವುಳ್ಳ ಸೈನ್ಯವನ್ನೇ ನಮ್ಮ ಅರಮನೆಯ ಹೊರಗೂ, ಒಳಗೂ ಕಾವಲಿರಿಸಿರುವೆನು. ಇನ್ನು ಮುಂದೆ ನಿನಗೆ ಅಭಿಮತವಾಗಿ ತೋರಿದ ಕಾರ್ಯವನ್ನು ಧೈರ್ಯವಾಗಿ ನಡೆಸಬಹುದು! ನಿನಗೆ ಕಾರ್ಯವು ಕೈಗೂಡಬೇಕೆಂಬುದೇ ನನ್ನ ಕೋರಿಕೆ." ಎಂದನು. ರಾಜ್ಯಹಿತದಲ್ಲಿ ನಿರತನಾದ ರಾವಣನು, ಪ್ರಹಸ್ತನ ಮಾತನ್ನು ಕೇಳಿ, ತನಗೆ ಮುಂದೆ ಬರಬಹುವಾದ ಜಯಾಪಜಯಗಳಲ್ಲಿಯೂ ದೃಷ್ಟಿಯಿಡದೆ, ಕಾಮಸುಖವೊಂದನ್ನೇ ಕೋರುತ್ತಾ, ಅಲ್ಲಿದ್ದ ಸಭಾಸದರನ್ನು ಕುರಿತು "ಎಲೆ ಮಿತ್ರರೆ! ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳಲ್ಲಿ ಯಾವುದನ್ನು ಸೇವಿಸಬೇಕೆಂಬ ವಿಚಾರವು ಬಂದಾಗ,ಅದರಿಂದ ಮುಂದೆ ಬರಬಹುದಾದ ಪ್ರಿಯಾಪ್ರಿಯಗಳನ್ನೂ, ಸುಖದುಃಖಗಳನ್ನೂ, ಲಾಭನಷ್ಟಗಳನ್ನೂ, ಹಿತಾಹಿತಗಳನ್ನೂ. ಮೊದಲೇ ನಿಶ್ಚಯಿಸಿ ತಿಳಿಯುವುದರಲ್ಲಿ ನೀವು ಸಮರ್ಥರಾಗಿರುವಿರಿ! ಆ ವಿಷಯವಾದ ಸಂದೇಹವನ್ನು ತೀರಿಸುವುದಕ್ಕೂ ನಿಮಗೆ ಶಕ್ತಿಯುಂಟು! ನೀವು ಇದುವರೆಗೆ ಚೆನ್ನಾಗಿ ಆಲೋಚನೆಯಿಂದ ನಿಶ್ಚಯಿಸಿ ತೊಡಗಿದ ಕಾರ್ಯಗಳಲ್ಲಿ ಯಾವುದೂ ವಿಫಲವಾಗದೆ, ಹಿಡಿದ ಕಾರ್ಯವೆಲ್ಲವೂ ಸಫಲವಾಗಿಯೇ ಇರುವುದು. ದೇವೇಂದ್ರನು ಚಂದ್ರಸೂರ್ಯಾದಿಗ್ರಹಗಳೊಡನೆಯೂ, ನಕ್ಷತ್ರಗಳೊಡನೆಯೂ, ದೇವತೆಗಳೊಡನೆಯೂ ಸೇರಿ, ಅವರ ಬಲದಿಂದ ಜಯಲಕ್ಷ್ಮಿಯನ್ನು ಹೊಂದಿದಂತೆ,ನಿಮ್ಮ ಬಲದಿಂದ ನಾನೂ ಜಯವನ್ನೇ ಪಡೆದಿರುವೆನು. ಇದಕ್ಕೆ ಮೊದಲೇ ನಾನು ನಿಮ್ಮೆಲ್ಲರಿಗೂ ಪ್ರಕೃತವಿಷಯಗಳೆಲ್ಲವನ್ನೂ ತಿಳಿಸಿರುವೆನಷ್ಟೆ? ಆದರೆ ಕುಂಭಕರ್ಣನು ನಿದ್ರಿಸುತಿದ್ದುದರಿಂದ ಅವನೊಬ್ಬನಿಗೆಮಾತ್ರ ಈಗಿನ ವಿಚಾರವೊಂದೂ ತಿಳಿದಂತಿಲ್ಲ. ಮಹಾಬಲಾಢ್ಯನಾಗಿಯೂ, ಶಸ್ತ್ರಧಾರಿಗಳಲ್ಲಿ ಮೇಲಾಗಿಯೂ ಇರುವ ಈ ಕುಂಭಕರ್ಣನು ಕಳೆದ ಆರುತಿಂಗಳುಗಳಿಂದಲೂ ಮಲಗಿದ್ದು ಈಗಲೇ ನಿದ್ರೆಯಿಂದೆಚ್ಚತ್ತು ಬಂದಿರುವನು. ಇಲ್ಲಿನ ಸಂಗತಿಗಳೊಂದೂ ಆತನಿಗೆ ತಿಳಿಯದು. ಆದುದರಿಂದ ಮೊದಲು ಈತನಿಗೂ ಇದುವರೆಗಿನ ಸಂಗತಿಯನ್ನು ತಿಳಿ

ಸಿಬಿಡುವೆನು" ಎಂದು ಹೇಳಿ, ಆಮೇಲೆ ಕುಂಭಕರ್ಣನನ್ನು ನೋಡಿ "ಎಲೆ ವತ್ಸ ಕುಂಭಕರ್ಣಾ! ರಾಮನಿಗೆ ಪ್ರಿಯಪತ್ನಿಯಾಗಿಯೂ, ಜನಕಪುತ್ರಿಯಾಗಿಯೂ ಇರುವ ಸೀತೆಯನ್ನು ನಾನು ಜನಸ್ಥಾನದಿಂದ ಕದ್ದುತಂದು ನಮ್ಮ ಲಂಕೆಯಲ್ಲಿರಿಸಿರುವೆನು.ನಾನು ಎಷ್ಟೆಷ್ಟುವಿಧದಿಂದ ಪ್ರಾರ್ಥಿಸಿದರೂ ಆಕೆಯು[1]ನನ್ನ ಸಜ್ಜೆಯನ್ನೇರುವುದಕ್ಕೆ ಇಷ್ಟಪಡದಿರುವಳು. ನನಗಾದರೋ ಮೂರುಲೋಕದಲ್ಲಿಯೂ ಆ ಸೀತೆಯಂತೆ ಇಷ್ಟವಾದ ಬೇರೊಂದುವಸ್ತುವೇ ಇಲ್ಲವೆಂದು ತೋರಿರುವುದು. ಅವಳ ರೂಪಸೌಂದರ್ಯಾದಿಗುಣಗಳು ಸಾಮಾನ್ಯವಲ್ಲ. ಸಣ್ಣನಡುವುಳ್ಳವಳು! ಉಬ್ಬಿದ ನಿತಂಬವುಳ್ಳವಳು! ಶರತ್ಕಾಲದ ಚಂದ್ರನಂತೆ ಮುಖವುಳ್ಳವಳು! ಸುವರ್ಣಪ್ರತಿಮೆಯಂತೆ ತೋರುವಳು! ಬಹಳ ಸೌಮ್ಯಸ್ವರೂಪಳು ! ಮಯನಿರ್ಮಿತವಾದ ಮಾಯೆಯಂತೆ ಕ್ಷಣಕ್ಷಣಕ್ಕೂ ಹೊಸಮೋಹವನ್ನುಂಟುಮಾಡುವಳು! ಎಲೆ ವತ್ಸನೆ! ಕೆಂಪಾಗಿಯೂ, ಮೃದುವಾಗಿಯೂ, ದಪ್ಪವಾಗಿಯೂ ಇರುವ ಅಡಿಗಳಿಂದಲೂ, ಕೆಂಪಾದ ಉಗುರುಗಳಿಂದಲೂ ಶೋಭಿಸುವ ಅವಳ[2]ಕಾಲಿನ ಸೊಗಸನ್ನು ನೋಡಿದಮಾತ್ರಕ್ಕೆ ನನ್ನ ಕಾಮಾಗ್ನಿಯು ಮೇಲೆಮೇಲೆ ಜ್ವಲಿಸುತ್ತಿರುವುದು ! ಹುತಮಾಡಿದ ಬೆಂಕಿಯ ಜ್ವಾಲೆಯಂತೆಯೂ, ಸೂರ್ಯಪ್ರಭೆಯಂತೆಯೂ, ಎಣೆಯಿಲ್ಲದ ಕಾಂತಿಯಿಂದ ಶೋಭಿಸುವ ವಿಶಾಲಾಕ್ಷಿಯಾದ ಆಕೆಯನ್ನು ನೋಡಿದಷ್ಟೂ ನನಗೆ ತಾಪವೂ ಹೆಚ್ಚುತ್ತಿರುವುದು. ಉಬ್ಬಿದ ಮೂಗಿನಿಂದಲೂ, ಅಗಲವಾದ ಕಣ್ಣುಗಳಿಂದಲೂ ಕೂಡಿ,

---

1 ಇಲ್ಲಿ "ಸಾ ಮೇ ನಶಯ್ಯಾಮಾರೋಢು ಮಿಚ್ಛತಿ" ಎಂದು ಮೂಲವು. ಇಲ್ಲಿ (ಮೇಶಯ್ಯಾಂ) ನನ್ನ ಸಜ್ಜೆಯನ್ನು ಎಂದರೆ, ನಾನು ಭಕ್ತಿಪೂರ್ವಕವಾಗಿ ಸಮರ್ಪಿಸಿದ ಹಾಸಿಗೆಯನ್ನು ಅಂಗೀಕರಿಸದಿರುವುದರಿಂದ ಸೀತೆಯು ತನ್ನನ್ನು ಅನುಗ್ರಹಿಸದಿರುವಳೆಂದು ವಾಸ್ತವಾರ್ಥವು.

2 ಇಲ್ಲಿ ರಾವಣನು, ಮೇಲೆ ಹೇಳಿದಂತೆ ಸರ್ವೋತ್ತಮ ಶುಭಲಕ್ಷಣಗಳುಳ್ಳ ಸೀತೆಯ ಪಾದಗಳನ್ನು ನೋಡಿದ ಹಾಗೆಲ್ಲಾ ತನಗೆ ಸರ್ವಪಾಪಹರಗಳಾದ ಆ ಪಾದಗಳನ್ನಾಶ್ರಯಿಸಬೇಕೆಂಬ ಕೋರಿಕೆಯು ಮೇಲೆಮೇಲೆ ಹೆಚ್ಚಿ, ಮನಸ್ಸನ್ನು ಕೊರಗಿಸುವುದೆಂದು ಹೇಳಿದುದಾಗಿ ವಾಸ್ತವಾರ್ಥವು.

ಅಂದವಾಗಿಯೂ ವಿಶಾಲವಾಗಿಯೂ ಇರುವ ಆ ಸುಂದರಿಯ ಮುಖ ವನ್ನು ನೋಡಿನೋಡಿ ನಾನು ಕಾಮವಶನಾಗಿ ಮರುಗುತ್ತಿರುವೆನು ಮ ನ್ಮಥತಾಪವೆಂಬುವು ಸಾಮಾನ್ಯವಲ್ಲ! ಕೋಪದಲ್ಲಿಯೇ ಆಗಲಿ, ಹರ್ಷದ ಲ್ಲಿಯೇ ಆಗಲಿ, ತನ್ನ ಪ್ರಾಬಲ್ಯವನ್ನು ಬಿಡದೆ ಒಂದೇ ವಿಧವಾಗಿ ಬಾಧಿಸು ತ್ತಿರುವುದು. ಮನುಷ್ಯನನ್ನು ಬಹಳವಾದ ದುಃಖಕ್ಕೀಡುಮಾಡಿ ಬಣ್ಣಗೆ ಡಿಸುವುದು. ಎಡೆಬಿಡದೆ ದುಃಖವನ್ನೂ ಸಂಕಟವನ್ನೂ ಹೆಚ್ಚಿಸುತ್ತಿರುವು ದು. ಈ ವಿಧವಾದ ಮನ್ಮಥಬಾಧೆಯಿಂದ ನನ್ನ ಮನಸ್ಸೇ ಕೆಟ್ಟುಹೋ ಗಿರುವುದು. ಆ ಸೀತೆಯಾದರೋ ರಾಮನು ಒಂದುವೇಳೆ ತನ್ನನ್ನು ಹಿಂ ತಿರುಗಿಸುವುದಕ್ಕಾಗಿ ಇಲ್ಲಿಗೆ ಬರುವನೋ ಎಂಬ ಶಂಕೆಯಿಂದ, ಈಗಲೂ ಆವನ ಆಗಮನವನ್ನೇ ನಿರೀಕ್ಷಿಸುತ್ತಿರುವಳು. ಒಂದು ಸಂವತ್ಸರಕಾಲದ ವರೆಗೆ ತಾನು ರಾಮನನ್ನು ನಿರೀಕ್ಷಿಸುತಿದ್ದು, ಆಗಲೂ ಅವನು ಬಾರದಿದ್ದ ರೆ ನನಗೆ ವಶಳಾಗುವುದಾಗಿ ಹೇಳಿ, [1]ಆ ಒಂದು ವರ್ಷದ ಗಡುವನ್ನು ಕೇಳಿ ಕೊಂಡಿರುವಳು. ನಾನೂ ಅವಳ ನೇತ್ರಸೌಂದರ್ಯಕ್ಕೆ ವಶನಾಗಿ,ಅವಳ ಮಾ ತನ್ನು ಮೀರಲಾರದೆ ಹಾಗೆಯೇ ಪ್ರತಿಜ್ಞೆಮಾಡಿಕೊಟ್ಟಿರುವೆನು. ಎಲೆ ವ ತ್ಸನೆ! ಏನಾದರೇನು! [2]ಬಹುದೂರಕ್ಕೆ ನಡೆದು ಬಳಲಿದ ಕುದುರೆಯಂತೆ ನಾನು ಬಹುಕಾಲದಿಂದ ಕಾಮಪೀಡಿತನಾಗಿ ಬಳಲಿರುವೆನು. ನನ್ನ ಮರವ ಸ್ಥೆಯಂತೂ ಹೀಗಿರುವುದು. ಈ ಸಂಗತಿಯೂ ಹಾಗಿರಲಿ! ಮುಂದೆ ನಮ್ಮ

---

1 ಇಲ್ಲಿ ದುರಾತ್ಮನಾದ ರಾವಣನು ತಾನೇ ಸೀತೆಗೆ ಕೊಟ್ಟುಬಂದ ಎರಡು ತಿಂಗ ಳ ಗಡುವನ್ನು, ಸೀತೆಯು ಕೇಳಿಕೊಂಡುದಾಗಿ ಆರೋಪಿಸಿ ಹೇಳಿರುವನೆಂದು ಗ್ರಾಹ್ಯ ವು. (ಗೋವಿಂದರಾಜರು.) ಇದರಿಂದ ರಾವಣನು ತನಗೆ ಪರದೇವತೆಯಾದ ಸೀತೆಯು ತನ್ನ ಮನೆಯನ್ನು ಬಿಟ್ಟು ಹೋಗುವ ಕಾಲವು ಸಮೀಪಿಸಿತೆಂದು ಹೇಳಿ 'ದುಃಖಿಸಿದು ದಾಗಿ ವಾಸ್ತವಾರ್ಥವು. (ಮಹೇಶ್ವರತೀರ್ಥರು.)

2 ಇಲ್ಲಿ ರಾವಣನು ಇದುವರೆಗೆ ತಾನು ತನ್ನ ಸ್ತ್ರೀಯರಲ್ಲಿ ಬೇಕುಬೇಕಾದ ಮನ್ಮ ಥ ಭೋಗಗಳೆಲ್ಲನ್ನೆಲ್ಲಾ ಅನುಭವಿಸಿ ಬಳಲಿರುವುದರಿಂದ, ಇನ್ನು ಮುಂದೆ ತನಗೆ ಸೀತಾ ದೇವಿಯ ಪಾದಾಶ್ರಯಣವೊಂದು ಹೊರತು ಬೇರೊಂದೂ ಅಪೇಕ್ಷಿತವಲ್ಲವೆಂದು ಹೇ ಳಿದುದಾಗಿ ವಾಸ್ತವಾರ್ಥವು.

ಶತ್ರುಗಳಿಂದ ನಮಗೆ ಅಪಾಯವಿಲ್ಲದಂತೆ ನೋಡಿಕೊಳ್ಳಬೇಕಾದುದು ಈಗಿನ ಮುಖ್ಯಕಾರ್ಯವು. ಈ ಸಮುದ್ರವೋ ಯಾರಿಗೂ ಅಕ್ಷೋಭ್ಯವಾಗಿ ಅನೇಕಕ್ರೂರಜಂತುಗಳಿಗೆ ನಿವಾಸವಾಗಿರುವುದು. ಕಪಿಗಳಾಗಲಿ, ರಾಮ ಲಕ್ಷ್ಮಣರಾಗಲಿ ಇದನ್ನು ಹೇಗೆ ದಾಟಿ ಬರುವರೆಂದು ನಾವು ಧೈರ್ಯದಿಂದಿರ ಬಹುದು. ಆದರೆ ಅದನ್ನೂ ನಂಬುವುದಕ್ಕಿಲ್ಲ! ಹಿಂದೆ ಒಂದು ಕಪಿಯೇ ಇ ಲ್ಲಿಗೆ ಬಂದು ನಮ್ಮೊಡನೆ ದೊಡ್ಡಯುದ್ಧವನ್ನು ಮಾಡಿಹೋಯಿತು. ಕಾ ರ್ಯಗತಿಯನ್ನು ಹೀಗೆಂದು ತಿಳಿಯುವುದು ಯಾರಿಗೂ ಸಾಧ್ಯವಲ್ಲ. ಆದುದರಿಂ ದ ಈ ವಿಚಾರವಾಗಿ, ನಿಮಗೆ ತೋರಬಹುದಾದ ಆಲೋಚನೆಯೇನು ? ಅದನ್ನು ನನಗೆ ತಿಳಿಸಬೇಕು. ನಾನಾದರೋ ಕೇವಲಮನುಷ್ಯಮಾತ್ರ ನಾದ ರಾಮನಿಗಾಗಿ ಸ್ವಲ್ಪವೂ ಹೆದರುವವನಲ್ಲ. ಆದರೂ ಈ ವಿಷಯದ ಲ್ಲಿ ನೀವು ಚೆನ್ನಾಗಿ ಆಲೋಚಿಸಿ ತಿಳಿಸಬೇಕು. ಹಿಂದೆ ನಿಮ್ಮ ಸಹಾಯದಿಂದ ಲೇ ನಾನು ದೇವಾಸುರಯುದ್ಧದಲ್ಲಿಯೂ ಜಯವನ್ನು ಪಡೆದಿರುವೆನು. ಈಗ ಲೂ ಅಂತಹ ಶೂರರಾದ ನೀವೇ ನನ್ನ ಸಹಾಯಕ್ಕಿರುವಿರಿ. ಅತ್ತಲಾಗಿ ಸ ಮುದ್ರದ ಆಚೆಯ ದಡದಲ್ಲಿ ರಾಮಲಕ್ಷ್ಮಣರೆಂಬ ರಾಜಕುಮಾರರಿಬ್ಬರೂ ಸೀತೆಯಿರುವಸ್ಥಳವನ್ನು ತಿಳಿದುಕೊಂಡು,ಸುಗ್ರೀವನೇ ಮೊದಲಾದ ಕೆಲವು ವಾನರರನ್ನು ಮುಂದಿಟ್ಟುಕೊಂಡು ಸಮುದ್ರತೀರಕ್ಕೆ ಬಂದಿರುವರು. ಆದು ದರಿಂದ ಈಗ ನಾವು ಸೀತೆಯನ್ನು ರಾಮನಿಗೆಹಿಂತಿರುಗಿ ಕೊಡದಿರುವುದಕ್ಕೂ, [1]ಆರಾಮಲಕ್ಷ್ಮಣರನ್ನು ಕೊಲ್ಲುವುದಕ್ಕೂ ಉಪಾಯವೇನೆಂಬುದನ್ನು ಮೊದ ಲು ಯೋಚಿಸಬೇಕು. ಈ ವಿಷಯವನ್ನು ನೀವು ಚೆನ್ನಾಗಿ ಪರ್ಯಾಲೋಚಿಸಿ ನಿಮ್ಮ ನಿಶ್ಚಯವನ್ನು ನನಗೆ ತಿಳಿಸಿರಿ. [2]ಲೋಕದಲ್ಲಿ ಬೇರೆಯಾವನಿಗೂ ಕಪಿಗ ಳೊಡನೆ ಈಸಮುದ್ರವನ್ನು ದಾಟಬರುವಷ್ಟು ಶಕ್ತಿಯುಂಟೆಂದು ನನಗೆತೋರ

---

1 ಇಲ್ಲಿ "ಅದೇಯಾಚಯಥಾ ಸೀತಾವಧ್ಯೌ ದಶರಥಾತ್ಮಜೌ" ಎಂದುಮೂಲವು. ಇದಕ್ಕೆ ವಾಸ್ತವಾರ್ಥದಲ್ಲಿ "ಅವಧ್ಯೌ" ಎಂದು ಪದಚ್ಛೇದವು.

2 ಇಲ್ಲಿ "ನಹಿಶಕ್ತಿಂಪ್ರಪಶ್ಯಾಮಿ ಜಗತ್ಯನ್ಯಸ್ಯ ಕಸ್ಯಚಿತ್ । ಸಾಗರಂ ವಾನರೈ ಸ್ತೀರ್ತ್ವಾನಿಶ್ಚಯೇ ನಜಯೋಮಮ" ಎಂದು ಮೂಲವು. ವಾನರರೊಡನೆ ಸೇರಿ ಸಮು ದ್ರವನ್ನು ದಾಟಿ ಬರುವುದಕ್ಕೆ ರಾಮನು ಹೊರತು ಬೇರೊಬ್ಬನಿಗೆ ಶಕ್ತಿಯಿಲ್ಲವೆಂದೂ,

ಲಿಲ್ಲ. ಹಾಗೆಬಂದರೂ ನಮಗೇ ಜಯವೆಂಬುದು ಸಿದ್ಧವು " ಎಂದನು. ಹೀಗೆ ರಾವಣನು ಮನ್ಮಥವಿಕಾರದಿಂದ ಮೈಮರೆತು ಪ್ರಲಾಪಿಸಿದ ಮಾತನ್ನು ಕೇಳಿದೊಡನೆ ಕುಂಭಕರ್ಣನು ಕೋಪದಿಂದೆದ್ದು ‘‘ಅಣ್ಣಾ! ಮೊದಲು ನೀನು ರಾಮಲಕ್ಷ್ಮಣರಿದ್ದ ಜನಸ್ಥಾನಕ್ಕೆ ಹೋಗಿ ಸೀತೆಯನ್ನು ಕದ್ದುತಂದಾಗ, ನಿನಗೆ ಆ ಆಲೋಚನೆಯನ್ನು ಹೇಳಿದವರಾರು? ನಿನಗೆ ನೀನೇ ಮನಸ್ಸಿನಲ್ಲಿ ಆ ಅಕಾರ್ಯವನ್ನು ನಿಶ್ಚಯಿಸಿಕೊಂಡು ಸೀತೆಯನ್ನು ಬಲಾತ್ಕಾರದಿಂದ ತಂದುಬಿಟ್ಟೆಯಲ್ಲವೆ ? ಮೊದಲೇ ನೀನು ಆ ವಿಷಯವನ್ನೂ ನಮ್ಮೊಡನೆ ಆಲೋಚಿಸಿದ್ದಪಕ್ಷದಲ್ಲಿ,ಯಮುನಾನದಿಯು ನೆಟ್ಟಗೆ ಯಾಮುನಪರ್ವತವನ್ನು ಹೊಂದುವಂತೆ, ನಿನ್ನ ಮನಸ್ಸೂ ಸರಿಯಾದ ನಿಶ್ಚಯವನ್ನು ಹೊಂದಿ, ಈ ಚಿಂತೆಗೆ ಅವಕಾಶವೇಇಲ್ಲದೆ ನೆಮ್ಮದಿಯಿಂದಿರುತಿತ್ತು. ಆಗಲೇ ನೀನು ನಮ್ಮೊಡನೆ ಆಲೋಚಿಸಬೇಕಾಗಿತ್ತು. ಈಗ ಮಿಂಚಿಹೋದಮೇಲೆ ಮಾಡುವ ಆಲೋಚನೆಗಳೆಲ್ಲವೂ ವ್ಯರ್ಥವು. ನಿನ್ನ ಮನಸ್ಸಿಗೂ ನೆಮ್ಮದಿಯಿಲ್ಲ. ಈಗ ಮಾಡುವ ಆಲೋಚನೆಗಳನ್ನು ಮೊದಲೇ ಮಾಡಿದ್ದರೆ ಬಹಳ ಚೆನ್ನಾಗಿತ್ತು. ಯಾವರಾಜನು ಮೊದಲೇ ಚೆನ್ನಾಗಿ ಆಲೋಚಿಸಿ ನ್ಯಾಯವನ್ನು ಕಂಡುಕೊಂಡು ಆನ್ಯಾಯರೀತಿಯಿಂದಲೇ ರಾಜಕಾರ್ಯಗಳನ್ನು ನಡೆಸುವನೋ, ಆತನ ಮನಸ್ಸು ಕಾರ್ಯನಿಶ್ಚಯವನ್ನು ಹೊಂದಿ ನೆಮ್ಮದಿಯಿಂದಿರುವುದರಿಂದ ಆಮೇಲೆ ಪರಿತಾಪಕ್ಕೆ ಅವಕಾಶವಿಲ್ಲ. ಹಾಗಿಲ್ಲದೆ ಕಾರ್ಯಗಳನ್ನು ವಿರುದ್ಧೋಪಾಯಗಳಿಂದ ಪ್ರಯತ್ನಿಸಿದರೂ, ಅವುಗಳನ್ನು ವಿರುದ್ಧರೀತಿಯಿಂದ ಮಾಡಿದರೂ,ಅವು ನಿಷ್ಫಲವಾಗುವುವಲ್ಲದೆ,ಅಪಾತ್ರಗಳಲ್ಲಿಟ್ಟ ಹವಿಸ್ಸುಗಳಂತೆ ದೋಷವನ್ನೂ ತರುವುವು. ಯಾವನು ಮೊದಲೇ ನಡೆಸಬೇಕಾದ ಮಂತ್ರಾಲೋಚನೆಗಳನ್ನು ಆ ಕಾರ್ಯವು ಮಿಂಚಿಹೋದಮೇಲೆ ನಡೆಸುವನೋ,ಚೆನ್ನಾಗಿ ಆಲೋಚಿಸಿದಮೇಲೆ ನಡೆಸಬೇಕಾದ ಕಾರ್ಯಗಳನ್ನು ಆಲೋಚನೆಗೆ ಮೊದಲೇ ನಡೆಸಬೇಕೆಂದು ಕೋರುವನೋ, ಅವನಿಗೆ ನ್ಯಾಯಾನ್ಯಾಯಗಳೇ ತಿಳಿಯವು. ಹಂಸಗಳು ತಮ್ಮಿಂದ ದಾಟಲಸಾಧ್ಯವಾದ ಕ್ರೌಂಚಪರ್ವತವನ್ನಾದ

---

ಆವನು ದಾಟಿ ಬರುವುದು (ನಿಶ್ಚಯೇ) ನಿಶ್ಚಯವಾಗಿದ್ದ ಪಕ್ಷದಲ್ಲಿ (ನಜಯೋಮಮ) ತನಗೆ ಎಂದಿಗೂ ಜಯವಿಲ್ಲವೆಂದೂ ಇಲ್ಲಿನ ವಾಸ್ತವಾರ್ಥವು.

ರೂ, ತಮಗಾಗಿ ಷಣ್ಮುಖನು ಮಾಡಿಟ್ಟ ರಂಧ್ರದಿಂದ ದಾಟಿಹೋಗುವಂತೆ, ಶತ್ರುಗಳು, ತಮಗಿಂತಲೂ ತಮ್ಮ ಶತ್ರುವು ಅಧಿಕಬಲವುಳ್ಳವನೆಂದು ತಿಳಿದರೆ,ಮತ್ತು ಅವನು ಕಾರ್ಯಾಲೋಚನೆಯಿಲ್ಲದ ಚಪಲನೆಂದೂ ತಿಳಿದರೆ, ಅಂತವನಲ್ಲಿ ಇತರರಿಂದುಂಟಾದ ಛಿದ್ರವನ್ನು ತಿಳಿದು, ಆ ಸಂದರ್ಭದಲ್ಲಿ ಅವನ ಮೇಲೆಬಿದ್ದು ಜಯವನ್ನು ಸಾಧಿಸುವರು. ಮುಖ್ಯವಾಗಿ ನೀನು ಮುಂದಾಲೋಚನೆಯಿಲ್ಲದೆ ಸೀತೆಯನ್ನು ಕದ್ದು ತಂದುದೇ ದೊಡ್ಡತಪ್ಪು! ಇದೂ ನಿನಗೆ ದೂರಾಲೋಚನೆಯಿಲ್ಲದ ದೋಷವು. ಹೀಗಿದ್ದರೂ ಅನ್ನದಲ್ಲಿ ವಿಷಮಿಶ್ರವಾದುದನ್ನು ತಿಳಿಯದಂತೆ,ರಾಮನು ನಿನ್ನ ಅಕೃತ್ಯವನ್ನು ಇದುವರೆಗೂ ತಿಳಿಯದೆ ಸುಮ್ಮನಿರುವನು. ಇದೂಕೂಡ ನಿನ್ನ ಅದೃಷ್ಟವೇ ಹೊರತು ಬೇರೆಯಲ್ಲ.ಆದುದೇನೋ ಆಯಿತು! ಈಗಲೂ ಚಿಂತೆಯಿಲ್ಲ. ನೀನಂತೂ ಹೀಗೆ ಅಯುಕ್ತಕಾರ್ಯಕ್ಕೆ ಪ್ರಯತ್ನಿಸಿದೆ! ಈಗಲೂ ಅದನ್ನು ಸರಿಪಡಿಸುವುದಕ್ಕೆ ನನ್ನಿಂದ ಹೊರತು ಬೇರೆಯವರಿಂದ ಸಾಧ್ಯವಲ್ಲ! ಈಗಲೂ ನಾನು ನಿನ್ನ ಶತ್ರುಗಳನ್ನು ಜಯಿಸಿ ಕ್ರಮಪಡಿಸುವೆನು. ಇದಕ್ಕಾಗಿ ನೀನು ವ್ಯಸನಪಡಬೇಡ! ಒಂದುವೇಳೆ ಇಂದ್ರಸೂರ್ಯರಾಗಲಿ, ಅಗ್ನಿವಾಯುಗಳಾಗಲಿ, ಕುಬೇರವರುಣರಾಗಲಿ ನನಗಿದಿರಾಗಿ ಬಂದರೂ, ಅವರನ್ನೂ ನಾನು ಇದಿರಿಸಿ ಜಯಿಸಬಲ್ಲೆನು. ಅಣ್ಣಾ! ಬೆಟ್ಟದಂತಿರುವ ನನ್ನ ಈ ದೇಹವನ್ನು ನೋಡು! ನನಗೆ ಯುದ್ಧಸಾಧನವಾಗಿರುವ ಈ ಮಹಾಪರಿಘವನ್ನು ನೋಡು! ನನ್ನ ಭಯಂಕರವಾದ ಸಿಂಹನಾದವನ್ನು ನೋಡು! ನನ್ನ ತೀಕ್ಷ್ಣವಾದ ಕೋರೆದಾಡೆಗಳನ್ನು ನೋಡು! ಇವುಗಳನ್ನು ನೋಡಿದ ಮಾತ್ರಕ್ಕೆ ದೇವೇಂದ್ರನಾದರೂ ಭಯಪಟ್ಟು ಪಲಾಯನಮಾಡುವನು. ಬೇರೆಯವರನ್ನು ಕೇಳಬೇಕೆ! ಆರಾಮನು ನನ್ನಮೇಲೆ ಮೊದಲು ಒಂದು ಬಾಣವನ್ನು ಪ್ರಯೋಗಿಸಿದರೂ,[1] ಎರಡನೆಯ ಬಾಣವನ್ನು ತೆಗೆಯುವುದರೊಳಗಾಗಿಯೇ

---

1 ಇಲ್ಲಿ "ಪುನರ್ಮಾಂಸದ್ವಿತೀಯೇನ ಶರೇಣ ನಿಹನಿಷ್ಯತಿ। ತತೋಹಂತಸ್ಯಪಾಸ್ಯಾಮಿ ರುಧಿರಂ ಕಾಮಮಾಶ್ವಸ" ಎಂದುಮೂಲವು. ಇದರಿಂದ ರಾಮನು ತನ್ನ ಎರಡನೆಯ ಬಾಣದಿಂದಲೇ ನನ್ನನ್ನು ಅವಶ್ಯವಾಗಿ ಕೊಂದುಬಿಡುವನೆಂದೂ, ಆ ವಧದಿಂದ ನನ್ನ ರಕ್ತವನ್ನೇ ನಾನು ಕುಡಿಯುವುದನ್ನು ನೋಡಿ ನೀನು ದು:ಖದಿಂದ ನಿಟ್ಟುಸಿರುಬಿಡುವೆ

ಅವನ ರಕ್ತವನ್ನು ನಾನು ಹೀರಿಬಿಡುವೆನೆಂದು ತಿಳಿ! ಇನ್ನು ನೀನು ಚಿಂತಿಸ ಬೇಡ! ಸಮಾಧಾನದಿಂದಿರು! ಅಣ್ಣಾ! [1] ಈಗಲೇ ನಾನು ರಾಮನನ್ನು ಕೊಂದು ನಿನಗೆ ಅನಾಯಾಸವಾಗಿ ಜಯವುಂಟಾಗುವಂತೆ ಪ್ರಯತ್ನಿಸುವೆನು. ಲಕ್ಷ್ಮಣಸಹಿತನಾದ ರಾಮನನ್ನು ಕೊಂದೊಡನೆ, ಸಮಸ್ತವಾನರರನ್ನೂ ಒಂದೇ ತುತ್ತಾಗಿ ಭಕ್ಷಿಸಿಬಿಡುವೆನು. ಇದಕ್ಕಾಗಿ ನೀನು ಸ್ವಲ್ಪವೂ ಪ್ರಯತ್ನಿಸಬೇಕಾದುದಿಲ್ಲ. ನೀನು ಇಲ್ಲಿಯೇ ಇದ್ದು ನಿನ್ನ ಮನಸ್ಸಿಗೆ ತೋರಿದಂತೆ ಕ್ರೀಡಿಸು. ನಿನಗೆ ಇಷ್ಟವಾದ ಮದ್ಯವನ್ನು ಕುಡಿ! ನಿಶ್ಚಿಂತನಾಗಿ ನಿನಗೆ ಬೇಕಾದ ಕಾರ್ಯಗಳನ್ನು ನಡೆಸುತ್ತಿರು! [2] ಅತ್ತಲಾಗಿ ನಾನು ರಾಮನನ್ನು ಕೊಂದೊಡನೆ, ಇತ್ತಲಾಗಿ ಸೀತೆಯು ಬಹುಕಾಲದವರೆಗೆ ನಿನಗೆ ಕೈವಶವಾಗಿರುವಳು.'' ಎಂದನು. ಇಲ್ಲಿಗೆ ಹನ್ನೆರಡನೆಯ ಸರ್ಗವು

---

ಯೆಂದೂ, ಕುಂಭಕರ್ಣನು ರಾವಣನಿಗೆ ಸೂಚಿಸಿದುದಾಗಿ ಅಶ್ಲೀಲಾರ್ಥವು ಧ್ವನಿತವಾಗುವುದು. (ಗೋವಿಂದರಾಜರು.) ''ರಾಮನು ತನ್ನನ್ನು ಎರಡನೆಯ ಬಾಣದಿಂದಲೇ ಕೊಲ್ಲುವನಾಗಿದ್ದರೂ, ಅದಕ್ಕೆ ಮೊದಲೇ ತಾನು ಕೆಲವುವಾನರರ ರಕ್ತವನ್ನು ಕುಡಿದು ಸಾಯುವುದರಿಂದ, ಅದನ್ನು ನೋಡಿಯಾದರೂ ನೀನು ಸ್ವಲ್ಪಸಮಾಧಾನವನ್ನು ಹೊಂದಬಹುದೆಂದು ಹೇಳಿದುದಾಗಿ ವಾಸ್ತವಾರ್ಥವು. (ಮಹೇಶ್ವರ ತೀರ್ಥರು)

1 ಇಲ್ಲಿ ''ವಧೇನವೈ ದಾಶರಥೇಸ್ಸುಖಾವಹಂ ಜಯಂತವಾಹರ್ತುಮಹಂ ಯತಿಷ್ಯೇ! ಹತ್ವಾಚರಾಮಂ ಸಹಲಕ್ಷ್ಮಣೇನ ಖಾದಾಮಿಸರ್ವಾನ್ ಹರಿಯೂಥಮುಖ್ಯಾನ್'' ಎಂದು ಮೂಲವು. ''ನಾನು ರಾಮನಕೈಗೆ ಸಿಕ್ಕಿಸಾಯುವುದರಿಂದ ರಾಮನಿಗೆ ನಿನ್ನ ಮೇಲಿನಜಯವು ಸುಖಸಾಧ್ಯವಾಗುವಂತೆ ಮಾಡುವೆ'' ನೆಂದು ಇಲ್ಲಿ ಅಶ್ಲೀಲಾರ್ಥವು ಧ್ವನಿತವಾಗುವುದು.

2 ಇಲ್ಲಿ ''ಮಯಾತುರಾಮೇಗಮಿತೇಯಮಕ್ಷಯಂ ಚಿರಾಯಸೀತಾವಶಗಾ ಭವಿಷ್ಯತಿ'' ಎಂದುಮೂಲವು. ಇಲ್ಲಿನ (ಗಮಿತೇಯಮಕ್ಷಯಂ) ಎಂಬಲ್ಲಿ (ಗಮಿತಾ+ಇಯಂ+ಅಕ್ಷಯಂ)ಎಂದು ಪದವಿಭಾಗವನ್ನು ಮಾಡಿ, ''ಈ ಸೀತೆಯು ರಾಮನಲ್ಲಿ ಅಕ್ಷಯವಾಗಿ ಸೇರಿಸಲ್ಪಟ್ಟವಳಾಗಿ ಬಹುಕಾಲದವರೆಗೆ ಆತನ ವಶವರ್ತಿನಿಯಾಗಿರುವಳು'' ಎಂದು ವಾಸ್ತವಾರ್ಥವನ್ನು ಗ್ರಹಿಸಬೇಕು.

ಸೀತೆಯನ್ನು ಬಲಾತ್ಕಾರದಿಂದೆಳೆದುಭೋಗಿಸೆಂದು ಮಹಾಪಾರ್ಶ್ವನು ರಾವಣನಿಗೆ ಹೇಳಿದುದು. ರಾವಣನು ಬ್ರಹ್ಮಶಾಪದಿಂದ ತಾನು ಪರಸ್ತ್ರೀಯರನ್ನು ಬಲಾತ್ಕರಿಸಕೂಡದೆಂದು ಹೇಳಿದುದು.

ಕುಂಭಕರ್ಣನ ನೀತಿವಾಕ್ಯವನ್ನು ಕೇಳಿ ರಾವಣನಿಗೆ ಅತ್ಯಾಕ್ರೋಶವು ಹುಟ್ಟಿತು. ಈ ರಾವಣನ ಮನೋಭಿಪ್ರಾಯವನ್ನು ತಿಳಿದೊಡನೆ, ಬಲಾಢ್ಯನಾದ ಮಹಾಪಾರ್ಶ್ವನು ಸ್ವಲ್ಪಹೊತ್ತಿನವರೆಗೆ ತನ್ನಲ್ಲಿ ತಾನು ಚಿಂತಿಸಿ, ಆಮೇಲೆ ರಾವಣನಮುಂದೆ ಕೈಮುಗಿದು ನಿಂತು “ ಮಹಾರಾಜನೆ! ಲೋಕದಲ್ಲಿ ಯಾವನು ಮಧುವನ್ನು ಕುಡಿಯಬೇಕೆಂಬ ಆಸೆಯಿಂದ, ಕ್ರೂರಮೃಗಗಳಿಂದಲೂ ವಿಷಸರ್ಪಗಳಿಂದಲೂ ತುಂಬಿದ ಕಾಡಿಗೆ ಹೋಗಿ, ಅಲ್ಲಿ ಪ್ರಯತ್ನಪಟ್ಟು ಮಧುವನ್ನೂ ಸಂಪಾದಿಸಿ, ಕೊನೆಗೆ ಕೈಗೆ ಸಿಕ್ಕಿದ ಆ ಮಧುವನ್ನು ಕುಡಿಯದೆ ಬರುವನೋ, ಅವನು ಬಹಳಮೂಢನೆನಿಸುವನಲ್ಲವೆ?ಹಾಗೆಯೇ ನೀನೂ ಇಷ್ಟು ಪ್ರಯತ್ನಪಟ್ಟು ಸೀತೆಯನ್ನು ತಂದಿರುವಾಗಲೂ ಅವಳನ್ನನುಭವಿಸದೆ ಸುಮ್ಮನಿರಬಾರದು. ಎಲೈ ಶತ್ರುಸೂದನನೆ! [1] ಸಮಸ್ತಲೋಕಗಳನ್ನೂ ಶಿಕ್ಷಿಸಬಲ್ಲವನಾದ ನಿನಗೆ ಬೇರೆ ಶಿಕ್ಷಕರಾರುಂಟು? ಯಾರಿಗೂ ನೀನು ಹೆದರಬೇಕಾದುದಿಲ್ಲ!ಧರ್ಮಾಧರ್ಮಗಳಿಗೂ ನೀನು ಅಂಜಬೇಡ! ಶತ್ರುಗಳ ತಲೆಯನ್ನು ಮೆಟ್ಟಿದಂತೆ ಸೀತೆಯೊಡನೆ ರಮಿಸು ! ಈ ಭಯಕ್ಕಾಗಿ ನೀನು ಸೀತೆಯನ್ನೊಪ್ಪಿಸಬೇಕಾದ ಆವಶ್ಯಕವೂ ಇಲ್ಲ! ನಿನ್ನ ಶಕ್ತಿಗೆ ತಡೆಯಾವುದು? ಸೀತೆಯು ಬ

---

1. ಇಲ್ಲಿ “ಈಶ್ವರಸ್ಯೇಶ್ವರ: ಕೋಸ್ತಿ ತವ ಶತ್ರುನಿಬರ್ಹಣ। ರಮಸ್ವ ಸಹವೈದೇಹ್ಯಾ ಶತ್ರೂನಾಕ್ರಮ್ಯಮೂರ್ಧಸು” ಎಂದುಮೂಲವು.“ಇಲ್ಲಿ ಸರ್ವೇಶ್ವರನಾದ ರಾಮನಿಗೆ ಬೇರೊಬ್ಬರೂ ನಿಯಾಮಕರಿಲ್ಲವೆಂದೂ, ಆದುದರಿಂದ (ವೈದೇಹ್ಯಾಸಹ ತವ ಶತ್ರೂನ್ ಮೂರ್ಧಸು ಆಕ್ರಮ್ಯ) ಸೀತೆಯೊಡಗೂಡಿದ ಆ ನಿನ್ನ ಶತ್ರುಗಳನ್ನೇ ಎಂದರೆ ರಾಮನನ್ನೇ ನಿನ್ನಹತ್ತುತಲೆಗಳಿಂದಲೂ ನಮಸ್ಕರಿಸಿ ಕ್ಷೇಮದಿಂದಿರೆಂದೂ ವಾಸ್ತವಾರ್ಥವು. ಇಲ್ಲಿ (ಶತ್ರೂನ್) ಎಂಬ ಬಹುವಚನವು ಪೂಜಾರ್ಥಕವೆಂದು ಗ್ರಾಹ್ಯವು.

ಪ್ಪಿದರೇನು? ಒಪ್ಪದಿದ್ದರೇನು?¹ಕೋಳಿಯಂತೆ ಬಲಾತ್ಕಾರದಿಂದ, ಆಗಾಗ ಮೇಲೆಬಿದ್ದು ಆಕೆಯನ್ನು ಹಿಡಿದೆಳೆದು ಇಷ್ಟಬಂದಂತೆ ಅನುಭವಿಸು! ಪ್ರಕೃತದಲ್ಲಿ ನಿನ್ನ ಕಾಮವನ್ನು ನೀನು ತೀರಿಸಿಕೊಂಡು ಬಿಡು! ಆಮೇಲೆ ಯಾವ ಭಯವು ಬಂದರೂ ಬರಲಿ! ಅಥವಾ ಬರುವ ಹಾಗಿದ್ದರೂ ಇರಲಿ! ಅವೆಲ್ಲವೂ ನಿನಗೊಂದು ಲಕ್ಷ್ಯವಲ್ಲ ! ಹೇಗಾದರೂ ತಪ್ಪಿಸಿಕೊಳ್ಳಬಹುದು. ಇದೋ! ಇಲ್ಲಿ ನಿನಗೆ ಬೆಂಬಲವಾಗಿರುವ ಈ ಕುಂಭಕರ್ಣನನ್ನು ನೋಡು!ಮಹಾಬಲಾಢ್ಯನಾದ ಈ ಇಂದ್ರಜಿತ್ತನ್ನು ನೋಡು!ಇವರಿಬ್ಬರೂ ವಜ್ರಧಾರಿಯಾದ ಇಂದ್ರನನ್ನಾದರೂ ತಡೆಯಬಲ್ಲರು. ಯುದ್ಧಮಾಡುವುದಕ್ಕೆ ಕೈಲಾಗದ ಯಾರೋ ಕೆಲವು ಹೇಡಿಗಳು, ಸಾಮದಾನಭೇದಗಳೆಂಬ ಬೇರೆಬೇರೆ ಉಪಾಯಗಳನ್ನು ಕಲ್ಪಿಸಿಟ್ಟಿರುವರು! ಅವೆಲ್ಲವೂ ನಿನಗೇಕೆ ? ದಂಡೋಪಾಯದಿಂದಲೇ ಕಾರ್ಯವು ಕೈಗೂಡುವ ರೀತಿಯನ್ನು ನೋಡು ! ಎಲೈ ಬಲಾಢ್ಯನೆ ! ನೀನು ನಿನ್ನ ಶತ್ರುಗಳನ್ನು ಕೊಲ್ಲುವುದಕ್ಕಾಗಿ ಈ ಲಂಕೆಯನ್ನು ಬಿಟ್ಟು ಹೊರಗೆ ಹೋಗಬೇಕಾದುದೂ ಇಲ್ಲ!ಯಾವಶತ್ರುಗಳು ಬಂದರೂ ಇಲ್ಲಿಗೇ ಬರಲಿ!ಅವರು ಈ ಲಂಕೆಯಕಡೆಗೆ ಕಾಲಿಟ್ಟೊಡನೆ ನಾವು,ಇದೋ ಈ ನಮ್ಮ ಶಸ್ತ್ರಬಲದಿಂದ ನಿಗ್ರಹಿಸಿ ನಿನಗೆ ವಶಮಾಡುವೆವು. ಇದರಲ್ಲಿ ಸಂದೇಹವಿಲ್ಲ" ಎಂದನು. ಇದನ್ನುಕೇಳಿ ರಾವಣನು ಅವನ ಮಾತನ್ನೇ ಬಹಳವಾಗಿ ಅಭಿನಂದಿಸುತ್ತ, ಅವನನ್ನು ಕುರಿತು." “ಮಹಾಪಾರ್ಶ್ವ!ಭಲೆ ಭಲೆ! ಬಹಳ ಸಂತೋಷವಾಯಿತು ! ಚೆನ್ನಾಗಿ ಹೇಳಿದೆ ! ಆದರೇನು ? ನನ್ನ ವಿಷಯವಾಗಿ ಮಾತ್ರ ಈವಿಚಾರದಲ್ಲಿ ಒಂದುರಹಸ್ಯವುಂಟು!ಅದನ್ನೂ ತಿಳಿಸುವೆನು ಕೇಳು!ಇದು ಬಹುಕಾಲದಹಿಂದೆ ನಡೆದ ವಿಚಾರವು!ಹಿಂದೆ ಒಂದಾನೊಂ

---

1 ಇಲ್ಲಿ "ಬಲಾತ್ಕುಕ್ಕುಟವೃತ್ತೇನ ವರ್ತಸ್ವ ಸುಮಹಾಬಲ! ಆಕ್ರಮ್ಯಾಕ್ರಮ್ಯ ಸೀತಾಂವೈ ತಥಾಭುಂಕ್ಷ್ವರಮಸ್ವಚ ||" ಎಂದು ಮೂಲವು. (ಕುಕ್ಕುಟವೃತ್ತೇನ ವರ್ತಸ್ವ) ಎಂಬಲ್ಲಿ (ಕುಕ್ಕುಟವೃತ್ತೇ+ನ+ವರ್ತಸ್ವ) ಎಂದು ಪದವಿಭಾಗವನ್ನು ಮಾಡಿ, "ಎಲೈ ಮಹಾಬಲಾಢ್ಯನಾದ ರಾವಣನೆ ! ನೀನು ಕೋಳಿಗಳಂತೆ ಚಪಲಸ್ವಭಾವದಲ್ಲಿರಬೇಡ ! ಸೀತೆಯನ್ನು ಬಲಾತ್ಕಾರದಿಂದ ಹಿಡಿದು ಭೋಗಿಸಿ ರಮಿಸುವುದಕ್ಕೂ ಪ್ರಯತ್ನಿಸಬೇಡ!" ಎಂದು ಮಹಾಪಾರ್ಶ್ವನು ನೀತಿಯನ್ನೇಉಪದೇಶಿಸಿದುದಾಗಿ ವಾಸ್ತವಾರ್ಥ

ದು ಕಾಲದಲ್ಲಿ, ನಾನು ಗಗನಚಾರಿಯಾಗಿ ಹೋಗುತಿದ್ದೆನು.[1] ಆಗ ಪುಂಜಿಕ ಸ್ಥಳಿಯೆಂಬ ಅಪ್ಸರಸಿಯು ಬ್ರಹ್ಮಸಭೆಗೆ ಹೋಗುತ್ತ, ದಾರಿಯಲ್ಲಿ ನನ್ನನ್ನು ಕಂಡಳು. ಅಗ್ನಿಜ್ವಾಲೆಯಂತೆ ಬೆಳಗುತಿದ್ದ ಆಕೆಯು ನನ್ನ ಘೋರರೂಪವನ್ನು ಕಂಡೊಡನೆ ಭಯದಿಂದ ಹಿಂದಕ್ಕೆ ಸರಿದಳು. ನನಗಾದರೋ ಅವಳನ್ನು ಕಂಡೊಡನೆ ಕಾಮಾತುರವು ಹುಟ್ಟಿತು. ಆಗಲೇ ನಾನು ಅವಳನ್ನು ಬಲಾತ್ಕಾರದಿಂದ ಹಿಡಿದು, ಅವಳ ಬಟ್ಟೆಯನ್ನೆಳೆದು,ಅವಳೊಡನೆ ಭೋಗಿಸಿದೆನು. ಆಕೆಯು ಹೀಗೆ ನನ್ನಿಂದ ಭಂಗಹೊಂದಿ, ಕಂದಿದ ಕಮಲಿನಿಯಂತೆ ಕೊರಗುತ್ತ ಬ್ರಹ್ಮದೇವನ ಬಳಿಗೆಹೋದಳು. ಆ ಸಂಗತಿಯು ಆಗಲೇ ಮಹಾತ್ಮನಾದ ಬ್ರಹ್ಮನಿಗೂ ತಿಳಿದಂತಿದೆ. ಆಗ ಬ್ರಹ್ಮನು ನನ್ನ ಮೇಲೆ ಬಹಳವಾಗಿ ಕೋಪಗೊಂಡು ನನ್ನನ್ನು ಕರೆದು, "ರಾವಣಾ! ಇದು ಮೊದಲುಗೊಂಡು ನೀನು ಬೇರೆ ಯಾವ ಪರಸ್ತ್ರೀಯನ್ನಾಗಲಿ ಬಲಾತ್ಕಾರದಿಂದ ಭೋಗಿಸಿದಪಕ್ಷದಲ್ಲಿ, ಆಗಲೇ ನಿನ್ನ ತಲೆಯು ನೂರುಭಾಗವಾಗಿ ಭೇದಿಸಿಹೋಗುವುದು. ಇದರಲ್ಲಿ ಸಂದೇಹವಿಲ್ಲ!" ಎಂದು ಶಪಿಸಿರುವನು. ಈ ಶಾಪದ ಭಯದಿಂದಲೇ ನಾನು ಸೀತೆಯನ್ನು ಇದುವರೆಗೂ ಬಲಾತ್ಕಾರದಿಂದ ನನ್ನ ಹಾಸಿಗೆಯನ್ನೇರಿಸದೆ ಬಿಟ್ಟಿರುವೆನು. ಇದುಹೊರತು ನನಗೆ ಬೇರೆ ಭಯವಿಲ್ಲ! ನನಗಾದರೋ ಸಮುದ್ರದಂತೆ ವೇಗವೂ, ವಾಯುವಿನಂತೆ ಶೀಘ್ರಗತಿಯೂ ಇರುವುದು. ಇದೊಂದೂ ರಾಮನಿಗೆ ತಿಳಿಯದು. ಆದರಿಂದಲೇ ರಾಮನು

---

ವು. (ಮಹೇಶ್ವರ ತೀರ್ಥರು.) ಅಥವಾ "ಎಲೈ ರಾವಣನೆ! ಬೇರೆ ಯಾರಲ್ಲಿಯಾದರೂ ನೀನು ಉತ್ಕೃಷ್ಟವೃತ್ತಿಯನ್ನವಲಂಬಿಸು! ಸೀತೆಯನ್ನಾದರೋ (ಬಲಾತ್ ಭುಂಕ್ಷ್ವ) ನಿನ್ನ ಬಲದಿಂದ ಚೆನ್ನಾಗಿ ರಕ್ಷಿಸುತ್ತಿರು" ಎಂದು ವಾಸ್ತವಾರ್ಥವು. (ಗೋವಿಂದರಾಜರು.)

1 ರಾವಣನಿಗೆ ಇದಕ್ಕೆ ಮೊದಲೇ ರಂಭೆಯನಿಮಿತ್ತವಾಗಿ ನಳಕೂಬರನಿಂದ ಪ್ರಾಪ್ತವಾದ ಶಾಪವಿದ್ದರೂ, ಆ ನಲಕೂಬರನು ಪ್ರಾಕೃತದೇವತೆಯಾದುದರಿಂದ, ಅದನ್ನುಲಕ್ಷ್ಯದಲ್ಲಿಡದೆ, ಆಮೇಲೆ ತನಗೆ ಬ್ರಹ್ಮನಿಂದುಂಟಾದ ಈ ಶಾಪವನ್ನೇ ನಿರ್ದೇಶಿಸಿ, ಪಿತಾಮಹವಾಕ್ಯವಾದುದರಿಂದ ಅದನ್ನು ಮಾತ್ರ ತಾನು ಮೀರಿನಡೆಯುವುದಕ್ಕಿಲ್ಲವೆಂದು ಹೇಳಿದುದಾಗಿ ಗ್ರಾಹ್ಯವು.

ನನ್ನಮೇಲೆ ದಂಡೆತ್ತಿ ಬರುವಂತಿದೆ. ಆದರೇನು? ಪರ್ವತಗುಹೆಯಲ್ಲಿ ಮಲಗಿ ದ ಸಿಂಹವನ್ನು ಮೇಲೆಬ್ಬಿಸುವಂತೆಯೂ, ಮೃತ್ಯುವನ್ನು ಎಚ್ಚರಗೊಳಿಸುವಂತೆಯೂ, ಈಗ ರಾಮನು ನನ್ನನ್ನು ಯುದ್ಧಕ್ಕೆ ಕರೆಯುತ್ತಿರುವನು.ಆ ರಾಮನು ಇದುವರೆಗೆ ಯುದ್ಧದಲ್ಲಿ ಮಹಾಸರ್ಪಗಳಂತಿರುವ ನನ್ನ ಬಾಣಗಳನ್ನು ಕಂಡವನಲ್ಲ.ಆದರಿಂದಲೇ ನನ್ನಮೇಲೆ ಯುದ್ಧೋದ್ಯುಕ್ತನಾಗಿರುವನು. ಮಹಾಪಾರ್ಶ್ವನೆ? ಹೆಚ್ಚಾಗಿ ಹೇಳಿದುದರಿಂದೇನು! ಇನ್ನು ಶೀಘ್ರದಲ್ಲಿಯೇ ನಾನು, ಕೊಳ್ಳಿಗಳಿಂದ ಆನೆಯನ್ನು ಹೇಗೋಹಾಗೆ ವಜ್ರಸಮಾನಗಳಾದ ನನ್ನ ಬಾಣಗಳಿಂದ ರಾಮನನ್ನು ಸುಟ್ಟು ಓಡಿಸಿಬಿಡುವೆನು. ಮತ್ತು ಉದಿಸಿ ಬರುವ ಸೂರ್ಯನು ನಕ್ಷತ್ರಗಳ ಕಾಂತಿಯೆಲ್ಲವನ್ನೂ ಕಂದಿಸುವಂತೆ, ನಾನು ಸೇನಾಸಮೇತನಾಗಿ ನಿಂತು ಅವನ ವಾನರಸೇನೆಯೆಲ್ಲವನ್ನೂ ಧ್ವಂಸಮಾಡುವೆನು. ಸಾವಿರಕಣ್ಣುಳ್ಳ ದೇವೇಂದ್ರನಾಗಲಿ,ಜಲಾಧಿಪತಿಯಾದ ವರುಣನಾಗಲಿ ಯುದ್ಧದಲ್ಲಿ ನನ್ನನ್ನು ಜಯಿಸಲಾರರು. ಮೊದಲು ಈ ನನ್ನ ಬಾಹುಬಲದಿಂದಲೇ ನಾನು ಕುಬೇರನನ್ನು ಜಯಿಸಿ, ಅವನು ಪಾಲಿಸುತಿದ್ದ ಈ ಲಂಕೆಯನ್ನು ಕೈವಶಮಾಡಿಕೊಂಡಿರುವೆನಲ್ಲವೆ ? ಇನ್ನು ಮನುಷ್ಯಮಾತ್ರನಾದ ಆ ರಾಮನ ಪಾಡೇನು?" ಎಂದನು. ಇಲ್ಲಿಗೆ ಹದಿಮೂರನೆಯ ಸರ್ಗವು.

---

(ತಿರುಗಿ ವಿಭೀಷಣನು ರಾವಣನಿಗೆ ಹಿತವನ್ನು ಹೇಳಿದುದು.)

ರಾವಣನು ಹೇಳಿದ ಮಾತುಗಳನ್ನೂ,ಕುಂಭಕರ್ಣನ ಆರ್ಭಟಗಳನ್ನೂ ಕೇಳಿ ವಿಭೀಷಣನು,ತಿರುಗಿ ರಾಕ್ಷಸೇಂದ್ರನಾದ ರಾವಣನನ್ನು ಕುರಿತು, ಅರ್ಥಯುಕ್ತವಾಗಿಯೂ ಹಿತವಾಗಿಯೂ ಇರುವ ಮಾತಿನಿಂದ,"ಎಲೆರಾಜನೆ! ಸೀತೆಯನ್ನು ಬಿಡದಹಾಗೆಯೇ ರಾಮನನ್ನು ಜಯಿಸಬೇಕೆಂದೆಳಸುವೆಯಾ ? ಆ ಸೀತೆಯನ್ನು ಕೇವಲಸ್ತ್ರೀಮಾತ್ರಳೆಂದು ತಿಳಿಯಬೇಡ ? ನೋಡಿದಮಾತ್ರದಿಂದಲೇ ಕೊಲ್ಲುವ ಕಾಳಸರ್ಪವೆಂದು ತಿಳಿ! ವಿಸ್ತಾರವಾದ ಎದೆಯೆಂಬ ದೀರ್ಘದೇಹದಿಂದಲೂ, ಚಿಂತೆಯೆಂಬ ಮಹಾವಿಷದಿಂದಲೂ, ಮಂದಹಾಸವೆಂಬ ಹರಿತವಾದ ಕೋರೆದಾಡೆಗಳಿಂದಲೂ, ಬೆರಳುಗಳೆಂಬ ಐದು ಹೆಡೆ.

ಗಳಿಂದಲೂ ಭಯಂಕರವಾದ ಸೀತೆಯೆಂಬ ಆ ಮಹಾಸರ್ಪವನ್ನು ನೀನೇಕೆ ಮನೆಯಲ್ಲಿ ತಂದಿಟ್ಟಿರುವೆ?ಅಯ್ಯೋ!ಇದರಿಂದುಂಟಾಗುವ ಅನರ್ಥವು ನಿನ್ನೊಬ್ಬನಲ್ಲಿಯೇ ಹೋಗುವುದಿಲ್ಲ ! ಅಣ್ಣಾ ! ಬೇಡ! ಸೀತೆಯನ್ನು ರಾಮನಿಗೊಪ್ಪಿಸಿಬಿಡು ! ಪರ್ವತಶಿಖರದಂತೆ ಮಹಾದೇಹವುಳ್ಳವರಾಗಿಯೂ, ದಂತನಖಾಯುಧವುಳ್ಳವರಾಗಿಯೂ ಇರುವ ಕಪಿಗಳು ಬಂದು ಲಂಕೆಯನ್ನು ಮುತ್ತುವುದರೊಳಗಾಗಿ ಸೀತೆಯನ್ನು ರಾಮನಿಗೊಪ್ಪಿಸಿಬಿಡು ! ವಜ್ರಸಮಾನಗಳಾಗಿಯೂ, ವಾಯುವೇಗವುಳ್ಳವುಗಳಾಗಿಯೂ ಇರುವ ರಾಮಬಾಣಗಳು ಇಲ್ಲಿನ ರಾಕ್ಷಸಪ್ರಮುಖರ ತಲೆಗಳನ್ನು ಹಾರಿಸುವುದಕ್ಕೆ ಮೊದಲೇ ರಾಮನಿಗೆ ಸೀತೆಯನ್ನೊಪ್ಪಿಸಿಬಿಡು!" ಎಂದು ಹೇಳಿ, ಆಮೇಲೆ ಪ್ರಹಸ್ತನ ಕಡೆಗೆ ತಿರುಗಿ, "ಪ್ರಹಸ್ತಾ ! ಪ್ರಾಣಾಂತಕರಗಳಾಗಿಯೂ, ಸಿಡಿಲಿನಂತೆ ವೇಗವುಳ್ಳವುಗಳಾಗಿಯೂ ಇರುವ ರಾಮಬಾಣಗಳು ಇನ್ನೂ ನಿನ್ನ ದೇಹದಲ್ಲಿ ನಾಟಲಿಲ್ಲ. ಆದರಿಂದಲೇ ನೀನು ಹೀಗೆ ಹರಟುವಂತಿವೆ ! ಈ ಇಂದ್ರಜಿತ್ಕುಂಭಕರ್ಣರಾಗಲಿ, ಈ ಮಹಾಪಾರ್ಶ್ವಮಹೋದರರಾಗಲಿ, ಈ ಕುಂಭನಿಕುಂಭರಾಗಲಿ, ಈ ಅತಿಕಾಯನಾಗಲಿ, ರಾಮನಮುಂದೆ ಯುದ್ಧದಲ್ಲಿ ನಿಲ್ಲುವುದಕ್ಕೂ ಶಕ್ತರಲ್ಲ. ಇನ್ನು ಜಯದಾಸೆಯೇಕೆ? ಪ್ರಹಸ್ತಾ ! ನಮ್ಮಲ್ಲಿ ಮಹಾಶೂರರೆನಿಸಿಕೊಂಡ ಅವರ ಗತಿಯೇ ಹಾಗಿರುವಾಗ, ನಿನ್ನ ಪಾಡನ್ನು ಕೇಳಬೇಕೆ? ನೀನು ಸೂರ್ಯನ ರಕ್ಷಣೆಯಲ್ಲಿದ್ದರೂ, ದೇವತೆಗಳೆಲ್ಲರೂ ನಿನ್ನನ್ನು ರಕ್ಷಿಸಬೇಕೆಂದು ಬಂದರೂ, ನೀನು ಹೋಗಿ ದೇವೇಂದ್ರನ ತೊಡೆಯಲ್ಲಿಯೇ ಬಿದ್ದರೂ, ಪಾತಾಳಕ್ಕೆ ಪ್ರವೇಶಿಸಿದರೂ ರಾಮನಿಂದ ತಪ್ಪಿಸಿಕೊಂಡು ಬದುಕಿ ಹೋಗಲಾರೆ ! ಇದು ನಿಜವು !" ಎಂದನು. ಇದನ್ನು ಕೇಳಿ ಪ್ರಹಸ್ತನು ವಿಭೀಷಣನನ್ನು ಕುರಿತು, "ವಿಭೀಷಣಾ ! ನಮಗೆ ಭಯವೆಂದರೇನು ? ದೇವತೆಗಳಿಂದಾಗಲಿ, ದಾನವರಿಂದಾಗಲಿ, ಬೇರೆ ಯಾರೊಬ್ಬರಿಂದಾಗಲಿ ನಮಗೆ ಎಲ್ಲಿಯೂ ಭಯವೆಂಬುದೇ ಇಲ್ಲ! ನಾಗ ಗಂಧರ್ವ ಯಕ್ಷರಿಗಾಗಲಿ, ಪನ್ನಗರಿಗಾಗಲಿ, ಯುದ್ಧದಲ್ಲಿ ನಾವು ಹೆದರುವವರಲ್ಲ! ಹೀಗಿರುವಾಗ ಕೇವಲಕ್ಷತ್ರಿಯಕುಮಾರನಾದ ಆ ರಾಮನಿಂದ ನಮಗೆ ಯುದ್ಧದಲ್ಲಿ ಭಯವೆಂಬುದೇನು ?" ಎಂದನು. ವಿಭೀಷಣನಾದರೋ ಬಹಳ ಬುದ್ಧಿ

ವಂತನು! ತನ್ನ ಪ್ರಭುವಾದ ರಾವಣನಿಗೆ ಯಾವಾಗಲೂ ಹಿತವನ್ನೇ ಕೋ
ರತಕ್ಕವನು! ಧರ್ಮಾರ್ಥಕಾಮಗಳಲ್ಲಿ ನಿಶ್ಚಿತವಾದ ಬುದ್ಧಿಯುಳ್ಳವನು! ಇಂ
ತಹ ಮಹಾತ್ಮನಾದ ವಿಭೀಷಣನು, ಪ್ರಹಸ್ತನು ಹೇಳಿದ ಈ ದುರ್ವಾಕ್ಯ
ವನ್ನು ಕೇಳಿ ತಿರುಗಿ ಅವನನ್ನು ಕುರಿತು" ಪ್ರಹಸ್ತಾ! ಈಗ ನೀನೂ, ನಮ್ಮ
ರಾಜನೂ, ಈ ಮಹೋದರನೂ, ಈ ಕುಂಭಕರ್ಣನೂ,ರಾಮನ ವಿಷಯವಾ
ಗಿ ಯಾವಯಾವ ಕಾರ್ಯಗಳನ್ನು, ಯಾವಯಾವ ಕ್ರಮದಲ್ಲಿ ನಡೆಸಬೇಕೆಂ
ದು ಹೇಳಿದಿರೋ ಅವೆಲ್ಲವೂ ಕೇವಲನಿರರ್ಥಕಗಳು! ಅಧರ್ಮಶೀಲನಿಗೆ ಸ್ವರ್ಗ
ವು ಹೇಗೋ ಹಾಗೆ ರಾಮನ ವಿಷಯದಲ್ಲಿ ನಿಮ್ಮ ಈ ಪ್ರಯತ್ನವೊಂದೂ
ಸಾಗದು! ಪ್ರಹಸ್ತಾ! ದೋಣಿಯಾದರೂ ಇಲ್ಲದೆ ಸಮುದ್ರವನ್ನು ದಾ
ಟಬೇಕೆಂದರೆ ಸಾಧ್ಯವೆ? ಕಾರ್ಯದಕ್ಷನಾದ ರಾಮನನ್ನು ಕೊಲ್ಲುವುದಕ್ಕೆ ನ
ನ್ನಿಂದಾಗಲಿ, ನಿನ್ನಿಂದಾಗಲಿ, ಇಲ್ಲಿನ ಸಮಸ್ತರಾಕ್ಷಸರಿಂದಾಗಲಿ ಸಾಧ್ಯವಲ್ಲ.
ಆ ರಾಮನೋ ಧರ್ಮವೊಂದರಲ್ಲಿಯೇ ನಿರತನಾದವನು. ಮಹಾರಥನು! ಲೋ
ಕೈಕವೀರರೆನಿಸಿಕೊಂಡ ಇಕ್ಷ್ವಾಕುರಾಜರ ಕುಲದಲ್ಲಿ ಹುಟ್ಟಿದವನು. ಸಮ
ಸ್ತಪ್ರಜೆಗಳನ್ನೂ ತನ್ನ ಗುಣಗಳಿಂದ ರಂಜಿಸುವವನು. ಅಂತಹ ಖರದೂಷ
ಣಾದಿಗಳನ್ನೂ ಕೊಂದ ಮಹಾಪ್ರಸಿದ್ಧಿಯುಳ್ಳವನು! ಕಾರ್ಯಸಮರ್ಥನು!
ಅವನ ರಣಕಾರ್ಯಗಳನ್ನು ತಿಳಿದುಕೊಳ್ಳುವುದಕ್ಕಾಗಲಿ ದೇವತೆಗಳಿಗಾದರೂ
ಶಕ್ತಿಯಿಲ್ಲ! ಪ್ರಹಸ್ತಾ! ಆ ರಾಮನ ಬಾಣಗಳನ್ನು ನೀನೇನೆಂದು ಬಲ್ಲೆ!
ಬಹಳ ತೀಕ್ಷ್ಣಗಳಾದ ಮೊನೆಗಳಿಂದಲೂ, ಬಗ್ಗಿದ ಗಿಣ್ಣುಗಳಿಂದಲೂ, ಮೇ
ಲಾದ ಪಕ್ಕದ ಗರಿಗಳಿಂದಲೂ, ಕೂಡಿದ ಆ ರಾಮಬಾಣಗಳನ್ನು ತಡೆಯುವು
ದಕ್ಕೂ ಯಾರಿಗೂ ಸಾಧ್ಯವಲ್ಲ. ಅಂತಹ ಬಾಣಗಳು ಇದುವರೆಗೆ ನಿನ್ನ
ದೇಹಕ್ಕೆ ನಾಟದಿದ್ದುದರಿಂದಲೇ ಹೀಗೆ ನೀನು ಆತ್ಮಸ್ತುತಿಯನ್ನು ಮಾ
ಡುತ್ತಿರುವೆ? ಇಂದ್ರಸಮಾನನಾದ ಆ ದಶರಥಪುತ್ರನಮುಂದೆ ಯುದ್ಧ
ಕ್ಕೆ ನಿಲ್ಲಬೇಕೆಂದರೆ, ಈ ರಾವಣನಾಗಲಿ, ಬಲಾಢ್ಯನೆನಿಸಿದ ಈ ತ್ರಿಶೀರ್ಷ
ನಾಗಲಿ, ಈ ಕುಂಭಕರ್ಣನಾಗಲಿ, ಇವನ ಮಗನಾದ ನಿಕುಂಭನಾಗಲಿ,
ಇಂದ್ರಜಿತ್ತಾಗಲಿ, ನೀನಾಗಲಿ ಶಕ್ತರಲ್ಲ! ಮತ್ತು ಈ ದೇವಾಂತಕನರಾಂತ
ರಾಗಲಿ, ಅತಿರಥನೆನಿಸಿಕೊಂಡ ಮಹಾದೇಹವುಳ್ಳ ಈ ಅತಿಕಾಯನಾಗಲಿ,

ಪರ್ವತಸಮಾನಬಲವುಳ್ಳ ಈ ಅಕಂಪನನಾಗಲಿ, ರಾಮನ ಮುಂದೆ ಯುದ್ಧ
ಕ್ಕೆ ನಿಲ್ಲಲಾರರು. ನಮ್ಮ ಪ್ರಭುವಾದ ಈ ರಾವಣನಾದರೋ ಸಹಜವಾ
ಗಿಯೇ ತೀಕ್ಷ್ಣಸ್ವಭಾವವುಳ್ಳವನು. ಹಿಂದುಮುಂದಾಲೋಚನೆಯಿಲ್ಲದೆ ಕೆಲ
ಸಗಳನ್ನು ನಡೆಸತಕ್ಕವನು. ಮೊದಲೇ ಕಾಮತಾಪದಿಂದ ಪೀಡಿತನಾದವ
ನು. ಇಂತಹ ಸ್ಥಿತಿಯಲ್ಲಿಯೂ ನೀವು ಆತನಿಗೆ ಹಿತವನ್ನು ಹೇಳದೆ, ಹೆಸರಿಗೆ
ಮಾತ್ರ ಮಿತ್ರರೆನಿಸಿಕೊಂಡು, ಕೇವಲಶತ್ರುಪ್ರಾಯರಾಗಿ, ಆವನು ಹೋದ
ದಾರಿಯಲ್ಲಿಯೇ ಹೋಗುತ್ತಿರುವಿರಲ್ಲಾ ! ಇದು ಸಮಸ್ತರಾಕ್ಷಸರ ವಿನಾ
ಶಕ್ಕೇ ಹೊರತು ಬೇರೆಯಲ್ಲ. ಎಲೈ ಅಮಾತ್ಯರೆ ! ಈಗ ನಮ್ಮ ಪ್ರಭುವಾ
ದ ರಾವಣನಿಗೆ, ಕೊನೆಮೊದಲಿಲ್ಲದ ಭೋಗದಾಸೆಯೆಂಬ ದೊಡ್ಡದೇಹದಿಂದ
ಲೂ, ಅಕೃತ್ಯಗಳೆಂಬ ಸಹಸ್ರಫಣೆಗಳಿಂದಲೂಕೂಡಿ, ಭಯಂಕರವಾಗಿಯೂ,
ಮಹಾಬಲಾಢ್ಯವಾಗಿಯೂ ಇರುವ ರಾಮದ್ವೇಷವೆಂಬ ದೊಡ್ಡ ಸರ್ಪವು ಬ
ಲವಾಗಿ ಕೊರಲಿಗೆ ಸುತ್ತಿಕೊಂಡಿರುವುದು. ನೀವು ಮೊದಲು ಆ ಸರ್ಪವ
ನ್ನು ಬಿಡಿಸಿ ಇವನನ್ನು ಅಪಾಯದಿಂದ ತಪ್ಪಿಸುವ ಪ್ರಯತ್ನವನ್ನು ಮಾಡಿ
ರಿ! ಎಲೆ ಮಂತ್ರಿಗಳೆ ! ನೀವೆಲ್ಲರೂ ರಾಜನಿಗೆ ಮಿತ್ರರೆನಿಸಿಕೊಂಡಿರುವಿರಿ ?
ಅವನಿಂದ ಬೇಕುಬೇಕಾದ ಕೋರಿಕೆಗಳನ್ನೂ ಪಡೆದಿರುವಿರಿ ! ಆ ಕೃತಜ್ಞತೆ
ಯನ್ನಾದರೂ ಭಾವಿಸಿ ನೀವೆಲ್ಲರೂ ಐಕಮತ್ಯದಿಂದ ಈತನಿಗೆ ಹಿತವನ್ನು
ಬೋಧಿಸಬೇಡವೆ ? ಭೂತಗ್ರಸ್ತರಾದವರ ತಲೆಕೂದಲನ್ನು ಕಿಳಿಸಿ ಪಿಶಾಚ
ಗಳನ್ನು ಬಿಡಿಸುವಂತೆ, ನೀವೆಲ್ಲರೂ ಸೇರಿ ಬಲಾತ್ಕಾರದಿಂದ ಈತನ ತಲೆ
ಕೂದಲನ್ನು ಹಿಡಿದೆಳೆದಾದರೂ ಆತನನ್ನು ಅಕೃತ್ಯಗಳಿಂದ ತಪ್ಪಿಸಬೇಕು.
ಎಲೈ ರಾಕ್ಷಸರೆ ! ಇದೋ! ಈಗ ನಿಮ್ಮ ಪ್ರಭುವಾದ ರಾವಣನು ಲಕ್ಷ್ಮಣ
ನೆಂಬ ಮಹಾಸಾಗರದಲ್ಲಿ ಕಣ್ಣಿಗೆ ಕಾಣದೆ ಮುಳುಗಿಹೋಗುತ್ತಿರುವನು!
ರಾಮನೆಂಬ ಬಾಡಬಾಗ್ನಿಯ ಬಾಯಿಗೆ ತುತ್ತಾಗುತ್ತಿರುವನು. ಆದುದರಿಂದ
ನೀವೆಲ್ಲರೂ ಈ ಸಮಯದಲ್ಲಿ ಒಂದಾಗಿ ಸೇರಿ, ಆತನಿಗೆ ಕೈಗೊಟ್ಟು ಮೇಲ
ಕ್ಕೆತ್ತಿ ಉದ್ಧರಿಸಬೇಕು. ಎಲೆ ರಾಕ್ಷಸರೆ ! ನನ್ನ ಮುಖ್ಯವಾದ ಅಭಿಪ್ರಾಯ
ವನ್ನು ಹೇಳುವೆನು ಕೇಳಿರಿ! ಇದರಿಂದ ಈ ನಮ್ಮ ಲಂಕೆಗೂ ಮುಂದೆ ಕ್ಷೇ
ಮವುಂಟು. ಇಲ್ಲಿನ ರಾಕ್ಷಸರಿಗೂ ಸೌಖ್ಯವುಂಟು ! ನಮ್ಮ ಪ್ರಭುವಾದ

ರಾವಣನಿಗೂ ಕ್ಷೇಮವುಂಟು ! ಅವನ ಮಿತ್ರರಾದ ನಿಮಗೂ ಮೇಲ್ಮೆ ಯುಂಟು. ನಮ್ಮ ರಾಜನು ತಾನಾಗಿ ಸೀತೆಯನ್ನು ರಾಮನಿಗೆ ಕೊಡದಿದ್ದ ರೂ, ನಾವೇ ಸ್ವತಂತ್ರಿಸಿಯಾದರೂ ಸೀತೆಯನ್ನು ರಾಮನಿಗೆ ಕೊಟ್ಟುಬಿಡು ವೆವು. ಒಂದುವೇಳೆ ರಾಜನು ಹಠವಾದಿಯಾಗಿದ್ದರೂ ಮಂತ್ರಿಯಾದವನು ತಮ್ಮ ಮತ್ತು ತಮ್ಮ ಶತ್ರುಗಳ ಬಲಾಬಲವನ್ನ ತಿಳಿದು, ಉಭಯಪಕ್ಷಗಲ್ಲಿ ರುವ[1]ಕ್ಷಯಸ್ಥಾನವೃದ್ಧಿಗಳೆಂಬ ತ್ರಿವರ್ಗಗಳನ್ನೂ ಸೂಕ್ಷ್ಮದೃಷ್ಟಿಯಿಂದ ಪರ್ಯಾಲೋಚಿಸಿ,ಕಾಲೋಚಿತವಾಗಿಯೂ,ಸ್ವಾಮಿಗೆ ಹಿತವಾಗಿಯೂ ಇರುವ ಕಾರ್ಯವನ್ನು ಪದೇಶಿಸಬೇಕು!" ಎಂದನು. ಇಲ್ಲಿಗೆ ಹದಿನಾಲ್ಕನೆಯಸರ್ಗವು.

---

{ ಇಂದ್ರಜಿತ್ತು ವಿಭೀಷಣನ ಮತವನ್ನು ಖಂಡಿಸಿ ದುದು. ವಿಭೀಷಣನು ಇಂದ್ರಜಿತ್ತಿನ ದುರ್ಬು ದ್ಧಿಗಾಗಿ ಅವನನ್ನು ದೂಷಿಸಿದುದು. }

ಬೃಹಸ್ಪತಿಯಂತೆ ಮಹಾಬುದ್ಧಿಮಂತನಾದ ವಿಭೀಷಣನು ಹೇಳಿದ ಈ ಮಾತುಗಳೆಲ್ಲವನ್ನೂ, ಇಂದ್ರಜಿತ್ತು ಬಹಳ ಕಷ್ಟದಿಂದಲೇ ಕೇಳುತಿ ದ್ದು,ಕೊನೆಗೆ ಕೋಪವನ್ನು ತಡೆಯಲಾರದೆ ವಿಭೀಷಣನನ್ನು ಕುರಿತು "ತಾತಾ! ನೀನು ಕೊನೆಗೆ ಹೇಳಿದ ಈ ಮಾತು ಕೇವಲನಿರರ್ಥಕವಾದುದು! ನಿನ್ನ ಭಯಸ್ವಭಾವವನ್ನೂ ಚೆನ್ನಾಗಿ ತೋರಿಸುವುದು. ಛೀ ! ಯಾವ ಮಾ ತನ್ನಾಡಿದೆ! ನಮ್ಮ ರಾಕ್ಷಸಕುಲವಲ್ಲದೆ ಬೇರೆ ಕುಲದಲ್ಲಿ ಹುಟ್ಟಿದವನಾದ ರೂ ಹೀಗೆ ನುಡಿಯಲಾರನು! ಹೀಗೆ ನಡೆಯಲೂ ಆರನು! ಇನ್ನು ಪುಲಸ್ತ್ಯ

---

1 ಶತ್ರುಕ್ಷಯವನ್ನೂ, ಸ್ವವೃದ್ಧಿಯನ್ನೂ ನೋಡಿದಾಗ ಯಾನವನ್ನೂ, ಶತ್ರು ವೃದ್ಧಿಯನ್ನೂ ಸ್ವಕ್ಷಯವನ್ನೂ ನೋಡಿದಾಗ ಸಂಧಿಯನ್ನೂ, ಇಬ್ಬರೂ ಸಮಬಲವು ಳ್ಳವರಾಗಿದ್ದಾಗ ಆಸನವನ್ನೂ ನಡೆಸುವಂತೆ ಮಂತ್ರಿಗಳು ರಾಜನಿಗೆ ಪ್ರೇರಿಸಬೇಕೆಂ ಬುದು ರಾಜನೀತಿಯು. ಪ್ರಕೃತದಲ್ಲಿ ಹಿಂದೆ ರಾವಣನಿಗೆ ಲಂಕಾದಹನಾದ್ಯನೇಕಪರಾಭ ವಗಳೂ, ರಾಮನಿಗೆ ವಾನರಸೇನಾಸಂಪತ್ತಿಯೇ ಮೊದಲಾದ ವೃದ್ಧಿಯೂ ತೋರುತ್ತಿರು ವುದರಿಂದ,ಈಗ ರಾಮನಿಗೆ ಸೀತೆಯನ್ನೊಪ್ಪಿಸಿ ಸಂಧಿಮಾಡಿಕೊಳ್ಳುವುದೇ ಸಾಧುವೆಂಬು ನೀವು ನಿಮ್ಮ ಪ್ರಭುವಾದ ರಾವಣನಿಗೆ ತಿಳಿಸಬೇಕೆಂದು ಹೇಳಿದುದಾಗಿ ಭಾವವು.

ಕುಲದಲ್ಲಿ ಹುಟ್ಟಿದ ರಾಕ್ಷಸನಾದ ನಿನಗೆ ಈಮಾತುಯೋಗ್ಯವೇ" ಎಂದು ಹೇಳಿ, ರಾವಣನ ಕಡೆಗೆ ತಿರುಗಿ, ‘‘ಅಪ್ಪಾ ! ನಮ್ಮ ರಾಕ್ಷಸಕುಲದಲ್ಲಿ ನಿನ್ನ ತಮ್ಮನಾದ ಈ ವಿಭೀಷಣನೊಬ್ಬನೇ ಬಲದಲ್ಲಿಯೂ, ವೀರ್ಯದಲ್ಲಿಯೂ, ಪ ರಾಕ್ರಮದಲ್ಲಿಯೂ, ಶೌರ್ಯದಲ್ಲಿಯೂ, ಧೈರ್ಯದಲ್ಲಿಯೂ, ತೇಜಸ್ಸಿನಲ್ಲಿಯೂ ಕೇವಲಹೀನನೆಂಬು ತೋರುವುದು"ಎಂದನು. ಆಮೇಲೆ ತಿರುಗಿ ವಿಭೀಷಣನ ನ್ನು ಕುರಿತು, ‘‘ಎಲೆ ಹೇಡೀ ! ನೀನುಮಾತ್ರವೇ ಭಯಪಡುವುದಲ್ಲದೆ ನಮ್ಮ ನ್ನೂ ಹೆದರಿಸುವೆಯಾ! ಕೇವಲದುರ್ಬಲರಾದ ಆ ರಾಜಕುಮಾರರನ್ನು ಕೊ ಲ್ಲುವುದಕ್ಕೆ ನಮ್ಮಲ್ಲಿ ಕೆಲಸಕ್ಕೆಬಾರದ ಯಾವನಾದರೂ ಒಬ್ಬ ರಾಕ್ಷಸನೇ ಸಾಕು! ಇಂದ್ರನೆಂತವನೆಂಬುದನ್ನು ನೀನು ಕಾಣೆಯಾ ? ಮೂರುಲೋಕ ಕ್ಕೂ ನಾಥನು. ದೇವತೆಗಳಿಗೆ ಪ್ರಭುವು. ಆತನ ಸೇನಾಸಾಮಗ್ರಿಯಾದರೂ ಕೇವಲವಾದುದಲ್ಲ. ಅಂತಹ ದೇವೇಂದ್ರನನ್ನೇ ನಾನು ನೆಲಕ್ಕೆ ಕಡಹಿದವನ ಲ್ಲವೆ ?ಆವನ ಕಡೆಯ ದೇವತೆಗಳೆಲ್ಲರೂ ನನ್ನಿಂದ ಭೀತರಾಗಿ ದಿಕ್ಕುದಿಕ್ಕಿಗೆ ಪ ಲಾಯನಮಾಡಲಿಲ್ಲವೆ? ಐರಾವತವೆಂಬ ದಿಗ್ಗಜವೂಕೂಡ ನನ್ನ ಪ್ರಹಾರಕ್ಕೆ ತಡೆಯಲಾರದೆ, ವಿಕೃತಸ್ವರದಿಂದರಚುತ್ತ ಕೆಳಗೆ ಬಿಳಲು, ಅದರ ದಂತಗಳ ನ್ನೇ ನಾನು ಕೈಯಿಂದ ಕಿತ್ತು,ಅವುಗಳಿಂದಲೇ ಸಮಸ್ತದೇವತೆಗಳನ್ನೂ ಹೆದ ರಿಓಡಿಸಿರುವೆನು.ಹೀಗೆ ನಾನು ದೇವತೆಗಳ ಕೆಚ್ಚನ್ನೂ ಮುರಿದು, ದೈತ್ಯ ರನ್ನೆಲ್ಲಾ ಗೋಳಾಡಿಸಿರುವೆನು. ಹೀಗಿರುವಾಗ ಕೇವಲಪ್ರಾಕೃತಮನುಷ್ಯ ರಾದ ಆ ರಾಜಕುಮಾರರನ್ನು ಜಯಿಸಲಾರೆನೆ ? ನನ್ನ ಮಹಾವೀರ್ಯಕ್ಕೆ ಅ ದೊಂದು ದೊಡ್ಡಕಾರ್ಯವೆ?" ಎಂದನು. ಇಂದ್ರನಿಗೆಣೆಯಾದ ಇಂದ್ರಜಿ ತ್ತು ಹೀಗೆಂದು ಹೇಳಿದ ಅಹಂಕಾರದ ಮಾತನ್ನು ಕೇಳಿ, ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ವಿಭೀಷಣನು, ಸಾರವತ್ತಾದ ಮಾತಿನಿಂದ ಆ ಇಂದ್ರಜಿತ್ತನ್ನು ಕುರಿತು ‘‘ಎಲೆ ವತ್ಸನೆ ! ಇನ್ನೂ ನೀನು ಬಾಲನು! ಯಾವ ವಿಷಯಗಳಲ್ಲಿ ಯೂ ಚೆನ್ನಾಗಿ ಅನುಭವವಿಲ್ಲದ ನಿನ್ನ ಬುದ್ಧಿಯು ಇನ್ನೂ ಪರಿಪಕ್ವವಾಗಿ ಲ್ಲ. ಯಾವ ವಿಷಯವನ್ನಾದರೂ ಬುದ್ಧಿಯಿಂದಾಲೋಚಿಸಿ ನಿಶ್ಚಯಿಸು ವ ಶಕ್ತಿಯೂ ನಿನಗಿಲ್ಲ! ಈ ಕಾರಣಗಳಿಂದಲೇ ನಿನ್ನ ಕೇಡನ್ನೂ ನೀನು ವಿ ಚಾರಿಸದೆ ಈ ನಿರರ್ಥಕವಾಕ್ಯಗಳನ್ನು ಪ್ರಲಪಿಸುತ್ತಿರುವೆ ? ಬಾಯಿಗೆ ಬಂ

ದಹಾಗೆ ನುಡಿಯುವಂತಿದೆ! ನಿನ್ನ ಹೆತ್ತತಂದೆಯಾದ ಈ ರಾವಣನಿಗೆ, ಮುಂದೆ ರಾಮನಿಂದ ಬರಬಹುದಾದ ವಿನಾಶವನ್ನು ನನ್ನ ಬಾಯಿಂದ ಸ್ಪಷ್ಟವಾಗಿ ಕೇಳಿಯೂ,ಅಜ್ಞಾನದಿಂದ ನೀನು ಅದನ್ನು ತಿಳಿದುಕೊಳ್ಳದೆ ದುರ್ಮಾರ್ಗಕ್ಕೇ ಅನುಮೋದಿಸುತ್ತಿರುವೆಯಲ್ಲಾ! ಛೀ! ನೀನು ಪುತ್ರನೆಂಬ ಹೆಸರಿಟ್ಟುಕೊಂಡು ಮಿತ್ರನಂತೆ ನಟಿಸುವ ಶತ್ರುವೇಹೊರತು ನಿಜವಾಗಿ ರಾವಣನಿಗೆ ಮಗನಲ್ಲ! ಹೀಗೆ ತಂದೆಯ ವಿನಾಶಕ್ಕಾಗಿ ಪ್ರಯತ್ನಿಸಿರುವ ಈ ನಿನ್ನ ದುರ್ಬುದ್ಧಿಗಾಗಿ ನಿನ್ನನ್ನುಮಾತ್ರವೇ ಶಿಕ್ಷಿಸಿ ಫಲವಿಲ್ಲ. ಏನೂ ತಿಳಿಯದ ಹುಡುಗನಾಗಿಯೂ, ಹಟವಾದಿಯಾಗಿಯೂ, ಹಿಂದುಮುಂದು ನೋಡದೆ ಸಾಹಸಕಾರ್ಯಗಳಿಗೆ ತಲೆಯಿಕ್ಕುವ ಆತುರಸ್ವಭಾವವುಳ್ಳವನಾಗಿಯೂ ಇರುವ ನಿನ್ನನ್ನು ಕರೆತಂದು, ಈ ಮಂತ್ರಾಲೋಚನೆಯ ಸಭೆಯಲ್ಲಿ ಸೇರಿಸಿದವರಾರೋ ಅವರನ್ನೇ ಮೊದಲು ವಧಿಸಬೇಕು! ನೀನೋ ಏನೂ ತಿಳಿಯದ ಮೂಢನು! ತಾನೇ ಸರ್ವಜ್ಞನೆಂಬ ಗರ್ವವುಮಾತ್ರ ನಿನ್ನಲ್ಲಿ ಪೂರ್ಣವಾಗಿರುವುದು. ನಿನ್ನಲ್ಲಿ ಸ್ವಲ್ಪವಾದರೂ ವಿನಯವೆಂಬುದೇ ಇಲ್ಲ. ಕ್ರೂರಸ್ವಭಾವವುಳ್ಳವನು! ಅಲ್ಪಬುದ್ಧಿಯುಳ್ಳವನು! ದುರಾತ್ಮನು! ಮೂರ್ಖನು! ಮಹಾದುರ್ಬುದ್ಧಿಯುಳ್ಳವನು! ಹುಡುಗುತನದಿಂದಲೇ ಈ ಮಾತುಗಳನ್ನಾಡುತ್ತಿರುವೆ! ಬ್ರಹ್ಮದಂಡದಂತೆ ದೇದೀಪ್ಯಮಾನಗಳಾಗಿಯೂ, ಮೃತ್ಯುವಿನಂತೆ ಭಯಂಕರಗಳಾಗಿಯೂ,ಯಮದಂಡಕ್ಕೆ ಸಮಾನಗಳಾಗಿಯೂ ಇರುವ ರಾಮನ ಬಾಣಗಳನ್ನು ಯುದ್ಧದಲ್ಲಿ ತಡೆದು ನಿಲ್ಲುವನಾವನು?" ಎಂದು ಹೇಳಿ, ರಾವಣನ ಕಡೆಗೆ ತಿರುಗಿ"ಎಲೆರಾಜನೆ ಈಗಲೂ! ನನ್ನ ಹಿತವಾದವನ್ನು ಕೇಳು! ನಮ್ಮಲ್ಲಿರುವ ಧನಗಳನ್ನೂ, ಉತ್ತಮವಸ್ತುಗಳನ್ನೂ, ಆಭರಣಗಳನ್ನೂ, ದಿವ್ಯವಸ್ತ್ರಗಳನ್ನೂ, ವಿಚಿತ್ರರತ್ನಗಳನ್ನೂ, ಸೀತಾದೇವಿಯ ಸಹಿತವಾಗಿ ಈಗಲೇ ರಾಮನಿಗೊಪ್ಪಿಸಿ ಬಾ! ಆಮೇಲೆ ನಿರ್ಭಯವಾಗಿ ಇಲ್ಲಿ ನಾವು ಸುಖದಿಂದಿರಬಹುದು." ಎಂದನು. ಇಲ್ಲಿಗೆ ಹದಿನೈದನೆಯ ಸರ್ಗವು.

---

{ ರಾವಣನು ವಿಭೀಷಣನನ್ನವಮಾನಿಸಲು, ಅವನು ತನ್ನ ನಾಲ್ಕುಮಂತ್ರಿಗಳೊಡನೆ ಆಕಾಶಕ್ಕೆ ಹಾರಿ, ಆಗಲೂ ಮತ್ತೊಮ್ಮೆ ರಾವಣನಿಗೆ ಬುದ್ಧಿವಾದವನ್ನು ಹೇಳಿದುದು. }

[1] ಹೀಗೆ ವಿಭೀಷಣನು ರಾವಣನ ಮನಸ್ಸಿಗೆ ಚೆನ್ನಾಗಿ ಹಿಡಿಯುವಂತೆ ಹಿತವಾಕ್ಯಗಳನ್ನು ಹೇಳಿದರೂ, ಮೃತ್ಯುವಶನಾದ ರಾವಣನು ಅವುಗಳೊಂದನ್ನೂ ಗಮನಿಸದೆ, ಅವನ ಮಾತಿಗೆ ಇನ್ನೂ ಕೋಪಗೊಂಡು,ಪರುಷವಾ

---

1 ಇಲ್ಲಿ "ಸುನಿವಿಷ್ಟಂ ಹಿತಂ ವಾಕ್ಯಮುಕ್ತವಂತಂ ವಿಭೀಷಣಂ । ಅಬ್ರವೀತ್ಪರುಷಂ ವಾಕ್ಯಂ ರಾವಣಃ ಕಾಲಚೋದಿತಃ॥" ಎಂದು ಮೂಲವು. ವಿಶೇಷಾರ್ಥವು:—(ಸುನಿವಿಷ್ಟಂ) ಕೇಳುತ್ತಿರುವಾಗಲೇ ಅರ್ಥಸ್ಫೂರ್ತಿಯಾಗದಿದ್ದರೂ ಅತಿಪ್ರೀತಿಕರವಾಗುವಂತೆ ಅಂದವಾದ ಸನ್ನಿವೇಶವುಳ್ಳುದು,ಎಂದರೆ ಅರ್ಥವು ಅವಿಷ್ಟವಾಗಿ ತೋರದರೂ ಕಿವಿಯಿಂದ ಕೇಳುವುದಕ್ಕೆ ಇಂಪಾದ ಮಾತೆಂದು ಭಾವವು (ಹಿತಂ)ಕಿವಿಗಿಂಪಾದುದು ಮಾತ್ರವೇ ಅಲ್ಲ! ಪಥ್ಯವಾಗಿಯೂ ಇರುವುದು. (ವಾಕ್ಯಂ) ಪರಿಪೂರ್ಣಾರ್ಥವನ್ನು ಕೊಡುವುದೇ ವಾಕ್ಯವೆನಿಸುವುದರಿಂದ, ಹೇಳಬೇಕಾದ ಹಿತೋಪದೇಶವೆಲ್ಲವೂ ಇದರಲ್ಲಿ ಪೂರ್ಣವಾಗಿ ತುಂಬಿರುವುದೆಂದು ಭಾವವು. ಇಂತಹ ವಾಕ್ಯವನ್ನು(ಉಕ್ತವಂತಂ) ಹೇಳಿದವನನ್ನು, "ನಾಸಂವತ್ಸರವಾಸಿನೇ ಬ್ರೂಯಾತ್" ಎಂಬಂತೆ, ಆಚಾರ್ಯನು, ತನ್ನಲ್ಲಿಗೆ ಹೋಗಿ ಪಾದಗಳಲ್ಲಿ ಬಿದ್ದವನಿಗೆ ಮಾತ್ರವೇ ಹೇಳಬೇಕಾದ ನೀತಿಯನ್ನೂ ಕೂಡ ಈ ರಾವಣನ ದುರ್ಗತಿಯನ್ನು ನೋಡಿ ಸಹಿಸಲಾರದೆ ತಾನೇ ಮರುಕದಿಂದ ಬಂದು ಹೇಳಿದವನನ್ನು (ವಿಭೀಷಣಂ) ಬೇರೆಯಾವನಾದರೂ ದೂರಸ್ಥನೊಬ್ಬನು ಈ ಮಾತನ್ನು ಹೇಳಿದ್ದಪಕ್ಷದಲ್ಲಿಯಾದರೂ, ಒಂದುವೇಳೆ ಅದು ಆಪ್ತವೋ ಅಲ್ಲವೋ ಎಂದು ಸಂದೇಹಿಸಿ ಬಿಟ್ಟುಬಿಡಬಹುದು. ಸಾಕ್ಷಾತ್ಸಹೋದರನಾದ ವಿಭೀಷಣನೇ ಬಂದುಹೇಳಿದಾಗ ಆ ಮಾತು ತನಗೆ ಗ್ರಾಹ್ಯವೆಂಬುದನ್ನು ಹೇಳಬೇಕಾದುದೇನು? ಹೀಗಿದ್ದರೂ,(ರಾವಣಃ) ಹಿಂಸಾಸ್ವಭಾವದಿಂದ ಸಮಸ್ತಲೋಕಗಳನ್ನೂ ಗೋಳಾಡಿಸತಕ್ಕ, ಅಥವಾ (ರಾತೀತಿ ರವಣಃ! ಸಏವ ರಾವಣಃ) ಯಾವಾಗಲೂ ಗೋಳಿಡುವ ಸ್ವಭಾವವುಳ್ಳವನು ಎಂದರೆ ಕೈಲಾಸವನ್ನು ಕದಲಿಸಿದುದು, ವಾಲಿಯೊಡನೆ ಹೋರಾಡಿದುದು, ಕಾರ್ತವೀರ್ಯನನ್ನು ಕೆಣಕಿದುದು;, ಇವೇ ಮೊದಲಾದ ಕುಚೇಷ್ಟೆಗಳಿಂದ ಸಾಗದ ಕಾರ್ಯಕ್ಕೆ ಕೈಹಾಕಿ,ಅದರಿಂದ ಭಂಗಹೊಂದಿ ಗೋಳಿಡುವ ಸ್ವಭಾವವುಳ್ಳವನು. ಇದರಿಂದ ತನಗಾಗಲಿ ಪರರಿಗಾಗಲಿ ಹಿತವನ್ನು ತಿಳಿಯದ ದುಸ್ಸ್ವಭಾವವುಳ್ಳವನೆಂದು ಭಾವವು. ಇಂ

ಕ್ಯದಿಂದ ಅವನನ್ನು ಕುರಿತು ‹‹ವಿಭೀಷಣಾ! ಸಾಕು ಸುಮ್ಮನಿರು! ನಿನ್ನ ಸಹವಾಸವೇ ನನಗೆ ಯುಕ್ತವಲ್ಲ! ಶತ್ರುವಿನೊಡನೆಯಾದರೂ ಇರಬಹುದು. ಕೋಪಗೊಂಡ ಕಾಳಸರ್ಪದೊಡನೆಯಾದರೂ ಸಹವಾಸಮಾಡಬಹುದು! ಶತ್ರುಪಕ್ಷವನ್ನು ವಹಿಸಿ ಮಿತ್ರನಂತೆ ನಟಿಸುವ ನಿನ್ನಂತವನೊಡನೆ ಮಾತ್ರ ಎಂದಿಗೂ ಸಹವಾಸಮಾಡಬಾರದು. ಎಲೆ ರಾಕ್ಷಸನೆ! ಲೋಕದಲ್ಲಿ ಜ್ಞಾತಿಗಳ ಸ್ವಭಾವವನ್ನು ನಾನು ಕಾಣೆನೆ? ತಮ್ಮಲ್ಲಿ ಪರಸ್ಪರವ್ಯಸನವನ್ನು ನೋಡಿ ಸಂತೋಷಪಡುವುದೇ ದಾಯಾದಿಗಳ ಸ್ವಭಾವವು. ನನಗೆ ದಾಯಾದನಾದ ನೀನೂ, ಹೀಗೆ ನನ್ನ ಸಂಕಟಕಾಲಗಳಲ್ಲಿ ಸಂತೋಷಪಡುವುದು, ಜ್ಞಾತಿಸ್ವಭಾವಕ್ಕೆ ತಕ್ಕಂತೆಯೇ ಇರುವುದು. ಜ್ಞಾತಿಗಳು ತಮ್ಮ ಕುಲದಲ್ಲಿ ಮುಖ್ಯನಾದವನನ್ನೂ, ಕಾರ್ಯಸಾಧಕನನ್ನೂ, ವಿದ್ಯೆಬಲ್ಲವನನ್ನೂ, ಧರ್ಮಶೀಲನನ್ನೂ, ಶೂರನಾದವನನ್ನೂ ಕಂಡರೆ ಅಸೂಯೆಯಿಂದ ತಿರಸ್ಕರಿಸುವರೇ ಹೊರತು ಗೌರವಿಸುವುದಿಲ್ಲ. ಇದಿರಿಗಿದ್ದಾಗ ಸಂತೋಷವನ್ನು ನಟಿಸುವರು. ವ್ಯಸನಕಾಲಗಳಲ್ಲಿ ಮತ್ತಷ್ಟು ದ್ರೋಹವನ್ನು ಮಾಡುವರು. ತ

---

ತಹ ರಾವಣನು (ಕಾಲಚೋದಿತಃ) ಕಾಲಪ್ರೇರಿತನಾಗಿ, ಎಂದರೆ, ತನ್ನನ್ನು ಬದುಕಿಸುವುದಕ್ಕಾಗಿ ಬಂದ ತಮ್ಮನ ಮಾತಿಗೆ ಕಿವಿಗೊಡದೆ, ಕೊಲ್ಲುವುದಕ್ಕಾಗಿ ಕಾದಿರುವ ಕಾಲಮೃತ್ಯುವಿನ ದಾರಿಯನ್ನೇ ಹಿಮ್ಮಿದವನಾಗಿ, (ಪರುಷಂವಾಕ್ಯಮಬ್ರವೀತ್) "ದ್ವಿಧಾ ಭಜ್ಯೇಯಮಪ್ಯೇವಂ ನ ನಮೇಯಂ ತು ಕಸ್ಯಚಿತ್" ಎಂದು ರಾಮನ ಬಾಣಕ್ಕೆ ಸಿಕ್ಕಿಸಾಯುವ ಸ್ಥಿತಿಯಲ್ಲಿರುವಾಗಲೂ "ತಾನು ಎರಡುಭಾಗವಾಗಿ ಸೀಳಿಬಿದ್ದರೂ ಬೀಳುವೆನೇ ಹೊರತು ರಾಮನಕಡೆಗೆಮಾತ್ರ ತಲೆಬಗ್ಗಿಸುವವನಲ್ಲವೆಂದು ಹೇಳಿದ ಪರಮಮೂರ್ಖಸ್ವಭಾವಕ್ಕೆ ತಕ್ಕಂತೆ ಕ್ರೂರವಾಕ್ಯವನ್ನಾಡಿದನು. ವಿಭೀಷಣನು ಹೇಳಿದ ಸರ್ವೋತ್ತಮವಾದ ಬುದ್ಧಿವಾದವನ್ನು ಕೇಳಿದೊಡನೆ "ಈಗ ನನ್ನ ಸಂದೇಹವು ತೀರಿತು" ಎಂದು ಅದನ್ನಭಿನಂದಿಸಬೇಕು. ಹಾಗಿಲ್ಲವೇ "ನೀನು ನನಗೆ ಮಹೋಪಕಾರವನ್ನು ಮಾಡಿದೆ" ಎಂದು ಹೇಳಿ ಅತನನ್ನು ಸ್ತುತಿಸಿಯಾದರೂ ಸ್ತುತಿಸಬೇಕು! ಹಾಗೂ ಇಲ್ಲದಿದ್ದರೆ ಇಂತಹ ಹಿತವಾದವನ್ನು ಹೇಳಿದ ನಿನಗೆ ತಕ್ಕ ಪ್ರತ್ಯುಪಕಾರವನ್ನು ಮಾಡುವುದಕ್ಕೂ ಇಲ್ಲವಲ್ಲಾ" ಎಂದು ಅನುತಾಪವನ್ನಾದರೂ ತೋರಿಸಬೇಕು. ಇವೆಲ್ಲವನ್ನೂ ಬಿಟ್ಟು, ಶತ್ರುಗಳನ್ನು ಕಂಡಾಗ ಕೋಪದಿಂದ ನುಡಿಯುವ ಕ್ರೂರವಾಕ್ಯವನ್ನೇ ಹೇಳಲಾರಂಭಿಸಿದನೆಂದು ಭಾವವು- (ತನಿಶ್ಲೋಕಿ)

ಮ್ಮ ಜ್ಞಾತಿಗಳ ಸಂತೋಷವನ್ನು ನೋಡಿ ಅಸೂಯೆಪಡುವರು. ತಮ್ಮ ಮನೋಭಿಪ್ರಾಯಗಳನ್ನು ಹೊರಪಡಿಸದೆ ಗೂಢವಾಗಿಯೇ ಇಟ್ಟುಕೊಂಡಿರುವರು. ಇಂತಹ ಘೋರಕೃತ್ಯವುಳ್ಳ ಜ್ಞಾತಿಗಳಿಂದ ಎಂದಿಗೂ ಭಯವು ತಪ್ಪದು. ಹಿಂದೆ ಪದ್ಮವನವೆಂಬ ಒಂದು ಕಾಡಿನಲ್ಲಿ ಕೆಲವು ಕಾಡಾನೆಗಳು, ತಮ್ಮನ್ನು ಹಿಡಿಯುವುದಕ್ಕಾಗಿ ಪಾಶಗಳನ್ನು ಹಿಡಿದು, ತಾವು ಮೊದಲು ಸಾಕಿಟ್ಟ ಕೆಲವು ಆನೆಗಳನ್ನೂ ಸಂಗಡಕರೆದುಕೊಂಡು ತಮ್ಮ ಕಡೆಗೆ ಬರುತ್ತಿದ್ದ ಮನುಷ್ಯರನ್ನುಕುರಿತು ಕೆಲವುಶ್ಲೋಕಗಳನ್ನು ಹೇಳಿದುದಾಗಿ ಕೇಳಿರುವೆನು. ಆ ಶ್ಲೋಕಾರ್ಥಗಳನ್ನೂ ಹೇಳುವೆನು ಕೇಳು ! ಆ ಆನೆಗಳು ತಮ್ಮ ಗುಂಪಿಗೆ ಸೇರಿದ್ದ ಬೇರೆ ಆನೆಗಳನ್ನು ನೋಡಿ "ನಮಗೆ ಬೆಂಕಿಯಿದ್ದರೂ ಭಯವಿಲ್ಲ! ಬೇರೆ ಶಸ್ತ್ರಗಳಿಗೂ ನಾವು ಹೆದರಬೇಕಾದುದಿಲ್ಲ! ಭಯಂಕರಗಳಾದ ಈ ಪಾಶಗಳಿಂದಲೂ ನಮಗೆ ಅಂಜಿಕೆಯಿಲ್ಲ! ಅದೋ ನೋಡಿರಿ ! ಕರುಣೆಯಿಲ್ಲದ ಕ್ರೂರಸ್ವಭಾವವುಳ್ಳವುಗಳಾಗಿ, ತಮ್ಮ ಪ್ರಯೋಜನದಲ್ಲಿಯೇ ದೃಷ್ಟಿಯಿಟ್ಟು, ಆ ಪುರುಷರಿಗೆ ಸಹಾಯವಾಗಿ ಬರುವ ನಮ್ಮ ಜ್ಞಾತಿಗಜಗಳಿಗಾಗಿಯೇ ನಾವು ಹೆದರಬೇಕಾಗಿದೆ. ನಮ್ಮ ಜಾತಿಯ ಈ ಆನೆಗಳೇ ಈ ಮನುಷ್ಯರಿಗೆ ನಮ್ಮನ್ನು ಹಿಡಿಯುವುದಕ್ಕೆ ಉಪಾಯವನ್ನು ಹೇಳಿಕೊಡುವಂತಿದೆ. ಇದರಲ್ಲಿ ಸಂದೇಹವಿಲ್ಲ. ಎಲ್ಲಾ ಭಯಗಳಿಂತಲೂ ಜ್ಞಾತಿಭಯವೇ ಹೆಚ್ಚು. ಇದು ನಿಮ್ಮೆಲ್ಲರಿಗೂ ತಿಳಿದೇ ಇರಬಹುದು. ಗೋವುಗಳಲ್ಲಿ ಭಾಗ್ಯಸಂಪತ್ತಿಯೂ, ಬ್ರಾಹ್ಮಣರಲ್ಲಿ ಇಂದ್ರಿಯನಿಗ್ರಹವೂ, ಹೆಂಗಸರಲ್ಲಿ ಚಪಲಸ್ವಭಾವವೂ, ಜ್ಞಾತಿಗಳಲ್ಲಿ ಭಯವೂ ಸಿದ್ಧವಾಗಿರುವುದು. ಅಪ್ಪ ವಿಭೀಷಣಾ ! ಸಾಕುಬಿಡು ! ನಿನ್ನ ಮನೋಭಾವವು ನನಗೆ ತಿಳಿಯಿತು ! ಲೋಕದಲ್ಲಿ ನನಗಿರುವ ಈ ಗೌರವವನ್ನೂ, ಈ ನನ್ನ ಮಹಾಭಾಗ್ಯವನ್ನೂ, ಶತ್ರುಗಳ ತಲೆಯನ್ನು ಮೆಟ್ಟಿದಂತಿರುವ ಈ ನನ್ನ ಮಹಾವೈಭವವನ್ನೂ ನೋಡಿ ನೀನು ಸಹಿಸಬಲ್ಲೆಯಾ ? ಇವೊಂದೂ ನಿನಗೆ ಇಷ್ಟವಿಲ್ಲ! ಹೇಗಾದರೂ ನನ್ನನ್ನು ಕೆಡಿಸಬೇಕೆಂಬುದೇ ನಿನ್ನ ಮನೋರಥವು. ವಿಭೀಷಣಾ ! ನೀನು ನನ್ನೊಡನೆ ಎಷ್ಟುದಿನವಿದ್ದರೇನು ? ತಾವರೆಯೆಲೆಗಳು ನೀರಿನಲ್ಲಿಯೇ ಹುಟ್ಟಿ ಬೆಳೆದರೂ, ಅವು ತಮ್ಮ

ಮೇಲೆ ಬಿದ್ದ ಜಲಬಿಂದುಗಳೊಡನೆ ಅಂಟುವುವೆ? ಅದರಂತೆಯೇ ದುಷ್ಟರೊ ಡನೆ ಎಷ್ಟುದಿನಗಳವರೆಗೆ ಸಹವಾಸಮಾಡಿದರೂ ಸ್ನೇಹವು ಹುಟ್ಟದು. ದುಂಬಿಯು ಹೂಗಳಲ್ಲಿರುವ ಮಕರಂದರಸವನ್ನು ಕುಡಿದಮೇಲೆ, ಕ್ಷಣ ಮಾತ್ರವೂ ಅಲ್ಲಿ ನಿಲ್ಲದೆ, ಆ ಹೂಗಳನ್ನು ಬಿಟ್ಟೊದರಿಹೋಗುವಂತೆ, ನೀನೂ ಇದುವರೆಗೆ ನನ್ನಿಂದ ಅನೇಕಭೋಗಗಳನ್ನನುಭವಿಸಿಯೂ, ನನ್ನಲ್ಲಿ ಕೃತಜ್ಞ ತೆಯಿಲ್ಲದೆ ನನಗೆ ಕೇಡನ್ನೇ ಕೋರುತ್ತಿರುವೆ. ದುಷ್ಟರ ಸ್ನೇಹವೇ ಈ ರೀತಿ ಯಾಗಿರುವುದು. ಕಾಡಾನೆಯು ಕೊಳದಲ್ಲಿ ಮುಳುಗಿ ಬಂದೊಡನೆ, ಸುಂಡಿ ಲಿಂದ ನೆಲದ ಮಣ್ಣನ್ನೆತ್ತಿ ತನ್ನ ಮೈಮೇಲೆ ಸುರಿದು, ಮೈಯನ್ನು ಕೊಳೆ ಮಾಡಿಕೊಳ್ಳುವಂತೆ, ದುಷ್ಟರ ಸ್ನೇಹದಿಂದ ತನ್ನನ್ನೇ ತಾನು ಕೆಡಿಸಿದಂತಾ ಗುವುದು. ಮೇಘಗಳು ಶರತ್ಕಾಲದಲ್ಲಿ ಅಟ್ಟಹಾಸದಿಂದ ಗರ್ಜಿಸಿ ಎಡೆಬಿಡದೆ ಮಳೆಯನ್ನು ಸುರಿಸಿದರೂ, ಆ ನೀರು ಭೂಮಿಗಂಟದಂತೆ ಎಂದಿದ್ದರೂ ದು ಷ್ಟರ ಸ್ನೇಹವು ಫಲಕಾರಿಯಲ್ಲ. ಛೀ! ಕುಲಗೇಡಿಯೆ! ನೀನು ನನಗೆ ಒಡ ಹುಟ್ಟಿದ ತಮ್ಮನಾದುದರಿಂದ ನಾನು ಸುಮ್ಮನಿರಬೇಕಾಗಿದೆ. ಈಗ ನೀನು ಹೇಳಿದ ಮಾತನ್ನೇ ಬೇರೊಬ್ಬನು ನನ್ನ ಮುಂದೆ ನುಡಿದಿದ್ದರೆ, ಇದುವರೆ ಗೂ ಅವನು ಬದುಕುತ್ತಿರಲಿಲ್ಲ. ಕುಲಗೇಡಿಯಾದ ನಿನ್ನ ಜನ್ಮವನ್ನು ಸುಡ ಬೇಕು!" ಎಂದನು. ಹೀಗೆ ರಾವಣನು ಪರುಷವಾಕ್ಯಗಳನ್ನಾಡಲು, ನ್ಯಾ ಯವಾದಿಯಾದ ವಿಭೀಷಣನು ಆ ಮಾತುಗಳನ್ನು ಕೇಳಿ ಸಹಿಸಲಾರದೆ, ತನ್ನ ನಾಲ್ವರು ರಾಕ್ಷಸಮಂತ್ರಿಗಳೊಡಗೂಡಿ, ಕೈಯಲ್ಲಿ ಹಿಡಿದ ಗದೆಯೊ ಡನೆ ಆಕಾಶಕ್ಕೆ ಹಾರಿಬಿಟ್ಟನು. ಸದ್ಗತಿಹೇತುವಾದ ರಾಮಾಶ್ರಯಣಪ್ರಯ ತ್ನವೆಂಬ ಭಾಗ್ಯಲಕ್ಷ್ಮೀವಿಶಿಷ್ಟನಾದ ವಿಭೀಷಣನು, ಹೀಗೆ ಕೋಪದಿಂದ ಮೇಲೆ ಹಾರಿ, ಅಂತರಿಕ್ಷದಲ್ಲಿದ್ದಂತೆಯೇ ತಿರುಗಿ ತನ್ನಣ್ಣನಾದ ರಾವಣನನ್ನು ಕುರಿತು, "ಎಲೆ ರಾಜನೆ! ಹೇಗಿದ್ದರೂ ನೀನು ನನಗೆ ಒಡಹುಟ್ಟಿದವನು. ನನ್ನನ್ನು ಹೇಗೆ ಬೇಕಾದರೂ ನಿಂದಿಸಬಹುದು! ನಿನ್ನ ಮಾತಿಗೆ ನಾನು ಇದಿ ರು ಮಾತಾಡಬಾರದು! ನೀನು ನನಗೆ ಅಣ್ಣನಾದುದರಿಂದ ತಂದೆಗೆ ಸಮಾ ನನು! ಪೂಜ್ಯನು! ಆದರೇನು? ನೀನು ಧರ್ಮಮಾರ್ಗವನ್ನು ಬಿಟ್ಟು ಹೋಗು ವುದಲ್ಲದೆ, ನನ್ನಮೇಲೆಯೂ ಇಲ್ಲದ ದೋಷವನ್ನು ಕಲ್ಪಿಸಿ ಕ್ರೂರವಾಕ್ಯವನ್ನು

ಹೇಳಿದೆಯಲ್ಲವೆ ? ಇದನ್ನು ಮಾತ್ರ ನಾನು ಸಹಿಸಲಾರೆನು. ಎಲೆ ರಾವಣಾ! ನಾನು ನಿನಗೆ ಮೇಲನ್ನು ಕೋರಿ, ಯುಕ್ತಾಯುಕ್ತವನ್ನು ನಿಶ್ಚಯಿಸಿ ಹಿತವಾದವನ್ನು ಹೇಳಿದೆನು. ಆದರೂ ಕಾಲವಶರಾದವರಿಗೆ ಹಿತವಾದಗಳು ಕಿವಿಗೇರುವುವೆ? ಲೋಕದಲ್ಲಿ ಪ್ರಿಯವಾಕ್ಯವನ್ನು ನುಡಿಯುವವರು,ಎಲ್ಲೆಲ್ಲಿಯೂ ಬೇಕಾದಷ್ಟು ಮಂದಿಯಿರುವರು. ಕೇಳುವುದಕ್ಕೆ ಅಪ್ರಿಯವಾಗಿದ್ದರೂ ಮುಂದೆ ಹಿತಕರವಾದ ಮಾತನ್ನು ಹೇಳುವವನಾಗಲಿ,ಅದನ್ನು ಆದರಿಸಿ ಕೇಳುವವನಾಗಲಿ ಸಿಕ್ಕುವುದು ಕಷ್ಟವು. ಮುಖ್ಯವಾಗಿ ಸಮಸ್ತಭೂತಗಳನ್ನೂ ಸಂಹರಿಸತಕ್ಕ ಕಾಲಪಾಶವು ನಿನ್ನ ಕೊರಲಿಗೆ ಸುತ್ತಿರುವುದು. ಆದುದರಿಂದ ಬೆಂಕಿಗೆ ಸಿಕ್ಕಿದ ಮನೆಯನ್ನು ಹೇಗೋಹಾಗೆ ಮೃತ್ಯುವಶನಾದ ನಿನ್ನನ್ನು ನೋಡಿ ಸುಮ್ಮನಿರಬಾರದೆಂದು ನಾನು ಇಷ್ಟುದೂರದವರೆಗೆ ಹೇಳಬೇಕಾಯಿತು. ನೀನು ಉರಿಯುವ ಬೆಂಕಿಗೆ ಸಮಾನಗಳಾಗಿಯೂ,ಚಿನ್ನದ ಕಟ್ಟುಳ್ಳವುಗಳಾಗಿಯೂ, ತೀಕ್ಷ್ಣಗಳಾಗಿಯೂ ಇರುವ ರಾಮಬಾಣಗಳಿಗೆ ಸಿಕ್ಕಿ, ಸಾಯುವುದನ್ನು ನೋಡಲಾರದುದಕ್ಕಾಗಿಯೇ ನಾನು ಹೀಗೆ ಹೇಳಿದೆನು. ಯುದ್ಧರಂಗದಲ್ಲಿ ಎಷ್ಟೇ ಶೂರರಾಗಿದ್ದರೂ, ಎಷ್ಟೇ ಬಲಾಢ್ಯರಾಗಿದ್ದರೂ, ಎಷ್ಟೇ ಅಸ್ತ್ರವಿಶಾರದರಾಗಿದ್ದರೂ ಮೃತ್ಯುವಶರಾದಾಗ ಮಳಲಿನ ಸೇತುವೆಗಳಂತೆ ನಿಮಿಷಮಾತ್ರದಲ್ಲಿ ನಾಶಹೊಂದುವರು. ನೀನು ನನಗೆ ಅಣ್ಣನೆಂಬುದಕ್ಕಾಗಿ ನಿನ್ನ ಹಿತವನ್ನು ಕೋರಿ ನಾನು ಹೀಗೆ ಸಲಿಗೆಯಿಂದ ಮಾತಾಡಿಬಿಟ್ಟೆನು! ನನ್ನನ್ನು ಮನ್ನಿಸಬೇಕು. ಮುಖ್ಯವಾಗಿ ನೀನು, ಸರ್ವವಿಧದಿಂದಲೂ, ನಿನ್ನನ್ನೂ, ರಾಕ್ಷಸಸಹಿತವಾದ ಈ ನಿನ್ನ ಲಂಕೆಯನ್ನೂ ರಕ್ಷಿಸಿಕೊಳ್ಳುವ ಮಾರ್ಗವನ್ನು ನೋಡು! ನಿನಗೆ ಕ್ಷೇಮವಾಗಲಿ ! ನಾನು ಹೋಗಿ ಬರುವೆನು. ಇನ್ನು ನಾನಿಲ್ಲದುದರಿಂದಲಾದರೂ ನೀನು ಸುಖಿಯಾಗಿರು ! (ರಾವಣಾ ! ಮುಖ್ಯವಾಗಿ ಈ ರಾಕ್ಷಸರ ಗುಂಪಿನಲ್ಲಿ ಈ ಪಾಪಕೃತ್ಯಗಳಿಂದ ನಿನ್ನನ್ನು ತಪ್ಪಿಸುವಂತೆ ನಿನಗೆ ಹಿತವನ್ನುಪದೇಶಿಸಿ ತಡೆಯುವ ಸುಹೃತ್ತಾಗಲಿ, ಸ್ನೇಹಿತನಾಗಲಿ ಒಬ್ಬನಾದರೂ ಇಲ್ಲ.) ನಾನು ಹಿತವನ್ನು ಹೇಳಿದರೆ ನನ್ನ ಮಾತು ನಿನ್ನ ಕಿವಿಗೇರಲಿಲ್ಲ! ನಾನೇನು ಮಾಡಲಿ! ಮೃತ್ಯುವು ಸಮೀಪಿಸಿದಾಗಲೇ ಮನುಷ್ಯರು ಮೃತಪ್ರಾಯರೆಂಬುದು ನಿಜವು.ಆದರಿಂದಲೇ ಅವರೂ ಸತ್ತ

ವರಂತೆಯೇ ತಮ್ಮ ಮಿತ್ರರು ಹೇಳಿದ ಹಿತವಾದವನ್ನು ಗ್ರಹಿಸಲಾರರು." ಎಂದನು. ಇಲ್ಲಿಗೆ ಹದಿನಾರನೆಯ ಸರ್ಗವು.

---

[1] ವಿಭೀಷಣನು ಮಂತ್ರಿಸಹಿತನಾಗಿ ರಾಮಲಕ್ಷ್ಮಣರಿದ್ದ ಕಡೆಗೆ ಬಂದುದು. ಸುಗ್ರೀವಾದಿವಾನರರು ಅವನನ್ನು ನೋಡಿ ಅವನು ವಧ್ಯನೆಂದು ರಾಮನಿಗೆ ತಿಳಿಸಿದುದು ರಾಮನು ಈ ವಿಷಯದಲ್ಲಿ ಸಮಸ್ತವಾನರರ ಅಭಿಪ್ರಾಯವನ್ನೂ ಕೇಳಿ, ಕೊನೆಗೆ ಹನುಮಂತನ ಮತದಂತೆ ಅವನನ್ನು ಕರೆಸಿಕೊಳ್ಳುವುದಾಗಿ ನಿಶ್ಚಯಿಸಿ ವಾನರರಿಗೆ ಆಜ್ಞೆಮಾಡಿದುದು.

[2] ಹೀಗೆ ವಿಭೀಷಣನು ರಾವಣನನ್ನು ಕುರಿತು ಪರುಷವಾಕ್ಯವನ್ನು ಹೇಳಿ ಆಕ್ಷಣವೇ ಅಲ್ಲಿಂದ ರಾಮಲಕ್ಷ್ಮಣರಿದ್ದ ಕಡೆಗೆ ಹೊರಟು ಬಂದನು.

---

## ವಿಭೀಷಣ ಶರಣಾಗತಿ ಪ್ರಕರಣವು.

1 "ಆನುಕೂಲ್ಯಸ್ಯಸಂಕಲ್ಪ: ಪ್ರಾತಿಕೂಲ್ಯಸ್ಯ ವರ್ಜನಂ । ರಕ್ಷಿಷ್ಯತೀತಿ ವಿಶ್ವಾಸೋ ಗೋಪ್ತೃತ್ವವರಣಂತಥಾ ॥ ಆತ್ಮನಿಕ್ಷೇಪಕಾರ್ಪಣ್ಯೇ ಷಡ್ವಿಧಾ ಶರಣಾಗತಿ:" ಎಂಬಂತೆ, ಶರಣಾಗತಿಗೆ ಆನುಕೂಲ್ಯಸಂಕಲ್ಪವೇ ಮೊದಲಾದ ಆರು ಅಂಗಗಳುಂಟು. ರಾಮನಲ್ಲಿ ಶರಣಾಗತಿಯನ್ನು ಮಾಡುವುದಕ್ಕಾಗಿ ಉದ್ದೇಶಿಸಿದ ವಿಭೀಷಣನು, ಆ ಅಂಗಗಳಲ್ಲಿ ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನ, ವಿಶ್ವಾಸಗಳೆಂಬ ಮೊದಲನೆಯ ಮೂರು ಅಂಗಗಳನ್ನೂ ನಿರ್ವಹಿಸಿರುವಂತೆ ಹಿಂದಿನ ಎಂಟುಸರ್ಗಗಳಿಂದ ಕಾಣಿಸಲ್ಪಟ್ಟಿದೆ. ರಾಮನಿಗೆ ಸೀತೆಯನ್ನೊಪ್ಪಿಸಿ ಆತನಲ್ಲಿ ಮರೆಹುಗಬೇಕೆಂಬುದೇ ಆನುಕೂಲ್ಯಸಂಕಲ್ಪವು. ಎಂದರೆ, ತನ್ನ ಸ್ವರೂಪಕ್ಕೆ ಅನುಕೂಲವಾದುದನ್ನು ನಡೆಸಬೇಕೆಂದು ಉದ್ದೇಶಿಸುವುದು. ರಾವಣನನ್ನೂ ಅವನ ದೇಶವನ್ನೂ ಬಿಟ್ಟುಹೋಗುವುದೇ ಪ್ರಾತಿಕೂಲ್ಯವರ್ಜನವು. ತನಗೆ ಪ್ರತಿಕೂಲವಾದುದನ್ನು ಬಿಟ್ಟುಹೋಗುವುದು. ಹಾಗೆಯೇ ವಿಭೀಷಣನು ರಾವಣನಿಗೆ ಬಾರಿಬಾರಿಗೂ ಹಿತೋಪದೇಶವನ್ನು ಮಾಡಿರುವುದರಿಂದ, ತನಗೆ ರಾಮನೇ ರಕ್ಷಕನೆಂಬ ವಿಶ್ವಾಸವೂ ಕಾಣಿಸಲ್ಪಟ್ಟಿತು. ಇನ್ನು ಮೇಲೆ ಕಾರ್ಪಣ್ಯಪ್ರದರ್ಶನಪೂರ್ವಕವಾದ ಶರಣಾಗತಿಸ್ವರೂಪವು ತೋರಿಸಲ್ಪಡುವುದಾಗಿ ಗ್ರಾಹ್ಯವು

2 ಇಲ್ಲಿ "ಇತ್ಯುಕ್ತ್ವಾ ಪರುಷಂ ವಾಕ್ಯಂ ರಾವಣಂ ರಾವಣಾನುಜ: । ಆಜಗಾಮ ಮುಹೂರ್ತೇನ ಯತ್ರರಾಮಸ್ಸಲಕ್ಷ್ಮಣ:" ಎಂದು ಮೂಲವು. ವಿಶೇಷಾರ್ಥವು:—

ಹೀಗೆ ನ
(ಇತಿ) ಹೀಗೆ, ಎಂದರೆ, ರಾಮನಿಗೆ ಸೀತೆಯನ್ನೊಪ್ಪಿಸಬೇಕೆಂಬ ಕರ್ತವ್ಯವನ್ನೂ, ಹಾಗೆ ನ
ಡೆಸದಿದ್ದರೆ ಅದರಿಂದುಂಟಾಗಬಹುದಾದ ಅನರ್ಥಗಳನ್ನೂ ತೋರಿಸಿ, (ಪರುಷಂ) ಮುಂ
ದೆ ಹಿತಕರವಾಗಿ ಪಥ್ಯವಾಗಿದ್ದರೂ, ಮೃತ್ಯುವಶನಾದ ರಾವಣನಿಗೆಮಾತ್ರ ಪರುಷ
ವಾಗಿ ತೋರುವ (ವಾಕ್ಯಂ) ಮಾತನ್ನು (ಉಕ್ತ್ವಾ) ಹೇಳಿ, (ರಾವಣಾನುಜಃ) ಈ
ಅನುಜಶಬ್ದದಿಂದ, ರಾವಣಾಸುರನು ಹುಟ್ಟಿದ ಗರ್ಭದಲ್ಲಿಯೇ ಹುಟ್ಟಿಬೆಳೆದವನಾದರೂ
ಸತ್ತ್ವೋತ್ತರನಾದವನು ಹೇಳಬೇಕಾದ ಹಿತವನ್ನೇ ಹೇಳಿದನೆಂದು ಋಷಿಯು ವಿಭೀಷ
ಣನನ್ನು ಪ್ರಶಂಸೆಮಾಡುವುದಾಗಿ ಭಾವವು. ಹಿತವನ್ನು ಹೇಳುವ ವಿಷಯದಲ್ಲಿ ಚಿ
ಕ್ಕವರು ದೊಡ್ಡವರೆಂಬ ಭೇದಬುದ್ಧಿಯನ್ನಿಡದೆ, ಪ್ರಾಜ್ಞನು ಅಜ್ಞನಿಗೆ ಬುದ್ಧಿವಾದ
ವನ್ನು ಹೇಳಬೇಕಾದುದೇ ನ್ಯಾಯವೆಂದೂ ಸೂಚಿತವು. (ಆಜಗಾಮ) ಬಂದನು. ಇಲ್ಲಿ
ವಿಭೀಷಣನು ತನ್ನ ಸ್ವದೇಶವನ್ನು ಬಿಟ್ಟುಹೋಗುವ ಸಂದರ್ಭದಲ್ಲಿ "ಜಗಾಮ"
"ಹೋದನು" ಎಂದು ಹೇಳುವುದು ಯುಕ್ತವಾಗಿರುವಾಗ, ಬಂದನೆಂದು ಹೇಳಿದು
ದೇಕೆಂದರೆ; ರಾವಣಗೋಷ್ಠಿಯಲ್ಲಿ ತನಗೆ ಸಂಬಂಧವಿಲ್ಲದುದರಿಂದಲೂ, ರಾಮಗೋ
ಷ್ಠಿಯೇ ಆತನಿಗೆ ಸ್ವಗೃಹವಾದುದರಿಂದಲೂ ಇಲ್ಲಿ ವಿಭೀಷಣನು ಸ್ವಗೃಹಕ್ಕೆ ಬಂದು
ದಾಗಿ ಹೇಳಬೇಕೆಂಬುದೇ ಇಲ್ಲಿನ ಭಾವವು. (ಮುಹೂರ್ತೇನ) ಅಲ್ಲಿ ಕ್ಷಣಮಾತ್ರವೂ ನಿ
ಲ್ಲದೆ ಮುಹೂರ್ತಕಾಲದೊಳಗಾಗಿಯೇ ಬಂದನೆಂದರ್ಥವು. "ಅಷ್ಟಾಟತರವೇಕೆ?" ಎಂ
ದರೆ "ವರಂ ಹುತವಹಜ್ವಾಲಾಪಂಜರಾಂತರ್ವ್ಯವಸ್ಥಿತಿಃ। ನ ಶೌರಿಚಿಂತಾವಿಮುಖ ಜನ
ಸಂವಾಸ ವೈಶಸಮ್" ಅಗ್ನಿಜ್ವಾಲೆಯೆಂಬ ಪಂಜರದ ಮಧ್ಯದಲ್ಲಿಯಾದರೂ ಇರುವುದು
ತ್ತಮವೇ ಹೊರತು, ವಿಷ್ಣುಚಿಂತಾವಿಮುಖರೊಡನೆ ಸೇರಿರುವುದುಮಾತ್ರ ಸರಿಯಲ್ಲವೆಂ
ಬ ನ್ಯಾಯದಿಂದ, ಕ್ಷಣಮಾತ್ರವೂ ಆ ರಾವಣನ ಸಹವಾಸವನ್ನು ಸಹಿಸಲಾರದೆ ಹೊರ
ಟು ಬಂದನೆಂದು ಭಾವವು. (ಯತ್ರರಾಮಃ) ಹಿಂದೆ ಅಯೋಧ್ಯಾಕಾಂಡದಲ್ಲಿ "ಸು
ಭಗಶ್ಚಿತ್ರಕೂಟೋಽಸೌ ಗಿರಿರಾಜೋಪಮೋಗಿರಿಃ। ಯಸ್ಮಿನ್ವಸತಿ ಕಾಕುತ್ಸ್ಥಃ ಕುಬೇ
ರಇವ ನಂದನೇ" ಎಂಬುದಾಗಿ ಭರತನಿಗೆ ರಾಮವಾಸದಿಂದ ಚಿತ್ರಕೂಟವೇ ಪ್ರಾಪ್ಯವಾದಂ
ತೆ, ಇಲ್ಲಿಯೂ ರಾಮಸಂಬಂಧಕ್ಕಿಂತಲೂ ರಾಮನಿರುವ ದೇಶವೇ ತನಗೆ ಉದ್ದೇಶ್ಯ
ವೆಂದು ಭಾವವು. (ಸಲಕ್ಷ್ಮಣಃ) ರಾಮನಿಗೆ ಲಕ್ಷ್ಮಣನು ವ್ಯಾವರ್ತಕನೆಂಬುದನ್ನು ತೋ
ರಿಸುವುದಕ್ಕಾಗಿ ಇಲ್ಲಿ "ಸಲಕ್ಷ್ಮಣಃ" ಎಂಬ ಶಬ್ದವು. ಇದರಿಂದ ಆಶ್ರಯಿಸಲ್ಪಟ್ಟವ
ನಿಗೆ ಆಶ್ರಯಿಸಿದವರನ್ನು ಬಿಡಲಾಗದೆಂದು ಸೂಚಿತವು. ಅಥವಾ ಇದರಿಂದ ಪುರು
ಷಕಾರಸಾನ್ನಿಧ್ಯವು ಹೇಳಲ್ಪಟ್ಟುದಾಗಿಯೂ ಗ್ರಹಿಸಬಹುದು. ಮತ್ತು ಇಲ್ಲಿ ತಮ್ಮನ
ಹಿತವಾಕ್ಯವನ್ನು ಕೇಳದ ರಾವಣನ ಗೋಷ್ಠಿಯ ಸಂಬಂಧವನ್ನೇ ಬಿಟ್ಟು, ತಮ್ಮನ ಮಾ
ತಿನಂತೆ ನಡೆಯುವ ರಾಮನ ಗೋಷ್ಠಿಯಲ್ಲಿ ಪ್ರವೇಶಿಸಿದನೆಂದೂ ಭಾವವು. ಈ ಶ್ಲೋಕಾ

ರ್ಥದಿಂದ ಭಗವದ್ರುಚಿಯುಳ್ಳವನಿಗೆ ಭಗವದ್ವಿಮುಖರಿರುವ ದೇಶವು ಪರಿತ್ಯಾಜ್ಯವೆಂದೂ, ಭಗವತ್ಸಾನ್ನಿಧ್ಯವುಳ್ಳ ಪ್ರದೇಶವೇ ಪ್ರಾಪ್ಯವೆಂದೂ, ಭಗವದ್ದೇಶವಾಗಿದ್ದರೂ ಭಾಗವತಾಭಿಮಾನಕ್ಕೆ ಪಾತ್ರವಾಗದಿದ್ದರೆ ಪರಿತ್ಯಾಜ್ಯವಾಗುವುದರಿಂದ, ಇಲ್ಲಿ ಭಾಗವತನಾದ ಲಕ್ಷ್ಮಣನ ಸಾನ್ನಿಧ್ಯವೂ ಸೇರಿರುವುದಕ್ಕಾಗಿ ಪರಮಪ್ರಾಪ್ಯವೆಂದೂ ಸೂಚಿಸಲ್ಪಡುವುವು.

ಇಲ್ಲಿ ವಿಚಾರಾರ್ಹವಾದ ವಿಷಯವೇನೆಂದರೆ:—ವಿಭೀಷಣನು ವಿಶ್ರವಸ್ಸಿನ ಮತ್ತು ಬ್ರಹ್ಮನ ವರಪ್ರಸಾದಬಲದಿಂದ ಸಮಸ್ತಧರ್ಮಸೂಕ್ಷ್ಮಗಳನ್ನೂ ತಿಳಿದವನು. ಮತ್ತು "ವಿಭೀಷಣಸ್ತು ಧರ್ಮಾತ್ಮಾ ನತು ರಾಕ್ಷಸಚೇಷ್ಟಿತಃ" ಈತನು ಧರ್ಮಾತ್ಮನೇ ಹೊರತು ರಾಕ್ಷಸಚೇಷ್ಟೆಯುಳ್ಳವನಲ್ಲವೆಂದು ಅಲ್ಲಲ್ಲಿ ಸ್ತುತಿಸಲ್ಪಟ್ಟವನು. ಹೀಗಿರುವಾಗಲೂ ಇವನು, "ಜ್ಯೇಷ್ಠಭ್ರಾತಾ ಪಿತೃಸಮಃ" ಎಂಬಂತೆ, ತನಗೆ ತಂದೆಯಂತೆ ಪೂಜ್ಯನಾಗಿಯೂ, ಬಾಲ್ಯದಿಂದ ತನ್ನನ್ನು ಪೋಷಿಸಿದವನಾಗಿಯೂ ಇರುವ ಅಣ್ಣನಾದ ರಾವಣನನ್ನು ಇಂತಹ ಕಷ್ಟಕಾಲದಲ್ಲಿ ಬಿಟ್ಟುಹೋಗಬಹುದೆ? ಹೇಗೋ ಮನಸ್ಸಿಗೆ ಸೇರದುದರಿಂದ ಬಿಟ್ಟುಹೋದರೂ ಹೋಗಲಿ! ಅವನನ್ನು ಕೊಲ್ಲುವುದಕ್ಕಾಗಿಯೇ ಬಂದಿರುವ ರಾಮನ ಬಳಿಗೆ ಹೋಗಿ ಶತ್ರುಪಕ್ಷವನ್ನವಲಂಬಿಸುವುದು ಯುಕ್ತವೆ?. ಅಥವಾ ಹಾಗೆ ಶತ್ರುವಿನಲ್ಲಿ ಸೇರಿದರೂ ಅಣ್ಣನ ರಾಜ್ಯವನ್ನೇ ಅಪೇಕ್ಷಿಸುವುದು ನ್ಯಾಯವೆ?. ರಾಜ್ಯವನ್ನಪೇಕ್ಷಿಸಿದರೂ ಅಪೇಕ್ಷಿಸಲಿ! ಅಣ್ಣನನ್ನು ಕೊಲ್ಲುವುದಕ್ಕೆ ಉಪಾಯವನ್ನೂ ತಿಳಿಸುವುದು ಸರ್ವಥಾಯುಕ್ತವಲ್ಲ. ಇಷ್ಟು ಅಕಾರ್ಯಗಳಿಗೆ ಪ್ರಯತ್ನಿಸಿದ ವಿಭೀಷಣನನ್ನು ಧರ್ಮಾತ್ಮನೆಂಬುದು ಹೇಗೆ?" ಎಂಬ ಶಂಕೆಯು ಹುಟ್ಟಬಹುದು. ಇದಕ್ಕಾಗಿ ಕೆಲವರು "ರಾವಣನು ಬಹಳ ದೋಷಿಯಾದುದರಿಂದ "ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ। ಉತ್ಪಥಂ ಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ" ಎಂಬ ನ್ಯಾಯವನ್ನನುಸರಿಸಿಯೇ, ವಿಭೀಷಣನು ತನ್ನಣ್ಣನಾದ ರಾವಣನನ್ನು ಬಿಟ್ಟುಬರಬೇಕಾಯಿತೆಂದು ಸಮಾಧಾನವನ್ನು ಹೇಳುವರು. ಇದೇ ವಿಚಾರದಲ್ಲಿ ವೇದಾಂತಾಚಾರ್ಯರು ನಿರೂಪಿಸುವುದೇನೆಂದರೆ! ವಿಭೀಷಣನು ಬ್ರಹ್ಮವರಪ್ರಭಾವದಿಂದ ವಿಜ್ಞಾನವನ್ನು ಪಡೆದು ಬಂದವನಾದುದರಿಂದ, ಶ್ರೀರಾಮನೇ ಸರ್ವಲೋಕೇಶ್ವರನೆಂದೂ, ಸರ್ವಶರಣ್ಯನೆಂದೂ, ಸರ್ವಪ್ರಾಪ್ಯನೆಂದೂ, ನಾರಾಯಣಾಖ್ಯಪರಬ್ರಹ್ಮನೆಂದೂ, ಲೋಕಾನುಗ್ರಹಾರ್ಥವಾಗಿಯೇ ಅವತರಿಸಿದವನೆಂದೂ ಸ್ಪಷ್ಟವಾಗಿ ತಿಳಿದಿರುವವನು. ಮಂಡೋದರಿ ಮೊದಲಾದವರಿಗೂ ಈ ತತ್ವಜ್ಞಾನವುಂಟಲ್ಲವೆ?. ಹೀಗೆ ತತ್ತ್ವಜ್ಞಾನಸಂಪನ್ನನಾದ ವಿಭೀಷಣನಿಗೆ, ವಿಶೇಷಧರ್ಮದ ಪ್ರಾಬಲ್ಯವೂ, ಸಾಮಾನ್ಯಧರ್ಮದ ದೌರ್ಬಲ್ಯವೂ ವಿವೇಚನೆಯಿಂದ ಚೆನ್ನಾಗಿ ತಿಳಿದಿರಬೇಕು. ಈ ವಿವೇಕಜ್ಞಾನದಿಂದಲೇ ಅವನು ದುರ್ಬಲವಾದ ಸಾಮಾನ್ಯಧರ್ಮವನ್ನು ಪರಿತ್ಯಜಿಸಿ,

ಪ್ರಬಲವಾದ ವಿಶೇಷಧರ್ಮವನ್ನೇ ಪರಿಗ್ರಹಿಸಿರುವನು. “ಜ್ಯೇಷ್ಠಭ್ರಾತ್ರನುವರ್ತನವೆಂಬುದು ತ್ರಿವರ್ಗಫಲಸಾಧನವಾಗಿದ್ದು, ಆ ಮೂಲಕವಾಗಿ ಪರಮಾತ್ಮಾರಾಧನದಲ್ಲಿ ಪರ್ಯವಸಿತವಾಗುವುದಲ್ಲವೆ” ಎಂದರೆ, ಅದು ಮೋಕ್ಷಪರ್ಯವಸಾಯಿಯಾಗಿದ್ದರೂ ಪರಮಾತ್ಮೋಪಾಸನೆಗೆ ಅಂಗಮಾತ್ರವಾದುದರಿಂದ, ಸಾಮಾನ್ಯಧರ್ಮವೆನಿಸುವುದು. ರಾಮಾನುವರ್ತನೆಯಿಂದಲೋ, ಸಾಕ್ಷಾತ್ತಾಗಿ ಪರಮಾತ್ಮನನ್ನೇ ಆರಾಧಿಸಿದಂತಾಗುವುದರಿಂದಲೂ, ಯಜ್ಞಾದಿಧರ್ಮಸಾಧ್ಯವೆನಿಸಿ ಪ್ರಧಾನವಾದುದರಿಂದಲೂ, ಅದು ವಿಶೇಷಧರ್ಮವೆನಿಸುವುದು. ಇವೆರಡು ಧರ್ಮಗಳಿಗೂ ವಿರೋಧವಿಲ್ಲದಾಗ ಎರಡನ್ನೂ ಅನುವರ್ತಿಸಬಹುದು. ವಿರೋಧವಿದ್ದಾಗ ಸಾಮಾನ್ಯಧರ್ಮವನ್ನು ಬಿಟ್ಟು, ವಿಶೇಷಧರ್ಮವನ್ನೇ ಅನುವರ್ತಿಸಬೇಕು. ಆದುದರಿಂದ ವಿಭೀಷಣನು ಇದುವರೆಗೆ ಜ್ಯೇಷ್ಠಾನುವರ್ತನವೆಂಬ ಧರ್ಮವನ್ನು ಬಿಡದ ಹಾಗೆಯೇ, ರಾಮಾನುವರ್ತನವನ್ನೂ ಸಾಧಿಸಬೇಕೆಂದುದ್ದೇಶಿಸಿ, ಆ ಆಸೆಯಿಂದ ರಾವಣನಿಗೆ ಸಾರಿಸಾರಿ ಹಿತವನ್ನುಪದೇಶಿಸಿದನು. ಕೊನೆಗೂ ಅಸುರಪ್ರಕೃತಿಯಾದ ರಾವಣನಲ್ಲಿ ತನ್ನ ಉದ್ದೇಶವು ಸಿದ್ಧಿಸದುದರಿಂದ, ಅವನ ಸಹವಾಸವನ್ನು ಬಿಟ್ಟು ರಾಮಾನುವರ್ತನವೆಂಬ ವಿಶೇಷಧರ್ಮಕ್ಕೆ ಪ್ರಯತ್ನಿಸಬೇಕಾಯಿತು. ಇದರಿಂದ ವಿಭೀಷಣನು ಕೃತಘ್ನನೆಂಬ ಶಂಕೆಗೆ ಸ್ವಲ್ಪಮಾತ್ರವೂ ಆಧಾರವಿಲ್ಲವು. ಮತ್ತು ಇವನು ರಾಜ್ಯಾಭಿಲಾಷೆಯಿಂದ ರಾಮನನ್ನು ಸೇರಿದವನೂ ಅಲ್ಲ. ಇವನು ತನ್ನ ಶರಣಾಗತಿಸಮಯದಲ್ಲಿ“ತ್ಯಕ್ತ್ವಾಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂಗತಃ”ಎಂದು ಇತರವಿಷಯಗಳಲ್ಲಿ ತನಗುಂಟಾಗಿರುವ ವೈರಾಗ್ಯವನ್ನು ತಾನೇ ಕಂಠೋಕ್ತವಾಗಿ ಹೇಳಿರುವನು. ಮತ್ತು ಇವನು ರಾಮನಲ್ಲಿ ತನ್ನ ಸ್ಥಿತಿಯನ್ನು ವಿಜ್ಞಾಪಿಸಿಕೊಳ್ಳುವಾಗಲೂ“ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿಚ ಧನಾನಿಚ। ಭವದ್ಗತಂ ಮೇ ರಾಜ್ಯಂಚ ಜೀವಿತಂಚ ಸುಖಾನಿಚ” ಎಂದುಹೇಳಿ, ರಾಮನನ್ನೇ ತನಗೆ ಸರ್ವಪುರುಷಾರ್ಥಭೂತನನ್ನಾಗಿ ಹೇಳಿರುವನು. ಇವುಗಳಿಂದ ಅವನು ರಾಜ್ಯಾಪೇಕ್ಷೆಯಿಂದ ಬಂದವನಲ್ಲವೆಂದು ನಿಸ್ಸಂದೇಹವಾಗಿ ತಿಳಿಯಬಹುದು. ಆದರೆ ರಾಮನು ವಿಭೀಷಣನನ್ನು ಕುರಿತು“ರಾಜಾನಂ ತ್ವಾಂ ಕರಿಷ್ಯಾಮಿ ಸತ್ಯಮೇತದ್ಬ್ರವೀಮಿತೇ” ಎಂದು ರಾಜ್ಯವನ್ನು ಕೊಡುವುದಾಗಿ ಪ್ರತಿಜ್ಞೆಮಾಡಿಕೊಡಲಿಲ್ಲವೆ?” ಎಂದರೆ, ಶರಣಾಗತನಾದ ಆ ವಿಭೀಷಣನಲ್ಲಿ ಆಗ ರಾಮನಿಗೆ ಹುಟ್ಟಿದ ಮಿತಿಮೀರಿದ ವಾತ್ಸಲ್ಯವು, ಅವನ ಬಾಯಿಂದ ಆ ಮಾತನ್ನಾಡಿಸಿತೇ ಹೊರತು ಬೇರೆಯಲ್ಲ. ಈ ಆನುಷಂಗಿಕಭೋಗವನ್ನು ವಿಭೀಷಣನು ಅಪೇಕ್ಷಿಸಿದವನೇ ಅಲ್ಲ. ಶ್ರೀಮನ್ನಾರಾಯಣನು ತನ್ನ ಭಕ್ತರಿಗೆ ಸ್ವಪ್ರಾಪ್ತಿರೂಪವಾದ ಮುಕ್ತಿಯನ್ನು ಮಾತ್ರವೇ ಅಲ್ಲದೆ, “ಆಯುರಾರೋಗ್ಯಮರ್ಥಾಂಶ್ಚ ಭೋಗಾಂಶ್ಚೈವಾನುಷಂಗಿಕಾನ್। ದದಾತಿ ಧ್ಯಾಯತಾಂ ನಿತ್ಯಮಪವರ್ಗಪ್ರದೋ ಹರಿಃ”ಎಂಬಂತೆ,ತನ್ನ ಮನಸ್ತೃಪ್ತಿಗಾಗಿ

ತಾನಾಗಿಯೇ ಆನುಷಂಗಿಕಭೋಗಗಳನ್ನೂ ಕೊಡುವುದಾಗಿ ಹೇಳುವರು. ಹನುಮಂತ ನು ವಿಭೀಷಣನವಿಷಯವಾಗಿ ರಾಮನನ್ನು ಕುರಿತು "ರಾಜ್ಯಂ ಪ್ರಾರ್ಥಯಮಾನಸ್ತು ಬು ದ್ಧಿಪೂರ್ವಮಿಹಾಗತಃ" ಎಂದೂ, ರಾಮನು "ರಾಜ್ಯಕಾಂಕ್ಷೀ ವಿಭೀಷಣಃ" ಎಂದೂ ಹೇಳಿದುದಕ್ಕೆ ಕಾರಣವೇನು?" ಎಂಬ ಶಂಕೆಯುಂಟಾಗಬಹುದು. ಇವೆಲ್ಲವೂ, ರಾಮಭ ಕ್ತಿಯಿಂದ ವಿಭೀಷಣನ ನಿಜಸ್ಥಿತಿಯನ್ನರಿಯಲಾರದೆ ಆತುರಪಡುತ್ತಿದ್ದ ಸುಗ್ರೀವನಿಗೆ, ಆ ವ್ಯಾಮೋಹವನ್ನು ನೀಗಿಸುವುದಕ್ಕಾಗಿ ವ್ಯಾಜೀಕರಿಸಿದ ಮಾತೇಹೊರತು ಬೇರೆಯ ಲ್ಲವೆಂದು ಗ್ರಾಹ್ಯವು. ಇಲ್ಲಿ ಹನುಮದ್ರಾಮವಾಕ್ಯಗಳಿಗೂ,ವಿಭೀಷಣನ ವಾಕ್ಯಕ್ಕೂ ಅ ನ್ಯೋನ್ಯವಿರೋಧವು ತೋರಿಬಂದರೂ,ಅಂತರಂಗಬಹಿರಂಗಗಳಲ್ಲಿ ಅಂತರಂಗವೇ ಪ್ರಬಲ ವೆಂಬ ನ್ಯಾಯದಿಂದ,ವಿಭೀಷಣನ ವಾಕ್ಯಕ್ಕೇ ಪ್ರಾಬಲ್ಯವೆಂದು ತಿಳಿಯಬೇಕು. ಆದುದ ರಿಂದ ವಿಭೀಷಣನ ವಾಕ್ಯಾನುಸಾರವಾಗಿ ಆತನಿಗೆ ರಾಜ್ಯಕಾಂಕ್ಷೆಯಿಲ್ಲವೆಂಬುದು ಸ್ಪಷ್ಟ ವು. ಇದಕ್ಕಾಗಿಯೇ ವಿಭೀಷಣನು "ರಾಜಾನಂ ತ್ವಾಂ ಕರಿಷ್ಯಾಮಿ" ಎಂದು ರಾಮನು ತನ ಗೆ ಹೇಳಿದಾಗಲೂ, ಅದಕ್ಕೆ ಯಾವ ಪ್ರತ್ಯುತ್ತರವನ್ನೂ ಹೇಳದೆ, ರಾಕ್ಷಸರೊಡನೆ ಯು ದ್ಧದಲ್ಲಿ ತನ್ನಿಂದಾದಷ್ಟು ಸಹಾಯಮಾಡುವುದಾಗಿಮಾತ್ರವೇ ಹೇಳಿದುದರಿಂದ, ವಿಭೀ ಷಣನಿಗೆ ಆತನ ಪರಿಚರಣಮಾತ್ರವೇ ಮುಖ್ಯೋದ್ದೇಶವಾಗಿತ್ತೆಂದು ವ್ಯಕ್ತವಾಗುವುದು. ಹೀಗೆ ವಿಭೀಷಣನಿಗೆ ರಾಜ್ಯಾಭಿಲಾಷೆಯಿಲ್ಲದಿದ್ದರೂ ರಾಮನ ಬಲಾತ್ಕಾರಕ್ಕಾಗಿ ಅವನು ರಾಜ್ಯವನ್ನು ಸ್ವೀಕರಿಸಬೇಕಾಯಿತೆಂಬುದು, ಉತ್ತರಕಾಂಡದಲ್ಲಿ ಸ್ಪಷ್ಟವಾಗಿ ಹೇಳಲ್ಪ ಡುವುದು. ಹೀಗೆ ವಿಭೀಷಣನು ಅನನ್ಯಪ್ರಯೋಜನನೆಂಬುದನ್ನು ತಿಳಿದೇ, ಇವನಿಗೆ ರಾಮ ನು,ತನಗೆ ಕುಲಧನವಾದ ಶ್ರೀರಂಗನಾಥನನ್ನು ಮಾತ್ರ ಕೊಟ್ಟು ಕಳುಹಿಸಿದನು.ಮತ್ತು ರಾ ಮನು ಧರ್ಮಸಂಸ್ಥಾಪನಾರ್ಥವಾಗಿಯೇ ಅವತರಿಸಿದವನಾದುದರಿಂದ, ಲಂಕೆಯಲ್ಲಿ ಹತಶೇ ಷವಾದ ರಾಕ್ಷಸಜಾತಿಯನ್ನು ಸನ್ಮಾರ್ಗದಲ್ಲಿರಿಸುವುದಕ್ಕಾಗಿಯೇ ವಿಭೀಷಣನನ್ನು ನಿ ರ್ಬಂಧಿಸಿ ಅಲ್ಲಿನ ರಾಜ್ಯಾಧಿಕಾರಕ್ಕೂ ನಿಲ್ಲಿಸಿದನು. ವಿಭೀಷಣನು ರಾಜ್ಯವನ್ನಂಗೀಕರಿಸಿ ದುದೂಕೂಡ ರಾಮಾಜ್ಞೆಯನ್ನನುಸರಿಸಿ ಬಂದುದರಿಂದ,ಅದೂ ರಾಮಕೈಂಕರ್ಯದಲ್ಲಿ ಯೇ ಸೇರಿತೆಂದು ವಿಭೀಷಣನ ತಾತ್ಪರ್ಯವು.ಹೀಗೆಯೇ ಹಿಂದೆ ಧರ್ಮತತ್ತ್ವವನ್ನು ತಿಳಿದ ಲ ಕ್ಷ್ಮಣನೂಕೂಡ,ಸಾಮಾನ್ಯಧರ್ಮಕ್ಕಿಂತಲೂ ವಿಶೇಷಧರ್ಮವೇ ಪ್ರಬಲವೆಂದೆಣಿಸಿ. "ಅಹಂತಾ ವನ್ಮಹಾರಾಜೇ ಪಿತೃತ್ವಂ ನೋಪಲಕ್ಷಯೇ। ಭ್ರಾತಾ ಭರ್ತಾಚ ಬಂಧುಶ್ಚ ಪಿತಾಚ ಮ ಮರಾಘವಃ" ಎಂಬುದಾಗಿ ಸೋಪಾಧಿಕಪಿತೃವಾದ ದಶರಥನನ್ನು ತ್ಯಜಿಸಿ, ನಿರುಪಾಧಿ ಕಸರ್ವವಿಧಬಂಧುವಾದ ರಾಮನನ್ನೇ ತಂದೆಯಂತೆ ಕೈಕೊಂಡಿರುವನು. ಮತ್ತು "ಅಹಂ ಸರ್ವಂ ಕರಿಷ್ಯಾಮಿ" ಎಂದು ರಾಮಕೈಂಕರ್ಯವನ್ನೇ ಫಲವಾಗಿ ಪ್ರಾರ್ಥಿಸಿರುವನು. ಮ ತ್ತು "ಸಖ್ಯಾತ್ರಶ್ಚರಣೌ ಗಾಢಂ ನಿಪೀಡ್ಯ" ಎಂಬಂತೆ,ರಾಮನನ್ನೇ ಮರೆಹೊಕ್ಕಿರುವನು.

ಇಷ್ಟರಲ್ಲಿ ಇತ್ತಲಾಗಿ ಸಮುದ್ರತೀರದಲ್ಲಿದ್ದ ವಾನರೋತ್ತಮರು,ಮೇರುಶಿ
ಖರದಂತೆ ಮಹೋನ್ನತವಾದ ಆಕಾರವುಳ್ಳವನಾಗಿ, ಉರಿಯುವ ಮಿಂ

---

ಹಾಗೆಯೇ ಇಲ್ಲಿ ವಿಭೀಷಣನೂಕೂಡ, ಸೋಪಾಧಿಕಬಂಧುವಾದ ತನ್ನಣ್ಣನನ್ನು ತ್ಯ
ಜಿಸಿ ಸರ್ವವಿಧಬಂಧುವಾದ ರಾಮನನ್ನೇ ಶರಣುಹೊಕ್ಕನು. ಹೀಗೆ ಭಗವತ್ಪ್ರಾಪ್ತಿಯ
ನ್ನಪೇಕ್ಷಿಸಿ ಬಂದವರೆಲ್ಲರೂ ಕೈಂಕರ್ಯಲಕ್ಷ್ಮೀಸಂಪನ್ನರೆಂಬುವನ್ನು ತಿಳಿಸುವುದಕ್ಕಾಗಿಯೇ
ಅಲ್ಲಲ್ಲಿ "ಸತು ನಾಗವರ: ಶ್ರೀಮಾನ್" ಎಂದು ಗಜೇಂದ್ರನಿಗೂ, "ಲಕ್ಷ್ಮಣೋ ಲಕ್ಷ್ಮಿ
ಸಂಪನ್ನ:" ಎಂದು ಲಕ್ಷ್ಮಣನಿಗೂ, ಶ್ರೀಮತ್ತ್ವವಿಶೇಷಣವು ಉಪಯೋಗಿಸಲ್ಪಟ್ಟಿರುವಂ
ತೆ" ಈವಿಭೀಷಣನಿಗೂಕೂಡ, ಆತನು ರಾಮಪ್ರಾಪ್ತಿಗಾಗಿ ರಾವಣನನ್ನು ಬಿಟ್ಟು ಹೊರ
ಟಾಗ "ಅಂತರಿಕ್ಷಗತ: ಶ್ರೀಮಾನ್" ಎಂಬುದಾಗಿ ಶ್ರೀಮತ್ತ್ವವಿಶೇಷಣವೇ ಹೇಳಲ್ಪಟ್ಟಿ
ರುವುದು. ಆದುದರಿಂದ ವಿಭೀಷಣನಲ್ಲಿ ಅಧರ್ಮಶಂಕೆಗೆ ಸ್ವಲ್ಪಮಾತ್ರವೂ ಅವಕಾಶವಿಲ್ಲ.
ಆದರೆ ರಾಮಲಕ್ಷ್ಮಣರಿಬ್ಬರೂ ನಾಗಪಾಶದಲ್ಲಿ ಸಿಕ್ಕಿ ಮೂರ್ಛಿತರಾಗಿದ್ದಾಗ, ಅವರನ್ನು
ಕುರಿತು ವಿಭೀಷಣನು. "ಯಯೋರ್ವೀರ್ಯಮುಪಾಶ್ರಿತ್ಯ ಪ್ರತಿಷ್ಠಾ ಕಾಂಕ್ಷಿತಾಮಯಾ।
ತಾವುಭೌ ಮನು ನಾಶಾಯ ಪ್ರಸುಪ್ತೌ ಪುರುಷರ್ಷಭೌ! ಜೀವನ್ನಪಿ ವಿನಷ್ಟೋಽಸ್ಮಿ
ನಷ್ಟರಾಜ್ಯಮನೋರಥ:" ಇತ್ಯಾದಿವಾಕ್ಯಗಳಿಂದ ತನ್ನ ಪ್ರತಿಷ್ಠೆಗೂ, ತನ್ನರಾಜ್ಯ
ಕ್ಕೂ ಭಂಗವುಂಟಾಯಿತೆಂದು ನಿರ್ವೇದಪಡುವುದೇಕೆ?" ಎಂದರೆ, ಇಲ್ಲಿಯೂ ಪ್ರತಿಷ್ಠಾ
ಶಬ್ದಕ್ಕೆ ರಾಮಕೈಂಕರ್ಯಪರವಾಗಿಯೂ, ರಾಜ್ಯಶಬ್ದಕ್ಕೆ ಕೈಂಕರ್ಯಸಾಮ್ರಾಜ್ಯಪರ
ವಾಗಿಯೂ, ಅರ್ಥವನ್ನು ಗ್ರಹಿಸಬೇಕೇಹೊರತು ರಾಜ್ಯಪ್ರತಿಷ್ಠಾದಿಗಳಲ್ಲವು. ಆದುದ
ರಿಂದ ವಿಭೀಷಣನು ತನ್ನಣ್ಣನನ್ನು ಬಿಟ್ಟುಬಂದು ರಾಮನನ್ನಾಶ್ರಯಿಸಿದುದು ದೋ
ಷಾಸ್ಪದವಲ್ಲವೆಂದೇ ಸಿದ್ಧಾಂತವು. (ತನಿಶ್ಲೋಕಿ)

I ಇಲ್ಲಿ ತಂ ಮೇರುಶಿಖರಾಕಾರಂ ದೀಪ್ತಾಮಿವ ಶತಹ್ರದಾಂ । ಗಗನಸ್ಥಂ ಮಹೀ
ಸ್ಥಾಸ್ತೇ ದದೃಶುರ್ವಾನರೋತ್ತಮಾ:" ಎಂದು ಮೂಲವು. ವಿಭೀಷಣನಿಗಿದ್ದ ಮಹೋನ್ನತ
ವಾದ ಆಕಾರದಿಂದಲೂ, ಸ್ವರ್ಣಾಭರಣಗಳ ಕಾಂತಿಯಿಂದಲೂ ಮೇರುಶಿಖರದ ಹೋಲಿ
ಕೆಯು. ಮತ್ತು ಈ ಉಪಮಾಸ್ವಾರಸ್ಯದಿಂದ, ವಿಭೀಷಣನು ರಾವಣನ ಕಡೆಯನ್ನು ಬಿ
ಟ್ಟುರಾಮನಕಡೆಗೆ ಬಂದುದು, ರಾವಣನಿಗೊಂದು ಕೊಂಬು (ಅತಿಶಯವು) ಮುರಿದು,
ರಾಮನಿಗೊಂದುಕೊಂಬು (ಅತಿಶಯವು) ಬೆಳೆದಂತಾಯಿತೆಂದು ಸೂಚಿತವಾಗುವುದು.
(ಗಗನಸ್ಥಂ) ಎಂಬುದರಿಂದ ಈತನು ಲಂಕೆಯಿಂದ ಕಾಲೆತ್ತಿ ಆಕಾಶಕ್ಕೆ ಹಾರಿದಾಗಲೇ
ಇಲ್ಲಿದ್ದ ವಾನರರ ದೃಷ್ಟಿಗೆ ಬಿದ್ದುದಾಗಿಯೂ, (ಮಹೀಸ್ಥಾಸ್ತೇ ದದೃಶು:) ಭೂಮಿಯ
ಲ್ಲಿದ್ದ ಆ ವಾನರರು ಕಂಡರೆಂಬುದರಿಂದ, ಅವರು ಭೂಮಿಯ ಕಾವಲಿಗಾಗಿ ಮಾ

ಚಿನಂತೆ ದೇಹಕಾಂತಿಯುಳ್ಳವನಾಗಿ, ಆಕಾಶದಲ್ಲಿ ವೇಗದಿಂದ ಬರುತ್ತಿದ್ದ ಆ ರಾಕ್ಷಸನನ್ನು ಕಂಡರು. (ಆ ವಿಭೀಷಣನಾದರೋ ಮೇಘದಂತೆಯೂ, ಪರ್ವತದಂತೆಯೂ ಮಹೋನ್ನತವಾದ ದೇಹವುಳ್ಳವನು. ಇಂದ್ರನಿಗೆಣೆಯಾದ ಪರಾಕ್ರಮವುಳ್ಳವನು. ಸರ್ವಾಯುಧಗಳನ್ನೂ ಧರಿಸಿರುವನು. ಮಹಾವೀರನು. ದಿವ್ಯಾಭರಣಭೂಷಿತನು. ಅವನೊಡನೆ ಬರುತಿದ್ದ ನಾಲ್ವರು ರಾಕ್ಷಸರೂಕೂಡ, ಭಯಂಕರಪರಾಕ್ರಮವುಳ್ಳವರಾಗಿಯೂ, ಸಮಸ್ತಾಯುಧಗಳನ್ನೂ ಧರಿಸಿದವರಾಗಿಯೂ, ಭೂಷಣಗಳಿಂದಲಂಕೃತರಾಗಿಯೂ ಬರುತ್ತಿದ್ದರು.) [1] ಹೀಗೆ ನಾಲ್ವರು ರಾಕ್ಷಸರೊಡನೆ ತಾನು ಐದನೆಯವನಾಗಿ ಬರುತಿದ್ದ ಆ ರಾಕ್ಷಸನನ್ನು ಇತ್ತಲಾಗಿ ಶತ್ರುದುರ್ಜಯನಾಗಿಯೂ, ವಾನರೇಂದ್ರನಾಗಿಯೂ ಇರುವ ಸುಗ್ರೀವನು ಕಂಡನು. ಆ ಸುಗ್ರೀವನು ಬಹಳ ಬುದ್ಧಿಶಾಲಿಯಾದುದರಿಂದ ಆ ರಾಕ್ಷಸನನ್ನು ಕಂಡೊಡನೆ ತನ್ನಕಡೆಯ ವಾನರರೊಡನೆ! ಮುಹೂರ್ತಕಾಲದವರೆಗೆ ಆಲೋಚಿಸುತಿದ್ದು, ಕೊನೆಗೆ ಹನುಮಂತನೇ ಮೊದಲಾದ ಸಮಸ್ತವಾನರರನ್ನೂ ನೋಡಿ ಯುಕ್ತಿಯುಕ್ತವಾದ ಮಾತಿನಿಂದ, [2] "ಎಲೆ ವಾನರರೆ! ಅದೋ ನೋಡಿರಿ! ಆ ರಾಕ್ಷಸನು ಸಮಸ್ತಾಯುಧಗ

---

ದೇ ನಿಯಮಿಸಲ್ಪಟ್ಟವರಾಗಿದ್ದರೂ, ಆಗಲೇ ಆಕಾಶಕ್ಕೆ ಹಾರಿದವನನ್ನುಕೂಡ ಕಂಡುಹಿಡಿದರೆಂದು ಸ್ವಾಮಿಕಾರ್ಯದಲ್ಲಿ ಆ ವಾನರರಿಗಿರತಕ್ಕ ಅತ್ಯಂತ ಜಾಗರೂಕತೆಯೂ ಸೂಚಿತವಾಗುದು. (ವಾನರಾಧಿಪಾ:) ಸ್ವಾಮಿಕಾರ್ಯದಲ್ಲಿ ಇವರಿಗಿದ್ದ ಎಚ್ಚರಿಕೆಯನ್ನೂ,ಅತ್ಯಂತಾಸಕ್ತಿಯನ್ನೂ ನೋಡಿ ಋಷಿಯು ಅವರನ್ನು ಪ್ರಶಂಸಿಸಿ ಗೌರವಿಸುವುದಕ್ಕಾಗಿಯೇ ವಾನರಾಧಿಪರೆಂಬ ವಿಶೇಷಣವನ್ನುಪಯೋಗಿಸಿದುದಾಗಿ ಭಾವವು. ಮುಖ್ಯವಾಗಿ ಇದರಿಂದ ವಿಭೀಷಣನಿಗೆ,ಪ್ರತಿಕೂಲಸಮೂಹದಿಂದ ತಪ್ಪಿಸಿಕೊಂಡು ಬಂದ ಲಾಭವು ಮಾತ್ರವೇ ಅಲ್ಲದೆ, ಅನುಕೂಲರ ಕಟಾಕ್ಷಕ್ಕೂ ಅವನು ಗೋಚರನಾದನೆಂದು ಸೂಚಿತವಾಗುವುದು.

1 ಇಲ್ಲಿ "ಆತ್ಮಪಂಚಮ" ನೆಂದರೆ, ಅನಲ, ಶರಭ ಸಂಪಾತಿ, ಪ್ರಘಸರೆಂಬ ನಾಲ್ವರು ಮಂತ್ರಿಗಳೊಡನೆ ತಾನು ಐದನೆಯವನಾಗಿ ಬರುತಿದ್ದನೆಂದರ್ಥವು.

2 ಇಲ್ಲಿ "ಏಷ ಸರ್ವಾಯುಧೋಪೇತಶ್ಚತುರ್ಭಿಸ್ಸಹ ರಾಕ್ಷಸೈ: । ರಾಕ್ಷಸೋಭ್ಯೇತಿ ಪಶ್ಯಧ್ವಮಸ್ಮಾನ್ ಹಂತುಂ ನ ಸಂಶಯಃ "ಎಂದು ಮೂಲವು. ವಿಶೇಷಾರ್ಥವು:—(ಏ.

ಳನ್ನೂ ಧರಿಸಿದವನಾಗಿ, ಬೇರೆ ನಾಲ್ಕುಮಂದಿ ರಾಕ್ಷಸರೊಡನೆ ನಮ್ಮ ಕಡೆಗೆ ಬರುತ್ತಿರುವನು. ನಮ್ಮನ್ನು ಕೊಲ್ಲುವುದಕ್ಕಾಗಿಯೇ ಬರುವಂತಿದೆ. ಇದರಲ್ಲಿ ಸಂದೇಹವಿಲ್ಲ!" ಎಂದನು. [1]ಸುಗ್ರೀವನು ಹೇಳಿದ ಈಮಾತನ್ನು ಕೇ

---

ಷ:) ಇದೋ! ಇವನ ಆಕಾರದಲ್ಲಿಯೇ ಬೇರೆಯವರನ್ನು ಹಿಂಸಿಸುವುದಕ್ಕೆ ಬೇಕಾದ ಮಹಾ ಕ್ರೌರ್ಯವು ಕಾಣುವುದು. ಇವರಮೇಲೆ(ಸರ್ವಾಯುಧೋಪೇತ:) ಆ ವಿಧವಾದ ಸಹಜಕ್ರೌರ್ಯಕ್ಕೆ ಅನುಕೂಲಗಳಾದ ಹಿಂಸಾಪರಿಕರಗಳೆಲ್ಲವೂ ಇವನಲ್ಲಿ ತುಂಬಿರುವುವು. (ಹಿಂದೆ "ಉತ್ಪಪಾತ ಗದಾಪಾಣಿ:" ಎಂಬುದಾಗಿ ಒಂದುಗದೆಯನ್ನುಮಾತ್ರವೇ ಹಿಡಿದು ಮೇಲೆ ಹಾರಿದುದಾಗಿ ಹೇಳಿರುವಾಗ, ಇಲ್ಲಿ ಸರ್ವಾಯುಧೋಪೇತತ್ವವು ಹೇಗೆ" ಎಂದರೆ, ಸುಗ್ರೀವನಿಗೆ ರಾಮನಲ್ಲಿರುವ ಪ್ರೇಮಾಂಧತ್ವದಿಂದ,ಅನುಕೂಲನಾಗಿಬಂದ ವಿಭೀಷಣನಲ್ಲಿಯೂ ಪ್ರತಿಕೂಲಭಾವವು ತೋರಿದಂತೆ, ಅವನು ಹಿಡಿದಿದ್ದ ಒಂದಾಯುಧವೇ ಅನೇಕಾಯುಧಗಳಂತೆಯೂ ತೋರಿತೆಂದು ಗ್ರಹಿಸಬಹುದು. ಅಥವಾ ಅವನು ಆ ಒಂದಾಯುಧವನ್ನು ಕೈಯಲ್ಲಿ ಹಿಡಿದಿದ್ದ ಚಾತುರ್ಯವನ್ನು ನೋಡಿದರೆ, ಅವನಿಗೆ ಸಮಸ್ತಾಯುಧಗಳಲ್ಲಿಯೂ ಪರಿಶ್ರಮವಿದ್ದಂತೆ ತೋರುತಿತ್ತೆಂದೂ ಎಣಿಸಬಹುದು. ಅಥವಾ ಸ್ವಾಮಿಯಾದ ರಾಮನನ್ನು ಪೀಡಿಸಿ ವಶೀಕರಿಸುವುದಕ್ಕೆ ತಕ್ಕ ಬ್ರಹ್ಮಾಸ್ತ್ರದಂತಿರುವ ಶರಣಾಗತಿಯು ಅವನ ಕೈಯಲ್ಲಿರುವುದೆಂಬ ಭಾವದಿಂದ ಹಾಗೆ ಹೇಳಿರಬಹುದು. ಅಥವಾ ಗದೆಯೊಂದೇ ಸರ್ವಾಯುಧಗಳಿಗೂ ಉಪಲಕ್ಷಕವೆಂದು ಕೆಲವರ ಅಭಿಪ್ರಾಯವು.) (ಚತುರ್ಭಿಸ್ಸಹ ರಾಕ್ಷಸೈ:) ನಾಲ್ಕೇಮಂದಿ ರಾಕ್ಷಸರೊಡನೆ, "ಆ:! ಆತನ ತಂತ್ರವನ್ನು ನೋಡಿದಿರಾ! ದೊಡ್ಡ ಸೇನೆಯೊಡನೆ ಬಂದರೆ ಇದಿರಾಗಿ ನಿಂತು ಯುದ್ಧಮಾಡಿ ಜಯಿಸಬೇಕಾಗುವುದು. ಒಂಟಿಯಾಗಿ ಬಂದರೆ ತಪ್ಪಿಸಿಕೊಂಡು ಹೋಗುವುದು ಕಷ್ಟವು. ಆದುದರಿಂದಲೇ ಮಿತವಾದ ಸೈನ್ಯದೊಡನೆ ಬಂದಿರುವ"ನೆಂದು ಹೇಳಿದುದಾಗಿ ಭಾವವು. (ಅಸ್ಮಾನ್ಹಂತುಮಭ್ಯೇತಿ) ನಮ್ಮೆಲ್ಲರನ್ನೂ ಕೊಲ್ಲುವುದಕ್ಕಾಗಿಯೇ ಬರುತ್ತಿರುವನು. ನಮ್ಮಲ್ಲಿ ಯಾರನ್ನಾದರೂ ಕೆಲವರನ್ನು ಕೊಂದರೂ, ಉಳಿದವರು ಬದುಕಿಕೊಳ್ಳಬಹುದು.ನಮ್ಮೆಲ್ಲರಿಗೂ ಮೂಲಭೂತನಾದ ರಾಮನನ್ನೇ ಕೊಲ್ಲಬೇಕೆಂದು ಬಂದವನಾದುದರಿಂದ, ಇವನ ಆಗಮನವು ರಾಮವಧದಿಂದ ಏಕಕಾಲದಲ್ಲಿ ಸರ್ವನಾಶಕ್ಕೆ ಹೇತುವಾಗಬಹುದೆಂದು ಭಾವವು.

1 ಇಲ್ಲಿ "ಸುಗ್ರೀವಸ್ಯ ವಚಶ್ಶ್ರುತ್ವಾ ಸರ್ವೇತೇ ವಾನರೋತ್ತಮಾ: । ಸಾಲಾನುದ್ಯಮ್ಯ ಶೈಲಾಂಶ್ಚ ಇದಂವಚನಮಬ್ರುವನ್"ಎಂದು ಮೂಲವು. ವಿಶೇಷಾರ್ಥವು? (ಸುಗ್ರೀ

ಳಿದಕ್ಷಣವೇ,ಅಲ್ಲಿದ್ದ ಸಮಸ್ತವಾನರರೂ ಥಟ್ಟನೆ ಮೇಲೆದ್ದು,ಅಲ್ಲಲ್ಲಿ ಕೈಗೆ ಸಿಕ್ಕಿದ ಮರಗಿಡಗಳನ್ನೂ, ಬೆಟ್ಟಗುಡ್ಡಗಳನ್ನೂ ಕಿತ್ತುಕೊಂಡು, ತಮ್ಮ ಪ್ರಭುವಾದ ಸುಗ್ರೀವನನ್ನು ಕುರಿತು,“ಮಹಾರಾಜನೆ!ಯಾರು ಬಂದರೂ ಬರಲಿ!ಚಿಂತೆಯಿಲ್ಲ!ನೀನುಮಾತ್ರ ನಮಗೆ ಶೀಘ್ರದಲ್ಲಿ ಆಜ್ಞೆಯನ್ನು ಕೊಡು! ನೀನು ರಾಜನಾದುದರಿಂದ ನಿನ್ನಾಜ್ಞೆಯಿಲ್ಲದೆ ನಾವು ಯಾವಕಾರ್ಯಕ್ಕೂ ಸ್ವತಂತ್ರರಲ್ಲವು!ಅತ್ಯಲ್ಪವೀರ್ಯವುಳ್ಳ ಈರಾಕ್ಷಸರನ್ನು ಕೊಲ್ಲುವುದೇನೂ ನಮಗೆ ಅಸಾಧ್ಯವಲ್ಲ! ಈಗಲೇ ಅವರು ನಮ್ಮಿಂದ ಹತರಾಗಿ ಭೂಮಿಗೆ ಬಿದ್ದುಸಾಯಲಿ!"ಎಂದರು.ಹೀಗೆ ವಾನರರು ಪರಸ್ಪರಸಂಭಾಷಣವನ್ನು ಮಾಡುತ್ತಿರುವಾಗಲೂ,ವಿಭೀಷಣನು,ಯಾರೇನು ಹೇಳಿದರೂ ರಾಮನು ತನ್ನನ್ನು ಕೈಬಿಡಲಾರನೆಂಬ ನಂಬಿಕೆಯಿಂದ, ಭಯವಿಲ್ಲದೆ ಮುಂದೆ ಬಂದು,ಸಮುದ್ರದ ಉತ್ತರತೀರವನ್ನು ಸೇರಿ, ಅಂತರಿಕ್ಷದಲ್ಲಿಯೇ ನಿಂತಿದ್ದನು. [1] ವಿಭೀಷಣನು ಕಾ

---

ವಸ್ಯ ವಚಶ್ಶ್ರುತ್ವಾ) ಸುಗ್ರೀವನ ಮಾತನ್ನು ಕೇಳಿ, (ಸರ್ವೇತೇ)ಅವರೆಲ್ಲರೂ,ಎಂದರೆ, ಪ್ರಧಾನಾಪ್ರಧಾನರೆಂಬ ತಾರತಮ್ಯವನ್ನೆಣಿಸದೆ ಅಲ್ಲಿದ್ದವರೆಲ್ಲರೂ ಒಂದೇ ವಿಧವಾದ ಉತ್ಸಾಹವುಳ್ಳವರಾಗಿ ನಿಂತರೆಂದು ಭಾವವು. (ವಾನರೋತ್ತಮಾ:) ರಾಮಭಕ್ತಿ ವಿಷಯದಲ್ಲಿ ಸುಗ್ರೀವನಿಗಿಂತಲೂ ಅತಿಶಯಿಸಿದವರು:—ಉತ್ಕರ್ಷಕ್ಕೆ ಶೇಷಿತ್ವವೂ ಅಪಕರ್ಷಕ್ಕೆ ಶೇಷತ್ವವೂ ಹೇತುವಲ್ಲ.ರಾಮಭಕ್ತಿಯೇ ಉತ್ಕರ್ಷಕ್ಕೆ ಸಾಕ್ಷಾತ್ತಾಗಿ ಹೇತುವಾದುದರಿಂದ ಇಲ್ಲಿ ವಾನರೋತ್ತಮರೆಂಬ ವಿಶೇಷಣವು. (ಸಾಲಾನುದ್ಯಮ್ಯ ಶೈಲಾಂಶ್ಚ) ಮರಗಳೆಂದೂ, ಬೆಟ್ಟಗಳೆಂದೂ ನೋಡದೆ, ಕೈಗೆ ಸಿಕ್ಕಿದುದನ್ನೆಲ್ಲಾ ಎತ್ತಿಕೊಂಡು, ಇದರಿಂದ ತನ್ನ ಸ್ವಾಮಿಗೆ ವಿರೋಧಿಯಾದವನನ್ನು ಕೊಲ್ಲುವವಿಷಯದಲ್ಲಿ ಅವರಿಗಿದ್ದ ಅತ್ಯಾದರವು ಸೂಚಿತವಾಗುವುದು. ರಾಮಕೈಂಕರ್ಯಕ್ಕಾಗಿ ಲಕ್ಷ್ಮಣನು ಒಂದೇಸಲಕ್ಕೆ ಛತ್ರಚಾಮರಗಳೆರಡನ್ನೂ ತನ್ನ ಎರಡು ಕೈಗಳಿಂದಲೂ ಹಿಡಿದಂತೆ, ಇವರೂ ಆರಾಕ್ಷಸನನ್ನು ಕೊಲ್ಲುವುದೇ ರಾಮಕೈಂಕರ್ಯವೆಂದು ತಿಳಿದು, ತದನುಕೂಲಗಳಾದ ಪರಿಕರಗಳನ್ನು ಎರಡುಕೈಗಳಿಂದಲೂ ಧರಿಸಿ ನಿಂತರೆಂದು ಭಾವವು.

1 ಇಲ್ಲಿ “ಉವಾಚಚ ಮಹಾಪ್ರಾಜ್ಞಸ್ಸ್ವರೇಣ ಮಹತಾ ಮಹಾನ್ । ಸುಗ್ರೀವಂ ತಾಂಶ್ಚ ಸಂಪ್ರೇಕ್ಷ್ಯ ಖಸ್ಥಏವ ವಿಭೀಷಣಃ” ಎಂದು ಮೂಲವು. ವಿಶೇಷಾರ್ಥವು:—ವಿಭೀಷಣನು ತನ್ನನ್ನು ನಿಗ್ರಹಿಸುವುದಕ್ಕಾಗಿ ಉದ್ದೇಶಿಸಿರುವ ಸುಗ್ರೀವನನ್ನೂ, ಅವನ

ಲೋಚಿತವಾದ ಉಪಾಯಗಳನ್ನು ಚೆನ್ನಾಗಿ ತಿಳಿದ ಮಹಾಪ್ರಾಜ್ಞನಾ
ದುದರಿಂದ, ತಾನು ಆಕಾಶದಲ್ಲಿದ್ದಂತೆಯೇ ಕೆಳಗಿದ್ದ ಸುಗ್ರೀವನನ್ನೂ,
ಇತರ ವಾನರರನ್ನೂ ನೋಡಿ, ಗಂಭೀರವಾದ ಉಚ್ಚಸ್ವರದೊಡನೆ ಹೇಳು

---

ಪರಿಕರವನ್ನೂ ನೋಡಿ, ತನ್ನ ಆರ್ತಿಯೆಲ್ಲವೂ ತೋರುವಂತೆ ದೊಡ್ಡ ಕಂಠಧ್ವನಿಯಿಂದ ಈಮಾತನ್ನು ಹೇಳುವನು. (ಉವಾಚಚ) ಹೇಳಿಯೂ ಹೇಳಿದನೆಂಬುದರಿಂದ, ರಾಮನು ತನ್ನನ್ನು ಸ್ವೀಕರಿಸುವುದಕ್ಕೆ ತನ್ನ ಆಗಮನವೇ ಸಾಕಾಗಿದ್ದರೂ, ಬಾಯಿಂದಲೂ ಹೇಳಿತೊಡಗಿದನೆಂದು ಭಾವವು. ''ಪದ್ಭ್ಯಾಮಭಿಗಮಾಚ್ಚ" ಎಂಬುದಾಗಿ, ಹಿಂದೆ ಗುಹನು ತನ್ನಲ್ಲಿಗೆ ನಡೆದು ಬಂದುದೇ ತನಗೊಂದು ಭಾರವಾಗಿ ಎಣಿಸಿದ ರಾಮನಿಗೆ, ಶರಣಾಗತರಾಗಿ ಬಂದವರು ಬಾಯಿಬಿಟ್ಟೂ ಪ್ರಾರ್ಥಿಸಿದರೆ, ಉರಿಯುವ ಹುಣ್ಣಿಗೆ ಉಪ್ಪಿರುವಂತಲ್ಲವೆ? (ಮಹಾಪ್ರಾಜ್ಞಃ) ಪ್ರಾಜ್ಞನೆಂದರೆ ಹೇಯೋಪಾದೇಯಗಳನ್ನು ತಿಳಿದವನು. ಮಹಾಪ್ರಾಜ್ಞನೆಂದರೆ ಅವುಗಳನ್ನು ತಿಳಿಯುವುದು ಮಾತ್ರವಲ್ಲದೆ, ಹೇಯವನ್ನು ಬಿಟ್ಟು, ಉಪಾದೇಯವನ್ನು ಪಡೆಯತಕ್ಕ ಮಾರ್ಗವನ್ನೂ ತಿಳಿದವನೆಂದು ಭಾವವು. ಇಲ್ಲಿ ವಿಭೀಷಣನು ರಾವಣನ ದುಸ್ಸ್ವಭಾವವನ್ನೂ, ರಾಮನ ಮೇನ್ಮೆಯನ್ನೂ ತಿಳಿದು, ರಾವಣನನ್ನು ಬಿಟ್ಟು ರಾಮನನ್ನು ಮರೆಹುಗಬೇಕೆಂಬ ನಿಶ್ಚಯಜ್ಞಾನವುಳ್ಳವನೆಂದರ್ಥವು. (ಸ್ವರೇಣ ಮಹತಾ) ಕೇಳಿದವರಿಗೆಲ್ಲಾ ಮನಸ್ಸು ಕರಗುವಂತೆ ದೊಡ್ಡ ಆರ್ತಸ್ವರದಿಂದ, (ಸುಗ್ರೀವಂ ತಾಂಶ್ಚ ಸಂಪ್ರೇಕ್ಷ್ಯ) ತನ್ನನ್ನು ಕೊಲ್ಲುವುದಕ್ಕಾಗಿ ನಿಂತಿರುವ ಸುಗ್ರೀವನನ್ನೂ, ಅವನ ಕಡೆಯವಾನರರನ್ನೂ ನೋಡಿ, ಎಂದರೆ, ಅವರಿಂದಲೇ ತನಗೆ ಪುರುಷಕಾರವಾಗಬೇಕಾದುದರಿಂದ ಆ ರಾಮಭಕ್ತರೇ ತನಗೆ ಮುಖ್ಯೋಪದೇಶ್ಯರೆಂದೆಣಿಸಿದುದಾಗಿ ಭಾವವು. ಭಕ್ತರಾದವರು ಯಾವ ತಪ್ಪನ್ನುಮಾಡಿದರೂ ''ಜ್ಞಾನೀತ್ವಾತ್ಮೈವಮೇಮತಂ" ಎಂಬುದಾಗಿ ಅವರೇ ತನಗೆ ಆತ್ಮನಂತೆ ಧಾರಕರೆಂದು ಭಗವಂತನೇ ಹೇಳಿಕೊಂಡಿರುವುದರಿಂದ, ಆ ಭಗವದಾಜ್ಞೆಯನ್ನು ಮೀರಿ ಹೋಗುವುದಕ್ಕಿಲ್ಲದೆ, ಭಗವಂತನ ಬಹುಮಾನಕ್ಕೆ ಪಾತ್ರರಾದ ಆ ಭಕ್ತರನ್ನೇ ಗೌರವದೃಷ್ಟಿಯಿಂದ ನೋಡಿದುದಾಗಿ ಭಾವವು. ಅಥವಾ ಮಹಾಪ್ರಾಜ್ಞನೆಂಬುದಕ್ಕೆ ರಾಜನು ಎಷ್ಟೋ ಕೃಪಾಳುವಾಗಿದ್ದರೂ ಅವನಿಗೆ ಅಂತರಂಗಭೂತರಾದವರ ಪುರುಷಕಾರದಿಂದಲೇ ಅವನಲ್ಲಿ ಶರಣುಹುಗಬೇಕೆಂಬ ಪರಿಜ್ಞಾನವನ್ನೂ, ವಾನರರು ಹೀಗೆ ತನ್ನಲ್ಲಿ ಪ್ರತಿಕೂಲತೆಯನ್ನು ತೋರಿಸುವುದೂ ರಾಮನಲ್ಲಿರುವ ಭಕ್ತ್ಯತಿಶಯದಿಂದಲೇ ಹೊರತು ತನ್ನಲ್ಲಿ ದ್ವೇಷಬುದ್ಧಿಯಿಂದಲ್ಲವೆಂಬ ಪರಿಜ್ಞಾನವನ್ನೂ, ರಾಮನ ಅಂಗೀಕಾರಕ್ಕಿಂತಲೂ ರಾಮಭಕ್ತರ ಅಂಗೀಕಾರವೇ ತನಗೆ ಪರಮಪುರುಷಾರ್ಥವೆಂಬ ಪರಿಜ್ಞಾನವನ್ನೂ ಹೊಂದಿದವನೆಂದು ಭಾವವು,

ವನು. [1] „ ಎಲೈ ವಾನರೋತ್ತಮರೆ ! ನಮ್ಮ ರಾಕ್ಷಸಕುಲಕ್ಕೆ ಪ್ರಭುವಾದ ರಾವಣನೆಂಬ ರಾಕ್ಷಸನೊಬ್ಬನುಂಟು ! ಅವನು ಬಹಳ ದುರ್ಮಾರ್ಗನು. ಅವನಿಗೆ ನಾನು ಒಡಹುಟ್ಟಿದ ತಮ್ಮನು. ನನಗೆ ವಿಭೀಷ

---

ಮತ್ತು, “ಆಕಿಂಚನ್ಯೈಕಶರಣಾ: ಕೇಚಿದ್ಭಾಗ್ಯಾಧಿಕಾ: ಪುನ: । ಮಾಮೇವ ಶರಣಂ ಪ್ರಾಪ್ಯ ಮಾಮೇವಾಂತೇ ಸಮಶ್ನುತೇ” ಎಂದು ಲಕ್ಷ್ಮೀತಂತ್ರದಲ್ಲಿ ಹೇಳಿರುವಂತೆ, ರಾಮನನ್ನು ಕುರಿತು ಇಂತಹ ಆರ್ತಸ್ವರವನ್ನುಚ್ಚರಿಸುವ ಮಹಾಭಾಗ್ಯಕ್ಕೆ ಪಾತ್ರನಾದವನು ಈ ಮಹಾತ್ಮನೊಬ್ಬನೇ ಎಂಬುದಕ್ಕಾಗಿ (ಮಹಾರ್ಹ) ಎಂಬ ಶಬ್ದವು.

I ಇಲ್ಲಿ “ರಾವಣೋ ನಾಮ ದುರ್ವೃತ್ತೋ ರಾಕ್ಷಸೋ ರಾಕ್ಷಸೇಶ್ವರ: । ತಸ್ಯಾಹಮನುಜೋ ಭ್ರಾತಾ ವಿಭೀಷಣ ಇತಿಶ್ರುತ:” ಎಂದು ಮೂಲವು- ವಿಶೇಷಾರ್ಥವು:—ಇದುಮೊದಲು ಐದುಶ್ಲೋಕಗಳಿಂದ, ವಿಭೀಷಣನು ಶರಣಾಗತಿಗೆ ಅಂಗವಾದ ಸ್ವನಿಕರ್ಷವನ್ನು ಎಂದರೆ ತನ್ನ ಹೀನತೆಯನ್ನು ತೋರಿಸಿ ಶರಣಾಗತಿಯನ್ನು ಮಾಡುವನು. ಅದರಲ್ಲಿ ಈ ಮೊದಲನೆಯ ಶ್ಲೋಕದಿಂದ, ಪ್ರತಿಕೂಲನಾದ ರಾವಣನಿಗೆ ತಾನು ಇದುವರೆಗೆ ಶೇಷಭೂತನಾಗಿದ್ದುದರಿಂದ ತನಗುಂಟಾದ ನಿಕರ್ಷವೊಂದು; ಅವನೊಡನೆ ತನಗೆ ಜನ್ಮಸಿದ್ಧವಾದ ಭ್ರಾತೃತ್ವಸಂಬಂಧದ ನಿಕರ್ಷವೊಂದು! ತನಗೆ ಸಹಜನ್ಯವಾದ ನಿಕರ್ಷವೊಂದು;ಈ ಮೂರನ್ನೂ ಹೇಳುವನು.(ರಾವಣೋನಾಮ) ಸಮಸ್ತ ಲೋಕಗಳನ್ನೂ ಗೋಳಾಡಿಸತಕ್ಕವನೆಂದು ಅವನ ಹೆಸರೇ ಕ್ರೂರವಾಗಿರುವುದು. ಇದರಮೇಲೆ(ದುರ್ವೃತ್ತ:) ಅವನ ನಡತೆಯೂ ಕ್ರೂರವು (ರಾಕ್ಷಸ:) ಪೂರ್ವೋಕ್ತ ದೋಷಗಳಾದರೂ ಆಗಂತುಕಗಳಾಗಿ ಬಂದುವಲ್ಲ.ಜಾತಿಸಿದ್ಧವಾಗಿಯೇ ಬಂದಿರುವುವು.ಉತ್ತಮಜಾತಿಯವನಲ್ಲಿ ದುರಾಚಾರಗಳನ್ನು ಕಂಡಾಗ, ಅವನ ಕುಲದ ಮೇಲ್ಮೆಯನ್ನೆತ್ತಿ ಹೇಳಿ, ಆ ಕೆಟ್ಟನಡತೆಯನ್ನು ತಪ್ಪಿಸಿದರೂ ತಪ್ಪಿಸಬಹುದು. ಹೀನಜಾತಿಯವನಿಗೆ ಇಂತಹ ಕ್ರೂರಕೃತ್ಯಗಳೆಲ್ಲವೂ ಕುಲಧರ್ಮವಾದುದರಿಂದ ಅವುಗಳನ್ನು ಪರಿಹರಿಸುವುದಕ್ಕೆ ಹೇಗೂ ಸಾಧ್ಯವಲ್ಲವೆಂದು ಭಾವವು. (ರಾಕ್ಷಸೇಶ್ವರ:) ತಾನು ಕ್ರೂರನಾಗಿರುವುದಲ್ಲದೆ ಕ್ರೂರರಾದ ಅನೇಕ ಪರಿಚರರೊಡನೆಯೂ ಕೂಡಿದವನು. (ತಸ್ಯಾಹಂ) ಇಂತಹ ರಾವಣನಿಗೆ ನಾನು ಸಂಬಂಧಪಟ್ಟವನು. ಎಂದರೆ ಅವನಿಗೆ ಶೇಷಭೂತನಾಗಿದ್ದವನು. ಇದರಮೇಲೆ (ಅನುಜ: ಭ್ರಾತಾ) ಅವನು ಹುಟ್ಟಿದ ಗರ್ಭದಲ್ಲಿಯೇ ಹುಟ್ಟಿದವನು. ಇದರಮೇಲೆ (ಅನುಜ:) ಅವನ ತಮ್ಮನು. ಒಂದುವೇಳೆ ನಾನೇ ಅಣ್ಣನಾಗಿದ್ದರೆ, ಅವನ ಆಜ್ಞಾಧೀನನಾಗಿರದೆ ಸ್ವತಂತ್ರನಾಗಿರಬಹುದಾಗಿತ್ತು. ಆಗ ನಾನೂ ಕುಬೇರನಂತೆ ಅವನ ದೋಷಕ್ಕೆ ಭಾಗಿಯಾಗುತ್ತಿರಲಿಲ್ಲ. ಹಾಗಿಲ್ಲದೆ ನಾನು ಅವನಿಗೆ ತಮ್ಮನಾದುದರಿಂದಲೇ ಅವನ ದುರ್ಮಾರ್ಗಕ್ಕೆ

ಣನೆಂದು ಹೆಸರು. [1] ದುರಾತ್ಮನಾದ ಆ ರಾವಣನು, ಗರ್ಭವಾಸಾದಿ ದುಃಖಗಳನ್ನೂ ತಿಳಿಯದೆ ಬಾಲ್ಯದಿಂದಲೂ ಸುಖವಾಗಿ ಬೆಳೆದ ಸೀತೆ ಯೆಂಬವಳು ಜನಸ್ಥಾನದಲ್ಲಿದ್ದಾಗ, ಅವಳನ್ನು ಕದ್ದು ತರುತ್ತ, ದಾರಿಯಲ್ಲಿ ತನ್ನನ್ನು ತಡೆಯುವುದಕ್ಕಾಗಿ ಬಂದ ಜಟಾಯುವನ್ನೂ ಕೊಂದು, ಆಕೆಯ ನ್ನು ಲಂಕೆಯಲ್ಲಿ ಸೆರೆಹಾಕಿರುವನು.ಅವಳಮೇಲೆ ಅನೇಕ ರಾಕ್ಷಸಿಯರನ್ನೂ ಕಾವಲಿರಿಸಿರುವನು. ಅವಳು ದುಃಖದಿಂದ ಮೈಮರೆತು ದೀನಳಾಗಿ ಕೊರ ಗುತ್ತಿರುವಳು. ಈ ಅಕೃತ್ಯವನ್ನು ನೋಡಿ ಸಹಿಸಲಾರದೆ ನಾನು ಆ ರಾವ ಣನಿಗೆ ಹೇತುಯುಕ್ತಗಳಾದ ನಾನಾವಿಧವಾಕ್ಯಗಳಿಂದ ನೀತಿಯನ್ನು ಬೋ ಧಿಸಿ, ಆ ಸೀತೆಯನ್ನು ರಾಮನಿಗೊಪ್ಪಿಸುವಂತೆ ಬಾರಿಬಾರಿಗೂ ನಿರ್ಬಂಧಿಸಿ ಹೇಳಿದೆನು. ಎಷ್ಟು ಹೇಳಿದರೇನು? ಸಾವಿಗೆ ಸಿಕ್ಕಿದವನು ಔಷಧವನ್ನೊಲ್ಲದಂ ತೆ ಮೃತ್ಯುವಶನಾದ ರಾವಣನಿಗೆ, ನನ್ನ ವಾಕ್ಯಗಳೊಂದೂ ಕಿವಿಗೇರಲಿಲ್ಲ. ಹಾಗೆ ಹಿತವನ್ನು ಹೇಳುವುದಕ್ಕಾಗಿ ಹೋದ ನನ್ನನ್ನೇ ಆತನು ಕ್ರೂರವಾ ಕ್ಯಗಳಿಂದ ಧಿಕ್ಕರಿಸಿದುದೂ ಅಲ್ಲದೆ,ಕೇವಲದಾಸನಿಗಿಂತಲೂ ಕಡೆಮಾಡಿ ನನ್ನ

---

ಬಳಪಟ್ಟು ನಡೆಯಬೇಕಾಯಿತೆಂದು ಭಾವವು. (ವಿಭೀಷಣ ಇತಿಶ್ರುತಃ) ಮೇಲೆ ಹೇಳಿದಂ ತೆ ರಾವಣನೊಡನೆ ಸಂಬಂಧದಿಂದುಂಟಾದ ದೋಷವು ಮಾತ್ರವೇ ಅಲ್ಲದೆ, ನಾನೂ ಭ ಯಂಕರನೆಂದೇ ಲೋಕದಲ್ಲಿ ಕರೆಯಲ್ಪಡುತ್ತಿರುವೆನು. ರಾವಣನಿಗಾದರೋ ತನ್ನಲ್ಲಿ ಸಹ ಜನ್ಯಗಳಾದ ದೋಷಗಳು ಮಾತ್ರವೇ ಇರುವುವು. ನನಗೆ ನನ್ನ ದೋಷಗಳಲ್ಲದೆ ಅವನ ಸಂಬಂಧದಿಂದುಂಟಾದ ದೋಷಗಳೂ ಪ್ರಾಪ್ತವಾಗಿರುವುವೆಂದು ನಿರ್ವೇದವು ಸೂಚಿತ ವಾಗುವುದು. "ವಿಭೀಷಣಸ್ತು ಧರ್ಮಾತ್ಮಾ" ಎಂದು ವಿಭೀಷಣನು ತಾನು ಧರ್ಮಾತ್ಮನೆಂ ಬುದಾಗಿ ಲೋಕಪ್ರಸಿದ್ಧಿಯನ್ನು ಹೊಂದಿದ್ದರೂ, ಶರಣಾಗತಿಗೆ ಬೇಕಾದ ಕಾರ್ಪಣ್ಯ ರೂಪವಾದ ಅಂಗವನ್ನು ಇದರಿಂದ ತೋರಿಸಿದುದಾಗಿ ಗ್ರಾಹ್ಯವು.

1 ರಾವಣನಲ್ಲಿ ಹಿಂದೆ ಹೇಳಿದ ದೋಷಗಳನ್ನು ಪ್ರಾಯಶ್ಚಿತ್ತಗಳಿಂದಾದರೂ ತೊ ಲಗಿಸಬಹುದು. ಇವಕ್ಕಿಂತಲೂ ಕ್ರೂರವಾಗಿ "ನಕ್ಷಮಾಮಿ" ಎಂಬಂತೆ ಯಾವ ವಿಧ ದಿಂದಲೂ ಭಗವಂತನ ಕ್ಷಮೆಗೆ ಪಾತ್ರವಾಗದ ಭಾಗವತಾಪಚಾರಕ್ಕೂ ಆತನು ಪಾತ್ರ ನೆಂಬುದನ್ನು ಈ ವಾಕ್ಯದಿಂದ ಸೂಚಿಸುವುದಾಗಿ ಗ್ರಾಹ್ಯವು. ಇಲ್ಲಿ ಜಟಾಯುವಧ ಸೀ ತಾಪಹರಣಗಳೆರಡೂ ಭಾಗವತಾಪಚಾರಗಳೆಂದು ತಿಳಿಯಬೇಕು.

ನ್ನು ಅವಮಾನಪಡಿಸಿದನು.[1] ಆ ಕ್ಷಣವೇ ನಾನು ನನ್ನ ಹೆಂಡಿರುಮಕ್ಕಳನ್ನೂ ಬಿಟ್ಟು, ರಘುಕುಲೋತ್ತಮನಾದ ರಾಮನನ್ನು ಮರೆಹುಗಬೇಕೆಂದು ಸಂಕಲ್ಪಿಸಿ ಬಂದೆನು. ಆದುದರಿಂದ ಎಲೈ ವಾನರರೆ![1] ನೀವು, ಈಗಲೇ ಹೋಗಿ

---

1 ಇಲ್ಲಿ "ತ್ಯಕ್ತ್ವಾಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂಗತಃ." ಎಂಬುದು ಮೂಲವು. ಇದರಿಂದ ತಾನು ಸೋಪಾಧಿಕಬಂಧುವರ್ಗಗಳನ್ನು ಬಿಟ್ಟು, ನಿರುಪಾಧಿಕಬಂಧುವಾದ ರಾಮನನ್ನೇ ಮರೆಹೊಕ್ಕುದಾಗಿ ಭಾವವು. ಹೇಗೆಂದರೆ:—(ಪುತ್ರಾಂಶ್ಚ) ನರಕನಿಸ್ತಾರಕರಾದ ಪುತ್ರರನ್ನೂ, (ದಾರಾಂಶ್ಚ) ಸಹಧರ್ಮಚಾರಿಣಿಯರಾದ ಭಾರ್ಯೆಯರನ್ನೂ (ತ್ಯಕ್ತ್ವಾ) ಬಿಟ್ಟು, ಇದರಿಂದ ಪ್ರಪತ್ತಿಮಾಡುವವರಿಗೆ ಪ್ರಾಪ್ಯಾಭಾಸ ಪ್ರಾಪಕಾಭಾಸಗಳೆರಡೂ ತ್ಯಾಜ್ಯಗಳೆಂದೂ, ಪ್ರಪತ್ತಿಗೆ ತ್ಯಾಗವೂ ಅಂಗವೆಂದೂ ಸೂಚಿತವು. (ರಾಘವಂಶರಣಂಗತಃ) "ಭ್ರಾತಾಭರ್ತಾಚ ಬಂಧುಶ್ಚ ಪಿತಾಚಮಮ ರಾಘವಃ." ಎಂಬಂತೆ ಸರ್ವವಿಧಬಂಧುವಾದ ರಾಮನನ್ನೇ ಮರೆಹೊಕ್ಕಿರುವೆನೆಂದರ್ಥವು "ಕಿಂತ್ವರ್ಥಿನಾಮರ್ಥಿತದಾನದೀಕ್ಷಾಕೃತವ್ರತಶ್ಲಾಘ್ಯಮಿದಂಕುಲಂತೇ" ಎಂಬಂತೆ ಆಶ್ರಿತರಿಗೆ ಸರ್ವಾಭೀಷ್ಟಗಳನ್ನೂ ಕೊಡತಕ್ಕ ಕುಲದಲ್ಲಿ ಹುಟ್ಟಿದವನನ್ನೇ ಕೈಹಿಡಿದೆನೆಂದು ರಾಘವಶಬ್ದಾರ್ಥವು. (ತನಿಶ್ಲೋಕಿ)ಇಲ್ಲಿ ಈಶ್ವರನ ನಿರ್ಹೇತುಕಕರುಣಾಪರಿಪಾಕದಿಂದಲೇ ವಿಭೀಷಣನಿಗೆ ರಾವಣನಿಂದ ತಿರಸ್ಕಾರವುಂಟಾಯಿತೆಂದೂ, ಅದರಿಂದಲೇ ಅವನಿಗೆ ಪ್ರಯೋಜನಾಂತರಗಳಲ್ಲಿ ವೈಮುಖ್ಯವೂ ಸಿದ್ಧಿಸಿತೆಂದೂ ಗ್ರಾಹ್ಯವು. ಮತ್ತು ಇಲ್ಲಿ (ತ್ಯಕ್ತ್ವಾಪುತ್ರಾಂಶ್ಚ ದಾರಾಂಶ್ಚ) ಎಂಬುದರಿಂದ ಪ್ರಾತಿಕೂಲ್ಯವರ್ಜನವೆಂಬ ಅಂಗವೂ, (ರಾಘವಂಶರಣಂಗತಃ) ಎಂಬುದರಿಂದ ಆತ್ಮನಿಕ್ಷೇಪವೆಂಬ ಅಂಗವೂ ಕಾಣಿಸಲ್ಪಟ್ಟಿವೆ. (ಮಹೇಶ್ವರತೀರ್ಥರು).

1 ಇಲ್ಲಿ ಸರ್ವಲೋಕ ಶರಣ್ಯಾಯ ರಾಘವಾಯ ಮಹಾತ್ಮನೇ । ನಿವೇದಯತ ಮಾಂಕ್ಷಿಪ್ರಂ ವಿಭೀಷಣಮುಪಸ್ಥಿತಂ" ಎಂದು ಮೂಲವು. ವಿಶೇಷಾರ್ಥವು:—ಇದುವರೆಗೆ ತನಗೆ ಶರಣ್ಯನಾದ ರಾಮನಿಗೆ ವಿಜ್ಞಾಪಿಸಬೇಕಾದ ವಿಷಯಗಳನ್ನು ತಿಳಿಸಿ, ಇಲ್ಲಿ ಅವುಗಳನ್ನು ವಿಜ್ಞಾಪಿಸುವುದಕ್ಕಾಗಿ ಪುರುಷಕಾರಭೂತರನ್ನು ಪ್ರಾರ್ಥಿಸುವನು. (ಸರ್ವಲೋಕಶರಣ್ಯಾಯ) ಕುಲಶೀಲವಿದ್ಯಾದಿಗಳಲ್ಲಿ ತಾರತಮ್ಯವನ್ನು ನೋಡದೆ, ಸಮಸ್ತಲೋಕಗಳಿಗೂ ರಕ್ಷಕನಾದವನು. ಹೀಗೆ ಆತನು ಸರ್ವಶರಣ್ಯನಾದುದರಿಂದ, ಆತನ ಶರಣ್ಯತ್ವದಲ್ಲಿ ನಿಮ್ಮಗಿರುವಂತೆಯೇ ನನಗೂ ಭಾಗವುಂಟೆಂದೂ, ಹಾಗೆಯೇ ದುಷ್ಟನಾದ ರಾವಣನಿಗೂ ಅದರಲ್ಲಿ ಭಾಗವಿದ್ದರೂ, ರಾವಣನು ಆ ಶರಣ್ಯತ್ವದಲ್ಲಿ ತಕ್ಕಷ್ಟು ಅಭಿರುಚಿಯನ್ನು ತೋರಿಸದೆ ಹೋದುದರಿಂದ, ಅವನು ತನ್ನ ಭಾಗವನ್ನು ಹೋಗಲಾಡಿಸಿ ಕೊಂಡಿರುವನೆಂದೂ, ನಾನಾದರೋ ಅದರಲ್ಲಿ ಆಸೆಯಿಟ್ಟು ಆಭಿಮುಖ್ಯದಿಂದ

ಸರ್ವಲೋಕ ಶರಣ್ಯನಾಗಿಯೂ, ರಘುಕುಲನಂದನನಾಗಿಯೂ, ಮಹಾತ್ಮ

---

ಬಂಧವಿಲ್ಲವಾದುದರಿಂದ, ಆವರಲ್ಲಿ ತನಗೆ ಬರಬೇಕಾದ ಭಾಗವನ್ನು ತಪ್ಪಿಸುವುದಕ್ಕೆ ಇತರರಿಗೆ ಸಾಧ್ಯವಲ್ಲವೆಂದೂ ಭಾವವು. ಆದರೆ "ಶರಣ್ಯತ್ವಕ್ಕೆ ಅಂಗಭೂತಗಳಾದ ಸೌಲಭ್ಯವೂ, ಪರತ್ವವೂ ಆತನಲ್ಲಿರಬೇಕಲ್ಲವೆ?" ಎಂದರೆ, ಆ ಪ್ರಧಾನಗುಣಗಳೂ ಇರುವು ವೆಂಬುದಕ್ಕಾಗಿ (ರಾಘವಾಯ ಮಹಾತ್ಮನೇ) ಎಂಬೀ ಎರಡು ವಿಶೇಷಣಗಳು. (ರಾಘವಾಯ) ರಘುವಂಶದಲ್ಲಿ ಹುಟ್ಟಿದವನು, ''ಯತ್ತದದ್ರೇಶ್ಯಂ'' ಎಂಬಿವೇ ಮೊದಲಾದ ವೇದಾಂತಗಳಿಗೆ ಗೋಚರನಾದ ಪರಬ್ರಹ್ಮನು, ಸಕಲಪ್ರಾಣಿ ಸಾಕ್ಷಾತ್ಕಾರಕ್ಕೆ ಅರ್ಹನಾಗುವಂತೆ ರಘುವಂಶದಲ್ಲಿ ಮನುಷ್ಯರೂಪದಿಂದವತರಿಸಿರುವಾಗ ಇದಕ್ಕಿಂತಲೂ ಸೌಲಭ್ಯವೇನುಂಟು ? (ಮಹಾತ್ಮನೇ) ಹೀಗೆ ಮನುಷ್ಯನಾಗಿ ಅವತರಿಸಿದ್ದರೂ, ತನ್ನ ಅಪ್ರಾಕೃತಸ್ವಭಾವವನ್ನು ಬಿಡದೆ ಜ್ಞಾನಶಕ್ತ್ಯಾದ್ಯನಂತಕಲ್ಯಾಣಗುಣೈಕತಾನನಾಗಿರುವನು.(ರಾಘವಾಯ ಮಹಾತ್ಮನೇ) ಸೌಲಭ್ಯವೊಂದೇ ಇದ್ದ ಪಕ್ಷದಲ್ಲಿಯೂ ಅದರಿಂದ ಪ್ರಯೋಜನವಿಲ್ಲ. ಮೇರುಪರ್ವತಾದಿಗಳಂತೆ ಪರತ್ವವುಮಾತ್ರವೇ ಇದ್ದ ಪಕ್ಷದಲ್ಲಿಯೂ ಇತರರಿಗೆ ದುರ್ಲಭನಾಗುವುದರಿಂದ ಅದೂ ಪ್ರಯೋಜನಕಾರಿಯಲ್ಲ. ಆದುದರಿಂದ ಇವನಲ್ಲಿ ಸೌಲಭ್ಯಪರತ್ವಗಳೆರಡೂ ಎಡೆಬಿಡದೆ ಕಲೆತಿರುವುವೆಂದು ಭಾವವು. ಅಂತಹ ರಾಮನಿಗೆ (ನಿವೇದಯತ ಮಾಂ) ನನ್ನನ್ನು ತಿಳಿಸಿರಿ! ನೀವು ನನ್ನಲ್ಲಿ ಆ ರಾಮನಿಗೆ ಹೇಗಾದರೂ ಅನುಗ್ರಹವನ್ನು ಹುಟ್ಟಿಸಬೇಕೆಂಬುದಕ್ಕಾಗಿ ನನ್ನಲ್ಲಿ ಇಲ್ಲದ ಗುಣಗಳನ್ನಾರೋಪಿಸಿ ಹೇಳಬೇಕಾದುದಿಲ್ಲ. ನಿರ್ಹೇತುಕಕೃಪಾಪೂರ್ಣನಾದ ಆತನಲ್ಲಿ ಶರಣಾಗತನಾಗಿ ನಾನು ಬಂದಿರುವೆನೆಂದುಮಾತ್ರ ತಿಳಿಸಿದರೆ ಸಾಕು! ಅಷ್ಟರಿಂದಲೇ ಆತನು ನನ್ನನ್ನನುಗ್ರಹಿಸುವನು. (ಕ್ಷಿಪ್ರಂ) ಲೋಕಶರಣ್ಯನಾದ ಆ ರಾಮನು ತಾನಾಗಿ ಬಂದು ನನ್ನನ್ನು ಪರಿಗ್ರಹಿಸುವುದಕ್ಕೆಮೊದಲೇ ನೀವು ವಿಜ್ಞಾಪಿಸಿದರೆ, ನಿಮಗೆ ಮಿತ್ರಕಾರ್ಯವನ್ನು ನಡೆಸಿದ ಕೀರ್ತಿಯಾದರೂ ಉಂಟು. ಈಗ ನೀವು ತಡಮಾಡಿದರೆ ನಿಮ್ಮ ಲಾಭಕ್ಕೇ ಹಾನಿಯೇಹೊರತು ನನ್ನ ಕೋರಿಕೆಗೆ ಎಂದಿಗೂ ಲೋಪವಾಗದು (ವಿಭೀಷಣಂ) ರಾವಣನಂತೆ ನಾನು ಪ್ರತಿಕೂಲನೆಂದು ತಿಳಿಯಬೇಡಿರಿ. ''ವಿಭೀಷಣಸ್ತು ಧರ್ಮಾತ್ಮಾ" ಎಂಬಂತೆ ಅನುಕೂಲನು. (ಉಪಸ್ಥಿತಂ) ಸಮೀಪಕ್ಕೂ ಬಂದಿರುವೆನು. ಒಂದುವೇಳೆ ನಾನು ನಿಮಗೆ ಹೀನನೆಂದು ತೋರಿದರೂ, ಸಮೀಪಕ್ಕೆ ಬರುವುದೊಂದೇ ಆ ರಾಮನ ಅನುಗ್ರಹಕ್ಕೆ ಸಾಕಾದ ಸಾಧನವಾದುದರಿಂದ ಅವನು ನನ್ನನ್ನು ತಪ್ಪದೆ ಅಂಗೀಕರಿಸುವನೆಂದೂ ಭಾವವು. ಗೋವಿಂದರಾಜರು.

(ಸರ್ವಲೋಕಶರಣ್ಯಾಯ) ಅಧಿಕಾರಭೇದವಿಲ್ಲದೆ ಸುರನರವಾನರಾದಿಗಳಾದ ಸ

ನಾಗಿಯೂ, ಇರುವ ಆ ರಾಮನಿಗೆ, ವಿಭೀಷಣನೆಂಬ ನಾನು ಶರಣಾ

---

ಮಸ್ತ ಲೋಕಕ್ಕೂ. ಸಮಾಶ್ರಣೀಯನಾಗಿರುವವನು (ರಾಘವಾಯ) ಆಶ್ರಿತರಕ್ಷಣೆಯಿಂ ದ ಪ್ರಸಿದ್ಧವಾದ ರಘುಕುಲದಲ್ಲಿ ಹುಟ್ಟಿದವನು. (ಮಹಾತ್ಮನೇ)ಪರಮಾತ್ಮಸ್ವರೂಪನು. ಇಂತಹ ರಾಮನಿಗೆ(ಮಾಂ ಕ್ಷಿಪ್ರಂ ನಿವೇದಯತ) ನನ್ನನ್ನು ಶೀಘ್ರದಲ್ಲಿ ತಿಳಿಸಿರಿ(ವಾಚಾಧರ್ಮಮವಾಪ್ನುಹಿ) ಎಂಬಂತೆ ನಾನು ಬಂದಿರುವ ಸಂಗತಿಯನ್ನು ಹೇಳಿದಮಾತ್ರದಿಂದಲೇ ನಿಮಗೆ ಮಹೋಪಕಾರಫಲವು ಸಿದ್ಧಿಸುವುದೆಂದು ಭಾವವು. (ಅಪ್ರಾರ್ಥಿತೋ ನ ಗೋಪಾಯೇದಿತಿ ತತ್ಪ್ರಾರ್ಥನಾಮತಿಃ । ಗೋಪಾಯಿತಾ ಭವತ್ಯೇವಂ ಗೋಪ್ತೃತ್ವ ವರಣಂ ಸ್ಮೃತಂ") ಎಂಬಂತೆ ಇದರಿಂದ ಗೋಪ್ತೃತ್ವವರಣವೆಂಬ ಅಂಗವು ಹೇಳಲ್ಪಟ್ಟಿತು. (ಉಪಸ್ಥಿತಂ) ಸಮೀಪಕ್ಕೆ ಬಂದವನು. ಇದರಿಂದ "ರಕ್ಷಿಷ್ಯತ್ಯನುಕೂಲಾನ್ನ ಇತ್ಯೇವಂ ಸುದೃಢಾಮತಿಃ । ಸವಿಶ್ವಾಸೋಭವೇಚ್ಚಾತ್ರ ಸರ್ವದುಷ್ಕೃತಿ ನಾಶನಃ" ಎಂಬ ವಿಶ್ವಾಸರೂಪವಾದ ಅಂಗವು ತೋರಿಸಲ್ಪಟ್ಟಿರುವುದು. ಇಲ್ಲಿ ವಿಭೀಷಣನು ಕೇವಲರಾಜಪುತ್ರನಾದ ರಾಮನನ್ನು ಕುರಿತು ಸರ್ವಲೋಕಶರಣ್ಯನೆಂದೂ, ಪರಾತ್ಪರನೆಂದೂ ಹೇಳಿದುದು ಹೇಗೆ? ಎಂದರೆ ಪೂರ್ವದಲ್ಲಿ, ಈತನು ಬ್ರಹ್ಮದೇವನನ್ನು ಕುರಿತು "ಪರಮಾಪದ್ಗತಸ್ಯಾಪಿ ಧರ್ಮೇಮಮ ಮತಿರ್ಭವೇತ್"।ಯಾಯಾ ಮೇ ಜಾಯತೇ ಬುದ್ಧಿರ್ಯೇಷು ಯೇಷ್ವಾಶ್ರಯೇಷುಚ ॥ ಸಾಸಾಭವತು ಧರ್ಮಿಷ್ಠಾ ತಂತಂ ಧರ್ಮಂಚ ಪಾಲಯೇತ್"॥ ಇತ್ಯಾದಿವಾಕ್ಯಗಳಿಂದ ಪ್ರಾರ್ಥಿಸಿ ಕೇಳಿಕೊಂಡುದರಮೇಲೆ, ಬ್ರಹ್ಮನು ಹಾಗೆಯೇ ಅನುಗ್ರಹಿಸಿ, "ಧರ್ಮಿಷ್ಠತ್ವಂ ತಥಾ ವತ್ಸ ತಥಾಚೈತದ್ಭವಿಷ್ಯತಿ" ಎಂದು ವರವನ್ನು ಕೊಟ್ಟಿರುವುದರಿಂದ, ರಾಮನು ಸಕಲ ಜಗದ್ರಕ್ಷಣಾರ್ಥವಾಗಿಯೇ ಇಕ್ಷ್ವಾಕುವಂಶದಲ್ಲಿ ಅವತರಿಸಿದ ಪರಮಪುರುಷನೆಂದು ತಿಳಿದು, ಹಾಗೆ ಹೇಳಿರುವನೆಂದು ಗ್ರಾಹ್ಯವು, (ಮಹೇಶ್ವರತೀರ್ಥರು.)

ಅಥವಾ (ನಿವೇದಯತ)ತಿಳಿಸಿಬಿಡಿರಿ? "ಯಂಪ್ರಜಾಪತಿರ್ವೇದ ಸಪುಣ್ಯೋಭವತಿ" ಪರಮಪುರುಷನಿಗೆ ತಿಳಿದವನೇ ಪುಣ್ಯಪುರುಷನೆಂಬಂತೆ ರಾಮನ ಮನಸ್ಸಿಗೆ ಬಂದಾಗಲೇ ನನಗೆ ಸ್ವರೂಪವು ಸಿದ್ಧಿಸುವುದು. ಅದನ್ನು ನಿಮ್ಮ ಪುರುಷಕಾರದಿಂದಲೇ ಹೊಂದಬೇಕೆಂದು ಕೋರುವವನಾದುದರಿಂದ ನೀವು ಹೋಗಿ ತಿಳಿಸಿರಿ? (ನಿವೇದಯತ)"ಸ್ವರೇಣ ಮಹತಾ ಮಹಾ" ಎಂಬಂತೆ,ನಾನು ಉಚ್ಚಸ್ವರದಿಂದ ಕೂಗಿದಾಗಲೇ ರಾಮನು"ಆತಂದ್ರಿತ ಚಮೂಪತಿಪ್ರಹಿತಹಸ್ತಂ"ಎಂಬಂತೆ ನನ್ನನ್ನನುಗ್ರಹಿಸುವನು. ಅದಕ್ಕೆ ಮೊದಲು ನೀವೇ ಹೋಗಿ ತಿಳಿಸಿದ ಪಕ್ಷದಲ್ಲಿ ನಿಮಗೂ ಸ್ವರೂಪವು ಸಿದ್ಧಿಸುವುದು.(ನಿವೇದಯತ)ನೀವು ಹಿಂದೆ ನಡೆದವ್ಯಾಘ್ರವಾನರಸಂವಾದವನ್ನಾದರೂ ಕೇಳಿಲ್ಲವೆ? (ಬಂದು ಹುಲಿಯು ಬೆನ್ನ

ರ್ಥಿಯಾಗಿ ಬಂದಿರುವೆನೆಂದು ಶೀಘ್ರದಲ್ಲಿಯೇ ತಿಳಿಸಬೇಕು" ಎಂದನು.

---

ಟ್ಟಿಬಂದಾಗ ಒಬ್ಬಮನುಷ್ಯನು, ಭಯದಿಂದ ಒಂದು ಮರವನ್ನೇರಲು, ಅಲ್ಲಿದ್ದ ಕಪಿಯು ಅವನಿಗೆ ಅಭಯವನ್ನು ಕೊಟ್ಟಿತು. ಕೆಳಗಿದ್ದ ಹುಲಿಯು ಆಕಪಿಯನ್ನು ಕುರಿತು "ಆ ಮನುಷ್ಯನನ್ನೋಡಿಸು! ಹಾಗಿಲ್ಲದ ಪಕ್ಷದಲ್ಲಿ ಅವನು ಸಮಯವನ್ನು ನೋಡಿ ನಿನ್ನನ್ನು ಕೊಲ್ಲುವನು. ಅವನನ್ನು ತಿಂದಹೊರತು ನಾನು ಕದಲುವನಲ್ಲ" ಎಂದಿತು. ಆದರೂ ಕಪಿಯು ತಾನು ಶರಣಾಗತನನ್ನು ಬಿಡಲಾರೆನೆಂದು ಹೇಳಿ ನಿದ್ರಿಸಲು, ಆಗ ಹುಲಿಯು ತಂತ್ರದಿಂದ ಆ ಮನುಷ್ಯನನ್ನು ನೋಡಿ "ನೀನಾದರೂ ಈಗ ಆ ಕಪಿಯನ್ನು ತಳ್ಳುವುದಾದರೆ ನಾನು ಅದನ್ನು ತಿಂದು ತೃಪ್ತಿಹೊಂದಿ ನಿನ್ನನ್ನು ಬಿಟ್ಟು ಹೋಗುವೆ"ನೆಂದಿತು. ಈ ಮಾತನ್ನು ಕೇಳಿ ಕೃತಘ್ನನಾದ ಆ ಮನುಷ್ಯನು ಮಲಗಿದ್ದ ಕಪಿಯನ್ನು ಕೆಳಕ್ಕೆ ತಳ್ಳಿದನು. ಹಾಗಿದ್ದರೂ ದೈವಗತಿಯಿಂದ ಕಪಿಯು ಕೆಳಕ್ಕೆಬೀಳದೆ ಬೇರೊಂದು ಕೊಂಬೆಯನ್ನು ಹಿಡಿದು ನಿಂತು, ಆಗಲೂ ಆಬೇಡನ ಅಪರಾಧವನ್ನು ಮನಸ್ಸಿಗೆ ತಂದು ಕೊಳ್ಳದೆ ಅಭಯವನ್ನು ಕೊಟ್ಟು ಕಾಪಾಡಿತೆಂದು ಇಲ್ಲಿನ ಪೂರ್ವಕಥೆಯು ಹಾಗೆ ಶರಣಾಗತರಕ್ಷಣೆಯಲ್ಲಿ ಪ್ರಸಿದ್ಧಿಹೊಂದಿದ ವಾನರಜಾತಿಯಲ್ಲಿ ಹುಟ್ಟಿದ ನೀವು, ಶರಣಾಗತನಾಗಿ ಬಂದ ನನಗೆ ವಾಙ್ಮಾತ್ರದಿಂದಲಾದರೂ ಈ ಸಹಾಯವನ್ನು ಮಾಡಿರಿ? (ನೀವೇದಯತ) ರಾಮನು ನನ್ನನ್ನುಕುರಿತು ಕೇಳಿದಾಗ. ನೀವು ಮಾತ್ರ ಸುಮ್ಮನಿರದೆ, ನನ್ನನ್ನು ನಂಬಬಹುದೆಂದಾಗಲಿ, ಕೂಡದೆಂದಾಗಲಿ, ಪರಿಗ್ರಹಿಸಬಹುದೆಂದಾಗಲಿ, ತ್ಯಜಿಸಬೇಕೆಂದಾಗಲಿ, ಯಾವುದೋ ಒಂದನ್ನು ನಿಮಗೆ ತೋರಿದಂತೆ ತಿಳಿಸಿ ಬಿಡಿರಿ? (ನಿವೇದಯತ್ತ)"ವಿದ್ಲ್ಲಲಾಭೇ" ಎಂಬ ಧಾತ್ವರ್ಥದಂತೆ ನನ್ನಿಂದ ಅವನಿಗಾದರೂ ಲಾಭವನ್ನುಂಟುಮಾಡಿರೆಂದರ್ಥವು. "ಸಮಹಾತ್ಮಾ ಸುದುರ್ಲಭಃ" ಅಂತಹ ಜ್ಞಾನಿಯಾದವನು ತನಗೆ ದುರ್ಲಭನೆಂದು ಯಾವಾಗಲೂ ಮನಸ್ಸಿನಲ್ಲಿ ಕಳವಳಿಸುತ್ತಿರುವ ಆ ಸ್ವಾಮಿಗೆ ನನ್ನಿಂದ ಒಂದಾತ್ಮಲಾಭವಾಗುವಂತೆ ಮಾಡಿರಿ? ಅಥವಾ "ವಿದಸತ್ತಾಯಾಂ" ಎಂಬ ಧಾತ್ವರ್ಥದಂತೆ ಆತನಿಗೆ ಸತ್ತೆಯನ್ನುಂಟು ಮಾಡಿರಿ? "ಅಪ್ಯಹಂಜೀವಿತಂಜಹ್ಯಾಂ, ಎಂದು ಆಶ್ರಿತರನ್ನು ರಕ್ಷಿಸದಿದ್ದರೆ ತನ್ನ ಪ್ರಾಣವನ್ನೇ ಬಿಡುವುದಾಗಿ ಹೇಳಿರುವ ಅನನ್ನ ಸ್ವಾಮಿಗೆ ನನ್ನನ್ನು ಸೇರಿಸಿ ಸತ್ತೆಯನ್ನುಂಟು ಮಾಡಿರಿ? (ಮಾಂ) "ಆತ್ಮಾನಂಸರ್ವಥಾಕ್ಷಪುರೀಂಚೈವಸರಾಕ್ಷಸಾಂ" ಎಂದು ರಾವಣನಿಗೂ, ಆತನಲ್ಲಿ ಸೇರಿದವರಿಗೂ ಬೇಧವಿಲ್ಲದೆ ಹಿತವನ್ನು ಹೇಳಿದುದರಿಂದ "ಆನುಕೂಲ್ಯಮಿತಿ ಪ್ರೋಕ್ತಂಸರ್ವಭೂತಾನುಕೂಲತಾ" "ಸರ್ವಭೂತಗಳಿಗೂ ಅನುಕೂಲದಾಗಿರುವುದೇ ಆನುಕೂಲ್ಯವೆನಿಸುವುದೆಂಬ ಪ್ರಪತ್ತಿಗೆ ಅಂಗಭೂತವಾದ ಆನುಕೂಲ್ಯ ಸಂಕಲ್ಪವನ್ನೂ, "ಕ್ರುದ್ಧೋಹನ್ಯಾದ್ಗುರೂನಪಿ" ಎಂಬತೆ ತನಗುಂಟಾದ ಕೋಪದಲ್ಲಿ ಅಣ್ಣನೆಂಬುದನ್ನೂ ಲಕ್ಷ್ಯಮಾಡದೆ

ರಾವಣನನ್ನು ಕೊಂದುಬರಬೇಕಾಗಿದ್ದರೂ, ಅದಕ್ಕೆ ಸಾಧನವಾಗಿ ಕೈಯಲ್ಲಿ ಗದೆಯಿದ್ದರೂ, ಆ ಪ್ರಾತಿಕೂಲ್ಯವನ್ನು ಬಿಟ್ಟು ಬಂದುದರಿಂದ ಪ್ರಾತಿಕೂಲ್ಯವರ್ಜನವೆಂಬ ಅಂಗವನ್ನೂ, ಹಿಂದೆ ಸುಗ್ರೀವನ ಪಟ್ಟಾಭಿಷೇಕವನ್ನು ನಿದರ್ಶನವಾಗಿಟ್ಟುಕೊಂಡು. ತನ್ನನ್ನೂ ರಾಮನು ಹಾಗೆಯೇ ರಕ್ಷಿಸುವನೆಂಬ ನಂಬಿಕೆಯಿಂದ ಇತ್ತಲಾಗಿ ಹೊರಟು ಬಂದುದರಿಂದ "ರಕ್ಷಿಷ್ಯತ್ಯನುಕೂಲಾನ್ನ ಇತಿ ಯಾ ಸುದೃಢಾಮತಿ:! ಸವಿಶ್ವಾಸೋಭವೇತ್" "ಎಂಬಂತೆ ವಿಶ್ವಾಸರೂಪವಾದ ಅಂಗವನ್ನೂ" "ಭವಂತಂಶರಣಂಗತ:" ಎಂದು ಹೇಳಿ ಗೋಪ್ತೃತ್ವವರಣವೆಂಬ ಅಂಗವನ್ನೂ "ಭವದ್ಗತಂ ಮೇ ರಾಜ್ಯಂಚ ಜೀವಿತಂಚ ಸುಖಾನಿಚ" ಎಂದು ಹೇಳಿ ಭರನ್ಯಾಸವನ್ನು ಮಾಡಿದುದರಿಂದ ಆತ್ಮ ನಿಕ್ಷೇಪವನ್ನೂ "ತೇನಚಾಸ್ಮ್ಯವಮಾನಿತ:" ಎಂದು ತನಗೆ ರಾವಣನಿಂದುಂಟಾದ ಪರಿಭವವನ್ನು ವ್ಯಕ್ತವಾಗಿ ಹೇಳಿದುದರಿಂದ, ಗರ್ವಹಾನಿರೂಪವಾದ ಕಾರ್ಪಣ್ಯವನ್ನೂ, ಹೀಗೆ ಶರಣಾಗತಿಗೆ ಬೇಕಾದ ಆರಂಗಗಳನ್ನೂ ಕೊರತೆಯಿಲ್ಲದೆ ತೋರಿಸಿರುವ ನನ್ನನ್ನು ನೀವು ರಾಮನಿಗೆ ತಿಳಿಸಿರಿ?" ( ಕ್ಷಿಪ್ರಂ ) ಈ ಕ್ಷಣವೇ ಹೋಗಿ ವಿಜ್ಞಾಪಿಸಬೇಕು? "ಇಷ್ಟಾತುರವೇಕೆ! " ಎಂದರೆ (ಚಂಚಲಂಹಿ ಮನ:) ಮನುಷ್ಯರ ಮನಸ್ಸು ಚಂಚಲವಾದುದಲ್ಲವೆ ? ಈಗ ನನ್ನ ಮನಸ್ಸಿನಲ್ಲಿ ಹುಟ್ಟಿರುವ ಆನುಕೂಲ್ಯವು ಇನ್ನು ಕ್ಷಣಕಾಲದಲ್ಲಿ ಮಾರಿಹೋಗಬಹುದಾದುದರಿಂದ ಅದಕ್ಕೆ ಮೊದಲೇ ತಿಳಿಸಬೇಕು. (ಕ್ಷಿಪ್ರಂ) "ಕ್ಷಿಪ್ರಂ ರಾಮಾಯ ಶಂಸಧ್ವಂ! ಸೀತಾಂ ಹರತಿ ರಾವಣ:!" ಎಂದು ಸೀತಾದೇವಿಯು ದಂಡಕಾರಣ್ಯದಲ್ಲಿ ದೇವತೆಗಳನ್ನು ಕುರಿತು ಮೊರೆಯಿಡುವಾಗಲೂ, ದೇವತೆಗಳು ಅದರಂತೆ ಕ್ಷಿಪ್ರವಲ್ಲಿ ನಡೆಸದೆ ಹೋದುದರಿಂದಲ್ಲವೇ ಆಕೆಯು ರಾವಣನ ಕೈಗೆ ಸಿಕ್ಕಬೇಕಾಯಿತು. ಅದರಂತೆಯೇ ನಾನೂ ನನ್ನ ಮನಸ್ಸೆಂಬ ರಾಕ್ಷಸನ ಕೈಗೆ ಸಿಕ್ಕುವುದಕ್ಕೆ ಮೊದಲೇ ನೀವು ರಾಮನಿಗೆ ತಿಳಿಸಿ ಬಿಡಿರಿ? (ಕ್ಷಿಪ್ರಂನಿವೇದಯತ) "ದತ್ತಮಸ್ಯಾಭಯಂ" ಎಂಬುದಾಗಿ ಆತನೇ ಮುಂದುಬಿದ್ದು ಅಭಯವನ್ನು ಕೊಡುವುದಕ್ಕೆ ಮೊದಲೇ ನೀವಾಗಿ ಹೋಗಿ ತಿಳಿಸಿರಿ! (ಕ್ಷಿಪ್ರಂ ನೀವೇದಯತ) ನಾನು ಬಹಳ ಹೊತ್ತಿನವರಿಗೆ ತಡೆಯಲಾರೆನಾದುದರಿಂದ ಮತ್ತೊಮ್ಮೆ ಶರಣಾಗತಿಯನ್ನು ಮಾಡಬೇಕಾಗಬಹುದು. "ಸಕೃದೇವ ಪ್ರಪನ್ನಾಯ" ಎಂದು ಒಂದೇ ಆವೃತ್ತಿ ಮಾಡಬೇಕೆಂದು ಏರ್ಪಟ್ಟಿರುವ ಶರಣಾಗತಿಸ್ವರೂಪಕ್ಕೆ ಹಾನಿಯುಂಟಾಗದಂತೆ ಮುಂದಾಗಿಯೇ ತಿಳಿಸಿರಿ- ನನ್ನನ್ನು ತಿಳಿಸಬೇಕಾದುದು ಯಾರಿಗೆ? (ರಾಘವಾಯ) "ಅಪ್ಯಹಂ ಜೀವಿತಂಜಹ್ಯಾಂ...ನಹಿಪ್ರತಿಜ್ಞಾಂ ಸಂಶ್ರುತ್ಯ " ಎಂಬಂತೆ ಇಂತಹ ಸಂದರ್ಭಗಳಲ್ಲಿ ತನ್ನ ಪ್ರಾಣವನ್ನೂ ಲಕ್ಷ್ಯಮಾಡದ ಆ ರಾಮನಿಗೆ ತಿಳಿಸಿರಿ. (ರಾಘವಾಯ ಮಾಂಕ್ಷಿಪ್ರ ನಿವೇದಯತ) ಹಿಂದೆ ಸೀತೆಯು "ರಾಘವಸ್ಯ ಯಶೋಹೀಯೇತ್"ಋಷಿಗಳನ್ನೂ, ಸುಗ್ರೀವನನ್ನೂ, ಕಾಕಾಸು

ರನೇ ಮೊದಲಾದವರನ್ನೂ ವಿಪತ್ತಿನಿಂದ ತಪ್ಪಿಸಿದನೆಂಬ ಪ್ರಸಿದ್ಧಿಯಿಲ್ಲವೇ? ಈಗ ತನ್ನ ನ್ನು ರಕ್ಷಿಸಬೇಕೆಂದು ಕೇಳಿಕೊಳ್ಳುವುದರಿಂದ ಕುಂದಿಹೋಗುವುವೆಂದು ಯಾವನಿಗಾಗಿ ಹನುಮಂತನೊಡನೆ ಹೇಳಿಕಳುಹಿಸಿದನೋ, ಆ ರಾಘವನಿಗೇ ಈಗ ನನ್ನನ್ನೂ ಜ್ಞಾಪಿಸಿರಿ! (ಮಹಾತ್ಮನೇ) "ಮರ್ತ್ಯಾನಾಂ ಮರಣಾದ್ಭಯಮ್" ಎಂಬಂತೆ ಕೇವಲಮರಣಕ್ಕಾಗಿ ಭಯಪಡುವ ನಿಮ್ಮಹಾಗಿಲ್ಲವೆ, "ಉತ್ತಮಾನಾಂತು ಮರ್ತ್ಯಾನಾಮವಮಾನಾತ್ಪರಂ ಭಯಂ" ಎಂಬಂತೆ ಶರಣಾಗತಪರಿತ್ಯಾಗದಿಂದ ತಾನು ಲೋಕಾಪವಾದಕ್ಕೊಳಗಾಗಬಾರದೆಂದು ಬಹಳವಾಗಿ ಭಯಪಡುವ ಆ ಮಹಾಸ್ವಭಾವವುಳ್ಳವನಿಗೆ ತಿಳಿಸಿರಿ! (ಮಹಾತ್ಮನೇ) ವೈದಿಕಶಿಖಾಮಣಿಯಾದ ವಿಶ್ವಾಮಿತ್ರನು ಯಾವನನ್ನು ಕುರಿತು "ಅಹಂ ವೇದ್ಮಿ ಮಹಾತ್ಮಾನಂ" ಎಂದು ಮಹಾತ್ಮನನ್ನಾಗಿ ಹೇಳಿರುವನೋ ಆ ರಾಮನಿಗೆ ನನ್ನನ್ನು ತಿಳಿಸಿರಿ! "ಹೀಗೆ ನೀನೇ ಮಹಾತ್ಮನೆಂದು ಅವನ ಮಹತ್ತ್ವವನ್ನು ಹೊಗಳುವೆಯಲ್ಲವೆ? ಪರ್ವತದಂತೆ ಮಹತ್ತ್ವವುಳ್ಳ ಆತನು ಪರಮಾಣುವಂತಿರುವ ನಿನಗೆ ಸುಲಭನಾಗುವನೆ?" ಎಂದರೆ (ಸರ್ವಲೋಕಶರಣ್ಯಾಯ) ಅವನ ಸೌಲಭ್ಯಕ್ಕೆ ಅವರಿವರೆಂಬ ಭೇದವಿಲ್ಲ. "ಕೌಸಲ್ಯಾ ಲೋಕಭರ್ತಾರಂ ಸುಷುವೇ ಯಂ ಮನಸ್ವಿನೀ" ಎಂಬಂತೆ ಲೋಕಭರಣಕ್ಕಾಗಿಯೇ ಕೌಸಲ್ಯೆಯು ಆತನನ್ನು ಹಡೆದಿರುವಾಗ ಆ ಸರ್ವಲೋಕಗಳಲ್ಲಿ ನಾನೂ ಒಬ್ಬನಲ್ಲವೆ? (ಸರ್ವಲೋಕ ಶರಣ್ಯಾಯ) "ಸಪ್ತಲೋಕೈಕವೀರಸ್ಯ ದಶಕಂಠಕುಲದ್ವಿಷ:" ಎಂಬಂತೆ ಭೂರ್ಭುವರಾದಿ ಸಮಸ್ತಲೋಕಗಳಿಗೂ ಶರಣ್ಯನಾದ ರಾಮನು ನನಗೂ ಶರಣ್ಯನಾಗನೆ? (ಸರ್ವಲೋಕ ಶರಣ್ಯಾಯ) ದೇವತಿರ್ಯಙ್ಮನುಷ್ಯಸ್ಥಾವರಯೋನಿಗಳಿಂದಲೂ, ಧರ್ಮಾರ್ಥಿಗಳಿಂದಲೂ, ಕಾಮಾರ್ಥಿಗಳಿಂದಲೂ, ಅನುಕೂಲಪ್ರತಿಕೂಲರಿಂದಲೂ, ಉತ್ಕೃಷ್ಟಾಪಕೃಷ್ಟರಿಂದಲೂ, ಬೇರೆಬೇರೆ ಭೇದಗಳುಳ್ಳ ಸರ್ವಜನಕ್ಕೂ ಶರಣ್ಯನಾದ ಆ ರಾಮನಿಗೆ ನಾನೊಬ್ಬನು ಬಾಹ್ಯನೆ? "ನಾನು ಯಾರೆಂದು ಕೇಳುವಿರಾ?" (ವಿಭೀಷಣಂ) "ಪರೋಕ್ಷಿಭಯಂಕರನಾದವನು. ನಿಮ್ಮ ಶತ್ರುಗಳಾದ ರಾವಣಾದಿಗಳಿಗೆ ಭಯವನ್ನು ಹುಟ್ಟಿಸಿ, ನಿಮಗೆ ಅನುಕೂಲನಾಗಿಯೇ ಬಂದವನು! ಅಥವಾ ಹಾಗೆ ನಾನು ಅನುಕೂಲನಾಗಿ ಬಂದವನೆಂದು ತಿಳಿಸುವಷ್ಟು ನಂಬಿಕೆಯು ನಿಮಗಿಲ್ಲದಿದ್ದರೆ (ವಿಭೀಷಣಂ) "ಉತ್ಪಪಾತ ಗದಾಪಾಣಿ:" ಎಂಬಂತೆ ಒಬ್ಬನು ಕೈಯಲ್ಲಿ ಗದೆಯನ್ನು ಹಿಡಿದು ಭಯಂಕರಸ್ವರೂಪದಿಂದ ಬಂದು ನಿಂತಿರುವನೆಂದಾದರೂ ಹೇಳಿರಿ. ಹೇಗಿದ್ದರೂ (ಉಪಸ್ಥಿತಂ) "ದುರಾಚಾರೋಽಪಿ ಸರ್ವಾಶೀ ಕೃತಘ್ನೋ ನಾಸ್ತಿಕ: ಪುರಾ। ಸಮಾಶ್ರಯೇದಾದಿದೇವಂ ಶ್ರದ್ಧಯಾ ಶರಣಂ ಯದಿ। ನಿರ್ದೋಷಂ ವಿದ್ಧಿ ತಂ ಜಂತುಂ" ಎಂಬಂತೆ, ಎಷ್ಟೇ ದುರಾಚಾರವುಳ್ಳವನಾಗಿದ್ದರೂ ಆದಿದೇವನಾದ ಶ್ರೀಮನ್ನಾರಾಯಣನನ್ನು ಶ್ರದ್ಧೆಯಿಂದಾಶ್ರಯಿಸಿದಮಾತ್ರಕ್ಕೆ ನಿರ್ದೋ

[1]! ಹೀಗೆ ಆ ರಾಕ್ಷಸನು, ತಾನು ರಾಮನಲ್ಲಿ ಮರೆಹುಗುವುದಾಗಿ ಹೇಳಿದ ಮಾತನ್ನು ಕೇಳಿದೊಡನೆ ಸುಗ್ರೀವನು ಬೆಜ್ಜರಗೊಂಡು, ಶೀಘ್ರಗಮನದಿಂದ ರಾಮನಬಳಿಗೆ ಹೋಗಿ, ಲಕ್ಷ್ಮಣನಮುಂದೆ ರಾಮನನ್ನು ಕುರಿತು, ‹‹ರಾಮಾ! ರಾವಣನಿಗೆ ತಮ್ಮನಾದ ವಿಭೀಷಣನೆಂಬ ರಾಕ್ಷಸನೊಬ್ಬನು, ಬೇರೆ ನಾಲ್ಕು ಮಂದಿ ರಾಕ್ಷಸರೊಡಗೂಡಿ, ನಿನ್ನಲ್ಲಿ ತಾನು ಶರಣಾರ್ಥಿಯೆಂದು ಬಂದಿರುವನು. ಇವನ ನಿಜವಾದ ಕಾರಣವೇನೆಂದು ತಿಳಿಯುವುದಕ್ಕಿಲ್ಲ! ಮುಖ್ಯವಾಗಿ ಈಗ ನೀನು, ಮುಂದಿನ ಕಾರ್ಯಾಕಾರ್ಯಗಳನ್ನು ನಿಶ್ಚಯಿಸುವ ಮಂತ್ರಾಲೋಚನೆಯಲ್ಲಿಯೂ, ಸೈನ್ಯಗಳ ವ್ಯೂಹನಿರ್ಮಾಣದಲ್ಲಿಯೂ, ಕಾಲೋಚಿತವಾದ ರಾಜನೀತಿಪ್ರಯೋಗದಲ್ಲಿಯೂ, ಶತ್ರುರಹಸ್ಯಗಳನ್ನು ತಿಳಿದುಬರುವುದಕ್ಕಾಗಿ ಗೂಢಚಾರರನ್ನು ನಿಯಮಿಸುವ। ಕಾರ್ಯದಲ್ಲಿಯೂ, ನಮ್ಮ ಕಡೆಯವಾನರರ ವಿಷಯವಾಗಿಯಾಗಲಿ, ನಮಗೆ ಶತ್ರುಗಳಾದ ರಾಕ್ಷಸರ ವಿಷಯ

---

ಷಿಯಾಗುವವನಲ್ಲವೆ? ಆದರಂತೆಯೇ ಈಗ ನಾನೂ ಭಗವದಾಶ್ರಯಕ್ಕಾಗಿ ಬಂದುವರೀದ ನಿರ್ದೋಷಿಯಾಗಿರುವೆನು (ಉಪಸ್ಥಿತಂ) ಬಂದುವೇಳೆ ನಾನು ಇಲ್ಲಿಗೆ ಬಾರದೆ ಲಂಕೆಯಲ್ಲಿಯೇ ಇದ್ದು "ಶರಣು" ಎಂದು ಹೇಳಿದ್ದರೂ, ಆಗ ಶ್ರೀರಾಮನು ತಾನಾಗಿಯೇ ಎಷ್ಟೋ ಶ್ರಮಪಟ್ಟು ಸಮುದ್ರವನ್ನು ದಾಟಿಬಂದು ನನ್ನನ್ನು ರಕ್ಷಿಸಬೇಕಾಗಿತ್ತಲ್ಲವೆ? ಈಗ ಆ ಶ್ರಮವೂ ಇಲ್ಲದಂತೆ, ತಾನಾಗಿಯೇ ಮುಂದೆ ಬಂದುನಿಂತಿರುವೆನೆಂದು ಹೇಳಿರಿ. (ಉಪಸ್ಥಿತಂ ನಿವೇದಯತ) ಹಿಂದೆ ರಾಮನು ತಾನಾಗಿಯೇ ಕಿಷ್ಕಿಂಧೆಯ ಬಳಿಯಲ್ಲಿ ನಿಮ್ಮನ್ನು ಹುಡುಕಿಕೊಂಡು ಬಂದಾಗ "ಜಗ್ಮುರ್ಗಿರಿತಟಾದಸ್ಮಾದನ್ಯಂ ಶಿಖರಮುತ್ತಮಂ" ಎಂಬಂತೆ ಅವನನ್ನು ನೋಡಿ ಭಯಪಟ್ಟು, ಬೆಟ್ಟದಿಂದ ಬೆಟ್ಟಕ್ಕೆ ಹಾರಿಹೋದ ನಿಮ್ಮಹಾಗಲ್ಲದೆ, ನಾನಾಗಿಯೇ ಹುಡುಕಿಕೊಂಡು ಬಂದಿರುವೆನೆಂದು ಅವನಿಗೆ ತಿಳಿಸಿರಿ!" ಎಂದು ಭಾವವು. ಇದರಿಂದ ಭಗವತ್ಸಮಾಶ್ರಯಣವನ್ನು ಮಾಡುವವರಿಗೆ ಭಗವದ್ಭಕ್ತರು ತಾವಾಗಿ ಮುಂದುಬಿದ್ದು ಸಹಾಯಕರಾಗಿ ಬರಬೇಕೆಂಬರ್ಥವು ಪ್ರತಿಪಾದಿತವಾಗುವುದು. (ತನಿಶ್ಲೋಕಿ.)

I ಇಲ್ಲಿ "ಏತತ್ತು ವಚನಂ ಶ್ರುತ್ವಾ ಸುಗ್ರೀವೋ ಲಘುವಿಕ್ರಮಃ। ಲಕ್ಷ್ಮಣಸ್ಯಾಗ್ರತೋ ರಾಮಂ ಸಂರಬ್ಧಮಿದಮಬ್ರವೀತ್" ಎಂದು ಮೂಲವು' ವಿಶೇಷಾರ್ಥವು:—(ಏತತ್ತು ವಚನಂ ಶ್ರುತ್ವಾ) ಈ ಮಾತನ್ನು ಕೇಳಿದಮೇಲೆ (ಸುಗ್ರೀವೋ ಲಘುವಿಕ್ರಮಃ) ಸುಗ್ರೀವನು ಬಹಳ ಚುರುಕಾದ ನಡೆಯುಳ್ಳವನಾಗಿ, ಎಂದರೆ, ಈ ವಿಭೀಷಣ

ವಾಗಿಯಾಗಲಿ ಬಹಳ ಎಚ್ಚರಿಕೆಯಿಂದಿರಬೇಕು. ಹೀಗಿದ್ದರೆ ಮಾತ್ರವೇ ನಿನಗೆ ಮುಂದೆ ಕ್ಷೇಮವುಂಟು. ಇಲ್ಲಿನ ರಾಕ್ಷಸರು ಕಾಮರೂಪಿಗಳಾದುದರಿಂದ, ಕಣ್ಮರೆಯಾಗಿಯೇ ಸಂಚರಿಸುತ್ತಿರುವರು. ಕಪಟೋಪಾಯಗಳನ್ನು ಚೆನ್ನಾಗಿ ಬಲ್ಲರು! ಮೋಸದಲ್ಲಿ ಮಹಾನಿಪುಣರು! ಇವರಲ್ಲಿಮಾತ್ರ ಯಾವಾಗಲೂ ನಂಬಿಕೆಯನ್ನಿಡಬಾರದು! ಇದರಮೇಲೆ ಈತನು ಆ ರಾವಣನಿಗೆ ಗೂಢಚಾರನಾಗಿದ್ದರೂ ಇರಬಹುದು. "ಶತ್ರುಪಕ್ಷದವರನ್ನು ಕೈಸೇರಿಸಿಕೊಳ್ಳುವುದರಿಂದ ನಮ್ಮ ಬಲವು ಹೆಚ್ಚುವುದಲ್ಲವೆ?" ಎಂದು ನೀನು ಕೇಳಬಹುದು. ಹಾಗೆ ನಂಬಲೇಬಾರದು. ಇವನು ನಮಗೆ ಅನುಕೂಲನಂತೆ ಮೇಲೆಮೇಲೆ ನಟಿಸುತ್ತ, ನಮ್ಮಲ್ಲಿ ಒಳಹೊಕ್ಕು, ಸಮಯವನ್ನು ನೋಡಿ ನಮ್ಮೊಳಗೆ ಒಳಜಗಳವನ್ನು ತಂದಿಡಬಹುದು. ಇದರಲ್ಲಿ ಸಂ

---

ನು "ಶರಣು" ಎಂದು ಹೇಳಿದ ಮಾತು ರಾಮನಕಿವಿಗೆ ಬಿದ್ದುದಾದರೆ, ಆಮೇಲೆ ಈ ರಾಕ್ಷಸನನ್ನು ಬಿಡಿಸುವುದಕ್ಕೆ ಹೇಗೂ ಸಾಧ್ಯವಲ್ಲ! ಆಮಾತು ರಾಮನ ಕಿವಿಗೆ ಬೀಳುವುದಕ್ಕೆ ಮೊದಲೇ ಇವನಿಗೆ ಅವನಲ್ಲಿ ದ್ವೇಷಬುದ್ಧಿಯನ್ನು ಹುಟ್ಟಿಸಬೇಕೆಂದು ತಟ್ಟನೆ ರಾಮನ ಬಳಿಗೆ ಹೋದುದಾಗಿ ಭಾವವು. (ಲಕ್ಷ್ಮಣಸ್ಯಾಗ್ರತಃ) ತನ್ನಂತೆಯೇ ರಾಮನಲ್ಲಿ ಪ್ರೇಮವುಳ್ಳ ಲಕ್ಷ್ಮಣನನ್ನೂ ಮುಂದಿಟ್ಟುಕೊಂಡು, "ಅತಿಸ್ನೇಹಃ ಪಾಪಶಂಕೀ" ಎಂಬ ನ್ಯಾಯದಿಂದ, ರಾಮನಿಗೆ ವಿಭೀಷಣನಿಂದ ಏನಾದರೂ ಅಪಾಯವುಂಟಾಗಬಹುದೆಂದು ತಾನು ಶಂಕಿಸುವಂತೆ,ಲಕ್ಷ್ಮಣನಿಗೂ ಆ ಶಂಕೆಯಿರುವುದು ಸಹಜವಾದುದರಿಂದ,ಅವನನ್ನೇ ತನ್ನ ಸಹಾಯಕ್ಕಿಟ್ಟುಕೊಂಡನೆಂದು ಭಾವವು. ಲಕ್ಷ್ಮಣನಿಗೆ ಯಾವಾಗಲೂ ಈ ವಿಧವಾದ ಶಂಕೆಯುಂಟೆಂಬುದಕ್ಕೆ, ಹಿಂದೆ ಇವನು ರಾಮನಲ್ಲಿರುವ ಪ್ರೇಮಾತಿಶಯದಿಂದ ಭರತನ ವಿಷಯವಾಗಿ "ಭರತಸ್ಯ ವಧೇ ದೋಷಂ ನಾಹಂ ಪಶ್ಯಾಮಿ" 'ಭರತನನ್ನು ಕೊಲ್ಲುವುದರಲ್ಲಿ ನನಗೆ ದೋಷವೇನೂ ತೋರಲಿಲ್ಲ'ವೆಂದು ಹೇಳಿರುವನು. ಇಲ್ಲಿ ವಿಭೀಷಣನಲ್ಲಿ ನಿಷ್ಕಾರಣಭಯಶಂಕಿತನಾದ ಸುಗ್ರೀವನೂ ತನಗೆ ಸಮಾನಸ್ವಭಾವವುಳ್ಳ ಲಕ್ಷ್ಮಣನನ್ನೇ ತನ್ನ ಸಹಾಯಕ್ಕೆ ಕರೆತಂದನೆಂದು ಭಾವವು. (ರಾಮಂ) "ರಾಘವಂಶರಣಂಗತಃ" ಎಂಬಮಾತನ್ನು ಕೇಳಿದಾಗಲೇ ಸಂತೋಷದಿಂದ ಅಭಿರಾಮಸ್ವರೂಪವುಳ್ಳ ರಾಮನನ್ನು (ಸಂರಬ್ಧಂ) ತನ್ನ ಪ್ರಭುವಾದರೂ ತನ್ನ ಮಾತನ್ನು ಮೀರಿ ಹೋಗದಂತೆ ಮುಂದುಬಿದ್ದು,(ಇದಮಬ್ರವೀತ್) ಈಗ ಬಂದವನು ಶತ್ರುವೇ ಅಥವಾ ಮಿತ್ರನೇ? ಎಂದು ಸಂದೇಹಿಸಿ ನಿರ್ಣಯಿಸುವುದಕ್ಕೂ ಅವಕಾಶಕೊಡದೆ ಶತ್ರುವೆಂದೇ ನಿಶ್ಚಯಿಸಿ ಹೇಳಿದನೆಂದು ಭಾವವು. (ತನಿಶ್ಲೋಕಿ).

ದೇಹವಿಲ್ಲ. ಇವನು ನಮ್ಮನ್ನು ವಂಚಿಸುವುದಕ್ಕಾಗಿಯೇ ಬಂದಿರುವನು. ನಮ್ಮಲ್ಲಿ ಪೂರ್ಣವಾದ ಪರಸ್ಪರಾನುರಾಗವಿರುವಾಗ ಈತನಿಗೆ ಆ ಭೇದೋ ಪಾಯವು ಸಾಧ್ಯವೆ?" ಎಂದು ಕೇಳುವೆಯಾ? ರಾಮಾ! ಈತನು ಬಂದುವೇಳೆ ನಮ್ಮಲ್ಲಿ ಬುದ್ಧಿಭೇದವನ್ನು ಹುಟ್ಟಿಸಲಾರದೆ ಹೋದರೂ, ನಾವು ಇವನಲ್ಲಿ ಪೂರ್ಣವಾದ ನಂಬಿಕೆಯನ್ನು ತೋರಿಸುವವರೆಗೂ ನಮ್ಮೊಡನೆ ಸ್ನೇಹವನ್ನೇ ನಟಿಸುತಿದ್ದು, ನಮಗೆ ನಂಬಿಕೆಯು ಹುಟ್ಟಿದಮೇಲೆ, ಸಮಯವನ್ನು ನೋಡಿ, ಇಲ್ಲಿ ಇವನೇ ತನ್ನ ಬುದ್ಧಿಚಾತುರ್ಯದಿಂದ ನಮ್ಮನ್ನು ಕೊಂದರೂ ಕೊಲ್ಲಬಹುದು. "ರಾಜರಿಗಿರಬೇಕಾದ ಆರುಬಗೆಯ ಬಲಗಳಲ್ಲಿ ಶತ್ರುಬಲವೂ ಒಂದು ಮುಖ್ಯಬಲವೆಂದು ರಾಜನೀತಿಯಲ್ಲವೆ ?" ಎಂದು ನಿನಗೆ ಆಸೆಯಿರಬಹುದು. ಹಾಗಲ್ಲ ! ಶತ್ರುಜಯಕ್ಕೆ ಸಾಧನಗಳಾದ ಆರುಬಗೆಯ ಬಲಗಳಲ್ಲಿ, ಮಿತ್ರಬಲವನ್ನಾಗಲಿ, ಆಟವಿಕಬಲವನ್ನಾಗಲಿ, ಮೂಲಬಲವನ್ನಾಗಲಿ, ಭೃತ್ಯಬಲವನ್ನಾಗಲಿ, ಬೇರೆ ಯಾವವಿಧವಾದ ಬಲವನ್ನಾಗಲಿ ನಂಬಬಹುದೇಹೊರತು, ಶತ್ರುಸಂಬಂಧವಾದ ಬಲವನ್ನು ಮಾತ್ರ ತಪ್ಪನೆ ಕೈಸೇರಿಸಿಕೊಳ್ಳಬಾರದು. ಈತನು ಶತ್ರುಬಲಕ್ಕೆ ಸೇರಿದವನಾದುದರಿಂದ ತ್ಯಾಜ್ಯನೇ ಹೊರತು ಎಂದಿಗೂ ಗ್ರಾಹ್ಯನಲ್ಲ. ಇದರಮೇಲೆ ಈತನು ಸಾಮಾನ್ಯವಾಗಿ ಶತ್ರುಪಕ್ಷದವನೆಂಬುದು ಮಾತ್ರವೇ ಅಲ್ಲ. ಸಹಜವಾಗಿಯೂ ಕ್ರೂರಸ್ವಭಾವವುಳ್ಳ ರಾಕ್ಷಸಕುಲದವನು. ನಿನ್ನ ಶತ್ರುವಾದ ರಾವಣನಿಗೆ ಒಡಹುಟ್ಟಿದ ತಮ್ಮನು. ಇವನ ಬಾಯಿಂದಲೇ ನಾವು ಈ ಮಾತನ್ನು ಕೇಳಿರುವೆವು. ಆದರೆ " ನೀನೂ ಅಣ್ಣನನ್ನು ಬಿಟ್ಟುಬಂದು ನನ್ನಲ್ಲಿ ಸೇರಿದವನಲ್ಲವೆ?" ಎಂದು, ನೀನು ನನ್ನನ್ನು ಕೇಳಬಹುದು. ರಾಮಾ! ನನ್ನ ಸಂಗತಿಯೇ ಬೇರೆ! ಮೊದಲೇ ನನ್ನಣ್ಣನು ನನ್ನನ್ನು ರಾಜ್ಯದಿಂದೋಡಿಸಿಬಿಟ್ಟನು. ಮೊದಲಿಂದಲೂ ನಮ್ಮಿಬ್ಬರಿಗೆ ಪರಸ್ಪರವೈರವೇ ಬಹಳವಾಗಿ ಬೆಳೆದು ಹೋಗಿದ್ದಿತು. ಈ ರಾಕ್ಷಸನ ಸಂಗತಿಯು ಹಾಗಲ್ಲ. ಈತನು ಈಗಲೇ ನಿನ್ನ ಶತ್ರುವಿನ ಸಮೀಪವನ್ನು ತಾನಾಗಿ ಬಿಟ್ಟುಬಂದುದಾಗಿ ಹೇಳುತ್ತಿರುವನು. ಹೀಗಿರುವಾಗ ಇವನಲ್ಲಿ ನಾವು ಹೇಗೆ ವಿಶ್ವಾಸವನ್ನಿಡಬಹುದು ? "ಹೇಗಿದ್ದರೂ ಶರಣಾರ್ಥಿಯಾಗಿ ಬಂದವನನ್ನು ಪರಿತ್ಯಜಿಸಬಹುದೆ?" ಎಂದು ನೀನು ಕೇಳುವೆಯಾ? ಈತನು ನಿಜವಾಗಿ ನಮ್ಮಲ್ಲಿ ಶರಣಾರ್ಥಿಯಾಗಿ ಬಂದ

ವನಲ್ಲ. ರಾವಣನಿಗೆ ಗೂಢಚಾರನಾಗಿ ನಮ್ಮನ್ನು ವಂಚಿಸುವುದಕ್ಕಾಗಿಯೇ ಬಂದಿರುವನು. ಇವನ ವಿನಯಾದಿಗಳೆಲ್ಲವೂ ಕೇವಲ ನಟನೆಯೆಂಬುದರಲ್ಲಿ ಸಂದೇಹವಿಲ್ಲ. ನೀನು ಯುಕ್ತಕಾರ್ಯಗಳನ್ನು ಚೆನ್ನಾಗಿ ಆಲೋಚಿಸತಕ್ಕವನು. ನಾನಾಗಿ ನಿನಗೆ ಹೇಳಿ ತಿಳಿಸಬೇಕಾದುದೇನೂ ಇಲ್ಲ. ಈಗ ನನಗೆ ತೋರಿರುವುದೇನೆಂದರೆ, ಇವನನ್ನು ಇಲ್ಲಿಯೇ ನಿಗ್ರಹಿಸಿಬಿಡುವುದೇ ಮೇಲು! "ಚಾರನಾಗಿ ಬಂದವನನ್ನು ಕೊಲ್ಲುವುದು ಯುಕ್ತವೆ?" ಎಂದು ನೀನು ಶಂಕಿಸಬಹುದು. ಈತನು ಕೇವಲಚಾರನಾಗಿ ಇಲ್ಲಿನ ಸಂಗತಿಯನ್ನು ತಿಳಿದುಕೊಂಡು ಹೋಗುವುದಕ್ಕೆಮಾತ್ರವೇ ಬಂದುದಾಗಿ ತೋರಲಿಲ್ಲ. ರಾಕ್ಷಸರಿಗೆ ಸಹಜವಾದ ಕುಟಿಲಬುದ್ಧಿಯಿಂದ,ರಾವಣನ ಪ್ರೇರಣೆಯಮೇಲೆ ನಮ್ಮನ್ನು ಮೋಸದಿಂದ ಕೊಲ್ಲುವುದಕ್ಕಾಗಿಯೇ ಬಂದಿರುವನು. ನೀನು ಇವನ ಮಾಯೆಯನ್ನರಿಯದೆ ಈತನಲ್ಲಿ ವಿಶ್ವಾಸವನ್ನು ತೋರಿಸುತಿದ್ದರೆ, ಇವನು ನಮ್ಮೆಲ್ಲರನ್ನೂ ಕೊಲ್ಲುವುದೇ ನಿಜವು. "ಒಂದು ವೇಳೆ ಆವನಲ್ಲಿ ಕಪಟಸ್ನೇಹದ ಸೂಚನೆಯು ಕಂಡುಬಂದರೆ ಆಗ ನಾವೇ ಮೊದಲು ಅವನನ್ನು ಕೊಲ್ಲಬಾರದೆ?" ಎಂದು ನೀನು ಹೇಳಬಹುದು. ಅದನ್ನು ಕಂಡುಕೊಳ್ಳುವುದಕ್ಕೂ ನಮಗೆ ಸಾಧ್ಯವಲ್ಲ. ಬುದ್ಧಿಶಾಲಿಯಾದವನು ತನ್ನ ಶತ್ರುಸೈನ್ಯವನ್ನು ಪ್ರವೇಶಿಸಿರುವಾಗಲೂ, ಆವರಿಗೆ ತನ್ನಲ್ಲಿ ಸ್ವಲ್ಪವೂ ಸಂದೇಹವುಂಟಾಗದಂತೆ, ಸ್ನೇಹಭಾವವನ್ನೇ ನಟಿಸುತಿದ್ದು, ಎಂದಾದರೂ ಒಮ್ಮೆ ಅವಕಾಶವನ್ನು ಪಡೆದು ಅವರೆಲ್ಲರನ್ನೂ ಕೊಂದುಬಿಡುವನು. ಈ ಸಂದರ್ಭದಲ್ಲಿ ಅವನು ತಾನು ಏಕಾಕಿಯಾಗಿದ್ದರೂ, ಕಾಗೆಯು ಹಗಲಲ್ಲಿ ಗೂಬೆಗಳ ಗುಂಪನ್ನು ನುಗ್ಗಿ ಕೊಲ್ಲುವಂತೆ, ತಾನೊಬ್ಬನೇ ಸಮಸ್ತಸೈನ್ಯಗಳನ್ನೂ ಧ್ವಂಸಮಾಡಬಲ್ಲನು. ಆದುದರಿಂದ ರಾಮಾ! ಈತನನ್ನು ಈಗಲೇ ಕೊಂದುಬಿಡಬೇಕು. ಒಂದುವೇಳೆ ಈಗ ನೀನು ಇವನನ್ನು ಕೊಲ್ಲದೆ ಬೇರೆವಿಧದಿಂದ ಭಂಗಪಡಿಸಿ ಓಡಿಸಿಬಿಟ್ಟರೂ, ಮಾರೀಚನಂತೆ ಇವನು ಮುಂದೆ ಯಾದರೂ ನಮಗೆ ಅನರ್ಥವನ್ನೇ ತರುವನು. ಮತ್ತು ನೀನು ವಾಲಿಯನ್ನು ಕೊಂದಂತೆ ಇವನನ್ನು ಒಂದು ಬಾಣದಿಂದ ಕೊಂದರೂ ನನಗೆ ತೃಪ್ತಿಯಿಲ್ಲ. ಅತಿಕ್ರೂರದಂಡನೆಯಿಂದ ಇವನನ್ನೂ, ಇವನ ಮಂತ್ರಿಗಳನ್ನೂ ಚಿತ್ರವಧಮಾಡಿ ಕೊಲ್ಲಬೇಕು. ಇವನು ನಮಗೆ ಸಾಮಾನ್ಯವಾದ ಶತ್ರುವಲ್ಲ.

ಈ ವಿಭೀಷಣನು ಪರಮಘಾತುಕನಾದ ಆ ರಾವಣನಿಗೆ ಸಾಕ್ಷಾತ್ಸಹೋದರನಲ್ಲವೆ !" ಎಂದನು. ವಾನರಪ್ರಭುವಾದ ಸುಗ್ರೀವನು ಚೆನ್ನಾಗಿ ಮಾತುಬಲ್ಲವನಾದುದರಿಂದ,ವಾಕ್ಯಕುಶಲನಾದ ಆ ರಾಮನಿಗೂ ಮುಂದಿನಮಾತಿಗೆ ಅವಕಾಶವಿಲ್ಲದಂತೆ, ತಕ್ಕ ಸಮಾಧಾನಗಳಿಂದ ತನ್ನ ಸಿದ್ಧಾಂತವನ್ನು ಸ್ಥಾಪಿಸಿ ಸುಮ್ಮನಾದನು. ಮಹಾಯಶಸ್ವಿಯಾದ ರಾಮನಾದರೋ ಈ ಸುಗ್ರೀವನ ವಾಕ್ಯವನ್ನು ಕೇಳಿದಮೇಲೆ, ತನ್ನ ಸಮೀಪದಲ್ಲಿ ಹನುಮಂತನೇ ಮೊದಲಾದ ವಾನರಪ್ರಮುಖರನ್ನು ಕುರಿತು, "ಎಲೈ ವಾನರರೆ ! ನಿಮ್ಮ ಪ್ರಭುವಾದ ಸುಗ್ರೀವನು ರಾವಣನ ತಮ್ಮನಾದ ಆ ವಿಭೀಷಣನ ವಿಷಯವಾಗಿ ಅತ್ಯಂತಯುಕ್ತಿಯುಕ್ತವಾಗಿರುವಂತೆ ಹೇಳಿದ ಮಾತುಗಳನ್ನು ನೀವೆಲ್ಲರೂ ಕೇಳಿದಿರಷ್ಟೆ? ಈ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನೆಂದೂ ತಿಳಿಯಬೇಕಾಗಿದೆ. ಆದರೆ ನೀವು ನಮ್ಮಿಬ್ಬರಿಗೂ ಪರತಂತ್ರರಾಗಿರುವುದರಿಂದ,ನಮ್ಮಿಬ್ಬರಲ್ಲಿ ಯಾರಪಕ್ಷವನ್ನು ಹಿಡಿದು ಮಾತಾಡಬೇಕೆಂದು ಸಂದೇಹಿಸಬೇಕಾದುದಿಲ್ಲ. ಒಬ್ಬನಿಗೆ ಬಹಳಮಂದಿ ಸುಹೃತ್ತುಗಳಿದ್ದರೆ, ಅವರಲ್ಲಿ ಒಬ್ಬನು ಹೇಳಿದ ಮಾತನ್ನು ಕೇಳಿ ಮತ್ತೊಬ್ಬನು, ಆ ಅಭಿಪ್ರಾಯವು ತನಗಿಷ್ಟವಿಲ್ಲದಿದ್ದರೂ,ಆಸ್ನೇಹಿತನಮುಖೋಲ್ಲಾಸಕ್ಕಾಗಿ ಮಾತಾಡದೆ ಸುಮ್ಮನಿರಬಾರದು![1] ಇಂತಹ ಕಾರ್ಯಸಂಕಟಗಳು ಬಂದೊದಗಿದಾಗ, ಯುಕ್ತಾಯುಕ್ತವಿವೇಚನೆಯುಳ್ಳವನಾಗಿಯೂ, ಬುದ್ಧಿಶಾಲಿಯಾಗಿಯೂ, ಮಾತಿನಲ್ಲಿ ಸಮರ್ಥನಾಗಿಯೂ ಇರುವ ಮಿತ್ರನು, ನಿಜವಾಗಿ ತನ್ನ ಮಿತ್ರನಿಗೆ ಶಾಶ್ವತವಾದ ಶ್ರೇಯಸ್ಸನ್ನು ಕೋರುವನಾದರೆ,ಅವನಿಗೆ ಕಾಲೋಚಿತವಾದ ಬುದ್ಧಿವಾದವನ್ನು ಹೇಳಿಯೇ ತೀರಬೇಕು." ಎಂದನು. ಹೀಗೆ ರಾಮನು ನಯವಾಕ್ಯದಿಂ

---

1 ಇಲ್ಲಿನ ಕಾರ್ಯಸಂಕಟವೇನೆಂದರೆ:—ಅತ್ತಲಾಗಿ ವಿಭೀಷಣನು ತನ್ನಲ್ಲಿ ಶರಣಾಗತನಾಗಿ ಬಂದು ತನ್ನಾಶ್ರಯವನ್ನು ಪ್ರಾರ್ಥಿಸುತ್ತಿರುವನು. ಇತ್ತಲಾಗಿ ಸುಗ್ರೀವನು "ತಸ್ಯಾಹಂ ನಿಗ್ರಹಂ ಮನ್ಯೇ" ಎಂದು ಆತನನ್ನು ನಿಗ್ರಹಿಸಬೇಕೆಂದು ನಿರ್ಬಂಧಿಸುತ್ತಿರುವನು ಇದೇ ಇಲ್ಲಿನ ಕಾರ್ಯಸಂಕಟವು ಈ ಶ್ಲೋಕಾರ್ಥದಿಂದ ಭಗವಂತನಿಗೆ ಆಶ್ರಿತರಾದವರು ತನ್ನ ಇಚ್ಛೆಯನ್ನನುವರ್ತಿಸದೆ ವಿರೋಧವನ್ನು ಹುಟ್ಟಿಸಿದರೂ, ಅವರಿಂದಲೇ ಅದನ್ನು ಪರಿಹಾರಮಾಡಿಸಬೇಕೆಂಬ ಆಶ್ರಿತಪಾರತಂತ್ರ್ಯವು ಸೂಚಿಸಲ್ಪಡುವುದು.

ದ ಅಲ್ಲಿನ ವಾನರರನ್ನು ಪ್ರಶ್ನೆಮಾಡಲು, ರಾಮಕಾರ್ಯದಲ್ಲಿ ಬಹಳ ಎಚ್ಚರಿಕೆಯುಳ್ಳವರಾಗಿಯೂ, ಮನಃಪೂರ್ವಕವಾಗಿ ರಾಮನಿಗೆ ಹಿತವನ್ನು ಬಯಸತಕ್ಕವರಾಗಿಯೂ ಇದ್ದ ಆ ವಾನರರಲ್ಲಿ,[1] ಒಬ್ಬೊಬ್ಬರೂ ತಮ್ಮತಮ್ಮ ಅಭಿಪ್ರಾಯವನ್ನು ಹೇಳತೊಡಗಿದರು. "ರಾಮಾ! ಈ ಮೂರುಲೋಕಗಳಲ್ಲಿಯೂ ನಿನಗೆ ತಿಳಿಯದುದೊಂದೂ ಇಲ್ಲ. ನೀನು ಸರ್ವಜ್ಞನಾಗಿದ್ದರೂ ಕೇವಲ ವಾನರರಿಗೂ ನೀನು ಸುಹೃತ್ತೆಂಬ ಕೀರ್ತಿಯನ್ನು ಲೋಕದಲ್ಲಿ ಪ್ರಕಟಿಸುವುದಕ್ಕಾಗಿಯೇ ನಮ್ಮನ್ನು ಹೀಗೆ ಪ್ರಶ್ನೆಮಾಡುತ್ತಿರುವೆ. ನೀನಾದರೋ ಶರಣಾಗತರಕ್ಷಣವೆಂಬ ವ್ರತವನ್ನು ದೃಢವಾಗಿ ಹಿಡಿದವನು. ಆ ವ್ರತಕ್ಕೆ ಎಂತಹ ಮಹಾವಿಘ್ನಗಳು ಬಂದರೂ ಅವುಗಳನ್ನು ನಿವಾರಿಸತಕ್ಕ ಅಸಾಧಾರಣಶೌರ್ಯವುಳ್ಳವನು. ಪರಮಧಾರ್ಮಿಕನು. ದೃಢಪರಾಕ್ರಮವುಳ್ಳವನು. ಕಾರ್ಯಾಕಾರ್ಯಗಳನ್ನು ವಿಮರ್ಶಿಸಿ ನಡೆಸತಕ್ಕವನು. ಅಸಾಧಾರಣವಾದ ಸ್ಮರಣಶಕ್ತಿಯುಳ್ಳವನು. ಸರ್ವಸಮರ್ಥನಾಗಿದ್ದರೂ ಮಿತ್ರರಿಗಧೀನವಾದ ಮನಸ್ಸುಳ್ಳವನು. ಹೀಗೆ ನಿನ್ನಲ್ಲಿರುವ ಆಶ್ರಿತಪಾರತಂತ್ರ್ಯದಿಂದ ನಮ್ಮ ಮಾತಿನಂತೆಯೇ ನಡೆಯಬೇಕೆಂದು ನಿನಗೆ ಅಭಿಪ್ರಾಯವಿದ್ದಪಕ್ಷದಲ್ಲಿ, ಇಲ್ಲಿ ನಿನ್ನ ಮಂತ್ರಿಗಳೊಬ್ಬೊಬ್ಬರೂ ತಮ್ಮತಮ್ಮ ಅಭಿಪ್ರಾಯಗಳನ್ನು ಬೇರೆ ಬೇರೆಯಾಗಿ ತಿಳಿಸಲಿ! ಇವರೆಲ್ಲರೂ ಬುದ್ಧಿಶಾಲಿಗಳಾಗಿಯೂ, ಮಾತಿನಲ್ಲಿ ಸಮರ್ಥರಾಗಿಯೂ ಇರುವುದರಿಂದ, ಒಬ್ಬೊಬ್ಬರೂ ಕ್ರಮವಾಗಿ ತಮತ

---

1 ಇಲ್ಲಿ "ಅಜ್ಞಾತಂ ನಾಸ್ತಿ ತೇ ಕಿಂಚಿತ್ತ್ರಿಷು ಲೋಕೇಷು ರಾಘವ । ಆತ್ಮಾನಂ ಪೂಜಯನ್ ರಾಮ ಪೃಚ್ಛಸ್ಯಸ್ಮಾನ್ ಸುಹೃತ್ತಯಾ" ಎಂದು ಮೂಲವು. "ನೀನು ಸರ್ವಜ್ಞನಾಗಿದ್ದರೂ ಈಗ ನಮ್ಮನ್ನು ಪ್ರಶ್ನೆಮಾಡುವುದು, ನಿನ್ನಲ್ಲಿರುವ ಆಶ್ರಿತಪಾರತಂತ್ರ್ಯವೆಂಬ ಮಹಾತಿಶಯವನ್ನು ಲೋಕಕ್ಕೆ ತೋರಿಸುವುದಕ್ಕಾಗಿಯೇ ಹೊರತು ಬೇರೆಯಲ್ಲ"ವೆಂದು ಇದರ ಮುಖ್ಯಾರ್ಥವು. ಇಲ್ಲಿ "ಆತ್ಮಾನಂ ಪೂಜಯನ್" ಎಂಬ ಪಾಠಾಂತರವೂ ಉಂಟು. ಆ ಪಾಠದಲ್ಲಿ "ಆತ್ಮಾನಂ" ಎಂಬ ಏಕವಚನವು ಪ್ರತ್ಯೇಕಾರ್ಥವಾಚಕವು. ಆದುದರಿಂದ "ನಮ್ಮಲ್ಲಿ ಒಬ್ಬೊಬ್ಬನನ್ನೂ ಬೇರೆಬೇರೆಯಾಗಿ ಗೌರವಿಸಬೇಕೆಂಬ ಅಭಿಪ್ರಾಯದಿಂದಲೇ ನೀನು ಹೀಗೆ ಕೇಳುತ್ತಿರುವೆ"ಯೆಂದು ಅದರ ಭಾವವು. ಅಥವಾ (ಆತ್ಮಾನಂ) ಆತ್ಮಸ್ವಭಾವವನ್ನು ಎಂದರೆ, ರಾಜನೀತಿಯನ್ನು (ಪೂಜಯನ್)ಪರಿಪಾಲಿಸುವುದಕ್ಕಾಗಿಯೇ ನಮ್ಮನ್ನು ಹೀಗೆ ಕೇಳುವೆಯೆಂದೂ ಅರ್ಥಾಂತರವನ್ನು ಹೇಳಬಹುದು.

ಮಗೆ ತೋರಿದ ಮತವನ್ನು ಸಕಾರಣವಾಗಿ ನಿರೂಪಿಸಿ ಹೇಳಲಿ!" ಎಂದರು. ಹೀಗೆ ವಾನರರು ಹೇಳಿದುದನ್ನು ಕೇಳಿ ಬುದ್ಧಿಶಾಲಿಯಾದ ಅಂಗದನು ಸುಗ್ರೀವನಿಂಷೀಚೆಗೆ ತಾನು ಯುವರಾಜನೆನಿಸಿ ವಾನರರಿಗೆ ಪ್ರಧಾನನಾದುದರಿಂದ, ವಿಭೀಷಣನ ವಿಷಯವಾದ ಗುಣದೋಷಗಳನ್ನು ವಿಮರ್ಶಿಸುವುದಕ್ಕಾಗಿ ತಾನೇ ಮೊದಲು ರಾಮನನ್ನು ಕುರಿತು. "ರಾಮಾ! ಈ ವಿಭೀಷಣನು ಶರಣಾಗತನಾಗಿ ಬಂದಿದ್ದರೂ, ಶತ್ರುವಿನ ಕಡೆಯಿಂದ ಬಂದಿರುವುದರಿಂದ ಅವನವಿಷಯವಾಗಿ ನಾವು ಶಂಕಿಸಬೇಕಾದುದೇ ಯುಕ್ತವು. ಹೀಗಿದ್ದರೂ ಈತನನ್ನು ಪರೀಕ್ಷಿಸದೆ, ಇವನು ಬಂದೊಡನೆ ನಾವು ನಂಬಿಕೆಯನ್ನು ತೋರಿಸಿಬಿಡಬಾರದು ಇಂತವರನ್ನು ನಂಬಿಬಿಟ್ಟರೆ ಮುಂದೆ ಅನರ್ಥವೇ ಸಂಭವಿಸುವುದು. ಏಕೆಂದರೆ, ಕುಟಿಲಬುದ್ಧಿಯುಳ್ಳವರು ಶತ್ರುಗಳನ್ನು ಕೊಲ್ಲುವುದಕ್ಕಾಗಿಯೇ ಅವರಲ್ಲಿ ಒಳಹೊಕ್ಕು, ತಮ್ಮ ಅಭಿಪ್ರಾಯವನ್ನು ಯಾವವಿಧದಿಂದಲೂ ಹೊರಕ್ಕೆ ಕಾಣಿಸದೆ, ತಮ್ಮ ಇಂಗಿತಗಳನ್ನೂ ಮರೆಸಿಟ್ಟುಕೊಂಡು, ಸಮಯವನ್ನು ನಿರೀಕ್ಷಿಸುತ್ತಿರುವರು. ತಮಗೆ ಸರಿಯಾದ ಅವಕಾಶವು ದೊರೆಯುವವರೆಗೂ ಬಹಳನಂಬಿಕೆಯನ್ನೇ ತೋರಿಸುತ್ತಿರುವರು. ನಾವು ಎಚ್ಚರತಪ್ಪಿದ ಸಮಯವನ್ನುನೋಡಿ ಮೇಲೆಬಿದ್ದು ಕೊಲ್ಲುವರು. ಯಾವ ಮನುಷ್ಯನನ್ನಾದರೂ ಪರೀಕ್ಷಿಸದೆ ಅವನಲ್ಲಿ ನಂಬಿಕೆಯನ್ನು ತೋರಿಸುವುದರಿಂದ ಬಹಳ ದೊಡ್ಡ ಅನರ್ಥವುಂಟು. ಇದಲ್ಲದೆ ಯಾವಕಾರ್ಯವನ್ನು ನಡೆಸಬೇಕಾಗಿದ್ದರೂ ಅದರಿಂದುಂಟಾಗಬಹುದಾದ ಗುಣದೋಷಗಳನ್ನು ಮೊದಲೇ ಪರ್ಯಾಲೋಚಿಸಿ, ಆಮೇಲೆ"ಅದನ್ನು ತ್ಯಜಿಸಬೇಕೆ? ಪರಿಗ್ರಹಿಸಬೇಕೆ?" ಎಂಬುದನ್ನು ನಿಶ್ಚಯಿಸಿಕೊಳ್ಳಬೇಕೇಹೊರತು, ಹಿಂದುಮುಂದು ನೋಡದೆ ಪರಿಗ್ರಹಿಸಲೂ ಬಾರದು, ತ್ಯಜಿಸಲೂ ಬಾರದು. ಗುಣವುಂಟೆಂಬ ನಿಶ್ಚಯವು ತೋರಿದರೆ ಅವಶ್ಯವಾಗಿ ಅಂಗೀಕರಿಸಬೇಕು. ದೋಷವುಂಟೆಂದು ತಿಳಿದಾಗ ತ್ಯಜಿಸಬೇಕು. ಆದರೆ ಯಾವ ವಿಷಯದಲ್ಲಿಯಾಗಲಿ, ಸರ್ವಪ್ರಕಾರದಿಂದಲೂ ಗುಣವೇ ತುಂಬಿರುವುದೆಂದಾಗಲಿ, ಸಂಪೂರ್ಣವಾಗಿ ದೋಷವೇ ಇರುವುದೆಂದಾಗಲಿ ಹೇಳುವುದಕ್ಕಿಲ್ಲ-ಯಾವ ಮನುಷ್ಯನಲ್ಲಿಯಾದರೂ ಗುಣದೋಷಗಳೆರಡೂ ಕಲೆತೇ ಇರುವುವು. ಹೀಗಿರುವಾಗ"ಯಾರನ್ನಂಗೀಕರಿಸಬಹುದು ಯಾರನ್ನು ಬಿಡಬಹುದು!"

ಎಂದು ನೀನು ಕೇಳಬಹುದು. ಎಲೈ ಮಹಾರಾಜನೇ! ಇಂತಹ ಸಂದರ್ಭಗ ಳಲ್ಲಿ ಗುಣದೋಷಗಳಲ್ಲಿ ಯಾವುದು ಹೆಚ್ಚೆಂಬುದನ್ನುಮಾತ್ರವೇ ನಾವು ನೋಡಬೇಕು. ಹಾಗೆಯೇ ಈ ವಿಭೀಷಣನಲ್ಲಿಯೂ ದೋಷವೇ ಹೆಚ್ಚೆಂದು ತೋರಿದರೆ ಅವನನ್ನು ನಿಸ್ಸಂದೇಹವಾಗಿ ತ್ಯಜಿಸಬೇಕು. ಹಾಗಿಲ್ಲದೆ ಗುಣ ಗಳೇ ಹೆಚ್ಚಾಗಿರುವುವೆಂದು ತೋರಿದರೆ ಅಂಗೀಕರಿಸಬಹುದು. ಆದುದರಿಂ ದ ಈತನನ್ನು ಕರೆಸಿಕೊಂಡು ಮೊದಲು ಪರೀಕ್ಷಿಸಿ ಆಮೇಲೆ ವಿಶ್ವಾಸವನ್ನು ತೋರಿಸಬಹುದು" ಎಂದನು. ಆಮೇಲೆ ಶರಭನೆಂಬ ಕಪಿಯು ತನ್ನಲ್ಲಿತಾನು "ಒಬ್ಬ ಮನುಷ್ಯನೊಡನೆ ಬಳಕೆಮಾಡುವುದಕ್ಕೆಮೊದಲೇ ಅವನ ಗುಣದೋ ಷಗಳುತಿಳಿಯಲಾರವು.ಅಂತವನನ್ನು ಪರೀಕ್ಷಿಸದೆಯೇ ಪರಿಗ್ರಹಿಸಿದಪಕ್ಷದಲ್ಲಿ ಮಂತ್ರಹಾನಿಯುಂಟಾಗುವುದು. ಹಾಗಿಲ್ಲದೆ ಪರಿತ್ಯಜಿಸಿದರೂ ಕೈಗೆ ಬಂದ ಬಲವು ತಪ್ಪಿಹೋಗುವುದು. ಆದುದರಿಂದ ಈ ಅಂಗದನಮಾತಿನಂತೆ ನಡೆ ಯುವುದಕ್ಕೆ ಸಾಧ್ಯವೇ ಅಲ್ಲ." ಎಂದು ಚಿಂತಿಸಿ, ಮುಂದೆ ತನಗೆ ಸಾ ಧ್ಯವೆಂದು ತೋರಿದ ರೀತಿಯನ್ನೂ ನಿಶ್ಚಯಿಸಿಕೊಂಡು, ರಾಮನನ್ನು ಕುರಿ ತು "ಎಲೆ ರಾಜಸಿಹ್ಮನೆ! ನಿಜಸ್ಥಿತಿಯನ್ನು ತಿಳಿಯದೆ ಇದ್ದಕ್ಕಿದ್ದಹಾಗೆ ಈತ ನನ್ನು ಪರಿಗ್ರಹಿಸುವುದಕ್ಕಿಲ್ಲ. ಹಾಗೆ ಪರಿಗ್ರಹಿಸುವುದಕ್ಕೆ ಮೊದಲೇ ಈತ ನು ದುಷ್ಟನೇ ಅಲ್ಲವೇ ಎಂಬುದನ್ನು ತಿಳಿಯುವುದೂ ಸಾಧ್ಯವಲ್ಲ. ಆದುದ ರಿಂದ ಆ ಕಾರ್ಯಕ್ಕಾಗಿ ನಾವು ಈಗಲೇ ಆ ವಿಭೀಷಣನಬಳಿಗೆ ಗೂಢಚಾರ ನೊಬ್ಬನನ್ನು ಕಳುಹಿಸಬೇಕು. ಆ ಚಾರನ ಮೂಲಕವಾಗಿ ನೀತಿಶಾಸ್ತ್ರೋ ಕ್ತರೀತಿಯಿಂದ ಅವನ'ಗುಣದೋಷಗಳನ್ನು ಪರೀಕ್ಷಿಸಿ, ಆಮೇಲೆ ನ್ಯಾಯ ರೀತಿಯಿಂದ ಪರಿಗ್ರಹಿಸಬಹುದು." ಎಂದನು. ಆಮೇಲೆ ರಾಜನೀತಿಯಲ್ಲಿ ನಿಪುಣನಾದ ಜಾಂಬವಂತನು, ನೀತಿಶಾಸ್ತ್ರಕ್ರಮದಿಂದ ತನ್ನಲ್ಲಿ ತಾನು ಪ ರ್ಯಾಲೋಚಿಸಿ, ಆ ಅಂಗದನ, ಮತ್ತು ಶರಭನ ಮತಗಳೆರಡನ್ನೂ ಒಪ್ಪದೆ, ರಾಮನನ್ನು ಕುರಿತು, ಗುಣಯುಕ್ತವಾಗಿಯೂ, ದೋಷರಹಿತವಾಗಿಯೂ

---

೧ ಇಲ್ಲಿ ಶರಭನು "ಗುಣವಿದ್ದರೆ ಪರಿಗ್ರಹಿಸಬಹುದೆಂದು ಮಾತ್ರವೇ ಹೇಳಿದನೇ ಹೊರತು, ದೋಷವಿದ್ದರೆ ತ್ಯಜಿಸಬೇಕೆಂದು ಹೇಳದೆ ಬಿಟ್ಟುದೇಕೆ?" ಎಂದರೆ, ರಾಮನಿ ಗೆ ಶರಣಾಗತರಲ್ಲಿರುವ ವಾತ್ಸಲ್ಯಾತಿಶಯವನ್ನುನೋಡಿ ಅವನ ಮುಂದೆ ಆಮಾತನ್ನು ಹೇಳುವುದಕ್ಕೆ ಹೆದರಿ ಅಷ್ಟರಲ್ಲಿಯೇ ಬಿಟ್ಟನೆಂದು ತಿಳಿಯಬೇಕು.

ಇರುವ ಮಾತಿನಿಂದ "ರಾಮಾ! ಇವರಿಬ್ಬರೂ ಹೇಳಿದಂತೆ ಈ ವಿಭೀಷಣ ನೊಡನೆ ನೀನಾಗಿ ಬಳಿಕೆಮಾಡುವುದರಿಂದಾಗಲಿ, ಚಾರರಿಂದಾಗಲಿ, ಪರೀ ಕ್ಷಿಸುವುದು ಸಾಧ್ಯವಲ್ಲ. ಸರ್ವಪ್ರಕಾರದಿಂದಲೂ ಈತನನ್ನು ನಂಬುವು ದೇ ಸರಿಯಲ್ಲ. ಆ ರಾವಣನೋ ನಮ್ಮಲ್ಲಿ ಬದ್ಧವೈರವುಳ್ಳವನು. ಮಹಾವಂ ಚಕನು.ಬಹಳಪಾಪಿಯು.ಪಾಪವೇ ಸಹಜಸ್ವಭಾವವುಳ್ಳ ರಾಕ್ಷಸರಿಗೂ ರಾ ಜನು. ಅಂತಹ ರಾವಣನ ಕಡೆಯಿಂದಲೇ ಈ ವಿಭೀಷಣನು ಇಲ್ಲಿಗೆ ಬಂದಿರು ವನು." ಆ ರಾವಣನು ದುಷ್ಟನಾದ ಮಾತ್ರಕ್ಕೆ ಇವನು ಸಾಧುವಾಗಿರಬಾ ರದೆ" ಎಂದು ನೀನು ಶಂಕಿಸಬಹುದು! ಇವನು ಈಗ ನಮ್ಮಲ್ಲಿಗೆ ಬಂದಿರುವ ಕಾಲದೇಶಸ್ಥಿತಿಯೂಕೂಡ ಶಂಕಾಸ್ಪದವಾಗಿರುವುದು. ಹೀಗೆ ಅಕಸ್ಮಾ ತ್ತಾಗಿ ಈತನು ಶತ್ರುವಿನಕಡೆಯಿಂದ ಬಂದವನಾದುದರಿಂದ, ಸರ್ವಪ್ರಕಾ ರದಿಂದಲೂ ಇವನವಿಷಯದಲ್ಲಿ ಶಂಕಿಸಬೇಕಾದುದೇ ಯುಕ್ತವು" ಎಂದನು. ಆಮೇಲೆ ನ್ಯಾಯಾನ್ಯಾಯಗಳನ್ನು ನಿಶ್ಚಯಿಸುವುದರಲ್ಲಿ ನಿಪುಣನಾಗಿಯೂ, ಆ ನಿಶ್ಚಯವನ್ನು ಚೆನ್ನಾಗಿ ಉಪಪಾದಿಸಿ ಹೇಳುವುದಕ್ಕೆ ತಕ್ಕ ವಚನಸಂಪ ತ್ತಿಯುಳ್ಳವನಾಗಿಯೂ ಇರುವ ಮೈಂದನು, ತನ್ನಲ್ಲಿ ತಾನು "ವಿಭೀಷಣನು ಸರ್ವವಿಧದಿಂದಲೂ ಶಂಕಾಸ್ಪದನಾಗಿದ್ದರೂ, ಯಾವುದಾದರೂ ಸುಲ ಭೋಪಾಯದಿಂದ ಆತನನ್ನು ಪರೀಕ್ಷಿಸದೆಯೇ ಅವನನ್ನು ನಿರಾಕರಿಸಿಬಿಟ್ಟ ರೆ,ತಾನಾಗಿ ಕೈಗೆ ಬಂದ ಬಲವನ್ನೂ ಕಳೆದುಕೊಂಡಂತಾಗುವು" ದೆಂದೆಣಿಸಿ, ಆ ವಿಭೀಷಣನನ್ನು ಪರೀಕ್ಷಿಸುವುದಕ್ಕೆ ಸುಲಭೋಪಾಯವೇನೆಂಬುದನ್ನೂ

---

5 ಇಲ್ಲಿ "ಅದೇಶಕಾಲೇ ಸಂಪ್ರಾಪ್ತಃ" ಎಂದು ಮೂಲವು. ಋಶ್ಯಮೂಕ ಪರ್ವತ ವೇ ಈತನು ಬಂದು ಮರೆಹುಗಬೇಕಾದ ಪ್ರದೇಶವೆಂದೂ, ಆಗಲೇ ಉಚಿತಕಾಲವೆಂದೂ, ಹಾಗಿಲ್ಲವೆ ನಾವು ಇಷ್ಟುದೂರದವರೆಗೆ ಬಂದು ಲಂಕೆಯನ್ನು ಸಮೀಪಿಸಿದಮೇಲೆ, ಈ ರಾತ್ರಿಕಾಲದಲ್ಲಿ ಬಂದಿರುವುದರಿಂದ, ಇವನು ಬಂದ ಈ ಕಾಲದೇಶಗಳೆರಡೂ ಸಂದೇಹಾ ಸ್ಪದಗಳೆಂದೂ ತನಿಶ್ಲೋಕಿ ವ್ಯಾಖ್ಯಾನವು. "ನಾವು ಲಂಕೆಗೆ ಇನ್ನೂ ದೂರವಾಗಿ ರುವುದರಿಂದ, ಈ ಕಾಲದಲ್ಲಿ ಇವನಿಗೆ ನಮ್ಮಿಂದ ಭಯಕ್ಕೆ ಕಾರಣವೇ ಇಲ್ಲ. ಇವನು ಈ ಸ್ಥಳಕ್ಕೆ ಬರಬೇಕಾದ ಕೆಲಸವೂ ಇಲ್ಲ ಇದಲ್ಲದೆ ತನ್ನ ಸ್ವಾಮಿಯಾದ ರಾವಣನಿಗೆ ಶತ್ರುಗಳೊಡನೆ ಯುದ್ಧವು ಸಮೀಪಿಸಿರುವಾಗ ಆತನನ್ನು ಬಿಟ್ಟುಬರುವುದಕ್ಕೂ ಇದು ತಕ್ಕಕಾಲವಲ್ಲ"ವೆಂದು(ಗೋವಿಂದರಾಜ ವ್ಯಾಖ್ಯಾನವು.)

ಚೆನ್ನಾಗಿ ನಿರ್ಧರಿಸಿಕೊಂಡು, ಸುಗ್ರೀವಾದಿಗಳು ಹೇಳಿದುದಕ್ಕಿಂತಲೂ ಹೆಚ್ಚಾಗಿ ಯುಕ್ತಿಯುಕ್ತವಾದ ಮಾತಿನಿಂದ ರಾಮನನ್ನು ಕುರಿತು “ಎಲೆ ರಾಜೇಂದ್ರನೆ! ಈಗ ನಾವು ಈ ವಿಭೀಷಣನಬಳಿಗೆ ಯಾವನಾದರೂ ಅಪರಿಚಿತನಾದ ಪುರುಷನೊಬ್ಬನನ್ನು ಕಳುಹಿಸಿ, ರಾವಣನು ನಮ್ಮ ವಿಷಯವಾಗಿ ಏನು ಹೇಳುತ್ತಿರುವನೆಂಬುದನ್ನು ಮೊದಲು ತಿಳಿದುಕೊಳ್ಳಬೇಕು. ವಿಭೀಷಣನಿಗೆ ಸ್ವಲ್ಪವಾದರೂ ಸಂದೇಹವುಂಟಾಗದಂತೆ ಸಂಗತಿಗಳನ್ನು ತಿಳಿದು ಬರಬೇಕು. ಆತುರಪಡದೆ ಮೆಲ್ಲಗೆ ಮೃದುವಾಕ್ಯಗಳಿಂದಲೇ ಕೇಳಬೇಕು. ಹೀಗೆ ನಾವು ಉಪಾಯದಿಂದ ಆ ವಿಭೀಷಣನು ದುಷ್ಟನೇ ಅಲ್ಲವೇ ಎಂಬುದನ್ನು ಪರೀಕ್ಷಿಸಿ, ಅವನ ಭಾವವನ್ನು ಯಥಾಸ್ಥಿತವಾಗಿ ತಿಳಿದುಕೊಳ್ಳುವುದು ಮೇಲು! ಅವನು ದುಷ್ಟನೆಂದು ತೋರಿಬಂದರೆ ಅದಕ್ಕೆ ತಕ್ಕಂತೆಯೂ, ದುಷ್ಟನಲ್ಲವೆಂದು ತೋರಿದಾಗ ಅದಕ್ಕೆ ತಕ್ಕಂತೆಯೂ ನಡೆದು ಕೊಳ್ಳಬಹುದು. ರಾಮಾ! ಇದಕ್ಕಾಗಿ ನಿನಗೆ ಬೇರೊಬ್ಬರೊಡನೆ ಮಂತ್ರಾಲೋಚನೆಯೇಕೆ? ನಿನ್ನ ಬುದ್ಧಿಗೆ ತೋರಿದಂತೆ ನಡೆಸು.” ಎಂದನು. ಆ ಮೇಲೆ ಶಾಸ್ತ್ರಾಭ್ಯಾಸದಿಂದ ಚೆನ್ನಾಗಿ ಸಂಸ್ಕಾರಹೊಂದಿದ ಬುದ್ಧಿಯುಳ್ಳ ಮಂತ್ರಿಸತ್ತಮನಾದ ಹನುಮಂತನು, ರಾಮನನ್ನು ಕುರಿತು, ಕಿವಿಗಿಂಪಾಗಿಯೂ, ಮೃದುವಾಗಿಯೂ, ಅರ್ಥಯುಕ್ತವಾಗಿಯೂ, ಇರುವ ಮಾತಿನಿಂದ, “ಎಲೆ ರಾಜನೆ! ನೀನಾದರೋ ಬುದ್ಧಿವಂತರಲ್ಲಿ ಮೇಲೆನಿಸಿದವನು. ಕಾರ್ಯಸಮರ್ಥನು. ಮಾತಿನಲ್ಲಿ ಚತುರನು. ಬೃಹಸ್ಪತಿಯಾದರೂ ಮಾತಿನಲ್ಲಿ ನಿನ್ನನ್ನು ಮೀರಲಾರನು. ಇನ್ನು ನಮ್ಮ ಮಾತೇನು? ಆದರೂ ನೀನು ನಮ್ಮಲ್ಲಿ ಗೌರವವನ್ನು ತೋರಿಸಿ ನಮ್ಮ ಮತವನ್ನು ತಿಳಿಸಬೇಕೆಂದು ಕೇಳಿದುದಕ್ಕಾಗಿ, ನಾನೂ ನನಗೆ ತೋರಿದ ಮಾತನ್ನು ಹೇಳಬೇಕಾಗಿರುವುದು. ಇದು ಹೊರತು ನಾನು ನನ್ನ ವಾದಕೌಶಲದಿಂದಾಗಲಿ, ಇತರರ ಮತವನ್ನು ಖಂಡಿಸಬೇಕೆಂಬ ಸ್ಪರ್ಧೆಯಿಂದಾಗಲಿ, ಗೌರವಾಪೇಕ್ಷೆಯಿಂದಾಗಲಿ, ನಾನೇ ಸ್ವೇಚ್ಛೆಯಿಂದಾಗಲಿ ಮಾತಾಡುವವನಲ್ಲ. ನನ್ನ ಅಭಿಪ್ರಾಯವನ್ನೂ ತಿಳಿಸುವೆನು ಕೇಳು. ಈಗ ನಮ್ಮಲ್ಲಿಗೆ ಬಂದಿರುವ ಈ ವಿಭೀಷಣನನ್ನು ಪರಿಗ್ರಹಿಸುವುದಕ್ಕೂ, ತ್ಯಜಿಸುವುದಕ್ಕೂ ಮೊದಲು, ಅವನ ಗುಣದೋಷಗಳನ್ನು ನಿಶ್ಚಯಿಸುವನಿಮಿತ್ತವಾಗಿ ಈ ಮಂತ್ರಿಗಳೊಬ್ಬೊಬ್ಬರೂ ತಮ

ಮಗೆ ತೋರಿದ ಮಾತುಗಳನ್ನು ಹೇಳಿದರಷ್ಟೆ ? ಅವುಗಳಲ್ಲಿ ನನಗೆ ದೋಷ ವೇ ಕಾಣುವುದು. ಮೊದಲು ಈ ಅಂಗದನು ಹೇಳಿದಂತೆ, ವಿಭೀಷಣನನ್ನು ಕರೆಸಿ ಪರೀಕ್ಷಿಸಬೇಕೆಂಬ ಕಾರ್ಯವು ಎಂದಿಗೂ ಸಾಧ್ಯವಲ್ಲ. ಒಬ್ಬನನ್ನು ರಾಜಕಾರ್ಯದಲ್ಲಿ ನಿಯೋಗಿಸಿದ ಹೊರತು, ಅವನ ಗುಣದೋಷಗಳನ್ನು ತಿಳಿಯುವುದು ಸಾಧ್ಯವಲ್ಲ. ಹಾಗೆ ಗುಣದೋಷಗಳನ್ನು ತಿಳಿಯದೆ,ಹೊಸದಾಗಿ ಬಂದ ಅಪರಿಚಿತನಾದ ಪುರುಷನೊಬ್ಬನನ್ನು ತಂದು ನಿಯೋಗಿಸುವುದೂ ದೋಷಾಸ್ಪದವೆಂದೇ ನನಗೆ ತೋರಿಸುವುದು. ಹೀಗೆ ಗುಣದೋಷಗಳನ್ನು ಪರೀಕ್ಷಿಸಿದಮೇಲೆಯೇ ಮನುಷ್ಯನನ್ನು ನಿಯೋಗಿಸಬೇಕೆಂದೂ, ನಿಯೋಗಿಸಿದಮೇಲೆಯೇ ಅವನ ಗುಣದೋಷಗಳನ್ನು ಪರೀಕ್ಷಿಸಬೇಕೆಂದೂ,ಅನ್ಯೋನ್ಯಾಶ್ರಯವಿರುವುದರಿಂದ ಈ ಮತವೇ ನನಗೆ ಸರಿಯಾಗಿ ತೋರಲಿಲ್ಲ. ಇದರಮೇಲೆ ಮೊದಲು ಚಾರನನ್ನು ಕಳುಹಿಸಿ ರಹಸ್ಯವಾಗಿ ಆತನ ಸಂಗತಿಯನ್ನು ತಿಳಿದುಕೊಳ್ಳುವುದು ಯುಕ್ತವೆಂದು ನಿನ್ನ ಮಂತ್ರಿಗಳಲ್ಲಿ ಬೇರೆಕೆಲವರು ಹೇಳಿದರಷ್ಟೆ ? ಅದೂ ಯುಕ್ತವಲ್ಲ. ದೂರದಲ್ಲಿರುವವನ ಬಳಿಗಲ್ಲವೇ ರಹಸ್ಯವಾಗಿ ಚಾರನು ಹೋಗಿ ಮರೆಯಾಗಿದ್ದು ಆತನ ಸಂಗತಿಯನ್ನು ತಿಳಿದುಕೊಳ್ಳಬೇಕು. ನಮಗೆ ಬಹಳ ಸಮೀಪದಲ್ಲಿ ಪ್ರತ್ಯಕ್ಷವಾಗಿ ಆಕಾಶಮಧ್ಯದಲ್ಲಿರುವವನ ಬಳಿಗೆ ಚಾರನನ್ನು ಕಳುಹಿಸುವುದು ಹೇಗೆ ? ಈ ಉಪಾಯವೂ ಕೆಲಸಕ್ಕೆ ಬಾರದು. ಮತ್ತೆಕೆಲವರು ಈ ವಿಭೀಷಣನು ನಮ್ಮಲ್ಲಿಗೆ ಬಂದಿರತಕ್ಕ ದೇಶಕಾಲಗಳೆರಡೂ ಸರಿಯಲ್ಲವೆಂದು ಹೇಳಿದರಲ್ಲವೆ ? ಆ ಮಾತೂ ಯುಕ್ತವಲ್ಲ. ಆ ವಿಷಯವಾಗಿ ನನಗೆ ಇವೇ ತಕ್ಕ ದೇಶಕಾಲಗಳೆಂದೂ ತೋರಿರುವುದು ಈ ವಿಚಾರವಾಗಿ ನನಗೆ ತೋರಿದಮಟ್ಟಿಗೆ ಒಂದೆರಡು ಮಾತನ್ನು ಹೇಳಬೇಕೆಂಬ ಕೋರಿಕೆಯುಂಟು. ಅದನ್ನೂ ತಿಳಿಸುವೆನು ಕೇಳು ! ಈ ವಿಭೀಷಣನು ದುರಾತ್ಮನಾದ ಆ ರಾವಣನಲ್ಲಿರುವ ದೋಷಗಳನ್ನೂ, ನಿನ್ನಲ್ಲಿರುವ ಗುಣಗಳನ್ನೂ ವಿಚಾರಿಸಿ, ಅವನು ನೀಚನೆಂಬುದನ್ನೂ, ನೀನು ಉತ್ತಮನೆಂಬುದನ್ನೂ ತನ್ನ ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ತನ್ನ ಹಿತೋಪದೇಶಕ್ಕೆ ಒಳಗಾಗದ ಆತನ ಮೂರ್ಖಸ್ವಭಾವವನ್ನೂ,ನಿನ್ನ ಪರಾಕ್ರಮವನ್ನೂ ನೋಡಿ,ಆಕ್ಷಣವೇ ನಿನ್ನಬಳಿಗೆ ಬಂದಿರುವನು. ಇದು ಅವನ ಬುದ್ಧಿಗೆ ಯುಕ್ತವಾಗಿಯೇ ಇರುವುದು. (ಇತರರತಗುಣದೋಷಗಳನ್ನು ಕಂಡಮೇಲೆ

ಯೋ ಅವರಲ್ಲಿ ಮಿತ್ರತ್ವವನ್ನಾಗಲಿ, ಶತ್ರುತ್ವವನ್ನಾಗಲಿ, ನಿರ್ಣಯಿಸಬೇಕಾದುದರಿಂದ, ಇವನೂ ದೇಶಕಾಲಗಳನ್ನರಿತೇ ಬಂದಿರುವನು)ಅದೂ ಹಾಗಿರಲಿ! ಈ ವಿಭೀಷಣನಿಗೆ ಯಾರಲ್ಲಿ ಪರಿಚಯವಿಲ್ಲವೋ ಅಂತಹ ಕೆಲವು ಪುರುಷರನ್ನು ಕಳುಹಿಸಿ,ಅವರಿಂದ ಆತನನ್ನು ಪ್ರಶ್ನೆಮಾಡಿಸಿ ಅವನ ಮೂಲಕವಾಗಿ ರಾವಣನ ವಿಷಯವನ್ನು ತಿಳಿಯಬೇಕೆಂದು ಬೇರೆ ಕೆಲವರು ಹೇಳಿದರಲ್ಲವೆ? ಆ ವಿಷಯವನ್ನೂ ನಾನು ಚೆನ್ನಾಗಿ ವಿಮರ್ಶಿಸಿ ನೋಡಿದುದರಲ್ಲಿ,ಆ ಮತವೂ ನೀತಿ ವಿರುದ್ಧವೆಂದೇ ನನ್ನ ಬುದ್ಧಿಗೆ ತೋರಿರುವುದು. ಏಕೆಂದರೆ, [1]ಈ ವಿಭೀಷಣನನ್ನು ನಾವು ಸ್ವೀಕರಿಸುವುದಕ್ಕೆ ಮೊದಲೇ, ಅವನ ಬಳಿಗೆ ಹೊಸಮನುಷ್ಯನೊಬ್ಬನು ಹೋಗಿ, ರಾವಣನ ಸಂಗತಿಗಳೇನೆಂದು ಕೇಳಿದಪಕ್ಷದಲ್ಲಿ, ಬುದ್ಧಿವಂತನಾದ ವಿಭೀಷಣನು ಆಗಲೇ ಸಂದೇಹಪಡುವನು. ಅವನನ್ನು ನಾವು ನಮ್ಮೊಳಗೆ ಸೇರಿಸಿಕೊಂಡಮೇಲೆ ಕಾರ್ಯಾಲೋಚನೆಯ ಕಾಲದಲ್ಲಿ ನಂಬಿಕೆಯಿಂದ ಕೇಳಬೇಕಾದ ಪ್ರಶ್ನಗಳನ್ನು ಮೊದಲೇ ಕೇಳಿಬಿಟ್ಟರೆ, ನಮಗೆ ಇನ್ನೂ ಆತನಲ್ಲಿ ಶತ್ರುತ್ವಶಂಕೆಯೇ ಇರಬಹುದೆಂದು ಅವನಿಗೆ ಅನುಮಾನವು ಹುಟ್ಟುವುದು. ಹೀಗೆ ಅನುಮಾನವು ಹುಟ್ಟುವುದರಿಂದ ನಮ್ಮಲ್ಲಿ ಅವನಿಗೆ ನಂಬಿಕೆಯೇ ತಪ್ಪುವುದು. ಆದರಿಂದ ಅನಾಯಾಸವಾಗಿ ನಮಗೆ ಸಿಕ್ಕಿದ ಮಿತ್ರನನ್ನೂ ನಾವು ಕಳೆದುಕೊಂಡಂತಾಗುವುದು. ಇಷ್ಟೇಅಲ್ಲದೆ ಇಲ್ಲಿಂದ ಹೋಗುವ ಮನುಷ್ಯನು ಎಷ್ಟೇ ಬುದ್ಧಿಶಾಲಿಯಾಗಿದ್ದರೂ, ಶತ್ರುವು ಕಪಟಸ್ವಭಾವನಾಗಿಯೂ, ಸ್ವಕಾರ್ಯಸಾಧನೆಯಲ್ಲಿ ಬಹಳ ನಿಪುಣನಾಗಿಯೂ ಇದ್ದಪಕ್ಷದಲ್ಲಿ, ಯಾವ ವಿಧದಿಂದಲೂ ತನ್ನ ಅಭಿಪ್ರಾಯಗಳನ್ನು ಹೊರಪಡಿಸದೆ, ಮನಸ್ಸಿನಲ್ಲಿಯೇ ಇಟ್ಟು ಮಾತನಾಡುವುದರಿಂದ, ಅವನ ಅಭಿಪ್ರಾಯವನ್ನು ಥಟ್ಟನೆ ತಿಳಿದು ಕೊಳ್ಳುವುದೂ ಸಾಧ್ಯವಲ್ಲ. ಬಹುಕಾಲದವರಗೆ ಪರಿಚಯವನ್ನು ಮಾಡಿದಹೊರತು ಅವನ ಅಭಿಪ್ರಾಯವೊಂದೂ ತಿಳಿಯದು. ಆದುದರಿಂದ ಈ ಉಪಾಯದಿಂದ ಮೊದಲೇ ಮಿತ್ರನನ್ನು ಕಳೆದುಕೊಳ್ಳಬೇಕಾಗುವುದಲ್ಲ

---

1 ಇಲ್ಲಿ "ಮಿತ್ರಂ ಪ್ರದುಷ್ಯೇತ ಮಿಥ್ಯಾಪ್ರಷ್ಟುಸ್ಸುಖಾಗತಂ" ಎಂದು ಮೂಲವು. "ಮಿಥ್ಯಾಪೃಷ್ಟಂ ಸುಖಾಗತಂ" ಎಂಬ ಪಾಠಾಂತರವೂ ಉಂಟು. ಇವೆರಡೂ ಮೇಲಿನ ತಾತ್ಪರ್ಯಾರ್ಥದಲ್ಲಿಯೇ ಪರ್ಯವಸಿತಗಳಾಗುವುವು.

ಧೆ, ಅವನ ಭಾವವೂ ತಿಳಿಯದೆ ಹೋಗುವುದು. ರಾಮಾ! ಇದಲ್ಲದೆ ಈತನು ಇದುವರೆಗೆ ಎಷ್ಟೋಮಾತುಗಳನ್ನಾಡುತಿದ್ದರೂ ಅವನಲ್ಲಿ ವಂಚನೆಯನ್ನು ತೋರಿಸತಕ್ಕ ವಿಕಾರಗಳೊಂದೂ ಕಾಣಲಿಲ್ಲ. ಅವನ ಮುಖವು ಪ್ರಸನ್ನವಾಗಿಯೇ ಇರುವುದು. ಆದುದರಿಂದ ಅವನ ವಿಷಯದಲ್ಲಿ ನನಗೆ ಸ್ವಲ್ಪವಾದರೂ ಸಂದೇಹವೇ ತೋರಲಿಲ್ಲ. ಮತ್ತು ಈತನನ್ನು ಕಂಡೊಡನೆ ನಮ್ಮ ಕಡೆಯವಾನರರು ಅವನಲ್ಲಿ ಶತ್ರುಭಾವವನ್ನಿಟ್ಟು, ಕೈಗೆ ಸಿಕ್ಕಿದ ಕಲ್ಲುಮರಗಳನ್ನೆತ್ತಿ ಹಿಡಿದು, ಆತನನ್ನು ಕೊಲ್ಲುವುದಕ್ಕೆ ಸಿದ್ಧರಾಗಿದ್ದರೂ, ಅವನು ಮನಸ್ಸಿನಲ್ಲಿ ಸ್ವಲ್ಪವಾದರೂ ಅಳುಕಿಲ್ಲದೆ ಮುಂದೆ ಬಂದು ನಿಂತಿರುವನು. ಮನಸ್ಸಿನಲ್ಲಿ ಈತನಿಗೆ ನಿಜವಾಗಿಯೂ ದುರಭಿಪ್ರಾಯವಿದ್ದಪಕ್ಷದಲ್ಲಿ, ಹೀಗೆ ನಿರ್ಭಯವಾಗಿ ಬಂದು ನಿಲ್ಲುತಿದ್ದನೆ? ಈತನ ಮಾತುಗಳೂ ನಿರ್ದೋಷಗಳಾಗಿರುವುವು. ಆದುದರಿಂದ ಈತನವಿಷಯದಲ್ಲಿ ಸ್ವಲ್ಪವೂ ಸಂದೇಹಕ್ಕವಕಾಶವಿಲ್ಲ. ಮನುಷ್ಯನು ಎಷ್ಟೇವಿಧದಿಂದ ತನ್ನ ಮುಖವಿಕಾರಗಳನ್ನು ಮರೆಸಿಟ್ಟುಕೊಂಡರೂ, ಅವು ಮರೆಯಾಗಿ ನಿಲ್ಲುವುವಲ್ಲ. ಅವರ ಮುಖವಿಕಾರಗಳೇ ಅವರ ಮನೋಭಾವವನ್ನು, ಬಲಾತ್ಕಾರದಿಂದ ಹೊರಕ್ಕೆ ತಂದು ತೋರಿಸುವುವು. ರಾಮಾ ! ನೀನು ಕಾರ್ಯಜ್ಞರಲ್ಲಿ ಮೇಲೆನಿಸಿಕೊಂಡವನಾದುದರಿಂದ, ಲೋಕದಲ್ಲಿ ನಿನಗೆ ತಿಳಿಯದ ಕಾರ್ಯಗಳಿಲ್ಲ ! ತಕ್ಕ ಕಾಲವನ್ನೂ, ತಕ್ಕ ದೇಶವನ್ನೂ, ತಕ್ಕ ಪುರುಷರನ್ನೂ ನೋಡಿ ನಮ್ಮ ಕೃತ್ಯಗಳನ್ನು ಪ್ರಯೋಗಿಸಿದಪಕ್ಷದಲ್ಲಿ, ಅದಕ್ಕೆ ತಕ್ಕ ಫಲವು ಶೀಘ್ರದಲ್ಲಿಯೇ ಕೈಗೂಡುವುದರಲ್ಲಿ ಯಾವ ಅಡ್ಡಿಯೂ ಇಲ್ಲ. ಆದರೆ, ಈ ವಿಭೀಷಣನು ನಮ್ಮಲ್ಲಿ ಸ್ನೇಹವನ್ನು ಬೆಳೆಸುವುದಕ್ಕಾಗಿ ತನ್ನ ಸರ್ವೈಶ್ವರ್ಯವನ್ನೂ ಬಿಟ್ಟು ಬರಬೇಕಾದ ಕಾರಣವೇನು? ರಾಜ್ಯಭ್ರಷ್ಟರಾಗಿ ಇಷ್ಟು ದೀನದಶೆಯಲ್ಲಿರುವ ನಮ್ಮಿಂದ ಅವನಿಗಾಗಬೇಕಾದುದೇನು? ಇವನು ಬೇರೆ ಯಾವುದೋ ಒಂದು ದುರಭಿಪ್ರಾಯದಿಂದಲೇ ಬಂದಿರಬೇಕು?" ಎಂದು ನೀನು ಶಂಕಿಸಬಹುದು. ಇವನು ಈಗ ನಮ್ಮಲ್ಲಿಗೆ ಬರುವುದಕ್ಕೂ ಕಾರಣವುಂಟು? ಈತನು ಈಗ ನೀನು ರಾವಣವಧಕ್ಕಾಗಿ ಮಾಡುತ್ತಿರುವ ಪ್ರಯತ್ನವನ್ನೂ, ರಾವಣನ ಕಪಟವ್ಯಾಪಾರವನ್ನೂ ತಿಳಿದು, ನೀನು ವಾಲಿಯನ್ನು ಕೊಂದು ಸುಗ್ರೀವನಿಗೆ ಪಟ್ಟಾಭಿಷೇಕವನ್ನು ಮಾಡಿದ ವೃತ್ತಾಂತವನ್ನೂ ಕೇಳಿ, ಹಾಗೆಯೇ ತನಗೂ ನೀನು

ರಾವಣನ ರಾಜ್ಯದಲ್ಲಿ ಪಟ್ಟವನ್ನು ಕಟ್ಟಬಹುದೆಂಬ ಆಶೋತ್ತರದಿಂದಲೇ ತನ್ನಣ್ಣನನ್ನು ದ್ವೇಷಿಸಿಕೊಂಡು ಬಂದಿರಬಹುದು. ಈತನು ರಾಜ್ಯಲಾಭ ವೆಂಬ ತನ್ನ ಪ್ರಯೋಜನವನ್ನು ಕೋರಿ ಸ್ವಬುದ್ಧಿಪೂರ್ವಕವಾಗಿಯೇ ಬಂದಿ ರಬೇಕು ? ಈತನು ನಮ್ಮಲ್ಲಿ ನಿಜವಾದ ಸ್ನೇಹಭಾವದಿಂದ ಬಾರದಿದ್ದರೂ, ಸ್ವಪ್ರಯೋಜನಕ್ಕಾಗಿ ಬಂದನೆಂಬುದಕ್ಕಾದರೂ ಇವನನ್ನು ಸಂಗ್ರಹಿಸುವು ದರಿಂದ ದೋಷವಿಲ್ಲ. ಎಲೆ ಮಹಾರಾಜನೆ ! ಈ ವಾನರರೆಲ್ಲರೂ ಈತನು ರಾಕ್ಷಸಜಾತಿಯವನೆಂಬ ಒಂದೇ ಶಂಕೆಯನ್ನಿಟ್ಟು, ಆತನಲ್ಲಿ ತಮತಮಗೆ ತೋರಿದಂತೆ ಅನೇಕದೋಷಗಳನ್ನು ಊಹಿಸಿ ಹೇಳಿರುವರಷ್ಟೆ? ನಾನೂ ಆತನ ಋಜುಸ್ವಭಾವವನ್ನು ಕುರಿತು, ನನ್ನ ಶಕ್ತ್ಯನುಸಾರವಾಗಿ ನನಗೆ ತೋರಿದುದನ್ನು ಹೇಳಿದೆನು. ಇದರಮೇಲೆ ನೀನು ಬುದ್ಧಿವಂತರಲ್ಲಿ ಮೇಲೆ ನಿಸಿ ಕೊಂಡಿರುವುದರಿಂದ, ಮುಂದೆ ಹೇಗೆ ನಡೆದುಕೊಳ್ಳಬೇಕೆಂಬುದಕ್ಕೆ ನೀನೇ ಪ್ರಮಾಣವು." ಎಂದನು. ಇಲ್ಲಿಗೆ ಹದಿನೇಳನೆಯ ಸರ್ಗವು.

---

{ ಶ್ರೀರಾಮನು ಶರಣಾಗತರಕ್ಷಣವೇ ತನಗೆ ಮಹಾ ವ್ರತವೆಂದು ಹೇಳಿ, ಸುಗ್ರೀವನಿಗೆ ಕಪೋತಾಖ್ಯಾ ನಾದಿಗಳನ್ನು ತಿಳಿಸಿ, ವಿಭೀಷಣನನ್ನು ಕರೆತರುವಂ ತೆ ನಿಯಮಿಸಿದುದು. }

[1]ಹೀಗೆ ರಾಮನು ವಾಯುಕುಮಾರನಾದ ಹನುಮಂತನ ಮನೋ ಭಿಪ್ರಾಯವನ್ನು ಕೇಳಿ, ಪ್ರಸನ್ನಮನಸ್ಸುಳ್ಳವನಾಗಿ, ವಿಭೀಷಣನ ವಿಷ ಯವಾಗಿ ತನ್ನ ಮನಸ್ಸಿನಲ್ಲಿರುವ ಅಭಿಪ್ರಾಯವನ್ನೂ ಅಲ್ಲಿದ್ದ ವಾನರರಿಗೆ ತಿಳಿಸಬೇಕೆಂಬ ಉದ್ದೇಶದಿಂದ, ಮುಂದಿದ್ದ ವಾನರರನ್ನು ಕುರಿತು, "ಎ

---

ಅಭಯಪ್ರದಾನಪ್ರಕರಣವು.

1 ಇಲ್ಲಿ "ಅಥ ರಾಮ: ಪ್ರಸನ್ನಾತ್ಮಾ ಶ್ರುತ್ವಾ ವಾಯುಸುತಸ್ಯ ಹ । ಪ್ರತ್ಯಭಾಷ ತ ದುರ್ಧರ್ಷ ಶ್ಶ್ರುತವಾನಾತ್ಮನಿ ಸ್ಥಿತಂ" ಎಂದು ಮೂಲವು. ವಿಶೇಷಾರ್ಥವು:— (ಅಥ ರಾಮ:) ಇದೇ ಒಂದು ಪ್ರತ್ಯೇಕವಾಕ್ಯವು. ಆ ಮೇಲೆ ಆತನು ರಾಮನಾದನು. ಎಂದರೆ, ರಾಮನಿಗೆ ಸತ್ತೆಯುಂಟಾಯಿತೆಂದು ಭಾವವು. ರಾಮನು ರಕ್ಷಕತ್ವವೇ ಸ್ವರೂ ಪವಾಗಿ ಉಳ್ಳವನಾದುದರಿಂದ, ವಿಭೀಷಣನು ಹೇಳಿದ "ಶರಣು" ಎಂಬ ಮಾತನ್ನು

ಲ್ಯೈ ವಾನರರೆ! ಈಗ ನನಗೂ ಕೂಡ ಈ ವಿಭೀಷಣನ ವಿಷಯವಾಗಿ ಒಂದೆ ರಡು ಮಾತುಗಳನ್ನು ಹೇಳಬೇಕೆಂಬ ಕೋರಿಕೆಯುಂಟು. ನೀವೆಲ್ಲರೂ ನನ ಗೆ ಶ್ರೇಯಸ್ಸನ್ನು ಕೋರುವವರಾದುದರಿಂದ, ನನ್ನ ಮಾತುಗಳೆಲ್ಲವನ್ನೂ ಆಮೂಲಾಗ್ರವಾಗಿ ಕೇಳಬೇಕೆಂದು ಕೋರುವೆನು. [1]ಮುಖ್ಯವಾಗಿ ನಾನು

---

ಕೇಳಿದಾಗಲೇ ಅವನನ್ನು ರಕ್ಷಿಸಬೇಕಾಗಿತ್ತು. ಹಾಗೆ ರಕ್ಷಿಸದಿದ್ದುದರಿಂದ ಅವನ ರಕ್ಷ ಕತ್ವಸ್ವರೂಪಕ್ಕೆ ಹಾನಿಯುಂಟಾಗಿರಬೇಕಷ್ಟೆ! ಅದು ಈಗಲೇ ನಿವರ್ತಿಸಿತೆಂದು ಭಾ ವವು. ಸಂಸಾರಿಯಾದ ಚೇತನನು ಭಗವದ್ಜ್ಞಾನದಿಂದ ಸದ್ಭಾವವನ್ನೂ, ಅದಿಲ್ಲದುದ ರಿಂದ ಅಸದ್ಭಾವವನ್ನೂ ಹೊಂದುವಂತೆ, ರಕ್ಷಕನಿಗೂ ರಕ್ಷಕತ್ವದಿಂದ ಸದ್ಭಾವವೂ, ಅದಿಲ್ಲದೆ ಹೋಗುವುದರಿಂದ ಅಸದ್ಭಾವವೂ ಉಂಟಾಗುವುವು. ಹೀಗೆ ಅಸತ್ಪ್ರಾಯ ನಾಗಿದ್ದ ರಾಮನಿಗೆ,ಈಗ ಹನುಮಂತನ ವಾಕ್ಯದಿಂದಲೇ ಸತ್ತೆಯುಂಟಾಯಿತೆಂದು ತಾತ್ಪ ರ್ಯವು. (ಪ್ರಸನ್ನಾತ್ಮಾ) ಧರ್ಮಿಗೆ ಸತ್ತೆಯುಂಟಾದಾಗಲೇ ಧರ್ಮಕ್ಕೂ ಸತ್ತೆಯುಂಟಾಗು ವುದು. ರಾಮನಿಗೆ ಸತ್ತೆಯುಂಟಾದಮೇಲೆಯೇ ಆತನ ಮನಃಪ್ರಸನ್ನತೆಗೂ ಸತ್ತೆ ಯುಂಟಾಯಿತೆಂದು ಭಾವವು. ಸುಗ್ರೀವನ ವಾಕ್ಯದಿಂದ ಇದುವರೆಗೂ ಕಲುಷಿತವಾಗಿ ದ್ದ ರಾಮನ ಮನಸ್ಸು ಈಗ ಪ್ರಸನ್ನವಾಯಿತೆಂದು ಮುಖ್ಯತಾತ್ಪರ್ಯವು. (ವಾಯು ಸುತಸ್ಯ) ಸಮಸ್ತಪ್ರಾಣಿಗಳಿಗೂ ಪ್ರಾಣಭೂತನಾದ ವಾಯುದೇವನಿಗೆ, ಅಂತಹ ಗುಣ ವುಳ್ಳವನಾಗಿಯೇ ಹುಟ್ಟಿದ ಹನುಮಂತನ, (ಆತ್ಮನಿ ಸ್ಥಿತಂ ಶ್ರುತ್ವಾ) ಮನಸ್ಸಿನಲ್ಲಿ ರುವ ಭಾವವನ್ನು ಕೇಳಿ,ಅಥವಾ ತನ್ನ ಮನಸ್ಸಿನಲ್ಲಿರುವಂತೆ ಹೇಳಿದ ಹನುಮಂತನ ವಾ ಕ್ಯವನ್ನು ಕೇಳಿ (ಹ) ಈ ನಿಪಾತಾವ್ಯಯದಿಂದ, ಸರ್ವಜಗದ್ರಕ್ಷಕನಿಗೂಕೂಡ ರಕ್ಷಕ ನೊಬ್ಬನು ಸಿಕ್ಕಿದನೆಂದು ಋಷಿಯು ಆಶ್ಚರ್ಯದಿಂದ ಹಿಗ್ಗಿ ಸ್ತೋತ್ರಮಾಡುವುದಾ ಗಿ ಭಾವವು. (ದುರ್ಧರ್ಷಃ) ಪೂರ್ವಪಕ್ಷದಿಂದ ಧರ್ಷಿಸಲ್ಪಡದೆ ಸ್ವಮತಸ್ಥಾಪನದಲ್ಲಿ ಸಮರ್ಥನಾದವನು. (ಶ್ರುತವಾನ್) ವಸಿಷ್ಠಾದಿಗಳಿಂದ ಕಪೋತಕಂಡೂಪಾಖ್ಯಾನಾದಿಗ ಳನ್ನು ಕೇಳಿ ತಿಳಿದವನು. ಇಂತಹ ರಾಮನು, (ಪ್ರತ್ಯಭಾಷತ) ಪ್ರತ್ಯುತ್ತರವನ್ನು ಹೇ ಳಿದನು. (ತನಿಶ್ಲೋಕಿ).

1 ಇಲ್ಲಿ "ಮಿತ್ರಭಾವೇನ ಸಂಪ್ರಾಪ್ತಂ ನ ತ್ಯಜೇಯಂ ಕಥಂಚನ । ದೋಷೋ ಯ ದ್ಯಪಿ ತಸ್ಯ ಸ್ಯಾತ್ಸತಾಮೇತದಗರ್ಹಿತಂ" ಎಂದು ಮೂಲವು. ವಿಶೇಷಾರ್ಥವು. (ಮಿ ತ್ರಭಾವೇನ) ಇಲ್ಲಿನ ಮಿತ್ರಶಬ್ದಕ್ಕೆ "ಮಿನಾತ್ತ್ರಾಯತ ಇತಿ ಮಿತ್ರಂ" ಎಂಬ ವ್ಯು ತ್ಪತ್ತಿಯಿಂದ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಮಾಡುವವನೆಂಬ ಅರ್ಥವನ್ನು ಹೇಳಕೂಡದು. "ತನ್ಮಿತ್ರಂ ಯತ್ರ ವಿಶ್ವಾಸಃ" ಎಂಬಂತೆ, ಮಿತ್ರನೆಂದರೆ ವಿಶ್ವಸಿಸುವ ಸ್ಥಳವು. ಅದಾವದರೋ ಇಲ್ಲಿ ನೈಚ್ಯಾನುಸಂಧಾನಪೂರ್ವಕವಾಗಿ ರಾಮನಲ್ಲಿ ಶರಣಾಗ



೨೧೭೬. ವಿಭೀಷಣನು ತನ್ನ ಮಂತ್ರಿಗಳೊಡನೆ ಅಂತರಿಕ್ಷದಲ್ಲಿ ನಿಂತು, ರಾಮನಲ್ಲಿ ತಾನು ಶರಣಾಗತಿಮಾಡುವುದಕ್ಕಾಗಿ ವಾನರರನ್ನು ಪ್ರಾರ್ಥಿಸಿದುದು. ರಾಮನು ಅವನನ್ನು ಕರೆತರುವಂತೆ ವಾನರರಿಗೆ ಆಜ್ಞೆಮಾಡಿದುದು.

ನನ್ನಲ್ಲಿ ಶರಣಾಗತನಾಗಿ ಬಂದವನನ್ನುಮಾತ್ರ, ಹೇಗೂ ಬಿಡಲಾರೆನು.

---

ತಿಯು "ಇದು ವಂಚಕರಲ್ಲಿಯೂ ಇರಬಹುದಲ್ಲವೆ?" ಎಂದರೆ, (ಭಾವೇನ) ಭಾವವೆಂದ ರೆ ಕ್ರಿಯೆಯು. ವಿಶ್ವಾಸಯೋಗ್ಯವಾದ ವ್ಯಾಪಾರವೆಂದರ್ಥವು. ಅಥವಾ ಇಲ್ಲಿ ಮಿ ತ್ರಭಾವವೆಂದರೆ ಸ್ನೇಹಭಾವವು. "ಶರಣಾಗತನಾಗಿ ಬಂದವನನ್ನು ಮಿತ್ರನೆಂದು ಹೇಳು ವುದು ಹೇಗೆ?" ಎಂದರೆ, ಹಿಂದೆ ಸೀತೆಯು ರಾವಣನನ್ನು ಕುರಿತು ಬುದ್ಧಿವಾದವನ್ನು ಹೇಳುವಾಗ "ತೇನ ಮೈತ್ರೀ ಭವತು ತೇ" ಎಂದು ಕೇವಲನೀಚನಾದ ಆ ರಾವಣನಿಗೂ ಗೌರವವನ್ನಾರೋಪಿಸಿ, ರಾಮನಿಗೆ ಮಿತ್ರನಾಗಿರೆಂದು ಹೇಳಿದಂತೆ, ಇಲ್ಲಿ ರಾಮ ನೂ ಶರಣಾಗತವಾತ್ಸಲ್ಯದಿಂದ ವಿಭೀಷಣನಲ್ಲಿ ಗೌರವವನ್ನೇ ಆರೋಪಿಸಿ, ತನಗೆ ಸಮಾ ನನನ್ನಾಗಿ ಹೇಳಿಕೊಂಡಿರುವನೆಂದು ಭಾವವು. (ಸಂಪ್ರಾಪ್ತಂ) ಸಮೀಪಕ್ಕೆ ಬಂದವ ನ್ನು, ಈತನು ಲಂಕೆಯಲ್ಲಿಯೇ ನಿಂತು "ರಾಘವಂ ಶರಣಂ ಗತಃ" ಎಂಬೀಮಾತನ್ನು ಹೇಳಿದ್ದಮಾತ್ರದಲ್ಲಿಯೂ ಕೂಡ, ಶರಣಾಗತವತ್ಸಲನಾದ ತಾನು, ಹಿಂದೆ ಗಜೇಂದ್ರರ ಕ್ಷಣಾರ್ಥವಾಗಿ, "ಅಂತರ್ದ್ರಿತಚಮೂಪತಿಪ್ರಹಿತಹಸ್ತಂ... ಭಗವತಸ್ತ್ವರಾಯೈ ನಮಃ" ಎಂಬರೀತಿಯಲ್ಲಿ ಹಿಂದುಮುಂದುನೋಡದೆ, ತನ್ನ ಪರಿವಾರವನ್ನೂ ಲಕ್ಷಿಸದೆ, ಅತ್ಯಾ ತುರದಿಂದ ಹೋಗಿ ಆ ಗಜೇಂದ್ರನನ್ನು ರಕ್ಷಿಸಿದಂತೆ ಅಲ್ಲಿಗೇ ಹೋಗಿ ವಿಭೀಷಣನನ್ನೂ ರಕ್ಷಿಸಬೇಕಾಗಿತ್ತಲ್ಲವೆ? ಹಾಗಿಲ್ಲದೆ ಇಲ್ಲಿಗೇ ಬಂದು ಈ ಮಾತನ್ನು ಹೇಳಿರುವುದರಿಂದ ತನ್ನ ಶ್ರಮವನ್ನೂ ತಪ್ಪಿಸಿರುವನು. ಮತ್ತು (ಸಂಪ್ರಾಪ್ತಂ) ಸಾಮಾನ್ಯವಾಗಿ ಬಂದುದುಮಾತ್ರವಲ್ಲ. "ತ್ಯಕ್ತ್ವಾಪುತ್ರಾಂಶ್ಚದಾರಾಂಶ್ಚ ರಾಘವಂ ಶರಣಂ ಗತಃ" ಎಂ ಬಂತೆ ಶರಣಾಗತರಿಗೆ ತಕ್ಕ ಪ್ರಾತಿಕೂಲ್ಯವರ್ಜನರೂಪವಾದ ಅಂಗದೊಡನೆ ಕ್ರಮವಾ ಗಿಯೇ ಬಂದವನು. ಇಂತವನನ್ನು (ನ ತ್ಯಜೇಯಂ)ಬಿಡಲಾರೆನು ಇದು ಸಂಭಾವನಾರ್ಥ ಕವು.ಈತನು ಬಂದಮಾತ್ರಕ್ಕೆ ನಾವು ಶ್ಲಾಘಿಸಿ ಪುರಸ್ಕರಿಸಬೇಕಾಗಿರುವಾಗ, ತ್ಯಜಿಸಬೇ ಕೆಂಬ ಸಂಭಾವನೆಗಾದರೂ ಅವಕಾಶವಿಲ್ಲವೆಂದರ್ಥವು..ಮೊದಲು ಆಸಂಭಾವನೆಯಾದರೂ ಹುಟ್ಟಿದರಲ್ಲವೇ ಆಮೇಲೆ ನೀವು ಹೇಳಿದಂತೆ ಪರೀಕ್ಷಿಸಿನೋಡಬೇಕಾಗಿ ಬರಬಹುದು. ಆ ಅನುಮಾನಕ್ಕೇ ಅವಕಾಶವಿಲ್ಲದಾಗ ಪರೀಕ್ಷಿಸಬೇಕಾದ ಪ್ರಯತ್ನವೇನೆಂದು ಭಾವವು. (ಕಥಂಚನ)ಎಷ್ಟು ದುಷ್ಕರವಾದರೂ ಅದನ್ನು ನಡೆಸಿಯೇ ತೀರಬೇಕು. ಇವನು ರಾವ ಣನ ತಮ್ಮನೆಂಬುದೂ ನಿಜವು!ಲೋಕಭಯಂಕರನೆಂಬುದೂ ಅವನ ಹೆಸರಿನಿಂದಲೇ ತಿಳಿ ಯುವುದು! ರಾಕ್ಷಸಜಾತಿಯವನೆಂಬುದನ್ನೂ ಒಪ್ಪಿಕೊಳ್ಳಬೇಕಾದುದೇ! ಇವನು ಮುಂದೆ ನನಗೆ ವಧಭೇದಾದ್ಯುಪಾಯಗಳಿಗೂ ಪ್ರಯತ್ನಿಸಬಹುದು! ಹೀಗಿದ್ದರೂ ನಾನು ಬಿಡಲಾರೆನೆಂದುಭಾವವು." ಇಷ್ಟು ದೋಷಯುಕ್ತನೆಂಬುದನ್ನು ತಿಳಿದೂ ನೀ ನು ಅವನನ್ನು ತ್ಯಜಿಸದಿರುವುದುಂಟೆ?" ಎಂದರೆ. (ದೋಷೋಯದ್ಯಪಿ ತಸ್ಯ ಸ್ಯಾ

ನಿಮ್ಮ ಪಕ್ಷದಂತೆ ಅವನಲ್ಲಿ ಒಂದುವೇಳೆ ದೋಷವಿದ್ದರೂ ಇರಲಿ!

ತ್) ಅವನಲ್ಲಿ ಒಂದುವೇಳೆ ದೋಷವಿದ್ದರೂ ಇರಬಹುದು.ಆದರೂ, ಶರಣಾಗತಿಗೆ ಜನ್ಮ ವೃತ್ತಾದಿ ನಿಯಮಗಳೊಂದೂ ಇಲ್ಲವಾದುದರಿಂದ, ಪ್ರಪತ್ತಿಗಾಗಿ ಬಂದವನಲ್ಲಿ ದೋಷ ವಿಲ್ಲವೆಂಬುದೇ ನನ್ನ ಪಕ್ಷವು. ನಿಮ್ಮ ಪಕ್ಷದಿಂದ ದೋಷವಿದ್ದರೂ ನಾನು ಬಿಡಲಾರೆನು." "ಹೀಗೆ ದುಷ್ಟರನ್ನು ಸ್ವೀಕರಿಸುವುದರಿಂದ ಜನಗಳು ನಿಂದಿಸಲಾರರೆ?" ಎಂದರೆ, (ಸತಾ ಮೇತದಗರ್ಹಿತಂ) ಸಜ್ಜನರು ಇದನ್ನು ದೋಷವೆಂದೇ ಎಣಿಸಲಾರರು. ಅಸ್ಥಾನ ಭಯ ಶಂಕಿತರಾದ ನಿಮಗೆ ಇದು ನಿಂದ್ಯವಾಗಿ ತೋರಿದರೂ,ಸತ್ಪುರುಷರಿಗೆ ಇದು ನಿಂದ್ಯವಾಗಿ ತೋರದು. ಅಥವಾ ( ದೋಷೋ ಯದ್ಯಪಿ ) ಒಂದುವೇಳೆ ದೋಷವಿದ್ದರೂ, (ಸ್ಯಾತ್) ಇರಲಿ! ಅವನಲ್ಲಿ ದೋಷವಿರಬೇಕೆಂಬುದೇ ನನ್ನ ಕೋರಿಕೆ! ಗುಣವಂತನ ನ್ನು ನಾವು ರಕ್ಷಿಸಿದರೂ, ಅವನ ಗುಣಕ್ಕೆ ಪ್ರತಿಫಲದಂತಾಗುವುದೇ ಹೊರತು ಅದರಿಂದ ನಮಗೆ ಅಷ್ಟಾಗಿ ಕೀರ್ತಿಯಿರದು.। ದೋಷಿಯಾದವನನ್ನು ರಕ್ಷಿಸುವುದರಿಂದ ಅತಿಶಯ ವು ಇನ್ನೂ ಹೆಚ್ಚಾಗುವುದಲ್ಲವೆ? ಆದುದರಿಂದ ಹೆಚ್ಚಾಗಿ ದೋಷವಿದ್ದವನನ್ನೇ ರಕ್ಷಿಸ ಬೇಕಾದುದವಶ್ಯವೆಂದು ಭಾವವು. ಅಥವಾ (ದೋಷೋಯದ್ಯಪಿ) ದೋಷವಿದ್ದರೂ (ತಸ್ಯ) ಅವನದೇ ಅಲ್ಲವೆ? (ಸ್ಯಾತ್) ಇರಲಿ! ಅವನ ಸಂಬಂಧದಿಂದ ಆ ದೋಷವೂ ಶ್ಲಾಘ್ಯವೆಂದೇ ಭಾವವು. ಅಥವಾ (ದೋಷೋ ಯದ್ಯಪಿ) ನೀವು ಹೇಳಿದಂತೆ ಅವನಲ್ಲಿ ನಿಜವಾಗಿಯೂ ವಂಚನೆಯಿದ್ದರೂ (ತಸ್ಯ ಸ್ಯಾತ್) ಅದರಂತೆಯೇ ಅವನ ಕಾರ್ಯವು ಕೈಗೂಡಲಿ! ಎಂದರೆ, ಒಂದುವೇಳೆ ಅವನು ನಮ್ಮಲ್ಲಿಗೆ ಶರಣಾಗತವೇಷದಿಂದ ಬಂದು, ನಮ್ಮನ್ನು ಕೊಲ್ಲುವುದಕ್ಕೇ ಉದ್ದೇಶಿಸಿದ್ದರೂ,ಆ ಉದ್ದೇಶವನ್ನೂ ಕೈಗೂಡಿಸಿಕೊಳ್ಳಲಿ! ಯಾವವಿಧದಿಂದಲಾದರೂ ಶರಣಾಗತನು ತನ್ನ ಕೋರಿಕೆಯನ್ನು ಕೈಗೂಡಿಸಿಕೊಂಡು ಸಂತೋಷದಿಂದಿರಬೇಕೆಂಬುದೇ ತನ್ನ ಮುಖ್ಯೋದ್ದೇಶವೆಂದೂ ಭಾವವು. ಈ ಅ ರ್ಥದಲ್ಲಿಯೇ ರಾಮನು ಮುಂದೆ ಕಪೋತಾಖ್ಯಾನವನ್ನು ದೃಷ್ಟಾಂತವಾಗಿ ಹೇಳು ವುದರಿಂದ, ಇಲ್ಲಿಯೂ ತದನುಸಾರವಾಗಿ ಈ ಅರ್ಥವನ್ನು ಹೇಳುವುದೇ ಯುಕ್ತವೆಂದು ಶ್ರೀವತ್ಸಾಂಕಮಿಶ್ರರ ಅಭಿಪ್ರಾಯವು.ಈ ಅರ್ಥದಲ್ಲಿಯೇ "ತಸ್ಮಾದಪಿ ವಧ್ಯಂ ಪ್ರಪನ್ನಂ ನ ಪ್ರತಿಯಚ್ಛಂತಿ" ಎಂದು ಶ್ರುತಿಪ್ರಮಾಣವು. "ಹೀಗೆ ದುಷ್ಟನನ್ನು ಪರಿತ್ಯಜಿಸದಿರು ವುದರಿಂದ ಗುಣವೇನು? ಪಾಪಕ್ಷಯವೇ? ಅಥವಾ ಪುರುಷಾರ್ಥಸಿದ್ಧಿಯೇ" ಎಂದರೆ, ಇವೊಂದೂ ನನ್ನ ಉದ್ದೇಶವಲ್ಲ, ( ಸತಾಮೇತದಗರ್ಹಿತಂ ) ಸಜ್ಜನಗೋಷ್ಠಿಯಲ್ಲಿ ನಿಂದೆಗೆ ಪಾತ್ರನಾಗದಿರಬೇಕೆಂಬುದೇ ತನ್ನ ಮುಖ್ಯೋದ್ದೇಶವೆಂದು ಭಾವವು.

## ಹೇಗಿದ್ದರೂ ಶರಣಾಗತನಾಗಿ ಬಂದವನನ್ನು ಪರಿಗ್ರಹಿಸುವುದು ಸತ್ಪ

ಮತ್ತು ಈ ಶ್ಲೋಕದಿಂದ ರಾಮನು, "ರಾಜನೀತಿ ಕ್ರಮದಿಂದ ನೋಡಿದರೂ ಅವನನ್ನು ಸ್ವೀಕರಿಸುವುದರಿಂದ ದೋಷವಿಲ್ಲ" ವೆಂದು ನಿರೂಪಿಸುವನು. (ಮಿತ್ರಭಾವೇನ) ಈತನು ನಿಜವಾಗಿ ಸ್ನೇಹಭಾವದಿಂದಲೇ ನಮ್ಮಲ್ಲಿಗೆ ಬಂದಿರುವನೇ ಹೊರತು "ಪ್ರಾಪ್ತಶ್ಶತ್ರುರತರ್ಕಿತ:" ಎಂದೂ,"ರಾವಣೇನ ಪ್ರಣಿಹಿತಂ"ಎಂದೂ ನೀವು ಹೇಳುವಂತೆ, ಶತ್ರುವಾಗಿಯಾಗಲಿ, ದೂತನಾಗಿಯಾಗಲಿ, ಗೂಢಚಾರನಾಗಿಯಾಗಲಿ ಬಂದವನಲ್ಲ. "ಬಂದುವೇಳೆ ಈಗ ನೀನು ನಂಬುವಂತೆ ಮಿತ್ರಭಾವದಿಂದಲೇ ಬಂದಿದ್ದರೂ, ಈಗ ರಾವಣನನ್ನು ಬಿಟ್ಟುಬಂದ ಹಾಗೆ ಇನ್ನು ಸ್ವಲ್ಪಕಾಲದೊಳಗೆ ಏನೋ ವ್ಯಾಜವನ್ನಿಟ್ಟುಕೊಂಡು ನಮ್ಮನ್ನೂ ದ್ವೇಷಿಸಿಕೊಂಡು ಹೋಗಲಾರನೆ? " ಎಂದರೆ, ಹಾಗಲ್ಲ! (ಮಿತ್ರಭಾವೇನ) ಅಲ್ಲಿಂದ ಬರುವಾಗಲೂ ತನ್ನಲ್ಲಿ ಕ್ರೂರವಾಕ್ಯವನ್ನಾಡಿ ಧಿಕ್ಕರಿಸಿದ ರಾವಣನಲ್ಲಿಯೂ, ಮಿತ್ರಭಾವವನ್ನೇ ತೋರಿಸುತ್ತ, ಆವಾಗಲೂ.ಆ ರಾವಣನಿಗೆ ಪರುಷಕ್ಕದಿಂದ ಪ್ರತ್ಯುತ್ತರವನ್ನು ಹೇಳದೆ "ಸ ತ್ವಂ ಭ್ರಾತಾಸಿ ಮೇ ರಾಜನ್ ಬ್ರೂಹಿಮಾಂ ಯದ್ಯದಿಚ್ಛಸಿ। ಜ್ಯೇಷ್ಠೋಮಾನ್ಯ: ಪಿತೃಸಮ:" ಎಂದು ಪೂಜ್ಯಭಾವವನ್ನೇ ತೋರಿಸಿರುವನು "ಆತ್ಮಾನಂ ಸರ್ವಥಾ ರಕ್ಷ" ಎಂದೂ" ಸ್ವಸ್ತಿತೇಸ್ತು ಗಮಿಷ್ಯಾಮಿ ಸುಖೀಭವ ಮಯಾವಿನಾ" ಎಂದೂ, ಆಗಲೂ ಆತನಿಗೆ ಸಾರಿಸಾರಿ ಹಿತವನ್ನೇ ಹೇಳಿಬಂದಿರುವನು. ಹೀಗೆ ಶತ್ರುವಿನಲ್ಲಿಯೂ ನಯವನ್ನು ತೋರಿಸತಕ್ಕ ಸ್ವಭಾವವುಳ್ಳ ಈತನ ಮೈತ್ರಿಯು ಎಂದಿಗೂ ಅಪಾಯಕರವಲ್ಲವೆಂದು ಭಾವವು "ಹಾಗೂ ಆಗಲಿ! ಇವನೊಡನೆ ಮಿತ್ರಭಾವವನ್ನು ತೋರಿಸಿದುದರಿಂದ ಫಲವೇನು? ಇವನಿರುವುದು ಲಂಕೆಯಲ್ಲವೆ? ಹೇಗಿದ್ದರೂ ಶತ್ರುಮಧ್ಯದಲ್ಲಿ ಸೇರಿಕೊಂಡಿರುವವನಿಂದ, ನಮಗೆ ಯಾವ ಸಹಾಯವುಂಟು?" ಎಂದರೆ (ಸಂಪ್ರಾಪ್ತಂ) ಇಲ್ಲಿಗೇ ಬಂದು ಚೆನ್ನಾಗಿ ಕಣ್ಣೆದುರಿಗೆ ನಿಂತಿರುವನು. "ಬಂದಮಾತ್ರದಿಂದೇನು? ಇವನು ನಮಗೆ ಅನುಕೂಲನೆಂಬ ನಂಬಿಕೆಯೇನು?" ಎಂದರೆ (ಸಂಪ್ರಾಪ್ತಂ) ಸಾಮಾನ್ಯವಾಗಿ ಬಂದವನಲ್ಲ. ಚೆನ್ನಾಗಿಯೇ ಬಂದಿರುವನು. ಎಂದರೆ ಸೀತೆಗೆ ತನ್ನ ಮಗಳಾದ ಅನಲೆಯಿಂದ ಆಗಾಗ ದು:ಖಸಮಾಧಾನವನ್ನು ಮಾಡಿಸಿರುವನು. ಲಂಕೆಯಲ್ಲಿ ರಾಕ್ಷಸರು ಹನುಮಂತನನ್ನು ಕೊಲ್ಲುವುದಕ್ಕೆ ಪ್ರಯತ್ನಿಸಿದಾಗ ದೂತವಧವು ಕೂಡದೆಂದು ಅವರಿಗೆ ನೀತಿಯನ್ನುಪದೇಶಿಸಿ ಅವನ ಪ್ರಾಣಗಳನ್ನುಳಿಸಿರುವನು. "ಪ್ರದೀಯತಾಂ ದಾಶರಥಾಯ ಮೈಥಿಲೀ" ಎಂದು ರಾವಣನಿಗೆ ಸಾರಿಸಾರಿ ಹಿತವನ್ನು ಹೇಳಿರುವನು. ಹೀಗೆ ಈತನು ನಮಗೆ ಅನೇಕವಿಧದಿಂದ ಉಪಕಾರಕನಾಗಿಯೇ ಬಂದಿರುವನೆಂದು ಭಾವವು. " ಇವನು ನಿಜವಾಗಿಯೇ ನಿನ್ನಲ್ಲಿ ಸ್ನೇಹಕ್ಕಾಗಿ ಬಂದಿದ್ದರೂ ನಮ್ಮಂತೆ ನಿನ್ನಲ್ಲಿ ಮೈತ್ರಿಯನ್ನು ತೋರಿಸಬಲ್ಲನೆ." ಎಂದರೆ (ಸಂಪ್ರಾ

ರುಷರಿಗೆ ಆದರಣೀಯವೇ ಹೊರತು ನಿಂದಾಸ್ಪದವಲ್ಲ. " ಎಂದನು.

---

ಪ್ತಂ) ನಿಮಗಿಂತಲೂ ಮೇಲಾಗಿಯೇ ಬಂದಿರುವನು. ನಾವು ಋಶ್ಯಮೂಕಕ್ಕೆ ಬಂದಾಗ '' ಜಗ್ಮುರ್ಗಿರಿತಟಾತ್ತಸ್ಮಾದನ್ಯಂ ಶಿಖರಮುತ್ತಮಂ " ಎಂದು ನಿಮ್ಮಹಾಗೆ ಬೆಟ್ಟದಿಂದ ಬೆಟ್ಟಕ್ಕೆ ಹಾರಿಹೋದವನಲ್ಲ. ಮತ್ತು '' ಬಾಹುರೇಷ ಪ್ರಸಾರಿತಃ" ಎಂಬಂತೆ ಕೈಚಾಚಿ ನಮ್ಮನ್ನು ಸಾಮ್ಯಬುದ್ಧಿಯಿಂದ ಅಪ್ಪಿಕೊಳ್ಳುವುದಕ್ಕೆ ಬಂದವನಲ್ಲ. "ಪಾದಯೋಶ್ಶರಣಾನ್ವೇಷೀ" ಎಂದು ಎಷ್ಟೋ ವಿನಯದಿಂದ ಪಾದಗಳನ್ನು ಹಿಡಿದು ಮರೆಹುಗುವುದಕ್ಕಾಗಿಯೇ ಬಂದಿರುವನು. ಮತ್ತು ''ವಿಜಿತಾರಿಸ್ಸದಾರಶ್ಚ ರಾಜ್ಯೇ ಮಹತಿಚ ಸ್ಥಿತಃ||" ಎಂದು ತನ್ನ ಕಾರ್ಯವು ನಡೆದುಹೋದಮೇಲೆ, ರಾಜ್ಯಭೋಗದಲ್ಲಿಯೂ,ಕಾಮಸುಖದಲ್ಲಿಯೂ ಮುಳುಗಿ, ನಮ್ಮನ್ನು ಮರೆತ ಈಸುಗ್ರೀವನಂತಲ್ಲದೆ ''ತ್ಯಕ್ತ್ವಾ ಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂ ಗತಃ"ಎಂಬಂತೆ ತನ್ನ ರಾಜ್ಯವನ್ನೂ, ತನ್ನ ಭಾರ್ಯೆಯರನ್ನೂ ತಾನಾಗಿಯೇ ಬಿಟ್ಟು ನಮ್ಮನ್ನೇ ನಂಬಿ ಬಂದಿರುವನು.ಮತ್ತು ಮೊದಲು ನಾನು ನಿಮ್ಮಲ್ಲಿಗೆ ಬಂದಾಗ ಸುಗ್ರೀವನು ನನ್ನನ್ನು ನೋಡಿ ಭಯದಿಂದ "ಅಂತರಂಗನಾಗಿ ಬಂದಿರುವನೋ?ಪೀಡಿಸುವುದಕ್ಕೆ ಬಂದಿರುವನೋ ? ನಿಗ್ರಹಿಸಬೇಕಾದವನೋ? ಅನುಗ್ರಹಿಸಬೇಕಾದವನೋ? ವಧ್ಯನೋ ಅವಧ್ಯನೋ?" ಎಂದು ನಾನಾ ವಿಧವಾಗಿ ಶಂಕಿಸಿದಂತಲ್ಲದೆ, ನನ್ನಲ್ಲಿ ಒಂದೇ ನಂಬಿಕೆಯಿಂದ ದೃಢಚಿತ್ತನಾಗಿ ಬಂದಿರುವನು. ಹೀಗೆ ಈತನ ಪ್ರಥಮಸಮಾಗಮವೇ ನಿಮ್ಮ ಸೇರುವೆಗಿಂತಲೂ ಹೆಚ್ಚುವಿಶ್ವಾಸವನ್ನು ಕಾಣಿಸುವುದೆಂದು ಭಾವವು. "ಇವನು ಯಾವರೀತಿಯಿಂದ ಬಂದರೇನು ? '' ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್" ಎಂಬ ರಾಜನೀತಿಯನ್ನನುಸರಿಸಿ, ರಾವಣನಿಗೆ ತಮ್ಮನಾದ ಈತನನ್ನು ಕಂಡಾಗಲೇ ಪೂರ್ವಾಪರಗಳನ್ನು ವಿಚಾರಿಸದೆ ಕೊಲ್ಲಬೇಡವೆ?" ಎಂದರೆ, ಕೊಲ್ಲುವುದು ಹಾಗಿರಲಿ! (ನ ತ್ಯಜೇಯಂ) ಮೊದಲು ನಾನು ಅವನನ್ನು ಬಿಡುವವನೇ ಅಲ್ಲ. ಒಂದುವೇಳೆ ನಿಮ್ಮ ಮಾತನ್ನಾದರೂ ಬಿಡುವೆನೇಹೊರತು ಅವನನ್ನು ಮಾತ್ರ ಎಂದಿಗೂ ಬಿಡಲಾರೆನು. ''ಹಾಗೆ ಅವನನ್ನು ಬಿಡಬಾರದಾಗಿದ್ದಪಕ್ಷದಲ್ಲಿ ನಮ್ಮನ್ನೇ ಕಳೆದುಕೊಳ್ಳ ಬೇಕಾಗಿ ಬರಬಹುದಲ್ಲವೆ?" ಎಂದರೆ ( ಕಥಂಚನ) ಹೇಗಿದ್ದರೂ ಆತನನ್ನು ಮಾತ್ರಬಿಡಲಾರೆನು. '' ಅಪ್ಯಹಂ ಜೀವಿತಂ ಜಹ್ಯಾಂ ತ್ವಾಂ ವಾ ಸೀತೇಸಲಕ್ಷ್ಮಣಾಂ" '' ಪ್ರಾಣವನ್ನಾದರೂ ಬಿಡಬಲ್ಲೆನು! ಪ್ರಾಣಭೂತಳಾದ ಸೀತೆಯನ್ನಾದರೂ ಬಿಡಬಲ್ಲೆನು! ಅರ್ಧದೇಹದಂತಿರುವ ಲಕ್ಷ್ಮಣನನ್ನಾದರೂ ಬಿಡಬಲ್ಲೆನು!ನನ್ನ ಪ್ರತಿಜ್ಞೆಯನ್ನು ಮಾತ್ರ ನಾನು ಬಿಡಲಾರೆನೆಂದು ಹೇಳಿದೆನಲ್ಲವೆ? ಅದರಂತೆಯೇ ಈಗಲೂ ಮುಂದೆ ಎಷ್ಟೋ ಅನರ್ಥಕ್ಕೆ ಕಾರಣವಾಗಬಹುದಾದರೂ ಶರಣಾಗತನನ್ನು ಮಾತ್ರ 'ನಾನು ಎಂದಿಗೂ

ಬಿಡಲಾರೆನು." "ಹಾಗೂ ಆಗಲಿ! ಶರಣಾಗತರನ್ನು ಬಿಡಬಾರದೆಂದು ಹೇಳಿದೆಯಲ್ಲ ವೆ! ನಾವೂ ಅವನಂತೆಯೇ ಶರಣಾಗತರಾಗಿ ನಿನ್ನಲ್ಲಿ ಸೇರಿರುವಾಗ ನಮ್ಮಲ್ಲಿಯೂ ಆ ವಾತ್ಸಲ್ಯವಿರಬೇಡವೆ!" ಎಂದರೆ. ಹಸುವು ಆಗಲೇ ಹುಟ್ಟಿದ ತನ್ನ ಎಳೆಗರುವನ್ನು ಕಾಪಾಡುವುದಕ್ಕಾಗಿ,ತನ್ನ ಮೊದಲಿನ ಕರುಗಳನ್ನು ಕೊಂಬುಗಳಿಂದ ತಿವಿದೋಡಿಸುವಂತೆ ಈಗಹೊಸದಾಗಿ ಶರಣಾಗತನಾದವನನ್ನು ಹೆಚ್ಚು ಪ್ರೇಮದಿಂದ ಆದರಿಸಬೇಕಾದುದೇ ಉಚಿತವಾಗಿರುವುದರಿಂದ (ಕಥಂಚನ) ಹೇಗೂ ನಾನು ಅವನನ್ನು ಬಿಡಲಾರೆನು "ಪೂರ್ವಾಪಕಾರಿಣಾಂ ತ್ಯಾಗೇ ನ ಹ್ಯಧರ್ಮೋ ವಿಧೀಯತೇ" ಶರಣಾಗತರಾಗಿದ್ದರೂ 'ದೊದಲು ಅಪಕಾರಮಾಡಿದವರನ್ನು ಬಿಡುವುದರಿಂದ ದೋಷವಿಲ್ಲ"ವೆಂಬ ವಿಧಿಯುಂಟಲ್ಲವೆ? ಇಲ್ಲಿಯೂ ಭಾರ್ಯಾಪಹರಣವನ್ನು ಮಾಡಿದ ರಾವಣನಿಗೆ ತಮ್ಮನಾದ ಈತನು,ಇಲ್ಲಿಗೆ ಬಂದಮಾತ್ರಕ್ಕೆ ದೋಷಿಯಾದ ಅವನನ್ನು ಸ್ವಿಕರಿಸುವುದು ಹೇಗೆ? ಎಂದರೆ (ದೋಷೋ ಯದ್ಯಪಿ) ನಿಮ್ಮ ಅಭಿಪ್ರಾಯದಂತೆ ಆತನಿಗೆ ದೋಷವಿದ್ದರೂ (ತಸ್ಯಸ್ಯಾತ್) ಅದು ಅವನಿಗಿರಬೇಕಾದುದೇ! ಅದರಿಂದಲೇ ಅವನಿಗೆ ಅಧಿಕಾರಸಂಪತ್ತಿಯುಂಟಾಗುವುದು. "ಅಹ ಮಸ್ಮ್ಯಪರಾಧಾನಾ ಮಾಲಯಃ" ಎಂಬಂತೆ ಶರಣಾಗತನ ದೋಷವೇ ಆತನನ್ನು ಶರಣಾಗತಿಗೆ ಅಧಿಕಾರಿಯನ್ನಾಗಿ ಮಾಡುವುದು. "ಹಾಗೆ ದ್ರೋಹಿಯನ್ನಾದರೂ ಸ್ವೀಕರಿಸಿ ಕಾಪಾಡುವುದರಿಂದ ಪ್ರಯೋಜನವೇನು?" ಎಂದರೆ, (ಸತಾಮೇತದಗರ್ಹಿತಂ) ಸಾಧುಕೋಟಿಯಲ್ಲಿ ಸೇರಿಸಿಕೊಳ್ಳಲ್ಪಡುವುದೇ ಇದರ ಮುಖ್ಯಪ್ರಯೋಜನವು. ಯಯಾತಿಯನ್ನು ರಕ್ಷಿಸಿದ ಶೈಬ್ಯಾದಿಗಳ ಗೋಷ್ಠಿಗೂ, ಶುನಶ್ಶೇಫಾದಿಗಳನ್ನು ರಕ್ಷಿಸಿದ ವಿಶ್ವಾಮಿತ್ರಾದಿಗಳ ಗೋಷ್ಠಿಗೂ ಹೊರಗಾಗದಿರಬೇಕೆಂದೇ ತನ್ನ ಕೋರಿಕೆಯೆಂದು ಭಾವವು.

ಮುಖ್ಯವಾಗಿ ಇದುವರೆಗಿನ ವಿಚಾರಗಳಿಂದ ಪ್ರತಿಪಾದಿಸಲ್ಪಡುವ ಮುಖ್ಯಾರ್ಥವೇನೆಂದರೆ; ಮೊದಲು ಸುಗ್ರೀವಾದಿಗಳು "ವಿಭೀಷಣನು ದುಷ್ಟನಾದುದರಿಂದ ಆತನನ್ನು ಪರಿಗ್ರಹಿಸಬಾರದೆಂದು ಹೇಳಿದರು. ಅಂಗದಾದಿಗಳು ವಿಭೀಷಣನನ್ನು ಮೊದಲು ಪರೀಕ್ಷಿಸಿ, ಆತನು ದುಷ್ಟನಲ್ಲವೆಂದು ತೋರಿದರೆ ಆಮೇಲೆ ಪರಿಗ್ರಹಿಸಬಹುದೆಂದರು. ವಿಭೀಷಣನಲ್ಲಿ ದೋಷವಿಲ್ಲವೆಂದೂ, ಈಕಾರಣದಿಂದ ಅವನನ್ನು ಪರಿಗ್ರಹಿಸಬಹುದೆಂದೂ ಹನುಮಂತನು ಹೇಳಿದನು. ರಾಮನಾದರೋ, ತನ್ನಲ್ಲಿ ಬಂದು "ಶರಣು" ಎಂಬ ಮಾತನ್ನು ಹೇಳಿದವನು ದುಷ್ಟನಾಗಿದ್ದರೂ, ಇಲ್ಲದಿದ್ದರೂ ಪರಿಗ್ರಹಿಸಿಯೇ ತೀರಬೇಕೆಂದನು. ಇದರಿಂದ ಸುಗ್ರೀವನು ದುಷ್ಟನೆಂದು ಹೇಳಿದ ಕಾರಣವೂ ಸರಿಯಲ್ಲ. ಅದಕ್ಕಾಗಿ ಅವನನ್ನು ಪರಿಗ್ರಹಿಸಬಾರದೆಂಬ ಮತವೂ ಸಾಧುವಲ್ಲ. ದೋಷವಿದ್ದರೂ ಶರಣಾಗತನನ್ನು ಪರಿಗ್ರಹಿಸಬೇಕೆಂಬುದೇ ಅದಕ್ಕೆ ಖಂಡನವು. ಅಂಗದಾದಿಗಳು

ಇದನ್ನು ಕೇಳಿ ವಾನರೋತ್ತಮನಾದ ಸುಗ್ರೀವನು, ಆವಾಕ್ಯಾರ್ಥವನ್ನು ತನ್ನ
ಲ್ಲಿ ತಾನೇ ಚೆನ್ನಾಗಿ ವಿಮರ್ಶಿಸಿನೋಡಿ, ನೀತಿಯುಕ್ತವಾಗಿಯೂ, ತನ್ನ ಸ್ವಾ
ಮಿಗೆ ಹಿತಕರವಾಗಿಯೂ ಇರುವ ಶುಭವಾಕ್ಯದಿಂದ ರಾಮನನ್ನು ಕುರಿತು
"ರಾಮಾ! ಈ ರಾಕ್ಷಸನು ಕೇವಲದುಷ್ಟನಾಗಿದ್ದರೇನು? ನಿರ್ದೋಷಿಯಾ
ಗಿದ್ದರೇನು? ಇವನಂತೂ ರಾಕ್ಷಸನು. ಇವನಿಂದ ನಮಗೆ ನಡೆಯಬೇಕಾದ ಕೆಲ
ಸವೇನು? [1]ಇವನು ತನ್ನಣ್ಣನಾದ ರಾವಣನಿಗೆ ಇಂತಹ ಮಹಾವ್ಯಸನವು

---

ಹೇಳಿದಂತೆ ಮೊದಲು ಅವನನ್ನು ಪರೀಕ್ಷಿಸಿ, ಅವನು ದುಷ್ಟನಲ್ಲವೆಂದು ತೋರಿದಾಗ ಪ
ರಿಗ್ರಹಿಸಬಹುದೆಂಬ ನಿಬಂಧನವೂ ಸರಿಯಲ್ಲ. ಶರಣಾಗತನ ವಿಷಯದಲ್ಲಿ ಗುಣದೋಷ
ಪರೀಕ್ಷೆಯೇ ಯುಕ್ತವಲ್ಲವೆಂಬುದು ಅದಕ್ಕೆ ಖಂಡನವು. ಹನುಮಂತನು ಪರಿಗ್ರಹಿಸಬ
ಹುದೆಂದು ಹೇಳಿದ ವಾಕ್ಯವೊಂದುಮಾತ್ರವೇ ಸರಿಯೇಹೊರತು, ಅದಕ್ಕೆ ಕಾರಣವಾಗಿ
ದುಷ್ಟನಲ್ಲವೆಂದು ಹೇಳಿದ ವಾಕ್ಯವೂ ಅಂಗೀಕರಿಸತಕ್ಕುದಲ್ಲ. ಶರಣಾಗತನು "ಶರಣು"
ಎಂದು ಹೇಳಿದ ಈ ಮೂರಕ್ಷರಗಳುಮಾತ್ರವೇ ಅವನನ್ನು ಪರಿಗ್ರಹಿಸುವುದಕ್ಕೆ ಮುಖ್ಯ
ಕಾರಣವೇಹೊರತು ಅವನು ದುಷ್ಟನಲ್ಲವೆಂಬುದು ಕಾರಣವಾಗುವುದಿಲ್ಲವೆಂದು ಆಹನು
ಮಂತನ ಮತಕ್ಕೂ ಖಂಡನವು. ಹೀಗೆ ರಾಮನು ಇವರೆಲ್ಲರ ಮತಗಳನ್ನೂ ಲಲಿತವಾಗಿ ನಿ
ರಸನಮಾಡಿ, ಶರಣಾಗತಿಯೊಂದೇ ತನ್ನ ಪರಿಗ್ರಹಕ್ಕೆ ಮುಖ್ಯಕಾರಣವೆಂದು ಸಿದ್ಧಾಂತೀ
ಕರಿಸಿರುವುದಾಗಿ ಗ್ರಾಹ್ಯವು. ಮತ್ತು ಇದರಿಂದ ಭಗವಂತನು "ನ ಸ್ಮರತ್ಯಪಕಾರಾಣಾಂ
ಶತಮಪ್ಯಾತ್ಮವತ್ತಯಾ । ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ" ಎಂದೂ,
"ಕ್ಷಾಂತಮಿತ್ಯಬ್ರವೀದ್ಧರಿಃ" ಎಂದೂ, "ಮಾಂವ್ರಜ । ಸರ್ವಪಾಪೇಭ್ಯೋ ಮೋಕ್ಷಯಿ
ಷ್ಯಾಮಿ" ಎಂದೂ, "ಮದ್ಭಕ್ತಂ ನಯಾಮಿ ಪರಮಾಂ ಗತಿಂ" ಎಂದೂ, ಅಲ್ಲಲ್ಲಿ ಹೇಳಿರು
ವಂತೆ, ಪ್ರಪತ್ತ್ಯಧಿಕಾರಿಯಲ್ಲಿ ಎಷ್ಟೋ ದೋಷವಿದ್ದರೂ, ಅವನನ್ನು ಪ್ರತಿಗ್ರಹಿಸುವ
ವಿಷಯದಲ್ಲಿ ಎಷ್ಟೋ ಪ್ರತಿಬಂಧಕಗಳು ಬಂದರೂ, ಅವೊಂದನ್ನೂ ಲಕ್ಷಿಸದೆ ಆತನನ್ನು
ಕೈಸೇರಿಸಿಕೊಳ್ಳುವನೆಂಬರ್ಥವು ಪ್ರತಿಪಾದಿತವಾಗುವುದು.

1 ಇಲ್ಲಿ "ಈದೃಶಂ ವ್ಯಸನಂ ಪ್ರಾಪ್ತಂ ಭ್ರಾತರಂ ಯಃ ಪರಿತ್ಯಜೇತ್ । ಕೋನಾ
ಮ ಸಭವೇತ್ತಸ್ಯ ಯಮೇಷ ನ ಪರಿತ್ಯಜೇತ್ ॥" ಎಂಬುದು ಮೂಲವು. ವಿಶೇಷಾರ್ಥವು "ಗು
ಣದೋಷಗಳ ವಿಚಾರದಲ್ಲಿ ನಮ್ಮಿಬ್ಬರಿಗೂ ಅಭಿಪ್ರಾಯಭೇದವಿದ್ದರೂ, ಜಾತಿಯಲ್ಲಿ
ಇವನು ರಾಕ್ಷಸನಾದುದರಿಂದ ಆ ಮಾತ್ರಕ್ಕೇ ನಾವು ಇವನನ್ನು ತ್ಯಜಿಸಬೇಕಾಗುವುದು.
ಇದರಮೇಲೆ ಇವನು ನಡೆಸಿಬಂದಿರುವ ಕೃತ್ಯದಿಂದಲೂ, ಇವನು ಯಾರಿಗೂ ವಿಶ್ವಾಸಾರ್ಹ
ನಲ್ಲವೆಂದೂ ವ್ಯಕ್ತವಾಗುವುದು" ಎಂದು ಹೇಳಿ ಸುಗ್ರೀವನು ಅದನ್ನು ನಿರೂಪಿಸುವನು.

ಪ್ರಾಪ್ತವಾಗಿರುವಾಗಲೂ,ಆತನಲ್ಲಿ ಒಡಹುಟ್ಟಿದ ಮರುಕವನ್ನೂ ತೋರಿಸ ದೆಬಿಟ್ಟು ಬಂದವನಲ್ಲವೇ?ಹಾಗೆ ಸಹೋದರನನ್ನೇ ಅಷ್ಟುಕಷ್ಟದಶೆಯಲ್ಲಿ ಯೂ ತೊರೆದುಬಂದ ಈಪರಮನಿರ್ಘೃಣನು,ಬೇರೆ ಯಾರನ್ನು ತಾನೇ ಸ ಮಯದಲ್ಲಿ ಕೈಬಿಟ್ಟು ಹೋಗಲಾರನು? ಇವನು ಕೇವಲಕೃತಘ್ನನೆಂಬುದಕ್ಕೆ ಇದೊಂದೇ ಸಾಕಾದ ನಿದರ್ಶನವಲ್ಲವೆ?" ಎಂದನು. ಸತ್ಯಪರಾಕ್ರಮನಾಗಿ ಯೂ, ಕಕುತ್ಸ್ಥಕುಲತಿಲಕನಾಗಿಯೂ ಇರುವ ರಾಮನು,ಸುಗ್ರೀವನ ಈ ಮಾತನ್ನು ಕೇಳಿ,ಮುಗುಳ್ನಗೆಯಿಂದ ನಗುತ್ತ, ಮುಂದಿದ್ದ ಸಮಸ್ತವಾನರ ರನ್ನೂ ನೋಡಿ,ರಾಜನೀತಿಯನ್ನನುಸರಿಸಿಯೇ ಆತನ ಮಾತಿಗೆ ಪ್ರತ್ಯುತ್ತರ ವನ್ನು ಹೇಳುವವನಾಗಿ,ಪುಣ್ಯಲಕ್ಷಣವುಳ್ಳ ತನ್ನ ತಮ್ಮನಾದ[1] ಲಕ್ಷ್ಮಣನ ನ್ನು ಕುರಿತು, "ವತ್ಸಲಕ್ಷ್ಮಣಾ! ಈ ವಾನರೇಂದ್ರನಾದ ಸುಗ್ರೀವನು ಹೇಳಿದ ಮಾತನ್ನು ಕೇಳಿದೆಯಷ್ಟೆ? ಶಾಸ್ತ್ರಗಳನ್ನೋದದೆಯೂ, ವೃದ್ಧರ ನ್ನು ಸೇವಿಸದೆಯೂ ಇರುವವನಿಗೆ ಈ ವಿಧವಾದ ಮಾತನ್ನಾಡುವುದು ಎಂದಿಗೂ ಸಾಧ್ಯವಲ್ಲ! ಸುಗ್ರೀವನು ಹೇಳಿದಂತೆ ಈ ವಿಭೀಷಣನು ತನ್ನ ಣ್ಣನನ್ನೂ ಬಿಟ್ಟು ನಮ್ಮಲ್ಲಿಗೆ ಬಂದುದರಲ್ಲಿ ಅತಿಸೂಕ್ಷ್ಮವಾದ ಯಾ

---

(ಈದೃಶಂ) ಇಷ್ಟು ಸರ್ವೈಶ್ವರ್ಯಸಮೃದ್ಧಿಯುಳ್ಳವನಾಗಿಯೂ, (ವ್ಯಸನಂ ಪ್ರಾಪ್ತಂ) ಇಂತಹ ಮಹಾವ್ಯಸನಕ್ಕೆ ಎಂದರೆ ಲಂಕಾದಹನಬಂಧುವಧಾದಿ ವ್ಯಸನಕ್ಕೆ ಸಿಕ್ಕಿದವ ನಾಗಿಯೂ, ಇದರ ಮೇಲೆ (ಭ್ರಾತರಂ) ಸಾಕ್ಷಾತ್ಸಹೋದರನಾಗಿಯೂ ಇರುವ ರಾವಣ ನನ್ನೇ ಈ ಸ್ಥಿತಿಯಲ್ಲಿ ಬಿಟ್ಟುಬಂದವನು, ಬೇರೆ ಯಾರನ್ನುತಾನೇ ಬಿಟ್ಟು ಹೋಗಲಾರ ನು? ತನಗೆ ಬೇಕಾದವನಲ್ಲಿ ಐಶ್ವರ್ಯಸಮೃದ್ಧಿ, ವ್ಯಸನ ಪ್ರಾಪ್ತಿ, ಬಂಧುತ್ವಾಭಿಮಾನ ಗಳೆಂಬ ಈ ಮೂರರಲ್ಲಿ ಒಂದೊಂದಿದ್ದರೂ ಅಂತವರನ್ನು ಬಿಡುವುದಕ್ಕೆ ಮನಸ್ಸು ಬಾ ರದು. ಹೀಗಿರುವಾಗಲೂ ಈ ಮೂರೂ ಪೂರ್ಣವಾಗಿದ್ದವನನ್ನೇ ಬಿಟ್ಟು ಬಂದವನು ಬೇರೆ ಯಾರನ್ನುಬಿಡಲಾರನೆಂದು ಭಾವವು.

1 ಇಲ್ಲಿ ರಾಮನು ಲಕ್ಷ್ಮಣನನ್ನುಕುರಿತು ಹೇಳುವುದರಿಂದಲೂ, ಉಪಸಂಹಾರದಲ್ಲಿ (ಸಹಲಕ್ಷ್ಮಣಃ)ಎಂದು ಲಕ್ಷ್ಮಣಸಹಿತನಾದ ಸುಗ್ರೀವನೆಂದು ಹೇಳುವುದರಿಂದಲೂ, ಸು ಗ್ರೀವಲಕ್ಷ್ಮಣರಿಬ್ಬರೇ ಈಮಾತನ್ನು ಹೇಳಿದರೆಂದೂ, ಅವರಿಬ್ಬರನ್ನುಕುರಿತೇ ರಾಮ ನೂ ಈ ಉತ್ತರವನ್ನು ಹೇಳುವನೆಂದೂ ಊಹಿಸಬೇಕು.

ವುದೋ ಒಂದು ! ರಾಜನೀತಿಯು ಇದ್ದೇ ಇರಬೇಕು. [1] ಆದರೆ ನನಗೆ ಈ ವಿಷಯದಲ್ಲಿ ಅದಕ್ಕಿಂತಲೂ ಸೂಕ್ಷ್ಮವಾದ ರಾಜನೀತಿಯೊಂದು ತೋರುವುದು. ಇದು ಪ್ರತ್ಯಕ್ಷವಾಗಿಯೇ ಕಾಣುವುದಲ್ಲದೆ, ಲೋಕವ್ಯವಹಾರಸಿದ್ಧವಾಗಿಯೂ ಇರುವುದು. ಈ ನೀತಿಯನ್ನು ಸಮಸ್ತರಾಜರಲ್ಲಿಯೂ ಕಾಣಬಹುದು. ಜ್ಞಾತಿಗಳಾಗಲಿ, ಪರ್ಯಂತರಾಜರಾಗಲಿ, ವ್ಯಸನಕಾಲದಲ್ಲಿ ಮೇಲೆಬಿದ್ದು ಪ್ರಹರಿಸುವರಾದುದರಿಂದ ಅವರನ್ನು ಶತ್ರುಗಳೆಂದೇ ತಿಳಿಯಬೇಕು. ಈ ವಿಭೀಷಣನೂ ಈಗ ತನ್ನಣ್ಣನಾದ ರಾವಣನು ಕಷ್ಟಕ್ಕೆ ಸಿಕ್ಕಿರುವುದನ್ನು ನೋಡಿ, ಆತನನ್ನು ನಿಗ್ರಹಿಸಬೇಕೆಂಬುದಕ್ಕಾಗಿಯೇ ನಮ್ಮಲ್ಲಿಗೆ ಬಂದಿರಬೇಕು. ಇಲ್ಲವೇ ಆ ರಾವಣನೇ ತನಗುಂಟಾದ ಈ ವ್ಯಸನದಲ್ಲಿ ತನ್ನ ಜ್ಞಾತಿಯಾದ ವಿಭೀಷಣನು ತನ್ನನ್ನು ಪ್ರಹರಿಸುವನೆಂಬ ಭಯದಿಂದ ಇವನನ್ನು ರಾಜ್ಯದಿಂದೋಡಿಸಿರಬೇಕು ! ಹೇಗಿದ್ದರೂ ನಾವು ಇವನನ್ನು ಪರಿಗ್ರಹಿಸುವುದರಲ್ಲಿ ದೋಷವಿಲ್ಲ. ಜ್ಞಾತಿಗಳಾಗಿದ್ದರೂ ಪಾಪಬುದ್ಧಿಯಿಲ್ಲದ ಕೆಲವರುಮಾತ್ರ, ತಮಗೆ ಇಷ್ಟರಾದ ಜ್ಞಾತಿಗಳನ್ನು ತಪ್ಪದೆ ಗೌರವಿಸುವುದೂ ಉಂಟು. ಆದರೇನು? ಲೋಕದ ನಡತೆಯೇ ಹೀಗೆ ಪಾಪಭೂಯಿಷ್ಠವಾಗಿರುವುದರಿಂದ, ಅಂತಹ ಪುಣ್ಯಾತ್ಮರಾದ ರಾಜ

---

1 ಇಲ್ಲಿ "ಅಸ್ತಿ ಸೂಕ್ಷ್ಮತರಂ ಕಿಂಚಿತ್ ಯದತ್ರ ಪ್ರತಿಭಾತಿಮೇ। ಪ್ರತ್ಯಕ್ಷಂ ಲೌಕಿಕಂವಾಪಿ ವಿದ್ಯತೇ ಸರ್ವರಾಜಸು" ಎಂದು ಮೂ. ವು.(ವಿಶೇಷಾರ್ಥವು. (ಅಸ್ತಿ ಸೂಕ್ಷ್ಮತರಂ) ಸುಗ್ರೀವನ ವಾಕ್ಯವೇ ಸೂಕ್ಷ್ಮವಾದುದು. ಈಗ ನಾನು ಹೇಳುವಮಾತು ಅದಕ್ಕಿಂತಲೂ ಸೂಕ್ಷ್ಮತರವು. ಇದಕ್ಕೆ ಮೇಲೆ ಪೂರ್ವಪಕ್ಷವೇ ಇಲ್ಲವೆಂದು ಭಾವವು. (ಕಿಂಚಿತ್) ತನ್ನ ವಾಕ್ಯವು ಸುಗ್ರೀವನ ವಾಕ್ಯಕ್ಕಿಂತಲೂ ಮೇಲಾಗಿದ್ದರೂ, ಆತ್ಮ ಸ್ತುತಿಯನ್ನು ತಗ್ಗಿಸುವುದಕ್ಕಾಗಿ (ಕಿಂಚಿತ್) ಎಂದು ಲಘುತ್ವಸೂಚಕವಾದ ಶಬ್ದವು. (ಪ್ರತ್ಯಕ್ಷಂ ಲೌಕಿಕಂ ವಾಪಿ ವಿದ್ಯತೇ ಸರ್ವರಾಜಸು)ಈ ರಾಜಧರ್ಮಸೂಕ್ಷ್ಮವು ಪ್ರತ್ಯಕ್ಷವಾಗಿಯೂ, ಲೋಕವ್ಯವಹಾರಸಿದ್ಧವಾಗಿಯೂ ಇರುವುದಲ್ಲದೆ, ಸಮಸ್ತರಾಜರಲ್ಲಿಯೂ ಇದು ನಡೆಯುತ್ತಲೇ ಇರುವುದೆಂದರ್ಥವು. ಇದರಿಂದ "ಈ ಸುಗ್ರೀವನು ಈಗ ನಮ್ಮಲ್ಲಿರುವ ಪ್ರೇಮಾತಿಶಯದಿಂದ ಈ ಮಾತನ್ನಾಡುತಿದ್ದರೂ, ಈ ಜ್ಞಾತಿವಧವೆಂಬ ರಾಜನೀತಿಯನ್ನು ಹಿಂದೆ ನಾವು ಇವನಲ್ಲಿಯೇ ಪ್ರತ್ಯಕ್ಷವಾಗಿ ನೋಡಿರುವೆವಲ್ಲವೆ?" ಎಂದು ರಾಮನು ಸುಗ್ರೀವನಿಗೆ ಮರ್ಮೋದ್ಘಾಟನವಾಗುವಂತೆ ಹೇಳಿದುದಾಗಿ ಭಾವವು.

ರಿಗೂ ಕೂಡ, ಉತ್ತಮಗುಣವುಳ್ಳ ಜ್ಞಾತಿಗಳಲ್ಲಿಯೂ ಶಂಕಿಸಬೇಕಾಗಿ ಬ ರುವುದು. ಹೀಗಿರುವಾಗ ಪಾಪಬುದ್ಧಿಯುಳ್ಳ ರಾಜನಿಗೆ ತನ್ನ ಜ್ಞಾತಿಯ ವಿ ಷಯದಲ್ಲಿ ಶಂಕೆಯುಂಟಾಗುವುದೆಂಬುವನ್ನು ಹೇಳಬೇಕಾದುದೇನು? ಆದುದ ರಿಂದ ಈಗ ಈ ವಿಭೀಷಣನೂಕೂಡ, ಪಾಪಿಯಾದ ರಾವಣನು ತನ್ನಲ್ಲಿ ಶಂ ಕಿಸುವುದನ್ನು ನೋಡಿ,ಅವನೊಡನೆ ವಿರೋಧಿಸಿಕೊಂಡೇ ಬಂದಿರಬೇಕು. ಆ ದರೆ ಈಗ ಶತ್ರುಪಕ್ಷದವನಾದ ಈತನನ್ನು ಕೈಸೇರಿಸಿಕೊಳ್ಳುವ ವಿಷ ಯದಲ್ಲಿ ನೀನು ದೋಷವನ್ನು ಹೇಳಿದೆಯಷ್ಟೆ? ಅದಕ್ಕೂ ತಕ್ಕ ಸಮಾ ಧಾನವನ್ನು ಹೇಳಬಹುದು. ನೀನು ಹೇಳಿದ ಆ ದೋಷವನ್ನೇ ಕಾರಣ ವಾಗಿಟ್ಟುಕೊಂಡು ನಾವು ಅವನನ್ನು ಪರಿಗ್ರಹಿಸಬೇಕೆಂಬುದಕ್ಕೆ ನೀತಿಶಾ ಸ್ತ್ರಾನುಸಾರವಾದ ಒಂದು ಕಾರಣವೂ ಉಂಟು. ಅದನ್ನೂ ನಿನ್ನ ಮನಸ್ಸಿ ಗೊಪ್ಪುವಂತೆ ಹೇಳುವೆನು ಕೇಳು.ನಾವು ಈ ರಾಕ್ಷಸನಿಗೆ ಸಮಾನಕುಲದವ ರಾದ ಜ್ಞಾತಿಗಳೂ ಅಲ್ಲ. ಇವನ ರಾಜ್ಯಕ್ಕೂ ನಾವು ಆಸೆಪಡುವವರಲ್ಲ. ರಾವಣನಲ್ಲಿರುವಂತೆ ಈತನಲ್ಲಿ ನಮಗೆ ಶತ್ರುತ್ವಶಂಕೆಗೂ ಅವಕಾಶವಿಲ್ಲ. ಈತನಾದರೋ ರಾಜ್ಯದಾಸೆಯಿಂದಲೇ ನಮ್ಮಲ್ಲಿಗೆ ಬಂದಿರುವನು.ಈತನಿಗೆ ನ ಮ್ಮಿಂದ ರಾವಣನನ್ನು ಕೊಲ್ಲಿಸಬೇಕೆಂಬ ಉದ್ದೇಶವೂ ಇರುವುದರಿಂದ,ತನ್ನ ಕಾರ್ಯವು ಕೆಡುವುದೆಂಬ ಭಯದಿಂದಾದರೂ ನಮಗೆ ಕೇಡನ್ನು ಬಯಸಲಾರ ನು. "ಮಂದಬುದ್ಧಿಯುಳ್ಳ ರಾಕ್ಷಸರಿಗೆ ಇಷ್ಟು ದೂರಾಲೋಚನೆಯೇನೆಂ ದು ಕೇಳುವೆಯಾ ? ರಾಕ್ಷಸರಲ್ಲಿಯೂ ಎಷ್ಟೋ ಬುದ್ಧಿಶಾಲಿಗಳುಂಟು ! ಆ ದುದರಿಂದ ನಾವು ಈತನನ್ನು ಪರಿಗ್ರಹಿಸುವುದರಿಂದ ದೋಷವಿಲ್ಲ. ಜ್ಞಾ ತಿಗಳು ಒಬ್ಬರಿಗೊಬ್ಬರು ಎಷ್ಟೇ ಸಂತೋಷಸಮಾಧಾನಗಳಿಂದಿದ್ದರೂ, ಅವರಲ್ಲಿ ಐಕಮತ್ಯವುಮಾತ್ರ ಎಂದಿಗೂ ಹುಟ್ಟದು. ಅವಸರವು ಬಂದಾಗ ಕ್ಷಣಮಾತ್ರದಲ್ಲಿ ಥಟ್ಟನೆ ಕದಲಿಹೋಗುವರು. ಈಗ ಈ ವಿಭೀಷಣನ ದೊ ಡ್ಡಕಂಠಧ್ವನಿಯನ್ನೂ, ಇವನ ಮನಸ್ಸಿನಲ್ಲಿರುವ ಆತುರವನ್ನೂ ನೋಡಿದರೆ, ಇವನು ತನ್ನ ಜ್ಞಾತಿಯಾದ ರಾವಣನಿಗೆ ಹೆದರಿ ಬಂದಿರುವಂತೆಯೇ ಕಾ ಣುವುದು. ಆ ಭಯದಿಂದಲೇ ಆತ್ಮರಕ್ಷಣವನ್ನು ಕೋರಿ ನಮ್ಮಲ್ಲಿಗೆ ಬಂದಿರ ಬಹುದಾದುದರಿಂದ,ಇವನನ್ನು ಪರಿಗ್ರಹಿಸುವುದೇ ಯುಕ್ತವು. "ಎಷ್ಟೇ ದು

ಷ್ಟನಾಗಿದ್ದರೂ,ಅಣ್ಣನನ್ನನುವರ್ತಿಸಬೇಕಾದುದೇ ಧರ್ಮವಲ್ಲವೇ?" ಎಂದು ನೀನು ಕೇಳಬಹುದು. [1] ಸುಗ್ರೀವಾ!"ಲೋಕದಲ್ಲಿ ಒಡಹುಟ್ಟಿದವರೆಲ್ಲರೂ ಭರತನಂತೆಯೇ ಇರುವರೆಂದೂ, ತಂದೆಯ ಮಕ್ಕಳೆಲ್ಲರೂ ನನ್ನಂತೆಯೇ ಇರುವರೆಂದೂ, ಮಿತ್ರರೆಲ್ಲರೂ ನಿನ್ನಂತೆಯೇ ಇರುವರೆಂದೂ ಎಣಿಸುವುದ

---

1 ಇಲ್ಲಿ "ನ ಸರ್ವೇ ಭ್ರಾತರಸ್ತಾತ ಭವಂತಿ ಭರತೋಪಮಾಃ। ಮದ್ವಿಧಾವಾ ಪಿತುಃ ಪುತ್ರಾಃ ಸುಹೃದೋವಾ ಭವದ್ವಿಧಾಃ" ಎಂದು ಮೂಲವು. ವಿಶೇಷಾರ್ಥವು. ಎಷ್ಟೇ ದುಷ್ಟನಾದರೂ ಜ್ಯೇಷ್ಠನನ್ನನುವರ್ತಿಸಬೇಕಾದುದೇ ಧರ್ಮವಲ್ಲವೆ? ಎಂದರೆ, ಈ ಧರ್ಮವು ಎಲ್ಲಾ ಕಡೆಯಲ್ಲಿಯೂ ಸಂಭವಿಸದೆಂದು ಹೇಳುವನು. (ಸರ್ವೇಭ್ರಾತರಃ ಭರತೋಪಮಾ ನಭವಂತಿ) ಒಡಹುಟ್ಟಿದವರೆಲ್ಲರೂ ಭರತನಂತೆಯೇ ಇರಲಾರರು- ತನ್ನ ತಾಯಿಯಾದ ಕೈಕೇಯಿಯು, ತನಗಾಗಿ ಎಷ್ಟೋ ಕಷ್ಟಪಟ್ಟು ತನ್ನ ತಂದೆಯಿಂದ ರಾಜ್ಯವನ್ನು ಕೊಡಿಸಿದರೂ, ನಿರಾಯಾಸವಾಗಿ ಕೈಗೆ ಬಂದ ಆ ರಾಜ್ಯವನ್ನೂ ಪರಿತ್ಯಜಿಸಿ, ಕಾಡಿಗೆ ಬಂದ ನನ್ನನ್ನೇ ಹಿಂಬಾಲಿಸಿ ಬಂದು "ರಾಜ್ಯವು ನಿನಗೇ ಸೇರಿದುದು. ಇದನ್ನು ನೀನೇ ಅಂಗೀಕರಿಸಬೇಕು. ನಾನು ನಿನಗೆ ದಾಸ್ಯವನ್ನು ಮಾಡುತ್ತಿರುವೆನು." ಎಂದು ಹೇಳುವಂತವನು ಭರತನಹಾಗೆ ಬೇರೊಬ್ಬನುಂಟೆ? ರಾಮನಲ್ಲಿ ಭರತನಿಗಿಂತಲೂ, ಲಕ್ಷ್ಮಣನಿಗೆ ಪ್ರೀತಿವಿಶ್ವಾಸಗಳು ಹೆಚ್ಚಾಗಿದ್ದರೂ, ಇಂತಹ ಪ್ರಸಕ್ತಿಯು ಲಕ್ಷ್ಮಣನಿಗಿಲ್ಲದುದರಿಂದ ಆತನನ್ನು ಇಲ್ಲಿ ಗ್ರಹಿಸಲಿಲ್ಲವು. (ಮದ್ವಿಧಾವಾ ಪಿತುಃ ಪುತ್ರಾಃ) ತಂದೆಗೆ ನನ್ನಂತಹ ಮಕ್ಕಳಾಗಲಿ ಇರಲಾರರು. ರಾಜ್ಯದಲ್ಲಿ ನನಗೆ ಸಂಪೂರ್ಣವಾದ ಬಾಧ್ಯತೆಯಿದ್ದರೂ, ಪಿತೃವಚನಪರಿಪಾಲನಾರ್ಥವಾಗಿಯೇ ರಾಜ್ಯವನ್ನು ಬಿಟ್ಟು ಕಾಡಿಗೆ ಬಂದ ನನ್ನಂತೆ, ಲೋಕದಲ್ಲಿ ಬೇರೆ ಯಾವ ರಾಜಪುತ್ರನುಂಟೆಂದು ಭಾವವು. ಇಲ್ಲಿ ರಾಮನು ಯಥಾರ್ಥವನ್ನು ಹೇಳುತ್ತದರಿಂದ, ಆತ್ಮಪ್ರಸಂಶಾರೂಪವಾದ ದೋಷವಿಲ್ಲವು. "ಕೃಪಾವಾನವಿಕತ್ಥನಃ" ಎಂದು ಹೆಮ್ಮೆಯನ್ನು ಹೇಳಿಕೊಳ್ಳದಿರುವುದೇ ಧೀರೋದಾತ್ತಲಕ್ಷಣವಾಗಿದ್ದರೂ, "ಸತಾಂಹಿ ಸಂದೇಹಪದೇಷು ವಸ್ತುಷು ಪ್ರಮಾಣಮಂತಃಕರಣ ಪ್ರವೃತ್ತಯಃ" ಎಂಬುದಾಗಿ ದುಷ್ಯಂತನು ತಮ್ಮಂತಹ ಸತ್ಪುರುಷರ ಮನಃ ಪ್ರವೃತ್ತಿಯೇ ಸಂದೇಹವನ್ನು ನಿರ್ಣಯಿಸುವ ಪ್ರಮಾಣವೆಂದೂ "ವೈನತೇಯಮಹಂ ಶಕ್ತಃ ಪರಿಗಂತುಂ ಸಹಸ್ರಧಾ" ಎಂದು ಹನುಮಂತನು, ತನ್ನ ಗಮನಶಕ್ತಿಗೆ ಎಣೆಯೇ ಇಲ್ಲವೆಂದೂ,ಹೇಳಿಕೊಂಡುದೆಲ್ಲವೂ ಯಥಾರ್ಥೋಕ್ತಿಯಾದುದರಿಂದ ಅವುಗಳಿಗೆ ಹೇಗೆ ಆತ್ಮಸ್ತುತಿ ದೋಷವಿಲ್ಲವೋ ಹಾಗೆಯೇ ಇಲ್ಲಿಯೂ ಗ್ರಹಿಸಬೇಕು. ಅಥವಾ (ಮದ್ವಿಧಾ

ಕ್ಕಾಗಿದೀತೆ ? ಇಂತಹ ಧರ್ಮಾತ್ಮರು ಲೋಕದಲ್ಲಿ ದುರ್ಲಭರಾದುದರಿಂದ, ರಾವಣನು ಈತನಲ್ಲಿ ಒಡಹುಟ್ಟಿದ ಪ್ರೇಮವನ್ನಿಡದೆ, ಇವನನ್ನು ದ್ವೇಷಿಸುತ್ತಿರಬಹುದು. ಆದಕ್ಕಾಗಿಯೇ ಈತನೂ ಅಣ್ಣನನ್ನಗಲಿ ನಮ್ಮಲ್ಲಿಗೆ ಬಂದಿರಬಹುದು. ಆದುದರಿಂದ ನಾವು ಇವನನ್ನು ಪರಿಗ್ರಹಿಸುವುದೇ ಯುಕ್ತವು." ಎಂದನು. [1] ರಾಮನು ಹೇಳಿದ ಈ ಮಾತನ್ನು ಕೇಳಿ, ಮಹಾಪ್ರಾಜ್ಞನಾದ ಸುಗ್ರೀವನು, ಲಕ್ಷ್ಮಣಸಹಿತನಾಗಿ ಮೇಲಕ್ಕೆದ್ದು, ರಾಮನಿಗೆ

---

ವಾಪಿತುಃಪುತ್ರಾಃ) ತಂದೆಯುಳ್ಳವರಲ್ಲಿ ನನ್ನಂತವರು ಬೇರೊಬ್ಬರೂ ಇಲ್ಲವೇ ದೂ ಅರ್ಥಾಂತರವನ್ನು ಹೇಳಬಹುದು. ಅರುವತ್ತು ಸಾವಿರ ವರ್ಷಗಳವರೆಗೆ ರಾಜ್ಯಭಾರವನ್ನು ಮಾಡಿ, ಮಹಾತಪಸ್ಸಿನಿಂದ ನನ್ನನ್ನು ಪಡೆದು, ನನ್ನ ವಿಯೋಗದುಃಖದಿಂದಲೇ ಲೋಕಾಂತರವನ್ನೂ ಹೊಂದಿದಂತಹ ಅಸಾಧಾರಣಪುತ್ರವಾತ್ಸಲ್ಯವುಳ್ಳ ತಂದೆಯನ್ನು ನಾನೊಬ್ಬನಲ್ಲದೆ ಬೇರೆ ಯಾವ ಮಕ್ಕಳು ಪಡೆದಿರುವರೆಂದು ಭಾವವು, (ಸುಹೃದೋವಾ ಭವದ್ವಿಧಾಃ) ನಿನ್ನಂತಹ ಸ್ನೇಹಿತರಾಗಲಿ, ಲೋಕದಲ್ಲಿ ಬೇರೆಲ್ಲಿಯೂ ಸಿಕ್ಕಲಾರರು. ಹಿಂದೆ ನೀನು ಕಿಷ್ಕಿಂಧೆಯಲ್ಲಿದ್ದಾಗ, ಮಳೆಗಾಲವು ಕಳೆದಮೇಲೆಯೂ ನೀನು ಬಾರದೆ ಕೊಂಚತಡಮಾಡಿದುದನ್ನು ನೋಡಿ ನಾನು, "ತ್ವಾಂತು ಸತ್ಯಾದತಿಕ್ರಾಂತಂ ಹನಿಷ್ಯಾಮಿ ಸಬಾಂಧವಂ" ಎಂದು ಹೇಳಿ, ಅತ್ಯಾಕ್ರೋಶಗೊಂಡು ಲಕ್ಷ್ಮಣನನ್ನು ಕಳುಹಿಸಲು, ಆತನೂ ನಿನ್ನ ಮುಂದೆ ಆಡಬಾರದ ಮಾತುಗಳನ್ನೆಲ್ಲಾ ಆಡಿದರೂ, ನಮ್ಮಲ್ಲಿರುವ ಪ್ರೇಮಾತಿಶಯದಿಂದ ನೀನು ಅವೊಂದನ್ನೂ ಗಮನಿಸದೆ, ಈಗಲೂ ನಮಗೆ ಸಹಾಯಮಾಡುತ್ತಿರುವೆಯಲ್ಲವೆ? ಇಂತಹ ಸ್ನೇಹಿತರು ಬೆರೊಬ್ಬರೂ ಇಲ್ಲವೆಂದೂ ಭಾವವು

1 ಇದುವರೆಗೆ ಸುಗ್ರೀವನು ನೀತಿಯಮೂಲಕವಾಗಿಯೇ ವಿಭೀಷಣನು ತ್ಯಾಜ್ಯನೆಂಬುದನ್ನು ನಾನಾವಿಧದಿಂದ ನಿರೂಪಿಸಿದನು. ಇಷ್ಟಾದರೂ ರಾಮನಿಗೆ ವಿಭೀಷಣನಲ್ಲಿದ್ದ ಪಕ್ಷಪಾತವು ಸ್ವಲ್ಪಮಾತ್ರವೂ ತಗ್ಗದಿರುವುದನ್ನು ನೋಡಿ, ಆ ರಾಕ್ಷಸನನ್ನು ಪರಿಗ್ರಹಿಸುವುದರಿಂದ ಮುಂದೆ ರಾಮನಿಗೆ ಯಾವಾಗ ಯಾವನರ್ಥವುಂಟಾಗುವುದೋ ಎಂದು ಶಂಕಿಸಿ, ರಾಮನನ್ನು ವಶಪಡಿಸಿಕೊಳ್ಳಬೇಕಾದರೆ ಶರಣಾಗತಿಯಲ್ಲದೆ ಬೇರೆ ಉಪಾಯವಿಲ್ಲವೆಂದೂ ನಿಶ್ಚಯಿಸಿ, ತಾನೂ ಅಲ್ಲಿ ವಿಭೀಷಣನಂತೆಯೇ ಶರಣಾಗತಿಯನ್ನು ಮಾಡ ಪ್ರಾರ್ಥಿಸುವನು. (ಸಹಲಕ್ಷ್ಮಣಃ) ಎಂಬುದರಿಂದ ಅಲ್ಲಿ ವಿಭೀಷಣನು ಮಾಡಿದ ಶರಣಾಗತಿಯೊಂದಕ್ಕಿಂತಲೂ, ತಾನು ಲಕ್ಷ್ಮಣನೊಡನೆ ಸೇರಿ ಮಾಡುವ ಶರಣಾಗತಿಯು ಇಮ್ಮಡಿಯಾಗುವುದೆಂದೆಣಿಸಿ, ಆ ವಿಭೀಷಣನನ್ನು ನಿಗ್ರಹಿಸಬೇಕೆಂದು ಶರಣಾಗತಿದ್ವಯಪೂರ್ವಕವಾಗಿ, ರಾಮನನ್ನು ಪ್ರಾರ್ಥಿಸುವನೆಂದು ಭಾವವು.

ತಲೆಬಗ್ಗಿ "ರಾಮಾ! ತಾಳ್ಮೆಯುಳ್ಳವರಲ್ಲಿ ನೀನು ಮೇಲೆಂಬುದೇನೋ ನಿಜವು. ಆದರೇನು! ಈ ವಿಭೀಷಣನಲ್ಲಿಮಾತ್ರ ಆ ತಾಳ್ಮೆಯನ್ನು ತೋರಿಸಬಾರದು. ಆತನನ್ನು ನಿಗ್ರಹಿಸುವುದೇ ನನಗೆ ಉಚಿತವೆಂದು ತೋರುವುದು [1] ಈ ರಾಕ್ಷಸನು ರಾವಣನಿಂದ ರಹಸ್ಯವಾಗಿ ಕಳುಹಿಸಲ್ಪಟ್ಟವನೆಂದು ನೀನು ಚೆನ್ನಾಗಿ ತಿಳಿ! ಎಲೆ ಮಹಾಬಾಹೂ! ಈ ರಾಕ್ಷಸನು ಕುಟಿಲ ಬುದ್ಧಿಯುಳ್ಳ ರಾವಣನ ಮಾತಿನಮೇಲೆಯೇ ಇಲ್ಲಿಗೆ ಬಂದಿರುವನು ಆವನು ಈಗ ತನ್ನ ನಿಜವಾದ ಉದ್ದೇಶವನ್ನು ಮರೆಸಿಟ್ಟುಕೊಂಡು, ನಮಗೆ ನಂಬಿಕೆಯನ್ನು ಹುಟ್ಟಿಸಿ, ಆ ನಂಬಿಕೆಯಿಂದ ನಾವು ಎಚ್ಚರತಪ್ಪಿದ್ದಾಗ, [2] ನಿನ್ನನ್ನೋ, ನನ್ನನ್ನೋ,

---

1 ಇಲ್ಲಿ "ರಾವಣೇನ ಪ್ರಣಿಹಿತಂ ತಮವೇಹಿ ನಿಶಾಚರಂ" ಎಂದು ಮೂಲವು. ಸುಗ್ರೀವನು ಇದೇ ವಿಷಯವನ್ನು ಮೊದಲೇ ತಿಳಿಸಿರುವಾಗ, ಈಗಲೂ ತಿರುಗಿ ಆ ವಾಕ್ಯವನ್ನೇ ಹೇಳುವುದಕ್ಕೆ ಪ್ರಯೋಜನವೇನೆಂದರೆ, ಮೊದಲು ರಾಮನು ವಿಭೀಷಣನು ಹೇಳಿದ "ಶರಣು" ಎಂಬ ಮಾತಿನಿಂದ ಅಪಹೃತಚಿತ್ತನಾಗಿ, ಆಗ ತನ್ನ ಮಾತನ್ನು ಗಮನಿಸದಿರಬಹುದೆಂದೆಣಿಸಿ, ಈಗ ತಾನೂ ಆವಿಭೀಷಣನಂತೆಯೇ ಶರಣಾಗತಿಶಬ್ದವನ್ನೇ ಹೇಳಿ ಪ್ರಾರ್ಥಿಸುವುದರಿಂದ, ರಾಮನ ಮನಸ್ಸು ಇತ್ತಲಾಗಿ ತಿರುಗಿ, ತನ್ನ ಮಾತನ್ನೂ ಲಾಲಿಸಿ ಕೇಳಬಹುದೆಂಬ ನಂಬಿಕೆಯಿಂದ, ತಿರುಗಿ ಅದನ್ನೇ ಹೇಳುವುದಾಗಿ ತಿಳಿಯಬೇಕು. ಇದಕ್ಕಾಗಿಯೇ ಇಲ್ಲಿ ನಿಶಾಚರನೆಂಬ ವಿಶೇಷಣವು. ಕಳ್ಳನು ಅರ್ಧರಾತ್ರಿಯಲ್ಲಿ ಮನೆಗೆ ನುಗ್ಗಿ ಪರರ ಸ್ವತ್ತನ್ನು ಅಪಹರಿಸುವಂತೆ, ಈ ರಾಕ್ಷಸನೂ ಮೋಸದಿಂದ ನಿನ್ನ ಮನಸ್ಸನ್ನು ತನ್ನ ಕಡೆಗೆ ಆಕರ್ಷಿಸಿಕೊಂಡಿರಬಹುದೆಂದು ಇದರ ಭಾವವು.

2 ಇಲ್ಲಿ "ಪ್ರಹರ್ತುಂ ತ್ವಯಿ ವಿಶ್ವಸ್ತೇ ಪ್ರಚ್ಛನ್ನೋ ಮಯಿಚಾನಘ । ಲಕ್ಷ್ಮಣೇ ವಾ" ಎಂದು ಮೂಲವು. ಇಲ್ಲಿ ಸುಗ್ರೀವನು ತನಗೂ ಲಕ್ಷ್ಮಣನಿಗೂ ಅನರ್ಥವುಂಟಾಗಬಹುದೆಂದು ಹೇಳಿ, ತನ್ನಪ್ರಾಣಭಯವನ್ನು ತೋರಿಸಿದುದರಿಂದ ಅವನ ಸ್ವಾರ್ಥಪರತೆಯು ಹೊರಬೀಳುವುದಿಲ್ಲವೆ?" ಎಂದರೆ, ರಾಮನಿಗೆ ತನ್ನ ವ್ಯಸನಕ್ಕಿಂತಲೂ ತನ್ನಲ್ಲಿ ಶರಣಾಗತರಾದವರ ವ್ಯಸನವೇ ಮತ್ತಷ್ಟು ಮರ್ಮಬೇಧಕವಾಗಬಹುದೆಂದು ತಿಳಿದು, ಅದನ್ನೇ ರಾಮನಿಗೆ ತಿಳಿಸಿ, ಆ ಮೂಲವಾಗಿಯಾದರೂ ವಿಭೀಷಣನನ್ನು ನಿಗ್ರಹಿಸುವುದಕ್ಕಾಗಿ ಪ್ರಯತ್ನಿಸುವನು. ಇದರಿಂದ ಸುಗ್ರೀವನು ರಾಮನನ್ನು ಕುರಿತು "ರಾಮಾ! ಹಿಂದೆ ನೀನು "ತ್ವಯಿಕಿಂಚಿತ್ಸಮಾಪನ್ನೇ ಕಿಂಕಾರ್ಯಂ ಸೀತಯಾ ಮಮ।" ಎಂದು ಹೇಳಿ ಸೀತೆಗಿಂತಲೂ ನನ್ನಲ್ಲಿ ಹೆಚ್ಚಾಗಿ ಪ್ರೇಮವನ್ನು ತೋರಿಸಿದವನಲ್ಲವೆ? ಮತ್ತು ಈಗಲೂ ನೀನು (ಸುಹೃದೋವಾ ಭವದ್ವಿಧಾ:) ನಿನ್ನಂತೆ ಸ್ನೇಹಿತರೇ ಲೋಕದಲ್ಲಿಲ್ಲವೆಂದೂ

ಅಥವಾ ಈ ಲಕ್ಷ್ಮಣನನ್ನೋ ಕೊಲ್ಲುವುದಕ್ಕೆ ಕಾದಿರುವನು. ನಾವು ನಮ್ಮ ಮಂತ್ರಿವರ್ಗಗಳೊಡನೆ ಇವನ ಕೊಲೆಗೆ ಪಾತ್ರರಾಗಬೇಕಾಗುವುದು. ಈತನು ಘಾತುಕನಾದ ಆ ರಾವಣನಿಗೆ ತಮ್ಮನೆಂಬುದೊಂದೇ ಸಾಕಲ್ಲವೆ? ಇವನನ್ನು ಹೇಗೆ ನಂಬಬಹುದು?" ಎಂದನು. ಮಾತುಬಲ್ಲವನಾಗಿಯೂ, ವಾನರಸೇನಾಪತಿಯಾಗಿಯೂ ಇರುವ ಸುಗ್ರೀವನು, ಮಾತಿನಲ್ಲಿ ಚತುರನಾದ ರಾಮನನ್ನು ಕುರಿತು, ಇಷ್ಟುಮಾತ್ರವನ್ನು ಹೇಳಿ ಸುಮ್ಮನಿದ್ದನು. ಸುಗ್ರೀವನು ಹೇಳಿದ ಈ ಮಾತನ್ನು ಕೇಳಿ, ರಾಮನು ಅದಕ್ಕೆ ಸಮಾಧಾನವೇನೆಂದು ತನ್ನಲ್ಲಿ ತಾನು ಚಿಂತಿಸಿ,ತಿರುಗಿ ಆ ಸುಗ್ರೀವನನ್ನು ಕುರಿತು "ಎಲೆ

---

ಹೇಳಿದವನಲ್ಲವೆ? ಇಷ್ಟುಪ್ರೇಮಾಸ್ಪದನಾದ ನನಗಾಗಲಿ, "ಮುಹೂರ್ತಮಪಿಜೀವಾಮಃ" ಎಂದು ಯಾವನನ್ನು ಬಿಟ್ಟು ನೀನು ಮುಹೂರ್ತಮಾತ್ರವಾದರೂ ಜೀವಿಸಲಾರೆನೆಂದು ಹೇಳಿರುವೆಯೋ, ಅಂತಹ ಲಕ್ಷ್ಮಣನಿಗಾಗಲಿ, ಇವನು ಏನಾದರೂ ಅಪಾಯವನ್ನು ತಂದಿಡಬಹುದು. ಒಂದು ವೇಳೆ ಶರಣಾಗತವಾತ್ಸಲ್ಯದಿಂದ ನಿನ್ನ ಕ್ಷೇಮದಲ್ಲಿ ನೀನು ದೃಷ್ಟಿಯಿಡದೆ ಹೋದರೂ, ಆಶ್ರಿತರಾದ ನಮ್ಮನ್ನು ಅಪಾಯವಿಲ್ಲದಂತೆ ರಕ್ಷಿಸುವುದಕ್ಕಾದರೂ ನೀನು ಅವನನ್ನು ನಿಗ್ರಹಿಸಲೇಬೇಕೆಂದು ಭಾವವು.

I ಇಲ್ಲಿ ಸುಗ್ರೀವನು "ವಿಭೀಷಣನು ಕ್ರೂರಜಾತಿಯ ರಾಕ್ಷಸನಾದುದರಿಂದ ಅವನು ತನ್ನ ಜಾತಿಕ್ರೌರ್ಯದಿಂದ ರಾಮನಿಗೆ ಯಾವ ಅನರ್ಥವನ್ನುಂಟುಮಾಡುವನೋ" ಎಂದು ಭಯಪಡುವುದನ್ನು ನೋಡಿ, ಕೊನೆಗೆ ರಾಮನು ತನ್ನ ಸರ್ವಶಕ್ತತ್ವವನ್ನೇ ಅವನಿಗೆ ತಿಳಿಸಿ, ಅವನ ಭಯವನ್ನು ನೀಗಿಸುವನು, "ಸುದುಷ್ಟೋ ವಾಪ್ಯದುಷ್ಟೋ ವಾ ಕಿಮೇಷ ರಜನೀಚರಃ । ಸೂಕ್ಷ್ಮಮಪ್ಯಹಿತಂ ಕರ್ತುಂ ಮಮಾಶಕ್ತಃ ಕಥಂಚನ"ಎಂದು ಮೂಲವು. (ಸುದುಷ್ಟೋವಾಪ್ಯದುಷ್ಟೋವಾ) ನಿಮ್ಮಪಕ್ಷದಂತೆ ಅವನು ದೋಷಿಯಾದರೂ ಆಗಲಿ! ಅಥವಾ ನನ್ನ ಪಕ್ಷದಂತೆ ನಿರ್ದೋಷಿಯಾದರೂ ಆಗಲಿ! ಈ ವಿಚಾರದಿಂದ ಈಗ ಪ್ರಯೋಜನವಿಲ್ಲ. ಶರಣಾಗತನ ವಿಷಯವಾಗಿ ನೀವು ಎಷ್ಟೇದೋಷವನ್ನು ಹೇಳಿದರೂ ಅದೊಂದೂ ನನ್ನ ಮನಸ್ಸಿಗೆ ಹಿಡಿಯದು. ಅದರಂತೆಯೇ ನಿಮಗೂ ನಾನು ಎಷ್ಟೇವಿಧದಿಂದ ಅವನು ನಿರ್ದೋಷಿಯೆಂಬುದನ್ನು ತೋರಿಸಿದರೂ, ನನ್ನಲ್ಲಿ ನಿಮಗಿರುವ ಪ್ರೇಮಾಂಧತೆಯಿಂದ ನಿಮಗಿರುವ ಭಯವು ನೀಗದು. (ಕಿಮೇಷ ರಜನೀಚರಃ) ನೀವು ಹೇಳಿದಂತೆ ಈತನು ರಾಕ್ಷಸನಾದುದರಿಂದ ನಮಗೆ ಬಾಧಕನಾಗಿಯೇ ಇರಲಿ! ಇದ್ದರೂ ಭಯವೇನು? (ಸೂಕ್ಷ್ಮಮಪ್ಯಹಿತಂಕರ್ತುಂ ಮಮಾ ಶಕ್ತಃ) ಈತನಿಗೆ ನನ್ನ ವಿಷಯದಲ್ಲಿಮಾತ್ರ ಅತಿಸೂಕ್ಷ್ಮವಾದ ಅಪಕಾರವನ್ನಾದರೂ ಮಾಡು

ಸುಗ್ರೀವಾ ? ಈ ರಾಕ್ಷಸನು ದುಷ್ಟನಾದರೇನು ? ಸಾಧುವಾದರೇನು ? ಇವನಿಗಾಗಿ ನಾವು ಹೆದರಬೇಕಾದುದೇನು? ನಮ್ಮನ್ನು ಇವನೇನು ಮಾಡಬಲ್ಲನು ? ಈತನು ನನಗಾಗಲಿ, ನನ್ನಕಡೆಯವರಿಗಾಗಲಿ, ಅಲ್ಪಸ್ವಲ್ಪವಾದರೂ, ಯಾವವಿಧದಿಂದಲೂ ಕೇಡನ್ನು ಮಾಡುವುದಕ್ಕೆ ಶಕ್ತನಲ್ಲ. ಈ ರಾಕ್ಷಸಜಾತಿಯೊಂದೇ ಅಲ್ಲದೆ, ಇವರಿಗಿಂತಲೂ ಕ್ರೂರರಾದ ಪಿಶಾಚಗಳಾಗಲಿ, ದಾನವರಾಗಲಿ, ಯಕ್ಷರಾಗಲಿ,ಲಂಕೆಯಲ್ಲಿರುವ ರಾಕ್ಷಸರೇ ಅಲ್ಲದೆ, ಭೂಮಿಯಲ್ಲಿರುವ ಬೇರೆ ರಾಕ್ಷಸರಾಗಲಿ ಒಂದಾಗಿ ಸೇರಿ ನನ್ನ ಮೇಲೆ ದಂಡೆತ್ತಿ ಬಂದರೂ,[1] ನನಗೆ ಅವರನ್ನು ಕೊಲ್ಲಬೇಕೆಂಬ ಇಚ್ಛೆಯು ಮಾತ್ರ ಹುಟ್ಟಿದರೆ,

---

ವುದಕ್ಕೆ ಸಾಧ್ಯವಲ್ಲ "ಒಂದುವೇಳೆ ನೀನು ಆತನಲ್ಲಿ ನಂಬಿಕೆಯಿಟ್ಟು, ಪ್ರಮಾದವಶದಿಂದಿದ್ದಾಗ ನಿನ್ನನ್ನು ಬಾಧಿಸಲಾರನೆ?" ಎಂದರೆ (ಕಥಂಚನ) ಹೇಗೂ ಶಕ್ತನಲ್ಲವೆಂದು ಭಾವವು.

1 ಇಲ್ಲಿ "ಅಂಗುಳ್ಯಗ್ರೇಣ ತಾನ್ ಹನ್ಯಾಮಿಚ್ಛನ್ ಹರಿಗಣೇಶ್ವರ" ಎಂದು ಮೂಲವು. ಇಲ್ಲಿ(ಇಚ್ಛನ್)ಎಂಬುದರಿಂದ,ನನಗೆ ಮಾತ್ರ ಇಚ್ಛೆಯುಂಟಾದರೆ ನನ್ನ ಬೆರಳಿನ ತುದಿಯಿಂದಲೇ ಅವರನ್ನು ತಿಕ್ಕಿಕೊಲ್ಲಬಲ್ಲೆನು. ನನಗೆ ಇಚ್ಛೆಯಿಲ್ಲವಿದ್ದರೆಮಾತ್ರ ನಾನು ಆ ಕಾರ್ಯವನ್ನು ನಡೆಸಲಾರೆನೇಹೊರತು ಶಕ್ತಿಯಿಲ್ಲದುದರಿಂದಲ್ಲ. "ಹಾಗೆ ನಿನ್ನ ಪ್ರಯತ್ನಕ್ಕೆ ಇಚ್ಛೆಯೇ ಕಾರಣವಾಗಿದ್ದ ಪಕ್ಷದಲ್ಲಿ, ನಮಗೆ ಅಷ್ಟು ಮಹಾಪರಾಧಿಯಾದ ಆ ರಾವಣನನ್ನು ಕೊಲ್ಲುವುದಕ್ಕೂ ನಿನಗೆ ಇಚ್ಛೆಯಿಲ್ಲವೆ?" ಎಂದರೆ ಅದಕ್ಕೂ ಇಚ್ಛೆಯೇ ಕಾರಣವು. ವಿಭೀಷಣನಂತೆ ಆ ರಾವಣನೂ ಇಲ್ಲಿಗೆ ಬಂದು ಈಗಲೂ ಶರಣಾಗತನಾದಪಕ್ಷದಲ್ಲಿ, ಆತನನ್ನೂ ಪ್ರಾಣದೊಡನೆ ಬಿಟ್ಟುಬಿಡಬೇಕೆಂಬುದೇ ಈಗಲೂ ನನ್ನ ಇಚ್ಛೆಯೆಂದು ಭಾವವು. ಮತ್ತು ಇಲ್ಲಿ(ಅಂಗುಳ್ಯ ಗ್ರೇಣ ತಾನ್ ಹನ್ಯಾಮಿಚ್ಛನ್) ಎಂಬುದರಿಂದ ನಮ್ಮ ವೈರಿಗಳನ್ನು ಕೊಲ್ಲುವುದಕ್ಕೆ ಇಲ್ಲಿ ನಾವು ಕರೆತಂದಿರುವ ಸೈನ್ಯಗಳೂ ಬೇಕಾದುದಿಲ್ಲ! ನನ್ನಲ್ಲಿರುವ ಶಸ್ತ್ರಾಸ್ತ್ರಗಳೂ ಬೇಕಾದುದಿಲ್ಲ! ಅಥವಾ ಈ ನನ್ನ ಭುಜಬಲವೂ ಅವಶ್ಯವಿಲ್ಲ! ಈ ನನ್ನ ಒಂದು ಬೆರಳೇ ಸಾಕು! ಆ ಬೆರಳಿನಲ್ಲಿಯೂ ಏಕದೇಶವಾದ ಅದರ ಕೊನೆಯೇ ಸಾಕು! ಕೊನೆಗೆ ಆ ಅಲ್ಪಪ್ರಯತ್ನವೂ ಬೇಕಾದುದಿಲ್ಲ. ನನ್ನ ಮನಸ್ಸಂಕಲ್ಪವೇ ಸಾಕೆಂದು ರಾಮನು ಸುಗ್ರೀವನಿಗೆ ತನ್ನ ಸರ್ವಶಕ್ತತ್ವವನ್ನು ತೋರಿಸಿದುದಾಗಿ ಗ್ರಾಹ್ಯವು.(ಹರಿಗಣೇಶ್ವರ)ಒಂದುವೇಳೆನಿನಗೆ ನನ್ನಲ್ಲಿರುವ ಪ್ರೇಮಾಂಧತೆಯಿಂದ ನಾನು ಶಕ್ತನೆಂಬ ನಂಬಿಕೆಯು ಹುಟ್ಟದಿದ್ದರೂ, ಅನೇಕ ವಾನರರಸಹಾಯಸಂಪತ್ತಿಯುಳ್ಳ ನಿನ್ನ ಬಲದಲ್ಲಿ ನನಗೆ ಪೂರ್ಣವಾದ ನಂಬಿಕೆಯುಂಟೆಂದೂ ಭಾವವು.

ಅವರೆಲ್ಲರನ್ನೂ ಈ ನನ್ನ ಕಿರುಬೆರಳಿನ ತುದಿಯಿಂದಲೇ ಅನಾಯಾಸವಾಗಿ ಧ್ವಂಸಮಾಡುವೆನೆಂದು ತಿಳಿ! ಇದಕ್ಕಾಗಿ ನಾನು ಆಯುಧಾದಿಸಹಾಯಗ ಳನ್ನೂ ಅಪೇಕ್ಷಿಸುವವನಲ್ಲ. ಸುಗ್ರೀವಾ?¹ಪೂರ್ವದಲ್ಲಿ ಧರ್ಮಾಧಿಕಾರವಿಲ್ಲದ

---

1 ಇಲ್ಲಿ ''ಶ್ರೂಯತೇಹಿ ಕಪೋತೇನ ಶತ್ರುಶ್ಶರಣ ಮಾಗತ: । ಅರ್ಚಿತಶ್ಚ ಯ ಥಾನ್ಯಾಯಂ ಸ್ವೈಶ್ಚ ಮಾಂಸೈರ್ನಿಮಂತ್ರಿತ.॥" ಎಂದು ಮೂಲವು. ಇದರಿಂದ ರಾಮ ನು ಶತ್ರುವನ್ನು ನಿಗ್ರಹಿಸುವುದಕ್ಕೆ ತನಗೆ ಶಕ್ತಿಯಿರಲಿ, ಇಲ್ಲದಿರಲಿ, ತನ್ನ ಪ್ರಾಣವೇ ಹೋಗುವಹಾಗಿದ್ದರೂ, ಶರಣಾಗತನನ್ನು ಮಾತ್ರ ಪರಿಗ್ರಹಿಸಿಯೇ ತೀರಬೇಕೆಂಬುದಕ್ಕೆ ಕಪೋತಾಖ್ಯಾನವನ್ನು ಪ್ರಮಾಣವಾಗಿ ಹೇಳುವನು (ವಿಶೇಷಾರ್ಥವು) (ಶ್ರೂಯತೇ ಹಿ) ನೀವು ನಾವೆಲ್ಲರೂ ಈ ಇತಿಹಾಸವನ್ನು ಈಗಲೂ ಕೇಳುತ್ತಿರುವೆವೆಂದು ಭಾವವು. ಇಲ್ಲಿ(ಶ್ರೂಯತೇ)ಎಂಬುದರಿಂದ,ಈ ವಿಷಯವು ಶ್ರುತಿಪ್ರಮಾಣದಂತೆ ಸರ್ವಜನಕ್ಕೂ ಉ ಪಾದೇಯವೆಂದೂ ಸೂಚಿತವು. (ಕಪೋತೇನ) ಶಾಸ್ತ್ರಾಧಿಕಾರವಿಲ್ಲದ ಒಂದು ತಿರ್ಯಕ್ಕೂ ಕೂಡ ವಿಚಾರವಿಲ್ಲದೆ ಈ ಧರ್ಮವನ್ನನುಷ್ಠಿಸಿರುವಾಗ, ಇನ್ನು ಜ್ಞಾನಿಗಳಾದ ನಮಗೆ ಹೇಳಬೇಕಾದುದೇನು? (ಕಪೋತೇನ) ಆ ಪಾರಿವಾಳವು ತನ್ನನ್ನು ತಡೆಯುವವರು ಬೇ ರೊಬ್ಬರೂ ಇಲ್ಲದೈತಾನು ಏಕಾಕಿಯಾಗಿದ್ದುದರಿಂದಲೇ ಶರಣಾಗತರಕ್ಷಣವೆಂಬ ಈ ಸ ತ್ಕಾರ್ಯವು ಅದಕ್ಕೆ ಸುಲಭವಾಗಿ ಸಿದ್ಧಿಸಿಹೋಯಿತು. ಇಲ್ಲಿ ನನಗಾದರೋ ನಿಮ್ಮಂತಹ ಪ್ರತಿಬಂಧಕಗಳು ಸುತ್ತಿಮುತ್ತಿ ಸೇರಿರುವುದರಿಂದ, ನನ್ನ ಈ ಉದ್ದೇಶವನ್ನು ಸುಲಭ ವಾಗಿ ನೆರವೇರಿಸಿಕೊಳ್ಳುವುದಕ್ಕೆ ಇಲ್ಲದೇ ಹೋಯಿತೆಂದು ಈ ಏಕವಚನದ ಸ್ವಾ ರಸ್ಯವು. ( ಶತ್ರು; ) ಆ ಪಾರಿವಾಳಕ್ಕೆ ಬೇಡನು ಸಾಕ್ಷಾಚ್ಛತ್ರುವಾಗಿದ್ದರೂ ಅ ದನ್ನೂ ವಿಚಾರಿಸದೆ, ಆ ಪಕ್ಕಿಯು ಅವನನ್ನು ಕಾಪಾಡಿತು. ವಿಭೀಷಣನು ನಮ್ಮ ಶತ್ರುವಿಗೆ ಸಂಬಂಧಿಸಿದವನುಮಾತ್ರವೇ ಹೊರತು ಸಾಕ್ಷಾಚ್ಛತ್ರುವಲ್ಲ. ಹೀಗಿದ್ದ ರೂ ನಾವು ಈ ವಿಷಯದಲ್ಲಿ ವಿಚಾರಮಾಡುತ್ತಿರುವವಲ್ಲವೆ ! ತನಗೆ ಸಹಜ ಶ ತ್ರುವಾದವನನ್ನೇ ಒಂದು ತಿರ್ಯಕ್ಕು ಹಾಗೆ ರಕ್ಷಿಸಿರುವಾಗ ಶತ್ರುಸಂಬಂಧಿಮಾತ್ರ ನನ್ನು ನಮ್ಮಂತವರು ರಕ್ಷಿಸುವುದಕ್ಕೆ ಹೆದರಿದರೆ, ನಮ್ಮ ಪೌರುಷವೇನೆಂದು ಭಾವ ವು. (ಶರಣಮಾಗತ:) ಶರಣವೆಂದರೆ ವಾಸಸ್ಥಲವು. ಆ ಬೇಡನು ಪಾರಿವಾಳವು ವಾಸ ಮಾಡುತಿದ್ದ ಮರದಕೆಳಗೆ ದೈವಿಕವಾಗಿ ಬಂದುನಿಂತನೇಹೊರತು, ಬಾಯಿಬಿಟ್ಟು ಅದ ನ್ನು ಪ್ರಾರ್ಥಿಸಿದವನಲ್ಲ. ಅದರೆ ಆತನು ತನಗುಂಟಾದ ಚಳಿಯನ್ನು ತಡೆಯಲಾರದೆ, (ಸೋಂಽಜಲಿಂಶಿರಸಾ ಬಧ್ವಾವಾಕ್ಯಮಾಹ ವನಸ್ಪತಿಂ।ಶರಣಂ ಹಿ ಗತೋಽಸ್ಮ್ಯದ್ಯ ದೇವ ತಾಮಿಹ ವಾಸಿನೀಂ) ಎಂದು ಅಲ್ಲಿನ ವನದೇವತೆಯನ್ನುಮಾತ್ರವೇಕುರಿತು ಪ್ರಾರ್ಥಿಸಿ

ಕೇವಲತಿರ್‍ಯಕ್ಕೆನಿಸಿದ ಒಂದುಪಾರಿವಾಳವೂಕೂಡ, ತನಗೆ ಸಹಜವೈರಿಯಾದ ಬೇಡನೊಬ್ಬನು ಚಳಿಯಿಂದ ನಡುಗುತ್ತ,ತಾನಿದ್ದ ಗಿಡದಮರೆಗೆ ಬಂದು ಸಿಂತುದನ್ನು ನೋಡಿ,ಅವನಿಗೆ ಬೇಕಾದ ಉಪಚಾರಗಳನ್ನು ನಡೆಸಿ,ತನ್ನ ದೇಹದ ಮಾಂಸವನ್ನೂ ಅವನ ಆಹಾರಕ್ಕಾಗಿ ಒಪ್ಪಿಸಿತೆಂಬ ವೃತ್ತಾಂತವನ್ನು ನಾವೆಲ್ಲರೂ ಕೇಳಿಯೇ ಇರುವೆವಲ್ಲವೆ? [1]ಕೇವಲತಿರ್‍ಯಗ್ಜಂತುವಾದ ಪಾರಿವಾಳವೂ

---

ದನು. ಈ ಮಾತನ್ನು ಕೇಳಿದಮಾತ್ರದಲ್ಲಿಯೇ ಆ ಹಕ್ಕಿಯು ಸಹಿಸಲಾರದೆ, ಅವನನ್ನು ರಕ್ಷಿಸಿತು. ಇಲ್ಲಿ ನಾವಾದರೋ (ತ್ಯಕ್ತ್ವಾಪುತ್ರಾಂಶ್ಚ ದಾರಾಂಶ್ಚ ರಾಘವಂ ಶರಣಂಗತ:) ಎಂದು ತನ್ನ ಬಂಧುವರ್ಗವನ್ನೂ ಬಿಟ್ಟು ನಮ್ಮ ಹೆಸರನ್ನು ಹಿಡಿದು ಮರೆಹೊಕ್ಕ ಈ ವಿಭೀಷಣನನ್ನು ಕುರಿತು ವಿಚಾರಮಾಡುತ್ತಿರುವೆವು! ಅದೂಹಾಗಿರಲಿ! (ಅರ್ಚಿತಶ್ಚ) ಆ ಬೇಡನು ತನಗೆ ಸಹಜಶತ್ರುವಾಗಿದ್ದರೂ, ತನ್ನ ಭಾರ್‍ಯೆಯನ್ನು ಕೊಂದುದರಿಂದ ಮಹಾಪರಾಧಿಯಾಗಿದ್ದರೂ, ಅತಿಥಿಯಾಗಿ ಬಂದ ಆತನನ್ನು ದೇವತೆಯಂತೆಯೇ ತಿಳಿದು, ಅವನ ಚಳಿಯನ್ನು ನೀಗಿಸುವುದಕ್ಕಾಗಿ ಬೆಂಕಿಯನ್ನುರಿಸಿ ಆರಾಧಿಸಿತು. ಇಲ್ಲಿ ನಾವಾದರೋ (ವಧ್ಯತಾಮೇಷ ತೀವ್ರೇಣದಂಡೇನಸಚಿವೈಸ್ಸಹ) ಎಂದು ಅವನನ್ನೂ ಅವನ ಮಂತ್ರಿಗಳನ್ನೂ ಕೊಲ್ಲುವುದಕ್ಕೆ ಪ್ರಯತ್ನಿಸುತ್ತಿರುವೆವು. (ಯಥಾನ್ಯಾಯಂ) ಹಾಗೆ ಆಪಕ್ಷಿಯು ಬೇಡನನ್ನು ರಕ್ಷಿಸಿ ಸತ್ಕರಿಸಿದುದೂ ಕೂಡ ನ್ಯಾಯ ಪ್ರಾಪ್ತವೆಂಬುದಕ್ಕಾಗಿಯೇ ಹೊರತು ಪ್ರತಿಷ್ಠಾಕಾಂಕ್ಷೆಯಿಂದಲ್ಲ. (ಸ್ವೈಶ್ಚಮಾಂಸೈರ್ನಿಮಂತ್ರಿತ:) ಇಲ್ಲಿ ಸ್ವಶಬ್ದವು, ಆತ್ಮಸ್ವರೂಪವಲ್ಲಿಯೂ,ಸ್ವಕೀಯವಾದುದರಲ್ಲಿಯೂ ವರ್ತಿಸುವುದು. ಪಕ್ಷಿಗಳಿಗೆ ದೇಹಾತ್ಮಭೇದವು ತಿಳಿಯದುದರಿಂದ ದೇಹವೇ ಆತ್ಮವೆಂದು ಭ್ರಮಿಸಿ, ತನ್ನ ದೇಹವನ್ನೊಪ್ಪಿಸಿತು. ದೇಹಾತ್ಮಬೇಧವಿವೇಕವುಳ್ಳ ನಾವೇ ಹೀಗೆ ಸಂದೇಹಿಸುವುದುಂಟೆ? ಎಂದು ಭಾವವು.

ಇಲ್ಲಿ "ಸಹಿ ತಂ ಪ್ರತಿಜಗ್ರಾಹ ಭಾರ್‍ಯಾಹರ್ತಾರಮಾಗತಂ। ಕಪೋತೋ ವಾನರಶ್ರೇಷ್ಠಕಿಂಪುನರ್ಮದ್ವಿಧೋ ಜನ:" ಎಂದು ಮೂಲವು. ವಿಶೇಷಾರ್ಥವು:—(ಸ:) ನಮ್ಮಂತೆ ಧರ್ಮಾನುಷ್ಠಾನವನ್ನರಿತ ಮನುಷ್ಯಜಾತಿಯಲ್ಲಿಯೂ ಹುಟ್ಟಿದುದಲ್ಲ! ಶರಣ್ಯವಾದ ರಘುವಂಶಾದಿಗಳಲ್ಲಿಯೂ ಹುಟ್ಟಿದುದಲ್ಲ! ಹೀಗಿದ್ದರೂ ಆ ಪಾರಿವಾಳವು(ತಂ) ಹಾಗೆ ತನಗೆ ಸಹಜಶತ್ರುವಾಗಿದ್ದರೂ (ಭಾರ್‍ಯಾಹರ್ತಾರಂ) ತನ್ನ ಕಷ್ಟಸುಖಗಳಿಗೆ ಸಮಭಾಗಿನಿಯಾದ ತನ್ನ ಪತ್ನಿಯನ್ನೇ ಕೊಂದವನಾಗಿದ್ದರೂ, ಇಲ್ಲಿ ಭಾರ್‍ಯಾಹರಣವನ್ನು ಸೂಚಿಸುವುದರಿಂದ,ತಿರ್‍ಯಕ್ಜಂತುವಾದ ಆಪಾರಿವಾಳವೂಕೂಡ ತನ್ನ ಪತ್ನಿಯನ್ನು ಕೊಂದ ಬೇಡನನ್ನು ಎಷ್ಟೋಪ್ರೀತಿಯಿಂದ ಪರಿಗ್ರಹಿಸಿತಲ್ಲವೆ ! ಈ ಶಿಷ್ಟಾಚಾರವನ್ನ

ಕೂಡ,ಆಗಲೇ ತನ್ನ ಭಾರ್ಯೆಯನ್ನು ಕೊಂದು ಮಹಾಪರಾಧವನ್ನು ಮಾಡಿದ

---

ನುಸರಿಸಿ, ಈಗ ನಾನು, ನನ್ನ ಪತ್ನಿಯನ್ನಪಹರಿಸಿದ ಆ ರಾವಣನೇ ಸಾಕ್ಷಾತ್ತಾಗಿ ಬಂದರೂ ಪರಿಗ್ರಹಿಸಿ ರಕ್ಷಿಸಬೇಕಾದುದೇ ನ್ಯಾಯವು. (ಆಗತಂ) ಆ ಪಾರಿವಾಳವು ತಾನಿದ್ದ ಮರದ ಕೆಳಕ್ಕೆ ಆ ಬೇಡನು ಬಂದು ನಿಂತುದನ್ನೇ ಅವನನ್ನು ರಕ್ಷಿಸುವುದಕ್ಕೆ ಹೇತುವಾಗಿ ಗ್ರಹಿಸಿತೇಹೊರತು ಆ ಬೇಡನು ವೃಕ್ಷದೇವತೆಯನ್ನು ಕುರಿತು, "ಶರಣು"ಎಂದು ಹೇಳಿದ ಮಾತಾದರೂ ಅದರ ಕಿವಿಗೆ ಬಿಳಲಿಲ್ಲ. ಈ ವಿಭೀಷಣನಂತೆ ದೈನ್ಯಸೂಚಕವಾದ ಒಂದು ಮಾತನ್ನಾದರೂ ಆ ಬೇಡನು ಕಪೋತದ ಮುಂದೆ ಆಡಿದವನಲ್ಲ. ಹಾಗಿದ್ದರೂ ಪಾರಿವಾಳವು ಅವನನ್ನು ರಕ್ಷಿಸಿರುವಾಗ,ಹೀಗೆ ನಮ್ಮಲ್ಲಿ ಶರಣಾಗತನಾಗಿಯೇ ಬಂದು ದೈನ್ಯದಿಂದ ಬೇಡುವವನನ್ನು ನಾವು ಪರಿಗ್ರಹಿಸದಿರುವುದುಂಟೆ? (ವಾನರಶ್ರೇಷ್ಠ)ವ್ಯಾಘ್ರವಾನರಸಂವಾದವನ್ನಾದರೂ ನೀನು ಕೇಳಿಲ್ಲವೆ! ಅದರಲ್ಲಿ ಸಾಮಾನ್ಯವಾದ ಒಂದು ಕಪಿಯು ತನ್ನಲ್ಲಿ ಮಹಾಪರಾಧಿಯಾಗಿದ್ದರೂ ಮರೆಬಿದ್ದವನನ್ನು ರಕ್ಷಿಸಲಿಲ್ಲವೆ!ವಾನರಶ್ರೇಷ್ಠನಾದ ನೀನು ಇದು ನಿನಗೆ ಸ್ವಜಾತಿಧರ್ಮವೆಂಬುದನ್ನಾದರೂ ಭಾವಿಸಿ ಇವನನ್ನು ರಕ್ಷಿಸಬೇಕಲ್ಲದೆ, ಒಂದುವೇಳೆ ನಾನು ಇದಕ್ಕೊಪ್ಪದಿದ್ದರೂ ನೀನೇ ನನ್ನನ್ನು ತಿದ್ದಬೇಕಲ್ಲವೆ? (ಕಿಂಪುನರ್ಮದ್ವಿಧೋ ಜನಃ) ಒಂದು ತಿರ್ಯಗ್ಜಂತುವಿನ ಅನುಷ್ಠಾನವೇ ಹೀಗಿರುವಾಗ, ಶರಣಾಗತರಕ್ಷಣೆಯಲ್ಲಿ ಪ್ರಸಿದ್ಧವಾದ ರಘುವಂಶದಲ್ಲಿ ಹುಟ್ಟಿದ ನನ್ನ ವಿಷಯದಲ್ಲಿ ಹೇಳಬೇಕಾದುದೇನು? (ಮದ್ವಿಧಃ) "ಷಷ್ಟಿರ್ವರ್ಷಸಹಸ್ರಾಣಿ ಲೋಕಸ್ಯ ಚರತಾ ಹಿತಂ" ಎಂಬಂತೆ ಅರುವತ್ತುಸಾವಿರ ವರುಷಗಳವರೆಗೆ ಲೋಕರಕ್ಷಣದಲ್ಲಿಯೇ ದೀಕ್ಷಿತನಾದ ದಶರಥನಿಗೆ ಮಗನಾಗಿ, ವಸಿಷ್ಠವಿಶ್ವಾಮಿತ್ರರಿಗೆ ಶಿಷ್ಯನಾಗಿ, ಮಹಾಯೋಗಿಯೆನಿಸಿಕೊಂಡ ಜನಕನೊಡನೆಯೂ ಸಂಬಂಧವನ್ನು ಬೆಳೆಸಿದವನಾಗಿ"ರಾಮೋ ವಿಗ್ರಹವಾನ್ ಧರ್ಮಃ"ಎಂಬಂತೆ ಧರ್ಮಮೂರ್ತಿಯೆಂದು ಲೋಕಪ್ರಸಿದ್ಧನಾದ ನಾನೇ ಹೀಗೆ ಮರೆಹೊಕ್ಕುಬಂದವನನ್ನು ನಿಗ್ರಹಿಸಿಬಿಟ್ಟಪಕ್ಷದಲ್ಲಿ, ಇನ್ನು ಲೋಕವೆಂತದಾಗುವುದು? (ಕಿಂಪುನರ್ಮದ್ವಿಧೋಜನಃ) ಸುಗ್ರೀವಾ ! ಇನ್ನು ಹೆಚ್ಚಾಗಿ ಹೇಳಿದುದರಿಂದೇನು "ದೋಷೋ ಯದ್ಯಪಿ ತಸ್ಯಸ್ಯಾತ್" ಎಂದು ದೋಷವಿದ್ದರೂ ಶರಣಾಗತನನ್ನು ಬಿಡಬಾರದೆಂದು ನಾನು ಹೇಳಿದ ಅತಿಶಯವನ್ನು ಈ ತಿರ್ಯಗ್ಜಂತುವೇ ಮೊದಲೇ ಸಾಧಿಸಿಬಿಟ್ಟಿರುವುದು. ಇನ್ನುಮೇಲೆ ನಾನೂ ಅದನ್ನೇ ಮಾಡಿದರೂ, ಈ ತಿರ್ಯಕ್ಕು ಮಾಡಿದುದನ್ನೇ ನಾನೂ ಪುನಃ ಮಾಡಿದಂತಾಗುವುದೇಹೊರತು ಅದರಿಂದ ನನಗೇನೂ ಮೇಲ್ಮೆಯಿಲ್ಲವೆಂದೂ ಭಾವವು.

ರಾಮನು ಈ ಮೇಲಿನ ಇತಿಹಾಸವನ್ನು ಉದಾಹರಿಸಿದುದರ ಮುಖ್ಯಭಾವವೇನೆಂದರೆ:— ಸಹಜವಾದ ಅಜ್ಞಾನವುಳ್ಳ ಒಂದು ಪಾರಿವಾಳವು, ತನಗೆ ಸಾಕ್ಷಾಚ್ಛತ್ರು

ಬೇಡನು ತನ್ನ ಬಳಿಗೆ ಬಂದೊಡನೆ, ಆವನನ್ನು ಪ್ರತಿಗ್ರಹಿಸಿತಲ್ಲವೆ ? ಇನ್ನು ನನ್ನಂತವನು ಮರೆಹೊಕ್ಕು ಬಂದವರಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಹೇಳಬೇಕಾದುದೇನು ?[1] ಕಣ್ವಮಹರ್ಷಿಗೆ ಪುತ್ರನಾಗಿಯೂ, ಸತ್ಯವಾದಿಯಾಗಿಯೂ ಇದ್ದ ಕಂಡುಮಹಾಮುನಿಯು, ಪೂರ್ವದಲ್ಲಿ ಶರಣಾಗತಿಧರ್ಮಬೋಧಕವಾದ ಒಂದುಗಾಥೆಯನ್ನು ಹೇಳಿರುವನು. ಅದನ್ನೂ ತಿಳಿ

---

ವಾದ ಬೇಡನೊಬ್ಬನು ಚಳಿಯಿಂದ ಪೀಡಿತನಾಗಿ ತಾನಿದ್ದ ಮರದ ಕೆಳಗೆ ಬಂದು ನಿಂತ ಮಾತ್ರದಲ್ಲಿಯೇ, ಆವನಮುಂದೆ ಒಣಗಿದ ಹುಲ್ಲುಕಡ್ಡಿಗಳನ್ನು ತಂದು ಸೇರಿಸಿ, ಬೆಂಕಿಯನ್ನುರಿಸಿ, ಆತನಿಗೆ ಶೀತಬಾಧೆಯನ್ನು ನಿವರ್ತಿಸಿದುದಲ್ಲದೆ, ಅವನ ಹಸಿವನ್ನಾರಿಸುವುದಕ್ಕಾಗಿ ತನ್ನ ದೇಹದ ಮಾಂಸವನ್ನೇ ಚೆನ್ನಾಗಿ ಪಚನಮಾಡಿ ಅವನಿಗೊಪ್ಪಿಸಬೇಕೆಂದು, ತಾನೂ ಆ ಚಿತೆಯಲ್ಲಿ ಬಿದ್ದಿತು. ಹೀಗೆ ಅಜ್ಞಾನಜಂತುವಾದ ಕೇವಲಪಕ್ಷಿಯೊಂದು, ತನಗೆ ಪ್ರತ್ಯಕ್ಷ ಶತ್ರುವಾಗಿದ್ದರೂ ತನ್ನ ಮರೆಗೆ ಬಂದವನನ್ನು ಸತ್ಕರಿಸುವುದಕ್ಕಾಗಿ ತನ್ನ ಪ್ರಾಣವನ್ನೇ ಒಪ್ಪಿಸಿರುವುದು! ಹೀಗಿರುವಾಗ ಜ್ಞಾನಿಗಳಾಗಿಯೂ, ಶರಣಾಗತರಕ್ಷಣೆಯಿಂದ ಪ್ರಸಿದ್ಧಿಹೊಂದಿದ ಇಕ್ಷ್ವಾಕುಕುಲದಲ್ಲಿ ಜನಿಸಿದವರಾಗಿಯೂ, ಎಷ್ಟೋ ವಿರೋಧಗಳು ಬಂದರೂ ಸಮರ್ಧಿಸತಕ್ಕ ಶಕ್ತಿಯುಳ್ಳವರಾಗಿಯೂ ಇರುವ ನನ್ನಂತವರು, ಶರಣಾಗತರ ವಿಷಯದಲ್ಲಿ ಹೇಗೆ ನಡೆಯಬೇಕೆಂಬುದನ್ನು ಕೇಳಬೇಕೆ? ಇದರಮೇಲೆ ಈಗ ನಮ್ಮಲ್ಲಿಗೆ ಬಂದಿರುವವನೂ ಶತ್ರುಸಂಬಂಧವುಳ್ಳವನುಮಾತ್ರವೇ ಹೊರತು ಬೇಡನಂತೆ ಸಾಕ್ಷಾಚ್ಛತ್ರುವಲ್ಲ! ಭಾರ್ಯೆಯನ್ನಪಹರಿಸಿದವನು ಮಾತ್ರವೇ ಹೊರತು ಬೇಡನಂತೆ ಭಾರ್ಯೆಯನ್ನು ಕೊಂದವನಲ್ಲ! ಇವನು ತಾನಾಗಿ ನಾವಿದ್ದಕಡೆಗೆ ಬಂದು ನಮ್ಮನ್ನು ಬಾಯಿಬಿಟ್ಟು ಪ್ರಾರ್ಥಿಸುತ್ತಿರುವನೇಹೊರತು ಆ ಬೇಡನಂತೆ ಸುಮ್ಮನೆ ಬಂದು ನಿಂತವನಲ್ಲ! ಕೇವಲತಿರ್ಯಕ್ಕಾದ ಪಾರಿವಾಳವು, ಹಾಗೆ ದೋಷಭೂಯಿಷ್ಠನಾದ ಆ ಬೇಡನನ್ನು ರಕ್ಷಿಸುವುದಕ್ಕಾಗಿ ತನ್ನ ಪ್ರಾಣವನ್ನೇ ಒಪ್ಪಿಸಿರುವಾಗ, ಜ್ಞಾನಿಗಳಾದ ನಾವು ಗುಣಭೂಯಿಷ್ಠನಾದ ಇವನನ್ನು ರಕ್ಷಿಸುವುದಕ್ಕಾಗಿ ನಡೆಸಬೇಕಾದ ಅತ್ಯಲ್ಪಕಾರ್ಯಕ್ಕೆ ಹಿಂಜರಿಯುವುದೆಂದರೇನು?" ಎಂದು ಭಾವವು,

1 ಇದರಮೇಲೆ "ಶಾಸ್ತ್ರಾಧಿಕಾರವಿಲ್ಲದ ಈ ತಿರ್ಯಗ್ಜಂತುಗಳ ಅನುಷ್ಠಾನವೆ ನಮಗೆ ಉಪಾದೇಯವಲ್ಲ. ಆ ತಿರ್ಯಕ್ಕುಗಳು ತಮ್ಮ ಸ್ವಭಾವಾನುಗುಣವಾಗಿ ಮಾಡಿದುದು ಧರ್ಮವೆನಿಸುವುದೆ? ಶಾಸ್ತ್ರವಿಧಿಯನ್ನನುಸರಿಸಿ ನಡೆಸುವುದೇ ಧರ್ಮವೆನಿಸುವುದು. ಹಾಗೆ ಇದಕ್ಕೆ ಶಾಸ್ತ್ರಚೋದನವೆಲ್ಲಿ?" ಎಂದು ಸುಗ್ರೀವನು ಆಕ್ಷೇಪಿಸಬಹುದೆಂಬುದಕ್ಕಾಗಿ, ರಾಮನು ಈ ವಿಷಯದಲ್ಲಿ ಆಪ್ತವಾಕ್ಯಪ್ರಮಾಣವೂ ಉಂಟೆಂದು ತೋರಿ

ಸುವೆನು ಕೇಳು?' ಶರಣಾಗತನಾಗಿ ಬಂದು ದುಃಖದಿಂದ ಕೈಜೋಡಿಸಿ ನಿಂತ ವನು,ತನಗೆ ಶತ್ರುವಾಗಿದ್ದರೂ ಅವನನ್ನು ಕೊಲ್ಲಬಾರದು!ಹಾಗಿಲ್ಲದಿದ್ದರೆ ಅಂ

---

ಸುತ್ತ ಕಂಡುಮುನಿಯ ವಾಕ್ಯವನ್ನು ತಿಳಿಸುವೆನು. ಇದರಿಂದ ಜ್ಞಾನಹೀನವಾದ ತಿರ್ಯ ಕ್ಕನ್ನೂ, ಜ್ಞಾನಿಗಳಲ್ಲಿ ಮೇಲೆನಿಸಿಕೊಂಡ ಮಹರ್ಷಿಯನ್ನೂ ಈ ಶರಣಾಗತರಕ್ಷಣಕ್ಕೆ ಪ್ರಮಾಣವಾಗಿ ತೋರಿಸಿರುವುದರಿಂದ,ಶರಣಾಗತರಕ್ಷಣವೆಂಬ ಧರ್ಮವು ಕೇವಲ ಚೈತನ್ಯಪ್ರ ಯುಕ್ತವಾದುದೆಂದೂ,ಆ ಚೇತನವಸ್ತುವಿಗೆ ಪಾರಿವಾಳದಂತೆ ಜ್ಞಾನಸಂಕೋಚವಿದ್ದರೂ, ಋಷಿಯಂತೆ ಜ್ಞಾನವಿಕಾಸವಿದ್ದರೂ ಒಂದೇಹೊರತು, ಈ ಸಂಕೋಚವಿಕಾಸಗಳು ಈ ವಿಷಯದಲ್ಲಿ ತಾರತಮ್ಯವನ್ನು ಹುಟ್ಟಿಸುವುದಿಲ್ಲವೆಂದೂ ಭಾವವು.

I ಇಲ್ಲಿ "ಬದ್ಧಾಂಜಲಿಪುಟಂ ದೀನಂ ಯಾಚಂತಂ ಶರಣಾಗತಂ । ನ ಹನ್ಯಾದಾ ನೃಶಂಸ್ಯಾರ್ಥಮಪಿ ಶತ್ರುಂ ಪರಂತಪ" ಎಂದು ಮೂಲವು. ಇದರಿಂದ ತನ್ನಲ್ಲಿ ಮರೆ ಹೊಕ್ಕು ಬಂದವನು ಕೇವಲಶತ್ರುವಾಗಿದ್ದರೂ, ಪೂರ್ಣವಾಗಿ ಶರಣಾಗತಿಯನ್ನು ನ ಡೆಸವಿದ್ದರೂ ಅವನನ್ನು ಹಿಂಸಿಸಬಾರದೆಂಬರ್ಥವು ಸೂಚಿಸಲ್ಪಡುವುದು. (ಬಂದ್ಧಾಂ ಜಲಿಪುಟಂ ದೀನಂ ಯಾಚಂತಂ) ಕಾಯಿಕವಾದ ಅಂಜಲಿಯನ್ನಾಗಲಿ, ಮಾನಸಿಕವಾದ ಆದರವನ್ನಾಗಲಿ, ವಾಚಿಕವಾದ ಪ್ರಾರ್ಥನೆಯನ್ನಾಗಲಿ, ಈ ಮೂರರಲ್ಲಿ ಯಾವುದೊಂ ದನ್ನು ಮಾಡಿದರೂ ಅದನ್ನೇ ಶರಣಾಗತಿಯೆಂದು ಗ್ರಹಿಸಬಹುದು. ಅಥವಾ (ಶರ ಣಾಗತಂ ) ಅಂಜಲಿ ಮೊದಲಾದುವೂ ಅಮುಖ್ಯಗಳು. ತಾನು ಶರಣಾಗತನೆಂಬ ಅಧ್ಯವಸಾಯರೂಪವಾದ ಜ್ಞಾನವಿಶೇಷವೇ ಮುಖ್ಯವೆಂದೂ ಭಾವವು. ( ಶತ್ರು ಮಪಿ ನಹನ್ಯಾತ್)ಹಿಂದೆ ಹೇಳಿದಂತೆ ಗೌಣವಾಗಿಯೋ, ಮುಖ್ಯವಾಗಿಯೋ, ಯಾವ ರೀತಿಯಾಗಿ ಶರಣಾಗತಿಯನ್ನು ಮಾಡಿದರೂ, ಅವನನ್ನು ರಕ್ಷಿಸಬೇಕಾದುದುಮಾತ್ರವೇ ಹೊರತು,ಅವನಲ್ಲಿ ಶತ್ರುತ್ವವಿರುವುದೆಂದು ಹಿಂಸಿಸಬಾರದು. "ಇದೇನು ಪಾಪನಿವೃತ್ತಿ ಗಾಗಿಯೇ?ಪುಣ್ಯಸಿದ್ಧಿಗಾಗಿಯೋ?" ಎಂದರೆ,ಇವೊಂದಕ್ಕೂ ಅಲ್ಲ. (ಆನೃಶಂಸ್ಯಾರ್ಥಂ) ಲೋಕವು ತನ್ನನ್ನು ಕ್ರೂರಕರ್ಮನೆಂದು ನಿಂದಿಸದಿರುವುದಕ್ಕಾಗಿಯೇ ಹೀಗೆ ನಡೆಸಬೇಕೇ ಹೊರತು ಬೇರೆಯಲ್ಲವು. ಇಲ್ಲಿ ಕ್ರಮವಾಗಿ"ಬದ್ಧಾಂಜಲಿಪುಟಂ,ದೀನಂ,ಯಾಚಂತಂ ಶರ ಣಾಗತಂ" ಎಂಬ ವಿಶೇಷಣಗಳಿಂದ ತೋರುವುದೇನೆಂದರೆ; ಮರೆಹೊಕ್ಕು ಬಂದವನಲ್ಲಿ ಅನುಕೂಲವಾದ ಬುದ್ಧಿಯಾಗಲಿ, ಮಾತಾಗಲಿ, ನಡತೆಯಾಗಲಿ, ಯಾವುದೊಂದಿಲ್ಲದ್ದ ರೂ, ಅವನನ್ನು ರಕ್ಷಿಸುವುದಕ್ಕೆ "ಅಂಜಲಿಃ ಪರಮಾ ಮುದ್ರಾ ಕ್ಷಿಪ್ರಂ ದೇವಪ್ರಸಾದಿ ನೀ" ಎಂಬುದಾಗಿ ದೇವತೆಗಳಿಗೂ ಕ್ಷಣಮಾತ್ರದಲ್ಲಿ ದಯೆಯನ್ನು ಹುಟ್ಟಿಸುವ ಅವನ ಅಂಜಲಿಯೊಂದೇ ಸಾಕು! ಆ ಅಂಜಲಿಬಂಧಮಾತ್ರವೂ ಇಲ್ಲದೆ ಹೋದರೂ, ಕಾರ್ಪಣ್ಯ ವನ್ನು ತೋರಿಸುವ ಅತನ ದೀನತ್ವವೇ ಸಾಕು! ಅಂಜಲಿಯನ್ನೂ ಮಾಡದೆ, ಕಾರ್ಪಣ

ತವನಿಗ್ಕೈ ಕ್ರೂರನೆಂಬ ಲೋಕಾಪವಾದವು ಎಂದಿಗೂ ತಪ್ಪದು.[1] ನಿಜವಾಗಿ ಭಯಪಟ್ಟಾಗಲಿ,ಭಯಪಟ್ಟಂತೆ ನಟಿಸುತ್ತಾಗಲಿ, ಶತ್ರುಗಳ ಕಡೆಯಿಂದ ತನ್ನಲ್ಲಿಗೆ ಬಂದು ವಂಚನೆಯಿಂದಾದರೂ “ಶರಣು” ಎಂಬೀ ಮೂರಕ್ಷರಗಳನ್ನು!ಬಾಯಿಂದಾಡಿದಮಾತ್ರಕ್ಕೆ, ಧರ್ಮವಿಶ್ವಾಸವುಳ್ಳ ಸತ್ಪುರುಷನು,ತನ್ನ ಪ್ರಾಣವನ್ನು ಪರಿತ್ಯಜಿಸಿಯಾದರೂ ಅವನನ್ನು ರಕ್ಷಿಸಬೇಕು? ಹಾಗಿಲ್ಲದೆ ಶತ್ರುವೆಂಬ ಭಯದಿಂದಲೋ, ಧರ್ಮಸೂಕ್ಷ್ಮವನ್ನು ತಿಳಿಯದ ಅಜ್ಞಾನದಿಂದಲೋ, ಅಥವಾ ಅವನನ್ನು ರಕ್ಷಿಸದೆಬಿಡುವುದರಿಂದ ಬರಬಹುದಾದ ಲಾಭದಾಸೆಯಿಂದಲೋ, ಮರೆಹೊಕ್ಕುಬಂದವನನ್ನು, ತನ್ನ ಶಕ್ತಿಮೀರಿ ನಿರ್ವಂಚನೆಯಾಗಿ ರಕ್ಷಿಸದೆಹೋದರೆ,ಅದು ಲೋಕದಲ್ಲಿ ಕೇವಲನಿಂದಿತವಾದ ಪಾಪವೆನಿಸುವುದು. ಇಷ್ಟೇಅಲ್ಲದೆ ಶರಣಾಗತನನ್ನು, ರಕ್ಷಿಸುವುದಕ್ಕೆ ತನಗೆ ಶಕ್ತಿಯಿದ್ದರೂ ರಕ್ಷಿಸದೆ ಸುಮ್ಮನೆ ನಿಂತು ನೋಡುತಿದ್ದರೆ, ಇಷ್ಟರಲ್ಲಿ ಅವನಿಗೂ ನಾಶವುಂಟಾದರೆ,ರಕ್ಷಿಸಲ್ಪಡದವನು, ರಕ್ಷಿಸದಿದ್ದವನ ಸಮಸ್ತಪುಣ್ಯಗಳಿಗೂ ತಾನೇ ಭಾಗಿಯಾಗಿ, ಆ ಪುಣ್ಯಕ್ಕೆ ಫಲರೂಪವಾದ ಉತ್ತಮಲೋಕಗಳನ್ನೂ ತಾನೇ ಹೊಂದುವನು. ಹೀಗೆ ಮರೆಹೊಕ್ಕವರನ್ನು ರಕ್ಷಿಸದೆಹೋಗುವುದರಿಂದ ಮಹಾದೋಷವುಂಟು. ಶರಣಾಗತರನ್ನು ರಕ್ಷಿಸದೆ ಬಿಡುವುದರಿಂದ ಸ್ವರ್ಗಾದಿಪುಣ್ಯಲೋಕಗಳೂ ತಪ್ಪುವುವು.

---

ವನ್ನೂ ತೋರಿಸದೆ ಹೋದರೂ, ಅವನು ಬಾಯಿಬಿಟ್ಟು ಪ್ರಾರ್ಥಿಸಿದರೆ ಸಾಕು. ಇವು ಮೂರೂ ಇಲ್ಲದೆ ಹೋದರೂ ರಕ್ಷಕನಿರುವಸ್ಥಲಕ್ಕೆ ಹೋಗಿ ಸೇರುವುದೊಂದೇ ಸಾಕೆಂದು ಭಾವವು.

1 ಇಲ್ಲಿ “ಆರ್ತೋವಾ ಯದಿವಾ ದೃಪ್ತಃ ಪರೇಷಾಂ ಶರಣಾಗತಃ। ಅರಿಃ ಪ್ರಾಣಾನ್ ಪರಿತ್ಯಜ್ಯ ರಕ್ಷಿತವ್ಯಃ ಕೃತಾತ್ಮನಾ” ಎಂದು ಮೂಲವು. ಇಲ್ಲಿ ಆರ್ತನೆಂದರೆ ಸ್ವಲ್ಪಮಾತ್ರವೂ ವಿಳಂಬವನ್ನು ಸಹಿಸದೆ ಆತುರದಿಂದ ಫಲಸಿದ್ಧಿಯನ್ನು ಕೋರಿಬಂದವನು. ದೃಪ್ತನೆಂದರೆ ವಿಳಂಬಾವಿಳಂಬಗಳಲ್ಲಿ ದೃಷ್ಟಿಯಿಡದೆ ಫಲಸಿದ್ಧಿಯನ್ನುಮಾತ್ರ ಕೋರುವವನು. ಹಾಗೆಯೇ ಮುಮುಕ್ಷುಪಕ್ಷದಲ್ಲಿಯೂ ಸಂಸಾರದಲ್ಲಿ ಜುಗುಪ್ಸೆಯಿಂದ ಆಗಲೇ ದೇಹನಿವೃತ್ತಿಯನ್ನಪೇಕ್ಷಿಸುವವನು ಆರ್ತನೆಂದೂ, ಶರೀರಾವಸಾನದಲ್ಲಿ ಮುಕ್ತಿಯನ್ನು ಕೋರುವವನು ದೃಪ್ತನೆಂದೂ ಭೇದವನ್ನು ಗ್ರಹಿಸಬೇಕು. ಅಥವಾ ಆಕಿಂಚನ್ಯವನ್ನೂ, ಅನನ್ಯಗತಿತ್ವವನ್ನೂ ತೋರ್ಪಡಿಸಿ ಪ್ರಪತ್ತಿಯನ್ನು ಮಾಡಿದವನು ಆ

ಲೋಕಾಪವಾದಕ್ಕೂ ಹೇತುವಾಗುವುದು. ದೇಹದಲ್ಲಿರುವ ಬಲವೀರ್ಯಾದಿ ಗಳೂ ಕೆಡುವುವು. ಆದುದರಿಂದ ಎಲೈ ವಾನರೇಂದ್ರನೆ! ಆ ಕಂಡುಮಹಾ ಋಷಿಯು ಹೇಳಿದ ನೀತಿಯನ್ನನುಸರಿಸಿ ನಡೆಯಬೇಕೆಂಬುದೇ ನನ್ನ ಉದ್ದೇ ಶವು. ಸರ್ವಲೋಕಾದೃತವಾಗಿಯೂ, ಯಥಾರ್ಥವಾಗಿಯೂ, ಸರ್ವೋತ್ತ ಮವಾಗಿಯೂ ಇರುವ ಆ ಮುನಿವಾಕ್ಯದಂತೆಯೇ ನಾನು ನಡೆಯುವೆನು. ಆ ಋಷಿವಾಕ್ಯವು ಧರ್ಮಯುಕ್ತವಾದುದು. ಪಾಪನಿವಾರಕವಾದುದು. ಇ ಹದಲ್ಲಿ ಕೀರ್ತಿಯನ್ನೂ, ಪರದಲ್ಲಿ ಸ್ವರ್ಗವನ್ನೂ ಕೈಗೂಡಿಸುವುದು. ಹೀ ಗೆ ಐಹಿಕಾಮುಷ್ಮಿಕ ಫಲಪ್ರದವಾದ ಆ ನೀತಿವಾಕ್ಯವನ್ನು ಮೀರಿ ನಡೆಯು ವುದು ಸರ್ವಥಾಯುಕ್ತವಲ್ಲ. ಎಲೆ ಕಪಿಶ್ರೇಷ್ಠನೆ! ಇನ್ನು ಹೆಚ್ಚಾಗಿ ಹೇಳಿ ದುದರಿಂದೇನು?' ಒಂದಾವೃತ್ತಿ ನನ್ನಲ್ಲಿ ಮರೆಹೊಕ್ಕು "ನಾನು ನಿನ್ನವನು"

---

ರ್ತನೆಂದೂ, ಸ್ನೇಹಕೇಳನಾದರೂಪದಿಂದಾದರೂ ತಾನು ಶರಣಾಗತನೆಂದು ಬಂ ದವನು ದೃಪ್ತನೆಂದೂ ಗ್ರಹಿಸಬಹುದು ಇಂತವನು ಮುಂದೆಬಂದು ಶರಣಾಗತಿಯೆಂ ಬ ಶಬ್ದಮಾತ್ರವನ್ನು ಹೇಳಿದರೂ,(ಅರಿ:)ಅವನು ಶತ್ರುವೇ ಆಗಿದ್ದರೂ,ಅವನನ್ನು ರಕ್ಷಿ ಸಬೇಕೆಂದು ಭಾವವು. (ಪ್ರಾಣಾನ್ ಪರಿತ್ಯಜ್ಯ) ಅಸ್ಥಿರಗಳಾದ ಪ್ರಾಣಗಳನ್ನಾದರೂ ಬಿಟ್ಟು ಸ್ಥಿರವಾದ ಶರಣಾಗತರಕ್ಷಣಧರ್ಮವನ್ನೇ ಸಾಧಿಸಬೇಕೆಂದು ಭಾವವು. (ಕೃತಾತ್ಮ ನಾ) ಎಂಬುದರಿಂದ ಶಾಸ್ತ್ರಪರಿಶ್ರಮವುಳ್ಳವನು ಈ ಧರ್ಮವನ್ನತಿಕ್ರಮಿಸಿದರೆ, ಹೆಚ್ಚು ದೋಷಾಸ್ಪದವೆಂದೂ ಸೂಚಿತವು.

I ಇಲ್ಲಿ "ಸಕೃದೇವ ಪ್ರಪನ್ನಾಯ ತವಾಸ್ಮೀತಿಚ ಯಾಚತೇ। ಅಭಯಂ ಸರ್ವಭೂ ತೇಭ್ಯೋ ದದಾಮ್ಯೇತದ್ವ್ರತಂ ಮಮ"ಎಂದು ಮೂಲವು. ಹಿಂದೆ"ಮಿತ್ರಭಾವೇನ ಸಂ ಪ್ರಾಪ್ತಂ" ಇತ್ಯಾದಿಶ್ಲೋಕದಿಂದ ಭಗವಂತನು ತನ್ನ ಪ್ರಕೃತಿಯನ್ನು ತಿಳಿಸಿದನು. ಈ ಶ್ಲೋಕದಿಂದ ಆ ಪ್ರಕೃತಿಗೆ ಅನುಗುಣವಾದ ಪ್ರತಿಜ್ಞೆಯನ್ನು ಮಾಡುವನು. ಮತ್ತು "ಶ್ರುತಿಸ್ಸ್ಮೃತಿಸ್ಸದಾಚಾರಸ್ಸ್ವಸ್ಯಚ ಪ್ರಿಯಮಾತ್ಮನಃ।ಸಮ್ಯಕ್ಸಂಕಲ್ಪಜಃಕಾಮೋ ಧರ್ಮ ಮೂಲಮಿದಂ ಸ್ಮೃತಂ"ಎಂದು ಯಾಜ್ಞವಲ್ಕ್ಯಮುನಿಯಿಂದ ಹೇಳಲ್ಪಟ್ಟ ಐದುಧರ್ಮಪ್ರ ಮಾಣಗಳಲ್ಲಿ,ಶರಣಾಗತಿಧರ್ಮಕ್ಕೆ"ತಸ್ಮಾದಪಿ ವಧ್ಯಂ ಪ್ರಪನ್ನಂ ನ ಪ್ರತಿಪ್ರಯಚ್ಛಂತಿ"ಇ ತ್ಯಾದಿಗಳಿಂದ ಶ್ರುತಿಪ್ರಮಾಣವು ತೋರಿಸಲ್ಪಟ್ಟಿತು.ಕಂಡುಗಾಥೆಯಿಂದ ಸ್ಮೃತಿಪ್ರಮಾ ಣವು ತೋರಿಸಲ್ಪಟ್ಟಿರುವುದು. ಹಾಗೆಯೇ ಕಪೋತಾದಿಗಳಿಂದ ಶಿಷ್ಟಾಚಾರಪ್ರಮಾಣ ವೂ, ರಾಮನು ಪ್ರತಿಪಕ್ಷದವರನ್ನು ನಿರಸನಮಾಡಿ ಹಟದಿಂದ ಪ್ರಪನ್ನತ್ರಾಣವನ್ನೇ ಉ

ಎಂದು ಹೇಳಿ ಯಾಚಿಸಿದಪಕ್ಷದಲ್ಲಿ, ಅಂತವನಿಗೆ ನಾನು ಸಮಸ್ತಭೂತಗ

---

ಪಪಾಪಿಕುವುದರಿಂದ, ಅದು ತನ್ನ ಮನಸ್ಸಿಗೆ ಪ್ರಿಯವೆಂಬುದನ್ನೂ ತೋರಿಸಿರುವನು ಹೀಗೆ ನಾಲ್ಕುಪ್ರಮಾಣಗಳನ್ನೂ ತೋರಿಸಿ, ಈ ಶ್ಲೋಕದಿಂದ “ ಸಮ್ಯಕ್ಸಂಕಲ್ಪಜ: ಕಾಮ:” ಎಂಬ ಐದನೆಯಪ್ರಮಾಣವನ್ನು ತೋರಿಸುವನು. (ಸಕೃದೇವ) ಒಂದಾವೃತ್ತಿಯೇ ಎಂದರೆ, ಭಕ್ತಿಮೊದಲಾದ ಉಪಾಯಗಳಲ್ಲಿ ಎರಡುಮೂರೆಂಬ ಆವೃತ್ತಿಯು ಶಾಸ್ತ್ರಾರ್ಥವಾಗುವುದೇ ಹೊರತು, ಪ್ರಪತ್ತಿಯ ವಿಷಯದಲ್ಲಿಮಾತ್ರ,ತಿರುಗಿ ಆವೃತ್ತಿಯಿಲ್ಲವೆಂಬುದೇ ಶಾಸ್ತ್ರಾರ್ಥವು. “ಸಕೃದೇವಹಿ ಶಾಸ್ತ್ರಾರ್ಥ: ಕೃತೋಯಂ ತಾರಯೇನ್ನರಂ” ಎಂಬುದು ಪ್ರಪತ್ತಿಶಾಸ್ತ್ರವು. (ಪ್ರಪನ್ನಾಯ) ಬಂದು ಸೇರಿದವನಿಗೆ, ಎಂದರೆ ಪ್ರಪತ್ತಿಮಾಡಿದವನಿಗೆಂದರ್ಥವು. ಗತ್ಯರ್ಥಕಗಳೆಲ್ಲವೂ ಜ್ಞಾನಾರ್ಥಕಗಳಾಗುವವೆಂಬ ನ್ಯಾಯದಿಂದ, ಪ್ರಪನ್ನಶಬ್ದವು ಜ್ಞಾನರೂಪವಾದ ಮಾನಸಿಕಪ್ರಪತ್ತಿಯನ್ನು ತೋರಿಸುವುದು. (ತವಾಸ್ಮೀತಿಚ) ಎಂಬುದರಿಂದ, ವಾಚಿಕಪ್ರಪತ್ತಿಯು ಹೇಳಲ್ಪಡುವುದು. ಇಲ್ಲಿ ಇವೆರಡನ್ನೂ ಹೇಳಿರುವುದರಿಂದ, ಇವೆರಡರಲ್ಲಿ ಯಾವುದೊಂದಿದ್ದರೂ ತನಗೆ ಪರಿಗ್ರಾಹ್ಯನೆಂದು ಭಾವವು. ಅಥವಾ (ಪ್ರಪನ್ನಾಯ) ಎಂಬುದರಿಂದ ಉಪಾಯವೂ, (ತವಾಸ್ಮೀತಿಚ ಯಾಚತೇ) ಎಂಬುದರಿಂದ ತಚ್ಛೇಷವೃತ್ತಿಯೆಂಬ ಫಲವಿಶೇಷಪ್ರಾರ್ಥನೆಯೂ ಸೂಚಿಸಲ್ಪಡುವುದು. ಇಂತಹ ಅಧಿಕಾರಿಗಾಗಿ (ಸರ್ವಭೂತೇಭ್ಯ:) ಸಮಸ್ತ ಭೂತಗಳೆಡೆಯಿಂದಲೂ, (ಅಭಯಂ) ಭಯವಿಲ್ಲದಿರುವಿಕೆಯನ್ನು, (ದದಾಮಿ) ಕೊಡುವೆನು” ಎಂದರ್ಥವು. ಇಲ್ಲಿ ಅಭಯವೆಂದರೆ ಮೋಕ್ಷವು “ಅಥಸೋಽಭಯಂ ಗತೋಭವತಿ” “ಆನಂದೋಬ್ರಹ್ಮಣೋ ವಿದ್ವಾನ್ನಬಿಭೇತಿ ಕುತಶ್ಚನ”ಇತ್ಯಾದಿ ಶ್ರುತಿಗಳು ಅಭಯವನ್ನು ಬ್ರಹ್ಮವಿದ್ಯೆಗೆ ಫಲವಾಗಿ ಹೇಳಿರುವುದರಿಂದ, ಇಲ್ಲಿಯೂ ಅಭಯವೆಂಬುದು ಮೋಕ್ಷಪರ್ಯಾಯವು. (ತವಾಸ್ಮಿ) ಎಂಬುದಕ್ಕೆ ಫಲವಿಶೇಷಪ್ರಾರ್ಥನೆಯೆಂಬ ಪಕ್ಷದಲ್ಲಿಮಾತ್ರವೇ ಈ ಅರ್ಥವು ಅನುಕೂಲಿಸುವುದು. ಪಕ್ಷಾಂತರದಲ್ಲಿಯೋ ಭಗವಂತನೇ ಸಕಲಫಲಪ್ರದನಾದುದರಿಂದ, ಈ ಅಭಯಶಬ್ದವು ಮೋಕ್ಷಕ್ಕೆಮಾತ್ರವೇ ಅಲ್ಲದೆ, ಧರ್ಮಾರ್ಥಕಾಮಫಲಗಳಿಗೂ ಉಪಲಕ್ಷಣವಾಗಬಹುದು (ಏತದ್ವ್ರತಂ ಮಮ) ಇದು ನನ್ನ ವ್ರತವು. ವ್ರತಾನುಷ್ಠಾನದಂತೆ ಎಂತಹ ಕಷ್ಟದಶೆಯಲ್ಲಿಯೂ ಇದನ್ನು ಬಿಡದೆ ತಾನು ನಡೆಸಿಯೇ ತೀರಬೇಕೆಂದು ಭಾವವು. ಅಥವಾ ಮೇಲಿನ (ಸರ್ವಭೂತೇಭ್ಯ:) ಎಂಬುದಕ್ಕೆ ಪಂಚಮ್ಯರ್ಥವನ್ನು ಬಿಟ್ಟು, ಸಮಸ್ತಪ್ರಾಣಿಗಳಿಗೂ ಅಭಯವನ್ನು ಕೊಡುವುದಾಗಿ ಚತುರ್ಥ್ಯರ್ಥವನ್ನೂ ಹೇಳಬಹುದು. ಇದರಿಂದ ತನ್ನಲ್ಲಿ ಯಾರೇ ಶರಣಾಗತನಾದರೂ, ಅವರ ಜಾತಿಗುಣಾದಿಭೇದಗಳೊಂದನ್ನೂ ಎಣಿಸದೆ, ಅಂತವರೆಲ್ಲರಿಗೂ ತಾನು

ಗಳಿಂದಲೂ ಭಯವಿಲ್ಲದಂತೆ ಅಭಯವನ್ನು ಕೊಡುವೆನು.ಇದೇ ನನ್ನ ವ್ರತವು

---

ಅಭಯವನ್ನು ಕೊಡುವುದಾಗಿ ತಾತ್ಪರ್ಯವು. ಅಥವಾ. "ಪಶುರ್ಮನುಷ್ಯ: ಪಕ್ಷೀವಾ ಯೇಚ ವೈಷ್ಣವಸಂಶ್ರಯಾ:। ತೇ ನೈವತೇ ಪ್ರಯಾಸ್ಯಂತಿ ತದ್ವಿಷ್ಣೋ: ಪರಮಂ ಪದಂ" ಎಂಬ ವಚನವನ್ನನುಸರಿಸಿ,ಅಂತಹ ಪ್ರಪನ್ನರನ್ನಾಶ್ರಯಿಸಿರುವ ಪಶು ಪಕ್ಷಿ ಮೃಗ ಮ ನುಷ್ಯಾದಿಗಳಾವುವುಂಟೋ ಅವೆಲ್ಲವೂ ಅವರೊಡನೆಯೇ ವಿಷ್ಣು ಪದವನ್ನು ಹೊಂದು ವುವೆಂದು ಹೇಳಿರುವಂತೆ, ಭಗವಂತನು ತನ್ನಲ್ಲಿ ಸಾಕ್ಷಾತ್ತಾಗಿ ಶರಣಾಗತಿಮಾಡಿದವನೊ ಬ್ಬನನ್ನು ಮಾತ್ರವೇ ಅಲ್ಲದೆ, ಆತನಿಗೆ ಸಂಬಂಧಪಟ್ಟ ಸಮಸ್ತಪ್ರಾಣಿಗಳಿಗೂ ತಾನು ಅಭಯವನ್ನು (ಮೋಕ್ಷವನ್ನು) ಕೊಟ್ಟು ಉದ್ಧರಿಸುವುದಾಗಿ ಭಾವವು.

ಇಲ್ಲಿ ಸಕೃಚ್ಛಬ್ದಕ್ಕೆ "ಸಹಸಾ" ಎಂಬ ಆದೇಶವೆಂದು ಶ್ರೀವತ್ಸಾಂಕಮಿಶ್ರರು. (ಸ ಹಸೈವಪ್ರಪನ್ನಾಯ) ಎಂದರೆ, ಮೊದಲು ತನ್ನ ಅಯೋಗ್ಯತೆಯನ್ನು ನೋಡಿ ಸುಮ್ಮ ನಿದ್ದು, ಆಮೇಲೆ ಶರಣ್ಯನ ಗುಣಗಳನ್ನು ನೋಡಿದೊಡನೆ, ತಕ್ಷಣವೇ ಒಂದೇ ನಂಬಿಕೆಯಿಂ ಬಂದು ಮರೆಹೊಕ್ಕವನೆಂದರ್ಥವು. ಮೊದಲು ಅನಾದಿಕಾಲದಿಂದ ಸಂಸಾರಕ್ಕೆ ಸಿಕ್ಕಿದವ ನು, ಮುಂದೆ ಅನಂತವಕಾಲದವರೆಗೆ ಫಲವನ್ನೂ ಅನುಭವಿಸಬೇಕಾಗಿರುವುದರಿಂದ,ಈ ನ ಡುವೆ ತಾನು ಪ್ರಪತ್ತಿಯನ್ನು ಮಾಡಿದುದು ಮೊದಲು,ತನ್ನ ಜೀವಾವಧಿ ಅದನ್ನನುವರ್ತಿ ಸುತಿದ್ದರೂ, "ಸಕೃತ್" ಒಂದಾವರ್ತಿಯೇ ಎಂದು ಹೇಳಿದಷ್ಟೇ ಆಗುವುದೆಂದು ಗೋ ವಿಂದಾಚಾರ್ಯರ ನಿರ್ವಾಹವು. ಈಶ್ವರನನ್ನು ವಿಷಯೀಕರಿಸುವುದಕ್ಕೆ ಸಕೃದಾವರ್ತಿ ಯೇ ಸಾಕಾಗಿರುವುದು. ಅದನ್ನು ಪುನರಾವರ್ತನಮಾಡುವುದು ಆ ಉಪಾಯವೈಭ ವದಲ್ಲಿರುವ ಆಸ್ವಾದ್ಯತೆಯಿಂದಲೇ ಹೊರತು ಬೇರೆಯಲ್ಲವೆಂದು ಪರಾಶರಭಟ್ಟರ ಮತವು. (ಸಕೃದೇವ) ಎಂಬಲ್ಲಿರುವ ಏವಕಾರದಿಂದ ಬಂದಾವೃತ್ತಿಯೇ ಪ್ರಪತ್ತಿಯೇಹೊರತು,ಅ ದಕ್ಕೆ ಅನೇಕಾವೃತ್ತಿಯು ವ್ಯಕ್ತವಾಗಿ ನಿಷೇಧಿಸಲ್ಪಟ್ಟಿರುವುದೆಂದೂ,(ತವಾಸ್ಮೀತಿಚ ಯಾಚ ತೇ)ನಿನಗೆ ನಿಯತವಾಗಿ ಕಿಂಕರನಾಗುವೆನೆಂದು ಉಪಾಯವನ್ನೂ ಕೂಡ ಪ್ರಾರ್ಥಿಸುವವ ನಿಗೆ (ಸಕೃದೇವಪ್ರಪನ್ನಾಯ) ಎಂಬುದರಿಂದ ಪ್ರಪತ್ತಿಯೂ, (ತವಾಸ್ಮೀತಿಚಯಾಚತೇ ಎಂಬಲ್ಲಿ ವರ್ತಮಾನನಿರ್ದೇಶವಿರುವುದರಿಂದ ಅನವರತಭಾವನಾರೂಪವಾದ ಭಕ್ತಿ ಯೂ ಹೇಳಲ್ಪಡುವುವೆಂದು ಬೇರೆ ಕೆಲವು ಆಚಾರ್ಯರ ನಿರ್ವಾಹವು.

ಆದರೆ "ವೇದೋಪಬೃಂಹಣಾರ್ಥಾಯ ತಾವಗ್ರಾಹಯತ ಪ್ರಭು:"ಎಂಬತೆ, ಈ ಪ್ರಬಂಧವು ವೇದೋಪಬೃಂಹಣದಲ್ಲಿ ತಾತ್ಪರ್ಯವುಳ್ಳುದಾಗಿರಬೇಕಲ್ಲವೆ? ಇಲ್ಲಿ ಇದು ಯಾ ವವೇದಾರ್ಥವನ್ನು ಉಪಬೃಂಹಣಮಾಡುವುದು? ಆ ವೇದವಾಕ್ಯವಾವುದು? ಎಂದರೆ,"ತಂ ಹ ದೇವಮಾತ್ಮಬುದ್ಧಿಪ್ರಸಾದಂ ಮುಮುಕ್ಷು ರ್ವೈ ಶರಣಮಹಂ ಪ್ರಪದ್ಯೇ" "ಪ್ರಯತ

ಪಾಣಿಶ್ಶರಣಮಹಂ ಪ್ರಪದ್ಯೇ" "ಸ್ವಸ್ತಿ ಸಂಭಾಧೇಷ್ವಭಯಂ ನೋ ಅಸ್ತು" ಎಂದು ಹೇಳಲ್ಪಡುವ ಪ್ರಪತ್ತ್ಯುಪಾಯವೈಭವಗಳೆಲ್ಲವನ್ನೂ ಇದು ಉಪಬೃಂಹಣಮಾಡುವುದು. "ಪ್ರಯತಪಾಣಿ ಶ್ಶರಣಮಹಂ ಪ್ರಪದ್ಯೇ" ಎಂಬ ವೇದವಾಕ್ಯವಲ್ಲಿ (ಪ್ರಯತಪಾಣಿ:) ಎಂದರೆ ಶುದ್ಧಹಸ್ತನಾಗಿರಬೇಕೆಂಬುದು. ಆ ಶುದ್ಧಹಸ್ತತ್ವವು ಯಾವುದೆಂದರೆ "ಸ ಸರ್ವಧರ್ಮಾ ಪರಿತ್ಯಜ್ಯ" ಎಂದೂ, "ಸರ್ವಧರ್ಮಾಂಶ್ಚ ಸಂತ್ಯಜ್ಯ ಸರ್ವಕಾಮಾಂಶ್ಚ ಸಾಕ್ಷರಾ" ಎಂದೂ ಉಪಾಯಾಂತರಗಳೆಲ್ಲವನ್ನೂ ತ್ಯಜಿಸಿಬಿಡುವುದು. "ಈ ಮೇಲಿನ ಸಕೃದೇವ ಪ್ರಪನ್ನಾಯ" ಇತ್ಯಾದಿಶ್ಲೋಕವು ಮೇಲಿನ ವೇದವಾಕ್ಯವನ್ನು ಹೇಗೆ ಉಪಬೃಂಹಣಮಾಡುವುದು?" ಎಂದರೆ, (ಸಕೃದೇವ) ಎಂಬ ಪದವು ಅಸಕೃದಾವರ್ತಿಯನ್ನಪೇಕ್ಷಿಸುವ ಭಕ್ತಿಯನ್ನು ವ್ಯಾವರ್ತಿಸುವಂತೆ ಮಾಡುವುದರಿಂದ,ಅದರಿಂದ ಸರ್ವಧರ್ಮತ್ಯಾಗಬೋಧಕವಾದ (ಪ್ರಯತಪಾಣಿ:)ಎಂಬ ಪದವೂ, (ಪ್ರಪನ್ನಾಯ)ಎಂಬ ಪದದಿಂದ, ಶರಣಂ ಪ್ರಪದ್ಯೇ ಎಂಬ ಪದಗಳೂ, (ತವಾಸ್ಮೀತಿಚಯಾಚತೆ)ಎಂಬ ವಾಕ್ಯದಿಂದ, "ಸ್ವಸ್ತ್ಯಸ್ತು, ಎಂಬವಾಕ್ಯವೂ (ಅಭಯಂ ದದಾಮಿ) ಎಂಬ ವಾಕ್ಯದಿಂದ, "ಅಭಯಮಸ್ತು" ಎಂಬವಾಕ್ಯವೂ, ಉಪಬೃಂಹಣಮಾಡಲ್ಪಡುವೆಂದು ತಿಳಿಯಬೇಕು.

ಹಾಗೆ ಇಲ್ಲಿ ವೇದೋಕ್ತವಾದ ಪ್ರಪತ್ತಿಯೇ ಉಪಬೃಂಹಣಮಾಡಲ್ಪಡುವುದಾಗಿದ್ದರೆ "ಅಹಮಸ್ಮ್ಯಪರಾಧಾನಾಮಾಲಯೋಕಿಂಚನೋಽಗತಿ:, ತ್ವಮೇವೋಪಾಯಭೂತೋಮೇ ಭವೇತಿ ಪ್ರಾರ್ಥನಾಮತಿ: । ಶರಣಾಗತಿ:" ಎಂದು ಹೇಳಿರುವ ಪ್ರಪತ್ತಿಲಕ್ಷಣವೆಲ್ಲವೂ ಈ ವಿಭೀಷಣ ಶರಣಾಗತಿಯಲ್ಲಿ ಸೇರಿರುವುವೇ?" ಎಂದರೆ, ಆ ಲಕ್ಷಣಗಳೆಲ್ಲವೂ ಇದರಲ್ಲಿ ಸಂಪೂರ್ಣವಾಗಿಯೇ ಇರುವುವು. ಹೇಗೆಂದರೆ, ವಿಭೀಷಣನು ತನ್ನ ನಾಮನಿರ್ವಚನಪೂರ್ವಕವಾಗಿ ತನಗೆ ಸ್ವರೂಪಸಿದ್ಧವಾದ ದೋಷವನ್ನೂ, ದುಷ್ಟನಾದ ರಾವಣನ ಸಂಬಂಧದಿಂದ ತನಗುಂಟಾದ ದೋಷವನ್ನೂ, ಮೊದಲೇ ಹೇಳಿಕೊಂಡಿರುವುದರಿಂದ (ಅಹಮಸ್ಮ್ಯಪರಾಧಾನಾಮಾಲಯ:) ಎಂಬರ್ಥವು ಸೂಚಿಸಲ್ಪಟ್ಟಿತು. (ರಾಜ್ಯಂಪ್ರಾರ್ಥಯಮಾನಶ್ಚ) ಎಂದು ಅವನು ರಾಜ್ಯವನ್ನಪೇಕ್ಷಿಸಿ ಬಂದುದೇಹೊರತು ರಾಮನಿಗೆ ಯಾವುದೊಂದು ಕಿಂಚಿತ್ಕಾರವನ್ನು ಮಾಡುವುದಕ್ಕೂ ತಾನು ಬಂದಂತೆ ತೋರಿಸಲಿಲ್ಲವಾದುದರಿಂದ, ಅಕಿಂಚನತ್ವವು ಸೂಚಿತವಾಗುವುದು ತನಗೆ ಒಡಹುಟ್ಟಿದವನಾದ ರಾವಣನಿಂದ ತಿರಸ್ಕೃತನಾಗಿ, ಬೇರೆ ದಿಕ್ಕಿಲ್ಲದೆ ಬಂದವನಾದುದರಿಂದ, (ಅಗತಿ:) ಎಂಬರ್ಥವು ಹೇಳಲ್ಪಡುವುದು. (ಭವಂತಂ ಶರಣಂ ಗತ:) ಎಂದು ಹೇಳಿರುವುದರಿಂದ "ತ್ವಮೇವೋಪಾಯಭೂತೋಮೇ ಭವೇತಿ ಪ್ರಾರ್ಥನಾಮತಿ." ಎಂಬ ವಾಕ್ಯಾರ್ಥವು ಸೂಚಿಸಲ್ಪಡುವುದು. ಆದುದರಿಂದ ಮೇಲೆ ಹೇಳಿದ ಪ್ರಪತ್ತಿಲಕ್ಷಣಗಳೆಲ್ಲವೂ ಈತ

ನ ಶರಣಾಗತಿಯಲ್ಲಿ ಪೂರ್ಣವಾಗಿಯೇ ಸಿದ್ಧಿಸಿರುವುವು. ಇದರಂತೆಯೇ ಆನುಕೂಲ್ಯ ಸಂಕಲ್ಪವೇ ಮೊದಲಾದ ಆರು ಪ್ರಪತ್ತ್ಯಂಗಗಳೂ ಉಂಟೆಂದು ಹಿಂದೆಯೇ ಸೂಚಿ ಸಲ್ಪಟ್ಟಿರುವುವು. ಆದುದರಿಂದ ಈ ವಿಭೀಷಣನು ಸಲಕ್ಷಣವಾಗಿಯೂ, ಸಾಂಗವಾಗಿ ಯೂ ಇರುವ ಪ್ರಪತ್ತಿಯನ್ನೇ ಮಾಡಿರುವನೆಂದು ಸಿದ್ಧವು,

ಹೀಗೆ ಸಲಕ್ಷಣವಾಗಿಯೂ ಸಾಂಗವಾಗಿಯೂ ಪ್ರಪತ್ತಿಯನ್ನು ಮಾಡಿ, ಅದಕ್ಕೆ ಫಲವಾಗಿ ಬೇರೆ ಪ್ರಯೋಜನಾಂತರಗಳಲ್ಲಿ ದೃಷ್ಟಿಯಿಡದೆ, ನನ್ನನ್ನೇ ನಂಬಿ ಬಂದವನಿ ಗೆ ಸಕಲಭಯನಿವೃತ್ತಿಯನ್ನೂ ಮಾಡಬೇಕೆಂಬುದೇ ನನ್ನ ವ್ರತವೆಂದು ಈ ಶ್ಲೋಕ ದಿಂದ ಹೇಳುವನು. ಹೇಗೆಂದರೆ (ಸಕೃದೇವ ಪ್ರಪನ್ನಾಯ) ಸಕೃತ್ಪ್ರಪನ್ನನಾಗಿರುವ ವನಿಗೆ ಎಂದರೆ, ಸಲಕ್ಷಣವಾದ ಪ್ರಪತ್ತಿಯನ್ನು ಮಾಡಿದವನಿಗೆಂದರ್ಥವು. ಸಕೃತ್ತೆಂದರೆ "ಆವೃತ್ತಿರಸಕೃದುಪದೇಶಾತ್" ಎಂದೂ "ಅನೇಕಜನ್ಮಸಂಸಿದ್ಧ:" ಎಂದೂ, ಭಕ್ತಿ ಯಂತೆ ಸ್ವರೂಪನಿಷ್ಪತ್ತಿಯಾಗಲಿ, ಫಲನಿಷ್ಪತ್ತಿಯಾಗಲಿ ಚಿರಕಾಲಸಾಧ್ಯವಾಗಿಲ್ಲದೆ, "ತದ್ದ್ವಯಂ ಸಕೃದುಚ್ಚಾರೋ ಭವತಿ" ಎಂದೂ! ಉಪಾಯೋಽಯಂ ಚತುರ್ಥಸ್ತೇ ಪ್ರೋಕ್ತ ಶ್ಶೀಘ್ರಫಲೋದಯ:" ಎಂದೂ ಆ ಸ್ವರೂಪ ಫಲನಿಷ್ಪತ್ತಿಗಳೆರಡೂ ಒಂದೇ ಸಾರಿಯಾಗಿರುವುದೆಂದರ್ಥವು. ಪ್ರಪತ್ತಿಗೆ ಪುನರಾವೃತ್ತಿಯೇ ಇಲ್ಲವೆಂದು ಏವಕಾರಾರ್ಥವು. ಅಥವಾ (ಪ್ರಪನ್ನಾಯೈವ) ಅಂತಹ ಪ್ರಪತ್ತಿಯನ್ನು ಮಾಡಿದವನಿಗೆ ಮಾತ್ರವೇ ಎಂದರೆ. "ಮಂತ್ರೇ ವ್ಯೂಹೇ ನಯೇ ಚಾರೇ ಯುಕ್ತೋಭವಿತುಮರ್ಹತಿ" ಎಂದು ಕರ್ಮಯೋಗ ನಿಷ್ಠನಾದ ನಿನಗೂ ನಾನು ಅಷ್ಟುವಶನಲ್ಲ. "ಜಾಂಬವಾಂ ಸ್ತ್ವಥ ಸಂಪ್ರೇಕ್ಷ್ಯ ಶಾಸ್ತ್ರಬುದ್ಧ್ಯಾವಿಚಕ್ಷಣ:" ಎಂಬಂತೆ ಜ್ಞಾನಯೋಗನಿಷ್ಠರಾದ ಜಾಂ ಬವದಾದಿಗಳಿಗೂ ನಾನು ಅಷ್ಟು ಸುಲಭನಲ್ಲ. "ಭಕ್ತಿಶ್ಚ ನಿಯತಾ ವೀರ"ಎಂದು ಭ ಕ್ತಿಯೋಗ ನಿಷ್ಠನಾದ ಹನುಮಂತನಿಗೂ ನಾನು ಅಷ್ಟು ಸುಲಭನಲ್ಲ. ಈ ವಿಭೀ ಷಣನಂತೆ "ರಾಘವಂ ಶರಣಂ ಗತ:" ಎಂಬುದಾಗಿ ಪ್ರಪತ್ತಿಯನ್ನು ಮಾಡಿದವನೊ ಬ್ಬನೇ ನಾನು ಒಲಿಯತಕ್ಕವನೆಂದು ಭಾವವು. ಕರ್ಮಜ್ಞಾನಭಕ್ತಿಗಳಿಗಿಂತಲೂ ಪ್ರ ಪತ್ತಿಯೇ ಭಗವದನುಗ್ರಹಲಾಭಕ್ಕೆ ಸುಲಭೋಪಾಯವೆಂದು ಮುಖ್ಯತಾತ್ಪರ್ಯವು.

ಪ್ರಪತ್ತ್ಯುಪಾಯವೆಂದರೆ, ಭಗವಂತನೇ ಉಪಾಯವಾಗುವನೆಂದರ್ಥವು. ಪ್ರ ಪತ್ತಿಯೆಂದರೂ,"ತ್ವಮೇವೋಪಾಯಭೂತೋಮೇ ಭವೇತಿ ಪ್ರಾರ್ಥನಾಮತಿ:। ಶರಣಾಗ ತಿ:" ಎಂದು ಚೇತನನು ಭಗವಂತನನ್ನೇ ಉಪಾಯವಾಗಿರಬೇಕೆಂದು ಪ್ರಾರ್ಥಿಸುವ ಜ್ಞಾನರೂಪವಾದುದು. ಪ್ರಾರ್ಥ್ಯನಾದ ಒಬ್ಬಪರಮಚೇತನನೆನಿಸಿದ ಭಗವಂತ

ನನ್ನು ಅಚೇತನವಾದ ಪ್ರಪತ್ತ್ಯುಪಾಯನೆಂದು ಹೇಳುವುದು ಹೇಗೆ? ಎಂದರೆ, "ನೀ ಲಜ್ಞಾನಂ, ಪೀತಜ್ಞಾನಂ," ಎಂಬ ಕಡೆಗಳಲ್ಲಿ ಜ್ಞಾನಕ್ಕೆ ಯಾವವಿಧವಾದ ವರ್ಣ ವೂ ಇಲ್ಲವಿದ್ದರೂ, ಅದಕ್ಕೆ ವಿಷಯಭೂತಗಳಾದ ವಸ್ತುಗಳಲ್ಲಿರುವ ನೀಲಪೀತಾದಿ ವರ್ಣಗಳನ್ನೇ ವಿಷಯಿಯಾದ ಜ್ಞಾನದಲ್ಲಿಯೂ ಉಪಚರಿಸುವಂತೆ, ಪ್ರಪತ್ತಿಗೆ ವಿಷ ಯಭೂತನಾದ ಭಗವಂತನೇ ಅದಕ್ಕುಪಾಯವಾಗಿರುವನೆಂದು! ಅವನನ್ನು ವಿಷಯೀ ಕರಿಸುವ ಪ್ರಪತ್ತಿಜ್ಞಾನದಲ್ಲಿಯೂ ಉಪಚರಿಸಿ ಹೇಳುವುದರಿಂದ,ಇಲ್ಲಿ ಯಾವ ವಿರೋಧ ವೂ ಇಲ್ಲವು.

ಅದು ಹಾಗಿರಲಿ! "ಸ ಸ್ವೇಸ್ಯೈವ ಫಲಪ್ರದ: ಫಲಮಪಿ ಸ್ವೇನ್ಯೈವ ನಾರಾಯಣ:" ಎಂದೂ, "ಮಾಂ ವ್ರಜ" "ಮಾ ಮೇವ್ಯೈಷ್ಯಸಿ" ಎಂದೂ, ಭಗವಂತನೇ ಉಪಾಯರೂ ಪವಾಗಿಯೂ, ಉಪೇಯ.ರೂಪವಾಗಿಯೂ ಹೇಳಲ್ಪಡುವನಲ್ಲವೆ? ಉಪಾಯವೆಂದರೆ ಕಾರಣವು. ಉಪೇಯವೆಂದರೆ ಕಾರ್ಯವು.ಯದನಂತರಂ ಯದ್ದೃಶ್ಯತೇ ತತ್ತಸ್ಯ ಕಾರಣಂ; ನಿಯತಪೂರ್ವಭಾವಿಕಾರಣಂ" ಎಂದು ಮೊದಲಿರುವುದು ಕಾರಣವೆನಿಸುವುದು. ಹಾ ಗೆಯೇ "ನಿಯತ ಪಶ್ಚಾದ್ಭಾವಿತ್ವಂಚ ಕಾರ್ಯತ್ವಂ" ಎಂದೂ, "ಪ್ರಾಗಸತ್ವತ್ತಾಯೋಗಿ ತ್ವಂ ಕಾರ್ಯತ್ವಂ" ಎಂದೂ,ಮೊದಲಿಲ್ಲದೆ,ಆಮೇಲೆ ಹುಟ್ಟುವುದೇ ಕಾರ್ಯವೆನಿಸುವುದಲ್ಲವೆ? ಹೀಗಿರುವಾಗ "ನಿತ್ಯಂ ವಿಭುಂ" ಎಂದು, ನಿತ್ಯನಾಗಿಯೂ, ಏಕವಾಗಿಯೂ ಇರುವ ಭಗವದ್ವಸ್ತುವಿಗೆ, ಪರಸ್ಪರವಿರುದ್ಧಗಳಾದ ಈ ಭಾವಾಭಾವಾತ್ಮಕಧರ್ಮಗಳೆರಡೂ ಹೇ ಗೆ ಸರಿಹೋಗುವುವು?" ಎಂದರೆ, "ಸದೇವ ಸೋಮ್ಯೇದಮಗ್ರ ಆಸೀತ್, ಏಕಮೇ ವಾದ್ವಿತೀಯಂ" ಎಂದೂ, "ಅವಿಕಾರಾಯ ಶುದ್ಧಾಯ ನಿತ್ಯಾಯ" ಎಂದೂ, ವಿಕಾ ರರಹಿತವಾಗಿಯೂ, ನಿತ್ಯವಾಗಿಯೂ, ಏಕವಾಗಿಯೂ ಇರುವ ಬ್ರಹ್ಮಕ್ಕೆ "ಬ್ರಹ್ಮವನಂ ಬ್ರಹ್ಮ ಸವೃಕ್ಷ ಆಸೀತ್" ಎಂದೂ, "ಸೋಕಾಮಯತ ಬಹುಸ್ಯಾಂ ಪ್ರಜಾಯೇಯೇ ತಿ"ಎಂದೂ, "ಸ ಏವ ಸೃಜ್ಯಸ್ಸಚ ಸರ್ಗಕರ್ತಾಸ ಏವ ಪಾತ್ಯತ್ತಿಚ ಪಾಲ್ಯತೇಚ"ಎಂ ದೂ, ತ್ರಿವಿಧ ಕಾರಣತ್ವವೂ, ಸೃಷ್ಟಿಕರ್ತೃತ್ವಸೃಜ್ಯತ್ವಗಳೂ ಪರಸ್ಪರ ವಿರುದ್ಧವಾಗಿ ದ್ದರೂ 'ಸೂಕ್ಷ್ಮಚಿದಚಿದ್ವಿಶಿಷ್ಟ ಬ್ರಹ್ಮಕಾರಣಂ" "ಸ್ಥೂಲಚಿದಚಿದ್ವಿಶಿಷ್ಟಬ್ರಹ್ಮ ಕಾರ್ಯಂ" ಎಂದು, ಆ ವಿರುದ್ಧಧರ್ಮಗಳೆಲ್ಲವೂ ಅವನಿಗೆ ವಿಶೇಷಣಗಳಾದ ಚಿದಚಿತ್ತುಗ ಳಲ್ಲಿಯೇ ನಿರ್ವಹಿಸಲ್ಪಟ್ಟಿರುವುವು. ಆಗ ಸ್ಥೂಲಸೂಕ್ಷ್ಮಾವಸ್ಥೆಗಳಿಂದ ವಿಶಿಷ್ಟ ನಾದ ಬ್ರಹ್ಮನೊಬ್ಬನೇ ಆಗುವುದರಿಂದ, ಅವನ ನಿತ್ಯತ್ವನಿರ್ವಿಕಾರತ್ವಾದಿಗಳಿಗೆ ಬಾ ಧಕವೇನೂ ಬಾರದು. ಹಾಗೆಯೇ ಇಲ್ಲಿಯೂ, ಧಾತು: ಪ್ರಸಾದಾನ್ಮಹಿಮಾನಮೀಶಂ" ಎಂದೂ. "ತಸ್ಮಿನ್ ಪ್ರಸನ್ನೇ ಕ್ಲೇಶಸಂಕ್ಷಯ:" ಎಂದೂ, ಪ್ರಸಾದ ವಿಶಿಷ್ಟನೇ ಉ ಪಾಯನೆನಿಸುವನು. "ಪ್ರಹರ್ಷಯಿಷ್ಯಾಮಿ"ಎಂದೂ, ತ್ವತ್ಪ್ರೀತಯೇ"ಎಂದೂ ಪ್ರೀ

ಶಿವಿಶಿಷ್ಟನೇ ಉಪೇಯನೆನಿಸುವವನು. ಹೀಗೆ ಪ್ರಸಾದಪ್ರೀತಿಗಳೆಂಬ ವಿಶೇಷಗಳಿಂದಲೇ ಉಪಾಯೋಪೇಯತ್ವಭೇದವು ಸಂಭವಿಸಿರುವುದರಿಂದ, ವಿಶೇಷಣಗಳಿಂದ ಭೇದವು ತೋರಿಬಂದರೂ, ಅವುಗಳಿಂದ ವಿಶಿಷ್ಟನಾದ ಭಗವಂತನಿಗೆ ಐಕ್ಯವೇ ಗ್ರಹಿಸಲ್ಪಡುವುದು. ಇದರಿಂದ ಭಗವಂತನಿಗೇ ಉಪಾಯೋಪೇಯತ್ವಗಳೆರಡೂ ಒಪ್ಪುವುವು. ಎಂದರೆ ಪೂರ್ವಭಾವಿಯಾದ ಕಾರಣವೂ, ಪಶ್ಚಾದ್ಭಾವಿಯಾದ ಕಾರ್ಯವೂ, ಪ್ರಸಾದ ಪ್ರೀತಿಗಳೆಂಬ ವಿಶೇಷಣಭೇದಗಳಿಂದಲೇ ಹುಟ್ಟುವುವೇ ಹೊರತು ಸ್ವರೂಪದಿಂದಲ್ಲ. ಇದರಿಂದ ಭಗವಂತನಿಗೆ ಪ್ರಾಗಭಾವ ಪಶ್ಚಾದ್ಭಾವಿತ್ವವಾಗಲಿ (ಮೊದಲಿಲ್ಲದೆ ಈಗ ಇರುವುದು)ಪ್ರಾಗ್ಭಾವ ಪಶ್ಚಾದಭಾವವಾಗಲಿ (ಮೊದಲಿದ್ದು ಈಗ ಇಲ್ಲದಿರುವುದು) ಸಂಭವಿಸದು. ಇದಕ್ಕಾಗಿಯೇ ಪ್ರಸಾದವೇ ಉಪಾಯವೆಂದೂ, ಪ್ರೀತಿಯೇ ಉಪೇಯವೆಂದೂ ಆಚಾರ್ಯರ ನಿರ್ವಾಹವು.

ಆದರೆ "ಅನನ್ಯಸಾಧ್ಯೇ ಸ್ವಾಭೀಷ್ಟೇ" ಎಂದು ಪ್ರಪತ್ತಿ ಮೊದಲಾದುವುಗಳಿಂದ ಸಾಧ್ಯವಾದುದೇ ಮೋಕ್ಷವಲ್ಲವೆ? ಸಾಧ್ಯವೆಂದರೆ, ಮೊದಲಿಲ್ಲದೆ ಕೊನೆಗೆ ಉತ್ಪನ್ನವಾದುದು. "ಉತ್ಪನ್ನಸ್ಯ ವಿನಾಶಯೋಗಾತ್" ಎಂಬ ನ್ಯಾಯದಿಂದ ಉತ್ಪನ್ನವಾದ ವಸ್ತುವಿಗೆ ನಾಶವೆಂಬುದು ಸಿದ್ಧವು. ಇಲ್ಲಿಯೂ ಉಪೇಯವಾದ ಭಗತ್ಪ್ರಾಪ್ತಿರೂಪವೋಕ್ಷಕ್ಕೆ ಸಾಧ್ಯತ್ವವನ್ನು ಹೇಳುವುದರಿಂದ, ಮೋಕ್ಷವನ್ನೂ ನಶ್ವರವೆಂದು ಹೇಳಬೇಕಾಗುವುದಲ್ಲವೆ? ಇದು ಹೇಗೆ?" ಎಂದರೆ, ಮೋಕ್ಷವೆಂಬುದು ನಶಿಸದು. ಇದಕ್ಕೆ ಎರಡು ಪ್ರಕಾರಗಳುಂಟು. ಆದರಲ್ಲಿ ಸಾಧ್ಯವೆಂಬುದೊಂದು. ಈ ಸಾಧ್ಯವೆಂಬುದು ಉತ್ಪಾದ್ಯವೆಂದೂ, ಪ್ರಾಪ್ಯವೆಂದೂ, ವಿಕಾರ್ಯವೆಂದೂ, ಸಂಸ್ಕಾರ್ಯವೆಂದೂ ನಾಲ್ಕುಬಗೆಯಾಗಿರುವುದು ಅವುಗಳಲ್ಲಿ ಉತ್ಪಾದ್ಯವೆಂದರೆ, ಘಟಪಟನಿರ್ಮಾಣಗಳಂತೆ ಮೊದಲಿಲ್ಲದೆ ಆಮೇಲೆ ಹುಟ್ಟುವುದು. ಪ್ರಾಪ್ಯವೆಂದರೆ, "ಗ್ರಾಮಂ ಗಚ್ಛತಿ" "ರಾಜಾನಂ ಗಚ್ಛತಿ" "ಗಾಂ ದೋಗ್ಧಿ ಪಯಃ"ಗ್ರಾಮಕ್ಕೆ ಹೋಗುವನು. ರಾಜನಿಗೆ ಸೇರುವುದು. ಹಸುವನ್ನು ಹಾಲು ಕರೆಯುವನು. ಎಂಬತೆ ಮೊದಲೇ ಸಿದ್ಧವಾದ ವಸ್ತುವನ್ನು ಅಧಿಕಾರಿಯ ವಶಕ್ಕೊಪ್ಪಿಸುವುದು. ವಿಕಾರ್ಯವೆಂದರೆ ಹಾಲನ್ನು ಮೊಸರಾಗಿಸುವಂತೆಯೂ, ಸೀಸವನ್ನು ಕರಗಿಸುವಂತೆಯೂ, ಮೊದಲಿದ್ದುದನ್ನೇ ರೂಪಾಂತರಹೊಂದಿಸುವುದು. ಸಂಸ್ಕಾರ್ಯವೆಂದರೆ, ಮೊದಲಿದ್ದ ವಸ್ತುವನ್ನೇ ಕಾರ್ಯಾಂತರಯೋಗ್ಯವಾಗುವಂತೆ ಮಾಡುವುದು. ಹೀಗಿರುವುದರಿಂದ ಇಲ್ಲಿಯೂ "ಬ್ರಹ್ಮ ವಿದಾಪ್ನೋತಿಪರಂ" ಎಂದೂ, "ಪರಾತ್ಪರಂ ಪುರುಷಮುಪೈತಿ ದಿವ್ಯಂ" ಎಂದೂ, "ಪರಂ ಜ್ಯೋತಿರುಪಸಂಪದ್ಯ" ಎಂದೂ ಮೊದಲೇ ಸಿದ್ಧರೂಪನಾಗಿರುವ ಪರಮಾತ್ಮನನ್ನು ಚೇತನನು ಸೇರುವುದರಿಂದ,ಈ ಪ್ರಾಪ್ಯವಸ್ತುವು ಸಾಧ್ಯವಾದರೂ ನಿತ್ಯವೆನಿಸುವುದು. ಇದೊಂದು ರೀತಿಯು.ಮತ್ತೊಂದು ಪ್ರ

ಕಾರವೇನೆಂದರೆ "ನಿತ್ಯೋ ನಿತ್ಯಾನಾಂ" ಎಂದೂ, "ಅಜೋಹ್ಯೇಕ." ಎಂದೂ "ನಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ" ಎಂದೂ, ಆತ್ಮಗಳು ನಿತ್ಯಗಳಾದುದರಿಂದ, ಆ ಆತ್ಮಧರ್ಮಗಳಾದ ಜ್ಞಾನಾನಂದಾದಿಗಳೂ ನಿತ್ಯಗಳು: ಹೀಗೆ ನಿತ್ಯವಾದ ಆತ್ಮಕ್ಕೆ "ತಮಸಾ ಗೂಢಮಗ್ರೇ ಪ್ರಕೇತಂ" ಎಂದೂ, "ತಯಾ ತಿರೋಹಿತತ್ವಾಚ್ಚ ಶಕ್ತಿ: ಕ್ಷೇತ್ರಜ್ಞಸಂಜ್ಞಿತಾ" ಎಂದೂ, ಆತ್ಮಸ್ವರೂಪಕ್ಕೂ, ಆತ್ಮ ಧರ್ಮಗಳಿಗೂ ತಿರೋಧಾನವನ್ನುಂಟುಮಾಡುವುದು ಪ್ರಕೃತಿಸಂಸರ್ಗವು. ಆ ಸಂಸರ್ಗವು ನಶಿಸಿಹೋದಮೇಲೆ "ಸ್ವೇನರೂಪೇಣಾಭಿನಿಷ್ಪದ್ಯತೇ" ಎಂದೂ, "ಆವಿರ್ಭೂತಸ್ವರೂಪಸ್ತು" ಎಂದೂ, 'ಪ್ರಕಾಶ್ಯಂತೇ ನ ಜನ್ಯಂತೇ ನಿತ್ಯಾ ಏವಾತ್ಮನೋ ಹಿತೇ" ಎಂದೂ ಆ ಗುಣಗಳು ಆತ್ಮಕ್ಕೆ ನಿತ್ಯಗಳಾದುದರಿಂದ,ಮೊದಲು ಮರೆಸಲ್ಪಟ್ಟಿದ್ದು, ತತ್ಕಾಲದಲ್ಲಿ ಪ್ರಕಾಶಿಸುವುವೇ ಹೊರತು, ಹೊಸದಾಗಿ ಹುಟ್ಟಿದುವಲ್ಲ. ಮತ್ತು ಆತ್ಮದ ಸ್ವಾಭಾವಿಕಾಕಾರವೂ ವಿಸ್ಮೃತವಾಗಿದ್ದು ಆವಿರ್ಭವಿಸಿದುವೇಹೊರತು ಉತ್ಪಾದ್ಯವಲ್ಲದುದರಿಂದ ಮೋಕ್ಷಾತ್ಮಗಳೆರಡೂ ನಿತ್ಯಗಳು.

## ಶರಣಾಗತಿಯ ಮೇಲ್ಮೆಯು.

"ಭಕ್ತಿಗೆ ಶಾಸ್ತ್ರವಿಹಿತಗಳಾದ ವರ್ಣಾಶ್ರಮಧರ್ಮಗಳಾದರೂ ಉಂಟು. ಪ್ರಪತ್ತಿಗಾದರೋ "ಸರ್ವಧರ್ಮಾನ್ ಪರಿತ್ಯಜ್ಯ" ಎಂದು ಇದ್ದ ಧರ್ಮಗಳನ್ನೂ ಬಿಡುವಂತೆ ಹೇಳಲ್ಪಟ್ಟಿರುವುದು. ಆದುದರಿಂದ ಪ್ರಪತ್ತಿಗಿಂತಲೂ ಭಕ್ತಿಯೇ ಮೇಲೆಂದು ತೋರುವುದಿಲ್ಲವೆ?" ಎಂದರೆ, ಹಾಗಲ್ಲ. "ಶಬ್ದಪ್ರಮಾಣಕೇಹ್ಯರ್ಥೇಯಥಾಶಬ್ದಂ ವ್ಯವಸ್ಥಿತಿ:" ಎಂದು ಶಾಸ್ತ್ರಪ್ರಮಾಣವುಳ್ಳವರಾಗಿದ್ದರೆ, ಆ ಶಾಸ್ತ್ರವು ಹೇಳಿದಂತೆ ಗ್ರಹಿಸತಕ್ಕವರಾಗಿರುವೆವು. ಎಂದರೆ" ಬಹವೋ ಹಿ ಯಥಾಮಾರ್ಗಾ ವಿಶನ್ತ್ಯೇಕಂ ಮಹಾಪುರಂ। ತಥಾ ಜ್ಞಾನಾನಿ ಸರ್ವಾಣಿ ಪ್ರವಿಶಂತಿತಮೀಶ್ವರಂ" ಎಂಬುದಾಗಿ, ಒಂದು ಪಟ್ಟಣವನ್ನು ಪ್ರವೇಶಿಸುವುದಕ್ಕೆ ಹಲವು ದಾರಿಗಳು ಏರ್ಪಟ್ಟಿರುವಂತೆ, ಭಗವತ್ಪ್ರಾಪ್ತಿಗೆ ಹಲವು ಉಪಾಯಗಳುಂಟೆಂದು ಹೇಳಿ, ಒಂದುಪಾಯವು ಸ್ವತ: ಅಶಕ್ತವಾದರೆ,ಅದಕ್ಕೆ ಬೇರೆ ಕೆಲವು ಸಹಕಾರಿಗಳನ್ನು ವಿಧಿಸಿ, ಯಾವ ಉಪಾಯವು ಸ್ವತ: ಶಕ್ತವಾಗಿದೆಯೋ ಅದಕ್ಕೆ ಬೇರೆ ಸಹಕಾರಿಯು ಬೇಕಾದುದಿಲ್ಲವೆಂದೂ ಶಾಸ್ತ್ರವು ವಿಧಿಸಿರುವುದು. ಈ ಪ್ರಕಾರಭೇದದಿಂದ ಒಂದಕ್ಕೊಂದಕ್ಕೆ ವೈಲಕ್ಷಣ್ಯವೇನೂ ಬಾರದು. ಅದರೆ ಸ್ವರೂಪನಿರೂಪಕಧರ್ಮಗಳೆಂದೂ ನಿರೂಪಿತಸ್ವರೂಪಕ್ಕೆ ವಿಶೇಷಸಮರ್ಪಕಧರ್ಮಗಳೆಂದೂ ಎರಡು ಬಗೆಯುಂಟು. ಆ ವಿಶೇಷಸಮರ್ಪಕಗಳನ್ನು ನೋಡಿದರೆ ಪ್ರಪತ್ತಿಯೇ ಮೇಲೆನಿಸುವುದು. ಹೇಗೆಂದರೆ:— "ಸೋನ್ವೇಷ್ಟವ್ಯಸ್ಸವಿಜಿಜ್ಞಾಸಿತವ್ಯ:" ಎಂದೂ "ಬ್ರಹ್ಮವಿದಾಪ್ನೋತಿ ಪರಂ" ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈ:" ಎಂದೂ, "ತಮೇವೈ

ಕಂ ಚಾನಥಾತ್ಮಾನಂ, ಅನ್ಯಾವಾಚೋ ವಿಮುಂಚಥ, ಅಮೃತ ಸ್ಯೈಷಸೇತು."ಎಂದೂ "ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" ಎಂದೂ ವೇದಾಂತ ವಿಹಿತವಾಗಿಯೂ ಮೋಕ್ಷಾದಿಸಾಧನವಾಗಿಯೂ ಇರುವುದರಲ್ಲಿ,ಭಕ್ತಿಪ್ರಪತ್ತಿಗಳೆರಡೂ ಸಮಾನಗಳಾಗಿಯೇ, ಇರುವುವು.ಆದರೆ ಪ್ರಪತ್ತ್ಯುಪಾಯಸ್ವರೂಪವು, ಭಕ್ತ್ಯುಪಾಯಸ್ವರೂಪದಂತೆ ಇವನಿಂದ ಸಾಧಿಸಲ್ಪಡಬೇಕಾದ ಸ್ಥಿತಿಯಲ್ಲಿಲ್ಲದೆ, "ಸಿದ್ಧರೂಪಂ ಪರಂಬ್ರಹ್ಮ "ಎಂದು ಮೊದಲೇ ಸಿದ್ಧರೂಪವಾಗಿರುವುದು. "ಧ್ಯಾಯತೇ" "ಧ್ರುವಾಸ್ಮೃತಿ." ಎಂದು ಸ್ಮೃತಿ ಸಂತಾನ ರೂಪವಾದ ಜ್ಞಾನವಾಗಿ ಅಚೇತನವೆನಿಸಿಕೊಳ್ಳದೆ, "ಯಸ್ಸರ್ವಜ್ಞ ಸ್ಸರ್ವವಿತ್" "ಸತ್ಯಂ ಜ್ಞಾನಂ" ಇತ್ಯಾದಿರೀತಿಯಿಂದ ತಾನೇ ಜ್ಞಾತೃವಾಗಿಯೂ, ಸದಾತನ ಜ್ಞಾನಸ್ವರೂಪವಾಗಿಯೂ ಇರುವುದು. ಆ ಉಪಾಯವನ್ನು ಸ್ವೀಕರಿಸಿದ ಪಕ್ಷದಲ್ಲಿ "ಆವೃತ್ತಿರಸಕೃದುಪದೇಶಾತ್" "ಅನೇಕ ಜನ್ಮ ಸಂಸಿದ್ಧ:"ಎಂಬಂತೆ ಚಿರಕಾಲಸಾಧ್ಯವೆನಿಸಿಕೊಳ್ಳದೆ, "ತದ್ದ್ವಯಂ ಸಕೃದುಚ್ಚಾರಿತೋಭವತಿ" ಎಂಬಂತೆ ಸಕೃತ್ಪ್ರಯೋಗ ಲಭ್ಯವಾಗಿರುವುದು. "ತಸ್ಯ ತಾವದೇವಚಿರಂ ಯಾವ ದಧಿಕಾರಂ" ಎಂಬಂತೆ ಅತಿವಿಳಂಬವಾಗಿ ಫಲವನ್ನು ಕೋರಿಸತಕ್ಕುದಾಗಿಲ್ಲದೆ "ಉಪಾಯೋಽಯಂ ಚತುರ್ಥಸ್ತೇ ಪ್ರೋಕ್ತಶ್ಶೀಘ್ರಫಲೋದಯ:"ಎಂಬಂತೆ ಶೀಘ್ರ ಫಲಪ್ರದವಾಗಿರುವುದು. "ತಪಸಾಽನಾಶಕೇನ"ಎಂದೂ, "ಯಜ್ಞೋದಾನಂ ತಪಶ್ಚೈವ" ಎಂದೂ, "ಪಂಚಾಗ್ನಯೋ ಯೇಚ ತ್ರಿಣಾಚಿಕೇತಾ:" ಎಂದೂ, ತಪಸ್ಸಂತಾಪ ಲಬ್ಧಸ್ತೇಯೋಽಯಂ ಧರ್ಮಪರಿಗ್ರಹ:" ಎಂದೂ, ""ಕಾರ್ಯಂ ತ್ರಿಷ್ವಭಿಷೇಕಶ್ಚ ಕಾಲೇಕಾಲೇಚ ನಿತ್ಯಶ:"ಎಂದೂ, ಮಳೆ ಬಿಸಿಲೆನ್ನದೆ, ತಪಸ್ಸಿನ ನೆವದಿಂದ ಅಹೋರಾತ್ರವೂ ಬೆಂಕಿಗೂ ಚಳಿಗೂ ಮೈಯೊಡ್ಡಿ, ಕಷ್ಟಪಟ್ಟು ದೇಹವನ್ನು ಶೋಷಿಸುವಂತಿಲ್ಲದೆ "ಆನಂದೋ ಬ್ರಹ್ಮ" "ಕಂಬ್ರಹ್ಮ ಖಂ ಬ್ರಹ್ಮ"ಎಂದೂ, "ಸರ್ವಗಂಧಸ್ಸರ್ವರಸ:"ಎಂದೂ ಕೇವಲ ನಿತ್ಯಾನಂದರೂಪವಾಗಿರುವುದು. "ಜ್ಞಾನದೋಷಪರಿಭ್ರಷ್ಟಶ್ಚಂಡಾಲೀಂ ಯೋನಿ ಮಾಗತ:" ಎಂದೂ "ಮಿಥ್ಯಾಪ್ರಯುಕ್ತೋ ಯಜಮಾನಂ ಹಿನಸ್ತಿ" ಎಂದೂ ಸ್ವಲ್ಪತಪ್ಪಿನಡೆದರೂ ಮಹಾಪಾಯಕ್ಕೆ ಹೇತುಗಳಾದ ಜ್ಞಾನಯಜ್ಞಾದಿಗಳಂತಲ್ಲದೆ, "ಯಥಾತಥಾವಾಪಿ ಸಕೃತ್ಕೃತೋಂಜಲಿ:" ಎಂಬಂತೆ ಅಪಾಯರಹಿತವಾಗಿರುವುದಲ್ಲದೆ "ದುರಾಚಾರೋಽಪಿ ಸರ್ವಾಶೀ ಕೃತಘ್ನೋ ನಾಸ್ತಿಕ: ಪುರಾ। ಸಮಾಶ್ರಯೇದಾದಿದೇವಂ ಶ್ರದ್ಧಯಾ ಶರಣಂಯದಿ। ನಿರ್ದೋಷಂ ವಿದ್ಧಿ ತಂ ಜಂತುಂ ಪ್ರಭಾವಾತ್ಪರಮಾತ್ಮನ:" ಎಂಬಂತೆ, ಒಂದು ವೇಳೆ ಪದ್ಧತಿಯನ್ನು ತಪ್ಪಿನಡಿದರೂ, ಆ ದೋಷಗಳನ್ನು ನೀಗಿಸಿ ಅನುಷ್ಠಾತೃವನ್ನು ಉಜ್ಜೀವಿಸುವಂತೆ ಮಾಡುವುದು. ಇವೇಮೊದಲಾದ ಇನ್ನೂ ಅನೇಕಗುಣಪೌಷ್ಕಲ್ಯಗಳಿಂದ ಭಕ್ತ್ಯಾದಿಗಳಿಗಿಂತಲೂ ಪ್ರಪತ್ತಿಯೇ ಬಹಳಮೇಲೆಂಬುದು ಸಿದ್ಧವು.

ಹೀಗಿದ್ದರೂ ಈ ವಿಭೀಷಣನು ಈಗ ಪ್ರಪತ್ತಿಯನ್ನುಮಾಡಿದುದು ಕೇವಲಸ್ವ ಪ್ರಯೋಜನಕ್ಕಾಗಿಯೇ ಅಲ್ಲವೆ? "ರಾಜ್ಯಂ ಪ್ರಾರ್ಥಯಮಾನಶ್ಚ ಬುದ್ಧಿಪೂರ್ವಮಿ ಹಾಗತಃ" ಎಂದು ನಿಮ್ಮ ಹನುಮಂತನೇ ಹೇಳಿದನಲ್ಲವೆ! ಎಂದರೆ, ಹಾಗಲ್ಲ. (ತವಾ ಸ್ಮೀತಿಚಯಾತೇ) ಅನನ್ಯಪ್ರಯೋಜನನಾಗಿಯೇ ಬಂದಿರುವನು. ಇಲ್ಲಿನ ಚಕಾರವು ಅವ ಧಾರಣಾರ್ಥಕವು. ಒಂದುವೇಳೆ ಹನುಮಂತನು ಹಿಂದೆ ತಾನು ರಾವಣನ ಕೈಗೆ ಸಿಕ್ಕಿ ಬಿ ದ್ದಾಗ, ವಿಭೀಷಣನು ರಾವಣನಿಗೆ ದೂತವಧವು ಕೂಡದೆಂದು ಹೇಳಿ, ತನ್ನ ಕೊಲೆ ಯನ್ನು ತಪ್ಪಿಸಿ ಕಾಪಾಡಿದ ಉಪಕಾರಕ್ಕೆ ಪ್ರತ್ಯುಪಕಾರವಾಗಿ ಈಗ ಅವನಿಗೆ ರಾಜ್ಯವ ನ್ನು ಕೊಡಬೇಕೆಂದು ಹೇಳಿರಬಹುದೇಹೊರತು, ವಿಭೀಷಣನು ತಾನಾಗಿ ಆ ಮಾ ತನ್ನು ಹೇಳಿದವನಲ್ಲ. "ತ್ಯಕ್ತ್ವಾ ಪುತ್ರಾಂಶ್ಚ" ಎಂದೂ, "ಪರಿತ್ಯಕ್ತಾಮಯಾ ಲಂಕಾ ಮಿತ್ರಾಣಿಚ ಧನಾನಿಚ! ಭವದ್ಗತಂಮೇರಾಜ್ಯಂಚ ಜೀವಿತಂ ಚಸುಖಾನಿಚ" ಎಂದೂ, ತ ನ್ನ ಸರ್ವಸ್ವವನ್ನೂ ಬಿಟ್ಟುಬಿಟ್ಟು "ನಿನ್ನವನೇ ನಾನೆಂದು" ಬಂದಿರುವನು. ಮತ್ತು (ತ ವಾಸ್ಮಿ) ನಾನು ನನಗೆಂದು ಸ್ವಾತಂತ್ರ್ಯವನ್ನೂ ತೋರಿಸಿದವನಲ್ಲ! ತಾನು ರಾವಣನಕ ಡೆಯವನೆಂದು ಇತರಪಾರತಂತ್ರ್ಯವನ್ನೂ ತೋರಿಸಿದವನಲ್ಲ. ನಾನು ನಿನ್ನವನೇ ಎಂದು ನಿನ್ನಲ್ಲಿಗೆ ಬಂದಿರುವನು (ತವಾಸ್ಮಿ)"ಅಹಂ ಬ್ರಹ್ಮಾಸ್ಮಿ" ಎಂಬಂತೆ ಸಾಮಾನಾ ಧಿಕರಣ್ಯದಿಂದ ಹೇಳಿದರೂ ಶೇಷಶೇಷಭಾವವು ಸಿದ್ಧಿಸುವುದಲ್ಲವೆ? ಹಾಗಿಲ್ಲದೆ ವ್ಯಧಿಕ ರಣವಾಗಿಯೇ ಹೇಳಿರುವುದೇಕೆ? ಎಂದರೆ, ಸಾಮಾನಾಧಿಕರಣ್ಯದಿಂದ ಜೀವಾತ್ಮರಿಗೆ ಮೇ ಲೆ ಸ್ವರೂಪೈಕ್ಯವು ತೋರುವುದರಿಂದ ಭ್ರಮೆಯುಂಟಾಗಬಹುದೆಂದೂ, ಈ ಐಕ್ಯವಿ ಲ್ಲವೆಂಬುದನ್ನು ಪ್ರೋಕ್ತ್ವಾಪರಗಳಿಂದಲೂ, ಪ್ರಮಾಣಾಂತರಗಳಿಂದಲೂ, ಉಪಪಾದಿಸಬೇ ಕಾಗಿ ಬರುವುದೆಂದೂ ಭಾವಿಸಿ, ಜೀವಪರಮಾತ್ಮ ಭೇದವು ವ್ಯಕ್ತವಾಗಿ ತಿಳಿಯುವುದಕ್ಕಾ ಗಿಯೇ ಹೀಗೆ ಹೇಳಿರುವನೆಂದು ಗ್ರಾಹ್ಯವು. ಆದರೆ ಸ್ವರೂಪಾನುವಾದ ಪುರುಷಾರ್ಥವು "ಶ್ರೀಮತೇನಾರಾಯಣಾಯ"ಎಂದೂ, "ಸಹ ವೈದೇಹ್ಯಾ ಅಹಂ ಸರ್ವಂ ಕರಿಷ್ಯಾಮಿ" ಎಂದೂ, ಅವರಿಬ್ಬರ ಸೇರುವೆಯಲ್ಲಿಯೇ ಅಲ್ಲವೆ! ಹಾಗಿಲ್ಲದೆ ಪ್ರತ್ಯೇಕವಾಗಿ ನಿನ್ನಲ್ಲಿ ಮಾತ್ರ ಶೇಷತ್ವವನ್ನವಲಂಬಿಸಿದರೆ ಏಕಾಯನನಾಗುವುದಿಲ್ಲವೆ? ಎಂದರೆ" ಹಿಂದೆ "ಪಿತ್ರಾಚಪರಿತ್ಯಕ್ತಃ" ಎಂಬಲ್ಲಿ "ಮಾತ್ರಾಚಪರಿತ್ಯಕ್ತಃ" ಎಂದು ಅನುಕ್ತಸಮು ಚ್ಚಯವಾದಂತೆ ಇಲ್ಲಿಯೂ "ತವಾಸ್ಮೀತಿಚ" ಎಂಬುದು, "ವೈದೇಹ್ಯಾಶ್ಚಾಸ್ಮಿ" ಎಂ ದು ಅನುಕ್ತಸಮುಚ್ಚಯವಾಗಿ ಮಿಥುನವಿಷಯದಲ್ಲಿಯೇ ಅಪೇಕ್ಷಿತವೆಂದು ಭಾವವು. ಆದರೆ, ಈ ಧರ್ಮಗಳೆಲ್ಲವನ್ನೂ ಬಲ್ಲ ವಿಭೀಷಣನು ಸರ್ವವಿಷಯದಲ್ಲಿಯೂ ನಿನಗೆ ಪ ರತಂತ್ರನಾಗಿ ನೀನು ನಡೆಸಿದಂತೆಯೇ ಹೋಗಬೇಕಾಗಿರುವಾಗ,ಹೀಗೆ ನಿನ್ನನ್ನು ನಿರ್ಬಂ

ಧಿಸುವ್ವದುಂಟೆ? ಎಂದರೆ "ಯಾಚತೇ" ತನಗಿದು ಅಭಿಮತವೆಂಬುದನ್ನು ತೋರಿಸುವುದ ಕ್ಕಾಗಿ ಯಾಚಿಸುವವನೇ ಹೊರತು ನಿರ್ಬಂಧವಲ್ಲವು. "ಆದರೆ ನೀನು ಇದಕ್ಕಾಗಿ ಅವನಿಗೆ ಮಾಡಬೇಕಾದ ಅನುಗ್ರಹವೇನು? ಎಂದರೆ (ಸರ್ವಭೂತೇಭ್ಯ: ಅಭಯಂ ದದಾಮಿ) "ಅಥಸೋಽಭಯಂ ಗತೋ ಭವತಿ" ಎಂಬಂತೆ, ಸಮಸ್ತ ಭೂತಗಳಿಂದಲೂ ಭಯ ನಿವೃತ್ತಿರೂಪವಾದ ಮೋಕ್ಷವನ್ನು ಕೊಡುವೆನೆಂದು ಭಾವವು. (ಏತದ್ವ್ರತಂ)"ಪ ರಿತ್ರಾಣಾಯ ಸಾಧೂನಾಂ ಸಂಭವಾಮಿ" ಎಂಬಂತೆ ಇದು ನನಗೆ ಸತ್ತಾಪ್ರಯುಕ್ತ ವು. ಇದು ಮುಖ್ಯವಾಗಿ ಯಾರಿಗೆ ಅನುಷ್ಠೇಯವೆಂದರೆ (ಮಮ) ಸೃಷ್ಟಿಕರ್ತನಾದ ಬ್ರಹ್ಮನಿಗೂ ಕೃತ್ಯವಲ್ಲ. ಸಂಹಾರಕನಾದ ರುದ್ರನಿಗೂ ಕೃತ್ಯವಲ್ಲ. "ನಹಿಪಾಲನಸಾಮ ರ್ಥ್ಯಮೃತೇ ಸರ್ವೇಶ್ವರಾದ್ಧರೇ:" ಎಂದೂ, "ರಕ್ಷಾರ್ಥಂ ಸರ್ವಲೋಕಾನಾಂ ವಿ ಷ್ಣುತ್ವಮುಪಜಗ್ಮಿವಾನ್" ಎಂದೂ ರಕ್ಷಣಕಾರ್ಯವೆಂಬುದು ನನಗೊಬ್ಬನಿಗೇ ಮುಖ್ಯ ಕೃತ್ಯವೆಂದೂ ಭಾವವು.

## ಚರಮ ಶ್ಲೋಕತ್ವ ಸಮರ್ಥನವು.

ಮಹಾಭಾರತದಲ್ಲಿ ಭಗವದ್ಗೀತೆಯ ಕೊನೆಯಲ್ಲಿರುವ "ಸರ್ವಧರ್ಮಾನ್ಪರಿತ್ಯಜ್ಯ" ಇತ್ಯಾದಿ ಚರಮಶ್ಲೋಕದಂತೆ ರಾಮಾಯಣಕ್ಕೆ ಇದೇ ಚರಮಶ್ಲೋಕವೆಂದು ನಿ ರ್ಣಯಿಸಿರುವರು. ಆದರೆ ಸರ್ಗದನಡುವೆ ಇರುವ ಈ ಶ್ಲೋಕಕ್ಕೆ ಚರಮಶ್ಲೋಕ ತ್ವವೆಂಬ ವ್ಯವಹಾರವು ಹೇಗೆ? ಎಂದರೆ, ಇಲ್ಲಿ ಚರಮತ್ವಕ್ಕೆ ಆದ್ಯಂತಗಳು ಕಾ ರಣವಲ್ಲ. ಭಾರತದಲ್ಲಿ ಕರ್ಮಜ್ಞಾನಾದ್ಯುಪಾಯಗಳನ್ನು ಮೊದಲು ವಿಸ್ತಾರವಾಗಿ ವಿವರಿಸಿ, ಕೊನೆಗೆ ಪ್ರಪತ್ತಿಯನ್ನು ಚರಮೋಪಾಯವಾಗಿ ವಿಧಿಸಿದುದರಿಂದಲೇ, ಅದು ಚರಮಶ್ಲೋಕವೆನಿಸಿತು. ಇದರಲ್ಲಿಯೂ ಮೊದಲು ಅಂಗದಾದಿಗಳು ವಿಭೀಷಣನನ್ನು ಸ್ವೀಕರಿಸಕೂಡದೆಂದು ತಮ್ಮತಮ್ಮ ಮತಗಳನ್ನು ಬೇರೆಬೇರೆಯಾಗಿ ತಿಳಿಸಲು, ಅ ವೆಲ್ಲವನ್ನೂ ಆಕ್ಷೇಪಸಮಾಧಾನಗಳೊಡನೆ ಸಿದ್ಧಾಂತೀಕರಿಸಿ, ಕೊನೆಗೆ ಹೇಳಿದ ಶ್ಲೋಕ ವಾದುದರಿಂದ ಚರಮವೆನಿಸಿಕೊಳ್ಳುವುದು. ಅಲ್ಲಿಯೂ (ಮಹಾ ಭಾರತದಲ್ಲಿಯೂ) ಐಶ್ವರ್ಯವನ್ನು ಕಳೆದುಕೊಂಡವನಿಗೆ ಆ ಐಶ್ವರ್ಯವು ಲಭಿಸುವಂತೆ ಮಾಡಬೇಕಾಯಿತು. ಇಲ್ಲಿಯೂ ರಾಜ್ಯಭ್ರಷ್ಟನಾಗಿ ಬಂದ ವಿಭೀಷಣನಿಗೆ ರಾಜ್ಯವನ್ನು ಕೊಡಿಸಬೇಕಾಗಿರುವು ದು. ಇಲ್ಲಿಯೂ ಸೇನೆಯನಡುವೆ ನಿಂತು ಹೇಳಿದ ವಾಕ್ಯವಾಗಿರುವುದು. ಅಲ್ಲಿಯೂ ಸೇನೆ ಯನಡುವೆ ನಿಂತುಹೇಳಿದ ವಾರ್ತೆಯು. ಅಲ್ಲಿ ಅರ್ಜುನನ ಶೋಕನಿವೃತ್ತಿಗಾಗಿ ಹೇಳಿದ ವಾ ರ್ತೆಯು. ಇಲ್ಲಿಯೂ ವಿಭೀಷಣನ ಶೋಕನಿವೃತ್ತಿಗಾಗಿ ಹೇಳುವ ವಾರ್ತೆಯಾಗಿರುವುದು. ಅದೂ ಒಬ್ಬಗೋಪಾಲನ (ಗೊಲ್ಲನ) ವಾಕ್ಯವು. ಇದೂ ಒಬ್ಬಗೋಪಾಲನ (ಭೂಪಾ ಲನ) ವಾಕ್ಯವು. ಹೀಗೆ ಇವೆರಡಕ್ಕೂ ಪರಸ್ಪರಸಾಮ್ಯವು ಪೂರ್ಣವಾಗಿರುವುದರಿಂದ, ಇದು ರಾಮಾಯಣಚರಮಶ್ಲೋಕವೆಂದೇ ಗ್ರಾಹ್ಯವು.

ಇಷ್ಟೇ ಅಲ್ಲದೆ ಭಾರತಚರಮಶ್ಲೋಕಕ್ಕಿಂತಲೂ ಈರಾಮಾಯಣಚರಮ ಶ್ಲೋಕದಲ್ಲಿ ಕೆಲವು ವಿಶೇಷಗಳುಂಟೆಂದೂ ಹೇಳಬಹುದು. ಹೇಗೆಂದರೆ;—ಅದು ರಥದಮೇಲೆ ನಿಂತು ಹೇಳಿದಮಾತು. ಇದು ನೈಷ್ಠಿಕನಂತೆ, ನೆಲದಮೇಲೆ ನಿಂತು ಹೇಳಿದ ವಾಕ್ಯವು. ಅದರಲ್ಲಿ "ಮಾಂವ್ರಜ" ನನ್ನನ್ನು ಸೇರು ! ಎಂದು ಶರಣ್ಯನು ತಾನಾಗಿ ಆಶೆಪಟ್ಟಂತೆ ಹೇಳಲ್ಪಟ್ಟಿರುವುದು. ಇಲ್ಲಿಯೋ "ಸಂಪ್ರಾಪ್ತಂ" ಎಂಬುದಾಗಿ ಶರಣಾರ್ಥಿಯು ತಾನೇ ಸಮ್ಮತಿಸಿಬಂದಂತೆ ಹೇಳಲ್ಪಟ್ಟಿರುವುದು ಅದರಲ್ಲಿ "ಧರ್ಮಾನ್ಪರಿತ್ಯಜ್ಯ"ಎಂದು ಧರ್ಮತ್ಯಾಗವು ಮಾಡಲ್ಪಟ್ಟಿರುವುದು. ಇಲ್ಲಿಯೋ " ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿಚ ಧನಾನಿಚ" ಎಂದು ಧರ್ಮಿತ್ಯಾಗವೇ ನಡೆಸಲ್ಪಟ್ಟಿರುವುದು. ಅದರಲ್ಲಿ "ಷೋಡಶ ಸ್ತ್ರೀಸಹಸ್ರಾಣಿ" ಎಂಬ ಬಹುದಾರಪರಿಗ್ರಹವನ್ನು ಮಾಡಿದವನು ಉಪದೇಶಿಸಿದ ವಾಕ್ಯವು. ಇದು "ನರಾಮಃ ಪರದಾರಾಂಶ್ಚ ಚಕ್ಷುರ್ಭ್ಯಾಮಪಿ ಪಶ್ಯತಿ" ಎಂಬಂತೆ ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡದ ಪರಮಶುದ್ಧನಾದ ಏಕದಾರವ್ರತನ ಮಾತು. ಅದನ್ನು ಹೇಳಿದವನು ಲೋಕದಲ್ಲಿ ಕಪಟನಾಟಕಸೂತ್ರಧಾರಿಯೆಂದು ಪ್ರಸಿದ್ಧಿಹೊಂದಿದವನು. ಇದನ್ನು ಹೇಳಿದವನು "ಸತ್ಯವಾಕ್ಯ:" ಎಂದೂ "ರಾಮೋ ದ್ವಿರ್ನಾಭಿಭಾಷತೇ" ಎಂದೂ ಮಹಾಸತ್ಯಸಂಧನೆಂದು ಪ್ರಸಿದ್ಧನಾದ ರಾಮನು. ಅಲ್ಲಿ ಕುದುರೆಯ ಚಾಟಿಯನ್ನು ಕೈಯಲ್ಲಿ ಹಿಡಿದ ಸಾರಥಿಯ ವಾಕ್ಯವು. ಇಲ್ಲಿ ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದ ರಾಜಾಧಿರಾಜನಾದ ದಾಶರಥಿಯ ವಾಕ್ಯವು. ಅಲ್ಲಿ ಶರಣಾಗತನ ಅಧ್ಯವಸಾಯವು ಹೇಳಲ್ಪಟ್ಟಿರುವುದು. ಇಲ್ಲಿ ಶರಣ್ಯನ ಅಧ್ಯವಸಾಯವೇ ಹೇಳಲ್ಪಡುವುದು. ಅಲ್ಲಿ ಶರಣಾಗತನನ್ನು ಪಾಪದಿಂದಮಾತ್ರವೇ ಬಿಡಿಸುವುದಾಗಿ ಹೇಳುವನು. ಇಲ್ಲಿ ತಾನು ಶರಣಾಗತನನ್ನೇ ಬಿಡುವುದಿಲ್ಲವೆಂದು ಹೇಳುವನು. ಅದರಲ್ಲಿ ದೋಷಿಯಾದವನನ್ನು ದೋಷದಿಂದ ಬಿಡಿಸುವುದಾಗಿಮಾತ್ರ ಹೇಳಿರುವನು. ಇಲ್ಲಿ ದೋಷಯುಕ್ತನನ್ನಾದರೂ ತಾನು ಬಿಡಲಾರೆನೆಂದು ಹೇಳುವನು. ಅದರಲ್ಲಿ ಕಾಲಾಂತರದಲ್ಲಿ ಸಂಭವಿಸಬಹುದಾದ ಅದೃಷ್ಟಫಲವು ಹೇಳಲ್ಪಡುವುದು. ಇಲ್ಲಿ ಸದ್ಯಃಫಲವಾದ ದೃಷ್ಟಪ್ರಯೋಜನವೇ ಹೇಳಲ್ಪಡುವುದು. ಅಲ್ಲಿ ಪ್ರತಿಬಂಧಕರಾರೂ ಇಲ್ಲದಿದ್ದಾಗ ಶರಣಾಗತನನ್ನು ರಕ್ಷಿಸಿದಂತೆ ಕಾಣಿಸಲ್ಪಟ್ಟಿರುವುದು. ಇಲ್ಲಿ ಪ್ರತಿಬಂಧಕರಿದ್ದಾಗಲೂ ರಕ್ಷಿಸಿದ ರೀತಿಯು ಹೇಳಲ್ಪಡುವುದು. ಅಲ್ಲಿ "ಮೋಕ್ಷಯಿಷ್ಯಾಮಿ" ಎಂಬ ಭವಿಷ್ಯದ್ರೂಪದಿಂದ ಫಲಕ್ಕೆ ಕಾಲವಿಳಂಬವು ತೋರುವುದು. ಇಲ್ಲಿ "ದದಾಮಿ"ಎಂಬ ವರ್ತಮಾನನಿರ್ದೇಶದಿಂದ ಸದ್ಯಃಫಲವು ಕಾಣುವುದು. ಈ ಕಾರಣಗಳಿಂದ ಭಾರತಚರಮಶ್ಲೋಕಕ್ಕಿಂತಲೂ ಈ ರಾಮಾಯಣ ಚರಮಶ್ಲೋಕವೇ ಮೇಲೆನಿಸುವುದೆಂದುಗ್ರಾಹ್ಯವು. (ತನಿಶ್ಲೋಕಿ.)

[1] ಆದುದರಿಂದ ಎಲೈ ಸುಗ್ರೀವನೆ ! ಮೊದಲು ನಿನ್ನನ್ನೇ ಪುರುಷ ಕಾರಕನ್ನಾಗಿ ಕೇಳಿಕೊಂಡ ಆ ವಿಭೀಷಣನನ್ನು ನೀನೇಹೋಗಿ ಇಲ್ಲಿಗೆ ಕರೆತಂದುಬಿಡು! ಎಲೆ ಮಿತ್ರನೆ!ಇನ್ನು ನಿನ್ನೊಡನೆ ಮುಚ್ಚುಮರೆಯೇಕೆ? ಆತನು ಅಂತರಿಕ್ಷದಲ್ಲಿ ನಿಂತು "ಶರಣು" ಎಂಬೀಮಾತನ್ನು ಹೇಳಿದಾಗಲೇ ನಾನು ಅವನಿಗೆ ಅಭಯವನ್ನೂ ಕೊಟ್ಟಾಯಿತು. ಇನ್ನು ನಮ್ಮ ನಮ್ಮ ವಿವಾದದಿಂದ ಫಲವಿಲ್ಲ! ಅವನು ವಿಭೀಷಣನಾಗಿದ್ದರೂ ಇರಲಿ ! ಕೊನೆಗೆ ವಿಭೀಷಣನ ವೇಷದಿಂದ ರಾವಣನೇ ತಾನಾಗಿ ಬಂದಿದ್ದರೂ, ನೀನು ಮತ್ತೊಮ್ಮೆ ನನ್ನಲ್ಲಿಗೆ ಬಂದು ಕೇಳಿಹೋಗಬೇಕಾದುದಿಲ್ಲ!ಸ್ವಲ್ಪವೂ ಸಂದೇಹಿಸದೆ ಅವನನ್ನು ಕರೆತಂದುಬಿಡು!" ಎಂದನು. ವಾನರೇಂದ್ರನಾದ ಸುಗ್ರೀವನು

---

1 ಇಲ್ಲಿ "ಆನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ । ವಿಭೀಷಣೋ ವಾ ಸುಗ್ರೀವ ಯದಿವಾ ರಾವಣಸ್ಸ್ವಯಮ್" ಎಂದು ಮೂಲವು. ವಿಶೇಷಾರ್ಥವು:— ರಾಮನು ತನ್ನಲ್ಲಿ ಆಶ್ರಿತನಾದ ಸುಗ್ರೀವನೊಡನೆ ಇದುವರೆಗೂ ವಾದಿಸಿ ಚರ್ಚಿಸುತಿದ್ದು, ಕೊನೆಗೆ ಆಶ್ರಿತವಾತ್ಸಲ್ಯದಿಂದ ಅವನನ್ನು ಕುರಿತು "ಎಲೆ ವಾನರೇಂದ್ರನೆ! ಇದುವರೆಗೆ "ಮಿತ್ರಭಾವೇನ" ಇತ್ಯಾದಿವಾಕ್ಯದಿಂದ ನನ್ನ ಪ್ರಕೃತಿಯನ್ನು ತಿಳಿಸಿದೆನು. "ಸಕೃದೇವ" ಎಂಬುದರಿಂದ ನನ್ನ ಸಂಕಲ್ಪವನ್ನು ತಿಳಿಸಿದೆನು. ನೀವು ನಿರ್ಭಯನಾಗಿ ಆತನನ್ನು ಸ್ವೀಕರಿಸಬಹುದೆಂಬುದಕ್ಕಾಗಿ, "ಪಿಶಾಚಾನ್" ಇತ್ಯಾದಿಶ್ಲೋಕದಿಂದ ನನ್ನ ಸರ್ವಶಕ್ತತ್ವವನ್ನೂ ನಿರೂಪಿಸಿದೆನು. ಕೇವಲತಿರ್ಯಕ್ಕಾದ ಕಪೋತವೇ ಇದನ್ನನುಷ್ಠಿಸಿರುವುದರಿಂದ, ನಮಗೂ ಈ ಧರ್ಮವು ಅವಶ್ಯಾನುಷ್ಠೇಯವೆಂಬುದನ್ನೂ ತೋರಿಸಿದೆನು. ಕಂಡುಗಾಥೆಯೆಂಬ ಸ್ಮೃತಿಪ್ರಮಾಣವನ್ನು ನಿರೂಪಿಸಿ, ಅದರಿಂದ ಶರಣಾಗತರನ್ನು ರಕ್ಷಿಸುವುದರಿಂದಲೂ, ತ್ಯಜಿಸುವುದರಿಂದಲೂ ಸಂಭವಿಸಬಹುದಾದ ಗುಣದೋಷಗಳನ್ನೂ ತೋರಿಸಿದೆನು. ಇವೆಲ್ಲಕ್ಕೂ ಮೇಲೆ ಅವನು ಎಂತವನೇ ಆಗಿದ್ದರೂ ನನ್ನನ್ನು ಕುರಿತು "ಶರಣು" ಎಂದು ಹೇಳಿದಾಗಲೇ ನಾನು ಅಭಯವನ್ನೂ ಕೊಟ್ಟುದಾಯಿತು. ಇಷ್ಟಾದರೂ ನಿಮ್ಮ ಅನುಮತಿಯಿಲ್ಲದೆ ಆ ಕಾರ್ಯವನ್ನು ನಡೆಸಲಾರೆನಾದುದರಿಂದ, ನೀವು ನಡೆಸಬೇಕಾದ ಕಾರ್ಯವೊಂದೇ ಈಗ ಉಳಿದಿರುವುದು. ಇದು ನಿಮ್ಮಿಂದಲೇ ನಡೆಯಬೇಕು" ಎಂದು ವಿಭೀಷಣನನ್ನು ಕರೆತರುವುದಕ್ಕೆ ಸುಗ್ರೀವನನ್ನೇ ಕೇಳಿಕೊಳ್ಳುವುದಾಗಿ ಇದರ ಭಾವವು. ಇದರಿಂದ ಭಗವಂತನಲ್ಲಿರುವ ಅಸಾಧಾರಣವಾದ ಆಶ್ರಿತಪಾರತಂತ್ರ್ಯವು ವ್ಯಕ್ತವಾಗುವುದು. ಸುಗ್ರೀವನನ್ನು ಪ್ರಸನ್ನನಾಗಿಸಬೇಕೆಂಬುದಕ್ಕಾಗಿಯೇ ಇಲ್ಲಿ "ಹರಿಶ್ರೇಷ್ಠ" ಎಂಬ ಸ್ತುತಿರೂಪವಾದ

ಹೀಗೆ ರಾಮನು ಹೇಳಿದ ಮಾತನ್ನು ಕೇಳಿ, ಆತನಿಗಿರುವ ಶರಣಾಗತವಾ ತ್ಸಲ್ಯಕ್ಕೂ, ವಿಭೀಷಣನನ್ನು ಕರೆತರುವುದಕ್ಕಾಗಿ ತನ್ನನ್ನೇ ನಿಯಮಿಸಿ ದುದರಿಂದ, ತನ್ನನ್ನೊಪ್ಪಿಸಿಯೇ ಆತನನ್ನು ಸ್ವೀಕರಿಸುವಂತೆ ತನ್ನಲ್ಲಿ ತೋರಿ ಸಿದ ಎಣೆಯಿಲ್ಲದ ಮಿತ್ರವಾತ್ಸಲ್ಯಕ್ಕೂ ಮರುಳಾಗಿ, ರಾಮನನ್ನು ಕುರಿತು, “ರಾಮಾ! ನೀನು ಸಮಸ್ತಧರ್ಮಸೂಕ್ಷ್ಮಗಳನ್ನೂ ತಿಳಿದವನು! ಸಮಸ್ತ ಲೋಕಗಳನ್ನೂ ರಕ್ಷಿಸತಕ್ಕ ಪ್ರಭುವು! ಇತರರ ಕ್ಷೇಮಕ್ಕಾಗಿಯೇ ಅವ ತರಿಸಿದವನು! ಸರ್ವಶಕ್ತನು ! ಧರ್ಮಸಂಸ್ಥಾಪನವೆಂಬ ಸನ್ಮಾರ್ಗದಲ್ಲಿಯೇ ಸ್ಥಿರವಾಗಿ ನೆಲೆಗೊಂಡವನು ! ಹೀಗಿರುವ ನೀನು! ಧರ್ಮಯುಕ್ತವಾದ ಈ ಮಾತನ್ನಾಡಿದೆಯೆಂದರೆ, ಅದರಲ್ಲಿ ಆಶ್ಚರ್ಯವೇನಿರುವುದು? ರಾಮಾ ! ನಿ ರ್ಹೇತುಕವಾತ್ಸಲ್ಯವುಳ್ಳ ನಿನ್ನ ವಿಷಯವು ಹಾಗಿರಲಿ! ಮೊದಲು ಈ ವಿ ಭೀಷಣನನ್ನು ಕೊಲ್ಲಬೇಕೆಂದು ಕೈಯೆತ್ತಿದ ನನ್ನ ಮನಸ್ಸಿಗೂ ಕೂಡ, ಈಗ ಈ ವಿಭೀಷಣನು ಶುದ್ಧಸ್ವಭಾವವುಳ್ಳವನೆಂದೇ ತೋರಿರುವುದು. ನನ್ನ ಮ ನಸ್ಸಾಕ್ಷ್ಯವೊಂದೇ ಅಲ್ಲ! ಮೊದಲು ನೀನೂ, ಈ ಹನುಮಂತನೂ ಹೇಳಿತಿಳಿ ಸಿದ ಅನುಮಾನಗಳಿಂದಲೂ, ಅವನ ಮೃದುಸ್ವಭಾವದಿಂದಲೂ, ಮತ್ತು ನಾ ನುಕೊಲ್ಲಬೇಕೆಂದು ಹೇಳಿದಾಗಲೂ, ನೀನು ರಕ್ಷಿಸಬೇಕೆಂದು ಹೇಳಿದಾಗಲೂ ಒಂದೇ ಸ್ಥಿತಿಯಲ್ಲಿದ್ದ ಈತನ ಧೈರ್ಯದಿಂದಲೂ, ಇವನನ್ನು ಸರ್ವವಿಧದಿಂದ ಲೂ ಪರೀಕ್ಷಿಸಿದಂತಾಯಿತು. ಆದುದರಿಂದ ಇನ್ನು ಮೇಲೆ ಇವನೂ ನಮ

---

ಸಂಬೋಧನೆಯು. ಮತ್ತು (ವಿಭೀಷಣೋವಾ ರಾವಣಸ್ಸ್ವಯಂ ಯದಿವಾ)ಅವನು ವಿ ಭೀಷಣನಾಗಿದ್ದರೂ ಇರಲಿ! ಹಾಗಿಲ್ಲದೆ ಕೊನೆಗೆ ರಾವಣನೇ ತಾನಾಗಿ ಈ ವೇಷದಿಂದ ಬಂದಿದ್ದಪಕ್ಷದಲ್ಲಿ ಇನ್ನೂ ಉತ್ತಮವು. ಏಕೆಂದರೆ, ವಿಭೀಷಣನನ್ನು ಸ್ವೀಕರಿಸಿದ ರೆ, “ ವಿಭೀಷಣಸ್ತು ಧರ್ಮಾತ್ಮಾ ” ಎಂದು, ಧರ್ಮಾತ್ಮನನ್ನು ಸ್ವೀಕರಿಸುವುದರಿಂ ದ, ನಮಗೆ ಅಷ್ಟಾಗಿ ಉತ್ಕರ್ಷವಿಲ್ಲವು. “ರಾವಣಸ್ಯನೃಶಂಸಸ್ಯ” ಎಂದು, ಅಘಾ ತುಕನನ್ನು ಸ್ವೀಕರಿಸುವುದರಿಂದ, ನಮಗೆ ಇನ್ನೂ ಉತ್ಕರ್ಷವು ಹೆಚ್ಚುವುದು. ಇದಲ್ಲದೆ ವಿಭೀಷಣನನ್ನು ಸ್ವೀಕರಿಸಿದರೆ, ಈಗ ಇವನೊಡನೆ ಬಂದಿರುವ, ನಾಲ್ಕುಮಂದಿ ರಾಕ್ಷ ಸರೊಡನೆ ಸೇರಿ ಐದುಮಂದಿಯನ್ನೇ ರಕ್ಷಿಸಿದಂತಾಗುವುದು. ಆ ರಾವಣನನ್ನು ಸ್ವೀ ಕರಿಸುವುದರಿಂದಲೋ, ನಾವು ಆ ಲಂಕೆಯನ್ನೇ ಅಲ್ಲಿನ ಸಮಸ್ತ ರಾಕ್ಷಸರೊಡನೆ ರಕ್ಷಿಸಿ ದಂತಾಗುವುದರಿಂದ ನಮಗೆ ದೊಡ್ಡಲಾಭವುಂಟೆಂದೂ ಭಾವವು.

ಗೆ ಸಮಾನವಾಗಿ ನಿನ್ನೊಡನೆ ಒಂದಾಗಿ ಕಲೆತಿರಲಿ! ನಮ್ಮಲ್ಲಿಯೂ ಸ್ನೇಹ ವನ್ನು ಬಳೆಸಲಿ" ಎಂದನು. ಸುಗ್ರೀವನು ಹೇಳಿದ ಈ ಮಾತುಗಳನ್ನು ಕೇಳಿ ರಾಮನು ಆ ಸುಗ್ರೀವನನ್ನೇ ಕಳುಹಿಸಿ,ವಿಭೀಷಣನನ್ನು ಬರಮಾಡಿಕೊಂಡು ದೇವೇಂದ್ರನು ಗರುಡನೊಡನೆ ಸೇರಿದಂತೆ [1]ತಾನೇ ಮುಂದೆಹೋಗಿ ತಟ್ಟನೆ ಆ ವಿಭೀಷಣನೊಡನೆ ಸ್ನೇಹದಿಂದ ಒಂದಾಗಿ ಸೇರಿಕೊಂಡನು. ಇಲ್ಲಿಗೆ ಹದಿನೆಂಟನೆಯ ಸರ್ಗವು.

---

ಶ್ರೀರಾಮನು ಸಮಸ್ತ ವಾನರರ ಮಧ್ಯದಲ್ಲಿ ವಿಭೀಷಣ ನಿಗೆ ಲಂಕಾರಾಜ್ಯದಲ್ಲಿ ಪಟ್ಟವನ್ನು ಕಟ್ಟಿದುದು. ಸಮು ದ್ರಲಂಘನ ಸನ್ನಾಹವು.

ರಘುಕುಲೋತ್ತಮನಾದ ರಾಮನು ಹೀಗೆ ಅಭಯವನ್ನು ಕೊಟ್ಟೊ ಡನೆ, ಮಹಾಪ್ರಾಜ್ಞನಾದ ವಿಭೀಷಣನು, ತನ್ನ ಕೋರಿಕೆಯು ಕೈಗೂಡಿತೆಂ ಬ ಸಂತೋಷದಿಂದುಬ್ಬಿದವನಾಗಿ[2]ತನ್ನ ಭಕ್ತರಾದ ನಾಲ್ಕುಮಂತ್ರಿಗಳೊ ಡನೆ ತಟ್ಟನೆ ಆಕಾಶದಿಂದಿಳಿದನು. ಅವನು ಹಾಗೆ ಅಂತರಿಕ್ಷದಿಂದಿಳಿಯುವಾಗ ಲೂ,ಪ್ರಭುವಾದ ರಾಮನಬಳಿಗೆ ತನ್ನ ಕಾಲುಗಳನ್ನು ಮುಂದೆಚಾಚಿ ಇಳಿದು ಹೋಗುವುದನುಚಿತವೆಂದೆಣಿಸಿ, ಬಹಳವಿನಯದಿಂದ ತನ್ನ ಪೂರ್ವಕಾಯವ

---

1 ಇಲ್ಲಿ ರಾಮನು ತಾನೇ ಹೋಗಿ ವಿಭೀಷಣನೊಡನೆ ತಟ್ಟನೆ ಸೇರಿಕೊಂಡನೆಂ ಬುದರಿಂದ, ಸುಗ್ರೀವನ ಮನಸ್ಸಿನಲ್ಲಿರುವ ಅನುಕೂಲ್ಯವು ಚಲಿಸಿಹೋದ ಪಕ್ಷದಲ್ಲಿ, ಕಾರ್ಯವು ಕೆಡುವುದೆಂದೆಣಿಸಿ, ಆ ಸುಗ್ರೀವನು ಸಮ್ಮತಿಸಿದಕ್ಷಣದಲ್ಲಿಯೇ ರಾಮನು, ತಟ್ಟನೆಹೋಗಿ ಸುಗ್ರೀವನೊಡನೆ ಸೇರಿಕೊಂಡನೆಂದು ಭಾವವು.ಇದರಿಂದ, ಭಗವಂತನಿಗೆ ಆಶ್ರಿತರೊಡನೆ ಸಂಶ್ಲೇಷವನ್ನು ಹೊಂದಿ ಅವರನ್ನು ರಕ್ಷಿಸುವುದರಲ್ಲಿರುವ ತ್ವರಾತಿ ಶಯವು ಸೂಚಿತವಾಗುವುದು.

2 ಇಲ್ಲಿ "ಭಕ್ತೈರನುಚರೈಸ್ಸಹ" ಎಂದು ಮೂಲವು. ಭಕ್ತರೆಂದರೆ,ವಿಭೀಷಣನು ಮೊದಲು ಲಂಕೆಯನ್ನು ಬಿಟ್ಟು ಹೊರಟಾಗಲೂ, "ಉತ್ಪಪಾತ ಗದಾಪಾಣಿಶ್ಚತುರ್ಭಿ ಸ್ಸಹ ರಾಕ್ಷಸೈಃ" ಎಂದು, ಅವನೊಡನೆ ತಾವೂ ದೇಶಭ್ರಷ್ಟರಾಗಿ, "ವಧ್ಯತಾಮೇಷ ತೀವ್ರೇಣದಂಡೇನ ಸಚಿವೈಸ್ಸಹ" ಎಂದು ವಧೋದ್ದೇಶದಲ್ಲಿಯೂ ತಾವು ಭಾಗಿಗಳಾಗಿ, ಹಾಗೆಯೇ ಈಗ ಸ್ವೀಕಾರದಶೆಯಲ್ಲಿಯೂ ಭಾಗಿಗಳಾದುದರಿಂದ, ಸುಖದುಃಖಗಳಿಗೆ ಸ ಮಭಾಗಿಗಳಾದವರೆಂದು ಭಾವವು.

ನ್ನೇ ಕೆಳಕ್ಕೆ ತಗ್ಗಿಸಿ, ತಾನು ಇಳಿಯಬೇಕಾದ ಸ್ಥಳವನ್ನು ಕಣ್ಣಿಟ್ಟು ನೋಡುತ್ತ ಮೆಲ್ಲಗೆ ಕೆಳಕ್ಕಿಳಿದನು.[1] ಶರಣಾಗತಿಧರ್ಮದಲ್ಲಿ ಸ್ಥಿರಬುದ್ಧಿಯುಳ್ಳ ಆ ವಿಭೀಷಣನು, ಕೆಳಕ್ಕಿಳಿದೊಡನೆ, ತನ್ನ ಅನುಚರರಾದ ನಾಲ್ವರು ರಾಕ್ಷಸರೊಡನೆ ಶರಣಾರ್ಥಿಯಾಗಿ ರಾಮನಪಾದಗಳಮೇಲೆಯೂ ಬಿದ್ದನು. ಆ ಮೇಲೆ ಆತನು ರಾಮನನ್ನು ಕುರಿತು ಧರ್ಮಯುಕ್ತವಾಗಿಯೂ, ಕಾಲೋಚಿತವಾಗಿಯೂ, ಸಂತೋಷಜನಕವಾಗಿಯೂ ಇರುವ ಮಾತಿನಿಂದ "ಸ್ವಾಮಿ! ನಾನು ರಾವಣನ ತಮ್ಮನು. ಆತನಿಂದ ತಿರಸ್ಕೃತನಾಗಿ ಇಲ್ಲಿಗೆ ಬಂದಿರುವೆನು. ನೀನು ಸಮಸ್ತಲೋಕಗಳಿಗೂ ರಕ್ಷಕನಾದುದರಿಂದ, ನಾನೂ ನಿನ್ನಲ್ಲಿಯೇ ಮರೆಹೊಕ್ಕಿರುವೆನು.[2] ಈಗ ನಾನು, ನನಗೆ ವಾಸಸ್ಥಾನವಾದ ಲಂಕೆಯನ್ನೂ, ನನ್ನ ಮಿತ್ರರನ್ನೂ, ನನ್ನ ಸಮಸ್ತಧನಗಳನ್ನೂ ಪರಿತ್ಯಜಿಸಿ, ನೀನೇ ಗತಿಯೆಂದು ಬಂದಿರುವೆನು. ಇನ್ನು ನನ್ನ ರಾಜ್ಯವೂ, ನನ್ನ ಸುಖವೂ ನಿನ್ನಧೀನಗಳು." ಎಂದನು. ಹೀಗೆ ವಿಭೀಷಣನು ಹೇಳಿದ ಮಾತುಗಳನ್ನು ಕೇಳಿ, ರಾಮನೂ[3] ಉಪಚಾರ

---

1 ಇಲ್ಲಿ ಧರ್ಮಾತ್ಮನೆಂದರೆ ಸರ್ವಾವಸ್ಥೆಗಳಲ್ಲಿಯೂ ಶರಣಾಗತಿ ಧರ್ಮದಿಂದ ಮನಸ್ಸು ಕದಲದೆ ಅದರಲ್ಲಿಯೇ ನೆಲೆನಿಂತವನೆಂದರ್ಥವು. ತಾನು ವಾನರರದೃಷ್ಟಿಗೆ ಬಿದ್ದುದು ಮೊದಲು, ಈ ಕಡೆಯವರು ತನ್ನನ್ನು ಕುರಿತು ಕ್ರಮವಾಗಿ "ವಧ್ಯತಾಮ್" "ಶಂಕ್ಯತಾಮ್" "ಸತ್ಯಜೇಯಮ್" "ಆನಯೈನಮ್" "ಅಸ್ಮಾಭಿಸ್ತುಲ್ಯೋಭವತು" ಎಂದು ಹೇಳಿದ ಈ ಸರ್ವಾವಸ್ಥೆಗಳಲ್ಲಿಯೂ ವಿಕಾರವಿಲ್ಲದೆ ಒಂದೇ ದೃಢಾಧ್ಯವಸಾಯದಿಂದ ಏಕರೂಪವಾಗಿದ್ದವನೆಂದು ಭಾವವು.

2 ಇಲ್ಲಿ "ಪರಿತ್ಯಕ್ತಾ ಮಯಾ ಲಂಕಾ ಮಿತ್ರಾಣಿ ಚ ಧನಾನಿಚ। ಭವದ್ಗತಂ ಮೇ ರಾಜ್ಯಂಚ ಜೀವಿತಂಚ ಸುಖಾನಿಚ" ಎಂದು ಮೂಲವು. ಇದರಿಂದ ವಿಭೀಷಣನು ಸೋಪಾಧಿಕಸಂಬಂಧಗಳೆಲ್ಲವನ್ನೂ ನಿಶ್ಶೇಷವಾಗಿ ಬಿಟ್ಟುಬಂದುದಾಗಿ ಸೂಚಿತವು. ಇಲ್ಲಿ ಹೇಳಿರುವ ಲಂಕಾಮಿತ್ರಧನಾದಿಗಳೇ ಮುಮುಕ್ಷುವಿಗೆ ಶಾಸ್ತ್ರಸಿದ್ಧವಾಗಿ ತ್ಯಾಜ್ಯಗಳಾದ ಪ್ರಾಪ್ಯಾಭಾಸಗಳೆಲ್ಲಕ್ಕೂ ಉಪಲಕ್ಷಣಗಳು. ರಾಜ್ಯವೆಂಬುದು ಪರಿಗ್ರಹಗಳಿಗೆಲ್ಲಾ ಉಪಲಕ್ಷಕವು. ಜೀವಿತವೆಂಬುದು ಧಾರಕ ಪೋಷಕ ಭೋಗ್ಯಗಳಿಗೆ ಉಪಲಕ್ಷಣವು. ಸುಖವೆಂಬುದು ಐಹಿಕಾಮುಷ್ಮಿಕ ಸುಖಗಳೆಲ್ಲಕ್ಕೂ ಉಪಲಕ್ಷಣವು. ಇವೆಲ್ಲವೂ ಭಗವತ್ಪಾದಸೇವೆಯೊಂದರಲ್ಲಿಯೇ ಅಂತರ್ಭೂತವೆಂದು ಭಾವವು. "ಸಂಬಂಧೋಪಿ ನ ಸಂಬಂಧ ಆತ್ಮನಃ ಪ್ರಾಣಕಾಯಯೋಃ। ಪುತ್ರಮಿತ್ರಕಳತ್ರಾದಿ ಸಂಬಂಧಃ ಕೇನ ಹೇತು

ವಾಕ್ಯಗಳಿಂದ ಆತನನ್ನು ಸಮಾಧಾನಪಡಿಸಿ, ಕಣ್ಣುಗಳಿಂದಲೇ ಕುಡಿದು ಬಿಡುವಂತೆ ಆತನನ್ನು ಪ್ರೀತಿಪೂರ್ವಕವಾಗಿ ನೋಡಿ "ಎಲೆ ಮಿತ್ರನೆ! ಉಳಿದ ಸಂಗತಿಗಳೆಲ್ಲವೂ ಹಾಗಿರಲಿ! ಲಂಕೆಯೊಳಗಣ ರಾಕ್ಷಸರ ಒಲಾಬಲಗಳನ್ನು ಇದ್ದುದಿದ್ದಂತೆ ನನಗೆ ವಿವರವಾಗಿ ತಿಳಿಸು" ಎಂದನು. ಈ ಮಾತನ್ನು ಕೇಳಿದೊಡನೆ; ವಿಭೀಷಣನು ರಾವಣನ ಬಲಸಮೃದ್ಧಿಗಳೆಲ್ಲವನ್ನೂ ವಿವರಿಸುವುದಕ್ಕೆ ತೊಡಗಿ " ಎಲೈ ರಾಜಪುತ್ರನೆ ! ನನ್ನಣ್ಣನಾದ ರಾವಣನು ಬ್ರಹ್ಮನ ವರದ ಬಲದಿಂದ, ದೈತ್ಯಗಂಧರ್ವರಾಕ್ಷಸರೇ ಮೊದಲಾದ ದೇವಜಾತಿಗಳಿಗೂ, ಉಳಿದ ಸಮಸ್ತಪ್ರಾಣಿಗಳಿಗೂ ಅವಧ್ಯನಾಗಿರುವನು. ಆ ರಾವಣನಿಂದೀಚೆಗೆ ನನಗೆ ಕುಂಭಕರ್ಣನೆಂಬ ಜ್ಯೇಷ್ಠಸಹೋದರನು ಬೇರೊಬ್ಬನುಂಟು. ಅವನೂ ಬಹಳ ವೀರ್ಯವುಳ್ಳವನು! ಮಹಾತೇಜಸ್ವಿಯು! ಇಂದ್ರನಿಗೆಣೆಯಾದ ಬಲವುಳ್ಳವನು. ಮತ್ತು ಆ ರಾವಣನಿಗೆ ಪ್ರಹಸ್ತನೆಂಬ ಸೇನಾಪತಿಯೊಬ್ಬನಿರುವನು. ಹಿಂದೆ ಕೈಲಾಸದಲ್ಲಿ ನಡೆದ ಯುದ್ಧದಲ್ಲಿ, ಆ ಪ್ರಹಸ್ತನು ಮಾಣಿಭದ್ರನೆಂಬ ಕುಬೇರನ ಸೇನಾಪತಿಯನ್ನೇ ಓಡಿಸಿರುವನು. ನೀನೂ ಅವನ ವಿಷಯವನ್ನು ಹನುಮಂತನ ಮೂಲಕವಾಗಿ ಮೊದಲೇ ಕೇಳಿರಬಹುದು. ರಾಮಾ ! ಲಂಕಾಧಿಪತಿಯಾದ ಆ ರಾವಣನಿಗೆ ಇಂದ್ರಜಿ

---

ನಾ" ಆತ್ಮಕ್ಕೆ ಪ್ರಾಕೃಶರೀರಗಳೊಡನೆ ಸಂಬಂಧವಿದ್ದಂತೆ ತೋರಿದರೂ ಸಂಬಂಧವಿಲ್ಲದೆಯೇ ಇರುವುದು. ಹೀಗಿರುವಾಗ ಪುತ್ರಮಿತ್ರಕಳತ್ರಾದಿಗಳೊಡನೆ ಸಂಬಂಧವೆಂದರೇನು? ಆದುದರಿಂದ ಸರ್ವವಿಧಬಂಧುವೂ ಸ್ವಾಮಿಯಾದ ಭಗವಂತನೊಬ್ಬನೇ ಹೊರತು ಬೇರೆಯಲ್ಲ. ಹಾಗೆಯೇ "ಪಿತೃಮಾತೃ ಸುಹೃದ್ಭ್ರಾತೃ ದಾರ ಪುತ್ರಾದಯೋಪಿವಾ ! ಏಕೈಕ ಫಲಲಾಭಾಯ ಸರ್ವಲಾಭಾಯ ಕೇಶವ:" ತಾಯಿ, ತಂದೆ,ಮೊದಲಾದವರು ಒಂದೊಂದು ಲಾಭಕ್ಕಾದರೂ ಸರ್ವಲಾಭಕ್ಕಾಗಿ ಭಗವಂತನೆಂಬಂತೆ ನೀನೇ ಸರ್ವಪುರುಷಾರ್ಥವೆಂದು ವಿಭೀಷಣನು ಆತ್ಮಭರನ್ಯಾಸವನ್ನು ಮಾಡಿದುದಾಗಿ ಗ್ರಾಹ್ಯವು.

1 ಇಲ್ಲಿ "ವಚಸಾ ಸಾಂತ್ವಯಿತ್ವೈನಂ ಲೋಚನಾಭ್ಯಾಂ ಪಿಬನ್ನಿವ" ಎಂದು ಮೂಲವು. ಇದರಿಂದ ರಾಮನು ವಿಭೀಷಣನನ್ನು ಮೊದಲು ತನ್ನ ಮೃದುವಾಕ್ಯಗಳಿಂದ ಕರಗಿಸಿ(ನೀರಾಗಿ ಮಾಡಿ) ಕಣ್ಣುಗಳಿಂದ ಕುಡಿದು ಬಿಡುವಂತೆ ಅವನಲ್ಲಿ ಅಸಾಧಾರಣ ವಾತ್ಸಲ್ಯವನ್ನು ತೋರಿಸಿ ಮಾತಾಡಿದುದಾಗಿ ಭಾವವು.

ತ್ರೆಂಬ ಪುತ್ರನೊಬ್ಬನಿರುವನೆಂದೂ ನೀನು ಕೇಳಿರಬಹುದಷ್ಟೆ? ಅವನೂ ವೀ ರ್ಯದಲ್ಲಿ ಬಹಳ ಪ್ರಸಿದ್ಧಿಗೊಂಡವನು. ಅವನು ಉಡುವಿನ ಚರ್ಮದಿಂ ದನಮಾಡಲ್ಪಟ್ಟ ಕೈಚೀಲಗಳನ್ನೂ,ಅಭೇದ್ಯಕವಚಗಳನ್ನೂ ಧರಿಸಿ,ಧನುರ್ಧಾ ರಿಯಾಗಿ ಯುದ್ಧಕ್ಕೆ ಬಂದುನಿಂತಾಗಲೂ ಶತ್ರುಗಳಿಗೆ ಅಧೃಶ್ಯನಾಗಿಯೇ ಇ ರುವನು. ಆತನು ಯುದ್ಧಕಾಲಗಳಲ್ಲಿ ಸೇನಾವ್ಯೂಹಗಳನ್ನು ನಿರ್ಮಿಸಿ, ಅವುಗಳ ಮಧ್ಯದಲ್ಲಿಯೇ ಹೋಮಕಾರ್ಯದಿಂದ ಅಗ್ನಿಯನ್ನು ತೃಪ್ತಿಗೊಳಿಸಿ, ಆ ಅಗ್ನಿಯ ವರಪ್ರಭಾವದಿಂದ ಶತ್ರುಗಳ ಕಣ್ಣಿಗೆ ಬೀಳದಂತೆಯೇ ಅವರ ನ್ನು ಕೊಲ್ಲುವನು. ಇದಲ್ಲದೆ ಆ ರಾವಣನಿಗೆ ಮಹೋದರನೆಂದೂ, ಮಹಾ ಪಾರ್ಶ್ವನೆಂದೂ,ಅಕಂಪನನೆಂದೂ,ಪ್ರಸಿದ್ಧರಾದ ಮೂವರು ಸೇನಾಪತಿಗ ಳುಂಟು ! ಆ ಮೂವರೂ ಯುದ್ಧದಲ್ಲಿ ಲೋಕಪಾಲರಿಗೆ ಸಾಟಿಯಾಗಿರು ವರು ! ಆ ನಮ್ಮ ಲಂಕಾನಗರಿಯಲ್ಲಿ ಕಾಮರೂಪಿಗಳಾಗಿಯೂ, ರಕ್ತ ಮಾಂಸಾಹಾರಿಗಳಾಗಿಯೂ ಇರುವ ಇಂತಹ ಹತ್ತು ಸಹಸ್ರಕೋಟಿ ರಾಕ್ಷಸಯೋಧರು ರಾವಣನಿಗೆ ಬೆಂಬಲವಾಗಿರುವರು. ರಾವಣನು ಲಂಕಾ ವಾಸಿಗಳಾದ ಆ ರಾಕ್ಷಸರೆಲ್ಲರೊಡಗೂಡಿ, ಹಿಂದೆ ಸಮಸ್ತ ಲೋಕಪಾಲ ಕರೊಡನೆಯೂ ಯುದ್ಧವನ್ನಾರಂಭಿಸಿದನು. ಮಹಾಬಲವುಳ್ಳ ಆ ರಾವಣ ನಿಂದ ಅವರೆಲ್ಲರೂ ತಮ್ಮ ದೇವಸೇನೆಯೊಡನೆ ಪರಾಜಿತರಾಗಿ ಓಡಿ ಹೋದ ರು." ಎಂದನು. ದೃಢಪರಾಕ್ರಮಿಯಾದ ರಾಮನು,ವಿಭೀಷಣನು ಹೇಳಿದ ಈ ಮಾತನ್ನು ಕೇಳಿ, ಅವೆಲ್ಲವನ್ನೂ ತನ್ನಲ್ಲಿಯೂ ಪರ್ಯಾಲೋಚಿಸಿ, ತಿರುಗಿ ವಿಭೀಷಣನನ್ನು ಕುರಿತು " ವಿಭೀಷಣಾ ! ನೀನು ಇದುವರೆಗೆ ರಾವ ಣನು ಹಿಂದೆ ಯಾವಯಾವ ಪರಾಕ್ರಮಕಾರ್ಯಗಳನ್ನು ನಡೆಸಿದನೆಂದು ಹೇಳಿದೆಯೋ ಅವೊಂದನ್ನೂ ನಾನು ಸ್ವಲ್ಪವೂ ಲಕ್ಷ್ಯದಲ್ಲಿಡುವವನಲ್ಲ ! (ಅದೊಂದು ಶೌರ್ಯವೆಂದೇ ನನಗೆ ತೋರಲಿಲ್ಲ!) ನಾನು ರಾವಣನನ್ನು ಅವ ನ ಬಂಧುಗಳೊಡನೆಯೂ,ಪ್ರಹಸ್ತಾದಿ ಮಂತ್ರಿಗಳೊಡನೆಯೂ ಕೊಂದು, ಲಂಕಾರಾಜ್ಯಕ್ಕೆ ನಿನ್ನನ್ನೇ ರಾಜನನ್ನಾಗಿ ಮಾಡುವೆನು ನೋಡು! ಇದು ಸತ್ಯವೆಂದು ತಿಳಿ!ಆ ರಾವಣನು ಭೂವಿವರನ್ನು ಹೊಕ್ಕು ರಸಾತಲಕ್ಕೆ ಹೋ ದರೂ, ಪಾತಾಳದಲ್ಲಿ ಪ್ರವೇಶಿಸಿದರೂ, ಕೊನೆಗೆ ತನಗೆ ವರವನ್ನುಕೊಟ್ಟ

ಬ್ರಹ್ಮದೇವನಲ್ಲಿಯೇ ಮರೆಹೊಕ್ಕರೂ ನನ್ನ ಕೈಯಿಂದ ತಪ್ಪಿಸಿಕೊಂಡು ಬದುಕಿ ಹೋಗಲಾರನು. ನಾನು ಯುದ್ಧದಲ್ಲಿ ರಾವಣನನ್ನು ಅವನ ಮಕ್ಕಳೊಡನೆಯೂ, ಅವನ ಬಂಧುವರ್ಗಗಳೊಡನೆಯೂ, ಅವನ ಸೈನ್ಯಗಳೊಡನೆಯೂ ಕೊಂದಲ್ಲದೆ ಅಯೋಧ್ಯೆಗೆ ಪ್ರವೇಶಿಸುವವನಲ್ಲ! ಇದು ನಿಜವು! ಬೇಕಾದರೆ ಈ ವಿಷಯದಲ್ಲಿ ನನಗೆ ಪ್ರಾಣಭೂತರಾದ ನನ್ನ ಮೂವರು ತಮ್ಮಂದಿರಮೇಲೆಯೂ ಆಣೆಯಿಟ್ಟು ಹೇಳುವೆನು," ಎಂದನು. ಎಂತಹ ಅಸಾಧ್ಯಕಾರ್ಯವನ್ನಾದರೂ ಅನಾಯಾಸವಾಗಿ ಸಾಧಿಸಬಲ್ಲ ಮಹಾತ್ಮನಾದ ಆ ಶ್ರೀರಾಮನು, ಹೀಗೆ ಪ್ರತಿಜ್ಞಾಪೂರ್ವಕವಾಗಿ ಹೇಳಿದ ಮಾತನ್ನು ಕೇಳಿ, ಶರಣಾಗತಧರ್ಮನಿಷ್ಠನಾದ ವಿಭೀಷಣನು, ಆತನಿಗೆ ತಲೆಬಗ್ಗಿ ನಮಸ್ಕರಿಸಿ "ಎಲೈ ಮಹಾತ್ಮನೆ! ಈ ನಿನ್ನ ರಾಕ್ಷಸವಧಕಾರ್ಯದಲ್ಲಿ ನಾನೂ[1] ಸಹಾಯಕನಾಗಿರುವೆನು. ನನ್ನ ಶಕ್ತ್ಯನುಸಾರವಾಗಿ ನಾನೂ ಲಂಕೆಯನ್ನು ಭಂಗಿಸುವೆನು. ನಾನೂ ನನ್ನಿಂದಾದಮಟ್ಟಿಗೆ ರಾಕ್ಷಸಸೈನ್ಯವನ್ನು ಪ್ರವೇಶಿಸಿ ಯುದ್ಧಮಾಡುವೆನು." ಎಂದನು. ಹೀಗೆ ಹೇಳುತ್ತಿರುವಾಗಲೇ ರಾಮನು ಪರಮಸಂತೋಷದಿಂದ ಆ ವಿಭೀಷಣನನ್ನು ಆಲಿಂಗಿಸಿಕೊಂಡು, ಲಕ್ಷ್ಮಣನನ್ನು ಕುರಿತು "ವತ್ಸಲಕ್ಷ್ಮಣಾ! ಈಗಲೇ ನೀನು ಹೋಗಿ, ಸಮುದ್ರದಿಂದ ಪುಣ್ಯತೀರ್ಥವನ್ನು ತಂದು, ಅದರಿಂದ ಪ್ರಾಜ್ಞನಾದ ಈತನಿಗೆ ಈಗಲೇ ಲಂಕಾಧಿಪತ್ಯಕ್ಕಾಗಿ ಅಭಿಷೇಕವನ್ನೂ ನಡೆಸಿಬಿಡು ! ಈತನು ಅದನ್ನು ಕೋರದಿದ್ದರೂ ನನಗೆ ಹಾಗೆ ನಡೆಸಬೇಕೆಂದು ಇವನಲ್ಲಿ ಅನುಗ್ರಹವು ಹುಟ್ಟಿರುವುದು. ನನ್ನ ಅನುಗ್ರಹಕ್ಕೆ ತಕ್ಕ ಫಲವನ್ನು ತೋರಿಸಬಹುದಾದಸಿತಕ್ಕ ಭಾರವು ನಿನ್ನದಲ್ಲವೆ?" ಎಂದನು. ರಾಮನು ಹೀಗೆಂದು ಹೇಳಿದಕ್ಷಣವೇ, ಲಕ್ಷ್ಮಣನು [2] ರಾಜಾಜ್ಞೆಯಂತೆ ತೀರ್ಥವನ್ನು ತಂದು, ಅಲ್ಲಿದ್ದ ಸಮಸ್ತವಾನ

---

1 ರಾಮನಿಗೆ ಬೇರೆ ಸಹಾಯಾಂತರವು ಅವಶ್ಯವಿಲ್ಲದಿದ್ದರೂ ಇಲ್ಲಿ ವಿಭೀಷಣನು ರಾಕ್ಷಸವಧದಲ್ಲಿ ತಾನು ರಾಮನಿಗೆ ಸಹಾಯಮಾಡುವುದಾಗಿ ಹೇಳಿದುದರ ಭಾವವೇನೆಂದರೆ, ತನ್ನ ಸ್ವರೂಪ ಸಿದ್ಧಿಗಾಗಿ ಯುದ್ಧದಲ್ಲಿ ಧನುರ್ಬಾಣಗಳನ್ನೆತ್ತಿ ಕೊಡುವುದೇ ಮೊದಲಾದ ಸಹಾಯಗಳನ್ನು ಮಾಡುವುದಾಗಿ ಗ್ರಾಹ್ಯವು.

2 "ಮಧ್ಯೇ ವಾನರ ಮುಖ್ಯಾನಾಮ್" ಎಂದು ದ್ವಿತೀ ವಾನರಸಭೆಯಲ್ಲಿ ಹೇ

ರವೀರರನಡುವೆ, ವಿಭೀಷಣನನ್ನು ರಾಕ್ಷಸರಾಜ್ಯಾಧಿಪತ್ಯಕ್ಕಾಗಿ ಅಭಿಷೇಕಿಸಿದನು. ಹೀಗೆ ರಾಮನು ವಿಭೀಷಣನಲ್ಲಿ ಅಷ್ಟುಶೀಘ್ರವಾಗಿ ಪರಮಾನುಗ್ರಹವನ್ನು ತೋರಿಸಿದುದನ್ನು ನೋಡಿ, ಅಲ್ಲಿದ್ದ ಸಮಸ್ತವಾನರರೂ ಸಂತೋಷದಿಂದ ಕೂಗುತ್ತ "ಭಲೆ" ಭಲೆ!" ಎಂದು ಮಹಾತ್ಮನಾದ ರಾಮನನ್ನು ಕೊಂಡಾಡಿದರು. ಆಮೇಲೆ ಮತ್ತೊಮ್ಮೆ ಅವರೆಲ್ಲರೂ ಸೇರಿ ಮುಂದಿನ ಕೆಲಸವನ್ನು ಕುರಿತು ಯೋಚಿಸುವಾಗ, ಸುಗ್ರೀವ ಹನುಮಂತರಿಬ್ಬರೂ ವಿಭೀಷಣನನ್ನು ಕುರಿತು "ಎಲೆ ರಾಕ್ಷಸೇಂದ್ರನೆ ! ವರುಣ ದೇವನಿಗೆ ನಿತ್ಯನಿವಾಸವಾದ ಈ ಮಹಾಸಮುದ್ರವಾದರೋ, ಅಕ್ಷೋಭ್ಯವಾಗಿ ಬೇರೊಬ್ಬರಿಗೆ ದಾಟಲಸಾಧ್ಯವಾಗಿರುವುದು. ನಾವೆಲ್ಲರೂ ಈ ಸಮಸ್ತವಾನರವೀರರೊಡನೆ ಇದನ್ನು ದಾಟಿ ಹೋಗಬೇಕಾದರೆ ಉಪಾಯವೇನು?ನದನದೀಪತಿಯಾದ ಈ ಸಮುದ್ರವನ್ನು ದಾಟುವುದಕ್ಕೆ ನಮ್ಮಲ್ಲಿ ಯಾರಿಗೂ ಯಾವುದೊಂದುಪಾಯವೂ ತೋರಲಿಲ್ಲ. ಆದುದರಿಂದ ನೀನೇ ಈಗ ನಮಗೆ ತಕ್ಕ ದಾರಿಯನ್ನು ತಿಳಿಸಬೇಕು" ಎಂದರು. ಇದನ್ನು ಕೇಳಿ ಧರ್ಮಜ್ಞನಾದ ವಿಭೀಷಣನು ಅವರನ್ನು ಕುರಿತು "ಎಲೆ ವಾನರೋತ್ತಮರೆ ? ಇದಕ್ಕೆ ಬೇರೆ ಉಪಾಯವೇನಿರುವುದು ? ರಘುವಂಶಜನಾದ ಈ ಶ್ರೀರಾಮನೇ ಸಮುದ್ರರಾಜನಲ್ಲಿ ಮರೆಹೊಕ್ಕು ಪ್ರಾರ್ಥಿಸಬೇಕು. ಈ ಸಮುದ್ರದ ಉತ್ಪತ್ತಿಗೂ, ಇವನಿಗೆ ಇಷ್ಟೊಂದು ಮಹಾಮಹಿಮೆಯುಂಟಾಗುವುದಕ್ಕೂ ಸಗರ ಚಕ್ರವರ್ತಿಯೇ ಕಾರಣಭೂತನು.ಆ ಸಗರನು ಈ ನಮ್ಮ ರಾಮನಿಗೆ ಕೂಟಸ್ಥನು. ಆದುದರಿಂದ ಈ ಸಮುದ್ರನು ಈಗಲೂ ಆ ಉಪಕಾರವನ್ನು ಮನಸ್ಸಿನಲ್ಲಿಟ್ಟಿರುವನು. ರಾಮನು ಅವನಲ್ಲಿ ಮರೆಹೊಕ್ಕು ಪ್ರಾರ್ಥಿಸಬೇಕಾದುದೊಂದೇ ತಡ! ಇದು ರಾಮನಿಗೆ ಅವಶ್ಯಕಾರ್ಯವೆಂದು ತಿಳಿದರೆ,ಆತನು, ಅದನ್ನೇ ನೆವವಾಗಿ ಮಾಡಿಕೊಂಡು, ಪ್ರತ್ಯುಪಕಾರಮಾಡುವುದರಲ್ಲಿ ಸಂದೇಹವಿಲ್ಲ." ಎಂದನು. ರಾಕ್ಷಸನಾದುದರಿಂದ ಸಮುದ್ರಸಂಚಾರದಲ್ಲಿ ಬಳಿಕೆಯುಳ್ಳವನಾಗಿಯೂ, ಪಂಡಿತನಾದುದರಿಂದ ಕಾ

---

ಲಿದುದರಿಂದಲೂ, "ರಾಜಶಾಸನಾರಃ" ಎಂದು ರಾಜಾಜ್ಞೆಯಾದುದರಿಂದಲೂ, ಬಿಡಲಾರದೆ ವಿಭೀಷಣನು ರಾಜ್ಯಾಭಿಷೇಕಕ್ಕೆ ಅನುಮತಿಸಿದುದಾಗಿ ಗ್ರಾಹ್ಯವು.

ಲೋಚಿತಬುದ್ಧಿಯುಳ್ಳವನಾಗಿಯೂ ಇರುವ ವಿಭೀಷಣನು ಹೇಳಿದ ಈ ಮಾತನ್ನು ಕೇಳಿದೊಡನೆ, ಸುಗ್ರೀವನು ರಾಮಲಕ್ಷ್ಮಣರಿದ್ದ ಕಡೆಗೆ ಬಂದು, ವಿಭೀಷಣನು ಹೇಳಿದ ಶುಭವಾಕ್ಯವನ್ನು ತಿಳಿಸಿದನು. ರಾಮನು ಸಹಜವಾಗಿಯೇ ಧರ್ಮಶೀಲನಾದುದರಿಂದ, ಆತನಿಗೂ ಧರ್ಮಹೇತುವಾದ ಆ ಉಪಾಸನವೇ ಕಾಲೋಚಿತವೆಂದು ಬುದ್ಧಿಗೆ ತೋರಿತು. ಮಹಾತೇಜಸ್ವಿಯಾದ ರಾಮನು ತನಗೆ ತೋರಿದ ಕಾರ್ಯವನ್ನು ತನ್ನಿಷ್ಟದಂತೆ ನಡೆಸುವುದಕ್ಕೆ ಸಮರ್ಥನಾಗಿದ್ದರೂ, ಲೋಕನೀತಿಯನ್ನನುಸರಿಸಿ ಲಕ್ಷ್ಮಣಸುಗ್ರೀವರಲ್ಲಿ ಗೌರವವನ್ನು ತೋರಿಸುವುದಕ್ಕಾಗಿ, ಅವರಿಬ್ಬರನ್ನೂ ನೋಡಿ ಮಂದಹಾಸಪೂರ್ವಕವಾಗಿ "ವತ್ಸ ಲಕ್ಷ್ಮಣಾ! ವಿಭೀಷಣನು ಹೇಳಿದ ಆಲೋಚನೆಯೇ ನನಗೂ ಬಹಳ ಸಮ್ಮತವಾಗಿರುವುದು. ಆದರೆ ಈ ವಿಷಯದಲ್ಲಿ ನಿಮ್ಮಿಬ್ಬರ ಅಭಿಪ್ರಾಯವನ್ನೂ ನಾನು ಕೇಳಿ ತಿಳಿಯಬೇಕಾಗಿರುವುದು. ಈ ಸುಗ್ರೀವನು ಕಾರ್ಯಾಕಾರ್ಯಗಳನ್ನು ಚೆನ್ನಾಗಿ ಬಲ್ಲವನು. ನೀನೂ ಮಂತ್ರಾಲೋಚನೆಯಲ್ಲಿ ಸಮರ್ಥನು. ಆದುದರಿಂದ ನೀವಿಬ್ಬರೂ ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸಿ, ನಿಮಗೆ ಯಾವುದಿಷ್ಟವೆಂಬುದನ್ನು ನಿರ್ಧರಿಸಿ ತಿಳಿಸಬೇಕು." ಎಂದನು. ಈ ಮಾತನ್ನು ಕೇಳಿ ಲಕ್ಷ್ಮಣಸುಗ್ರೀವರಿಬ್ಬರೂ ರಾಮನನ್ನು ಕುರಿತು ಉಪಚಾರಪೂರ್ವಕವಾಗಿ, "ಎಲೈ ಪುರುಷೋತ್ತಮನೆ" ನಾವು ಸಮುದ್ರವನ್ನು ದಾಟುವುದಕ್ಕೆ ದಾರಿತೋರದೆ ಚಿಂತಿಸುತ್ತಿರುವ ಕಾಲದಲ್ಲಿ, ಈ ವಿಭೀಷಣನು ಇಷ್ಟು ಸುಲಭೋಪಾಯವನ್ನು ನಮಗೆ ಹೇಳಿರುವಾಗ, ನಾವು ಒಪ್ಪಲಾರೆವೆ? ಭಯಂಕರವಾದ ಈ ಮಹಾಸಾಗರದಲ್ಲಿ ಸೇತುವನ್ನು ಕಟ್ಟಿದ ಹೊರತು, ಇಂದ್ರನೊಡಗೂಡಿದ ದೇವಾಸುರರಿಗಾದರೂ ಲಂಕೆಯನ್ನು ಸಾಧಿಸುವುದು ಶಕ್ಯವಲ್ಲ. ಆದುದರಿಂದ ಮಂತ್ರಾಲೋಚನೆಯಲ್ಲಿ ಸಮರ್ಥನಾದ ಈ ವಿಭೀಷಣನು ಹೇಳಿದುದು ಯಥಾರ್ಥವು. ಅವನ ಮಾತಿನಂತೆಯೇ ನಡೆಸಬೇಕು. ಇನ್ನು ಕಾಲವನ್ನು ಕಳೆದುದು ಸಾಕು! ನಾವು ನಮ್ಮ ಸೇನೆಯೊಡನೆ ರಾವಣಪಾಲಿತವಾದ ಲಂಕೆಗೆ ಹೋಗಿ ಸೇರುವಂತೆ ಈ ಸಮುದ್ರವನ್ನು ಪ್ರಾರ್ಥಿಸು." ಎಂದರು. ಈ ಮಾತನ್ನು ಕೇಳಿ ರಾಮನು ಅಗಲೇ ಸಮುದ್ರತೀರದಲ್ಲಿ ದರ್ಭಾಸ್ತರಣವ

ನ್ನು ಹಾಸಿ, ವೇದಿಕೆಯಲ್ಲಿರುವ ಅಗ್ನಿಯಂತೆ ಅದರ ಮೇಲೆ ಶಯನಿಸಿದನು.
ಇಲ್ಲಿಗೆ ಹತ್ತೊಂಬತ್ತನೆಯ ಸರ್ಗವು.

---

ರಾಮನು ಸೇನಾಸಮೇತನಾಗಿ ಸಮುದ್ರತೀರಕ್ಕೆ ಬಂದಿರುವುದನ್ನು, ರಾವಣನು ಶಾರ್ದೂಲನೆಂಬ ರಾಕ್ಷಸನಿಂದ ಕೇಳಿ, ಸುಗ್ರೀವನನ್ನು ರಾಮನಿಂದ ಬೇರ್ಪಡಿಸುವುದಕ್ಕಾಗಿ ಶುಕನನ್ನು ಕಳುಹಿಸಿದುದು. ವಾನರರು ಆ ಶುಕನನ್ನು ಪ್ರಹರಿಸುವುದಕ್ಕೆ ಹೋಗಲು, ರಾಮನು ಬೇಡವೆಂದು ಅವರನ್ನು ತಡೆದುದು.

ಇಷ್ಟರಲ್ಲಿ ಶಾರ್ದೂಲನೆಂಬ ರಾಕ್ಷಸನೊಬ್ಬನು ಅಕಸ್ಮಾತ್ತಾಗಿ ಸಮುದ್ರತೀರಕ್ಕೆ ಬಂದು,ಅಲ್ಲಿ ಸುಗ್ರೀವನಿಂದ ರಕ್ಷಿತವಾದ ದೊಡ್ಡ ವಾನರಸೈನ್ಯವನ್ನು ನೋಡಿಬಿಟ್ಟನು.ಈ ರಾಕ್ಷಸನು ದುರಾತ್ಮನಾದ ಆ ರಾವಣನಿಗೆ ಚಾರನಾಗಿ ಸುತ್ತುತಿದ್ದವನಾದುದರಿಂದ, ಅವನು ಸಮುದ್ರತೀರದಲ್ಲಿದ್ದ ಆ ವಾನರಸೈನ್ಯವನ್ನು ಬಹಳ ಎಚ್ಚರಿಕೆಯಿಂದ ಸುತ್ತಲೂ ನೋಡಿ ಬಂದು,ವೇಗದಿಂದ ಹಿಂತಿರುಗಿ ಲಂಕೆಗೆಹೋಗಿ,ರಾವಣನನ್ನು ಕುರಿತು ಹೇಳುವನು. "ಎಲೆ ಮಹಾರಾಜನೆ! ಅದೋ! ಸಮುದ್ರದ ಆಚೆಯ ದಡದಲ್ಲಿ ಅಷ್ಟಿಷ್ಟೆಂದು ನಿರ್ಣಯಿಸುವುದಕ್ಕಾಗದೆ ಎರಡನೆಯ,ಸಮುದ್ರವೋ ಎಂಬಂತೆ ಅಗಾಧವಾದ ವಾನರಭಲ್ಲೂಕಸೈನ್ಯವು ಅಪಾರವಾಗಿ ಬಂದುಸೇರಿರುವುದು. ನಮ್ಮ ಲಂಕೆಯನ್ನು ಮುತ್ತುವುದಕ್ಕೂ ಸಿದ್ಧವಾಗಿರುವುದು. ದಶರಥಪುತ್ರರಾದ ರಾಮಲಕ್ಷ್ಮಣರೆಂಬ ಅಣ್ಣತಮ್ಮಂದಿರಿಬ್ಬರೂ, ಉತ್ತಮಾಯುಧಗಳನ್ನು ಧರಿಸಿ ನೆಟ್ಟಗೆ ಸೀತೆಯಿರುವ ಸ್ಥಲಕ್ಕೆ ಬರುವುದರಲ್ಲಿರುವರು.ಮಹಾತೇಜಸ್ವಿಗಳಾದ ಅವರಿಬ್ಬರೂ, ಸಮುದ್ರತೀರದಲ್ಲಿಯೇ ಆ ಸೈನ್ಯವನ್ನಿಳಿಸಿರುವರು. ಯಾವ ಕಡೆಗೆ ತಿರುಗಿ ನೋಡಿದರೂ ಹತ್ತುಯೋಜನಗಳ ದೂರದವರೆಗೆ ಆ ದೊಡ್ಡ ವಾನರಸೈನ್ಯವೇ ವಿಸ್ತಾರವಾಗಿ ವ್ಯಾಪಿಸಿರುವುದು. ಎಲೆ ರಾಜೇಂದ್ರನೆ! ಈಗ ನಾನು ಸಾಮಾನ್ಯವಾಗಿ ನೋಡಿಬಂದಿರುವೆನು! ಇನ್ನೂ ವಿವರವಾಗಿ ಅಲ್ಲಿನ ನಿಜಸ್ಥಿತಿಯನ್ನು ತಿಳಿಯಬೇಕಾದರೆ,ಶೀಘ್ರದಲ್ಲಿಯೇ ನೀನು ಬೇರೆ ಯಾರನ್ನಾದರೂಕಳುಹಿಸಿ,ಅವರಿಂದ ತಿಳಿದುಕೊಳ್ಳಬೇಕು. ಆದುದರಿಂದ ಈಗಲೇ

ಕೆಲವುದೂತರಿಗೆ ಆಜ್ಞೆಮಾಡಿ ಕಳುಹಿಸು! ಅವರು ಇದ್ದಸ್ಥಿತಿಯನ್ನು ಚೆನ್ನಾ ಗಿ ತಿಳಿದು ಬರಲಿ! ಆ ವಾನರಸೈನ್ಯವೇನೋ ಬಹಳ ದೊಡ್ಡದಾಗಿರುವುದು. ಈಗಲೇ ನೀನು ಈ ವಿಷಯದಲ್ಲಿ, ದಾನವನ್ನೋ, ಸಾಮವನ್ನೋ, ಭೇದವ ನ್ನೋ ಪ್ರಯೋಗಿಸಿನೋಡುವುದುಮೇಲು! ದಂಡೋಪಾಯಕ್ಕೆ ಅವಕಾಶವೇ ಇಲ್ಲ" ಎಂದನು. ಶಾರ್ದೂಲನ ಮಾತನ್ನು ಕೇಳಿದೊಡನೆ ರಾಕ್ಷಸೇಶ್ವರನಾದ ರಾವಣನು ಬೆಜ್ಜರಗೊಂಡು, ತನ್ನಲ್ಲಿ ತಾನು ಮುಂದೆ ಮಾಡಬೇಕಾದ ಕಾರ್ಯ ವೇನೆಂದು ನಿರ್ಧರಿಸಿಕೊಂಡು, ತನ್ನ ಮುಂದಿದ್ದ ಶುಕನೆಂಬ ರಾಕ್ಷಸನನ್ನು ಕುರಿತು. "ಎಲೆ ಶುಕಾ! ಈಗಲೇ ನೀನು ಇಲ್ಲಿಂದ ಹೊರಟು, ವಾನರರಾಜ ನಾದ ಸುಗ್ರೀವನನ್ನು ನೋಡಿ ನನ್ನ ಮಾತಿನಿಂದ ಅವನಿಗೆ ಹೇಳು! ಅಲ್ಲಿ ನೀನು ಧೈರ್ಯವನ್ನುಮಾತ್ರ ಬಿಡದೆ, ಮೃದುವಾದ ಮಾತಿನಿಂದಲೇ ನಾನು ಹೇ ಳುವ ಈ ಮಾತುಗಳನ್ನು ಹೀಗೆಯೇ ಹೇಳಬೇಕು "ಎಲೈ ಕಪಿಸಾರ್ವಭೌಮ ನೆ! ನನ್ನಂತೆ ನೀನೂ ಮಹಾರಾಜಕುಲದಲ್ಲಿ ಹುಟ್ಟಿ, ರಾಜಪದವಿಯಲ್ಲಿರುವವ ನು. ಆದುದರಿಂದ ನಿಷ್ಕಾರಣವಾಗಿ ನಮ್ಮೊಡನೆ ವೈರವನ್ನು ಬೆಳೆಸಬಾರದು. ಇದರಮೇಲೆ ನೀನು ಮಹಾಬಲಾಢ್ಯನಾದುದರಿಂದ, ಅಲ್ಪಬಲವುಳ್ಳ ಆ ರಾ ಮನೊಡನೆ ನಿನಗೆ ಸ್ನೇಹವೂ ಯೋಗ್ಯವಲ್ಲ. ಇಷ್ಟೇ ಅಲ್ಲದೆ, ನೀನು ಬ್ರಹ್ಮಪು ತ್ರನಾದ ಋಕ್ಷರಜಸ್ಸಿಗೆ ಮಗನಾದುದರಿಂದ, ನಮ್ಮಿಬ್ಬರಿಗೆ ಪರಸ್ಪರಬಾಂ ಧವ್ಯವೂ ಇರುವುದು. ಇದಿಷ್ಟು ಹಾಗಿರಲಿ! ರಾಮನನ್ನಾಶ್ರಯಿಸುವುದರಿಂ ದ ನಿನಗೆ ಯಾವಲಾಭವಾಗಲಿ, ಅವನನ್ನು ಬಿಡುವುದರಿಂದ ನಷ್ಟವಾಗಲಿ ಇಲ್ಲ. ನಮ್ಮೊಡನೆ ನಿನಗೆ ಈ ವ್ಯರ್ಥವಾದ ವೈರವು ಯುಕ್ತವಲ್ಲ. ನನಗೂ, ನಿನ್ನಣ್ಣನಾದ ವಾಲಿಗೂ ಎಷ್ಟುಸ್ನೇಹವೆಂಬುದನ್ನು ನೀನು ಕಾಣೆಯಾ? ಆ ಸಂಬಂಧದಿಂದ ನಾನೂ ನಿನ್ನನ್ನು ಒಡಹುಟ್ಟಿದವನೆಂದೇ ಭಾವಿಸಿರುವೆನು. ಆದುದರಿಂದ ಎಲೈ ವಾನರೇಶ್ವರನೆ! ಈಗಲೂ ನೀನು ರಾಮನನ್ನು ಬಿಟ್ಟು ನನ್ನೊಡನೆ ಸ್ನೇಹವನ್ನು ಬಳೆಸು! ನಾನು ಆ ರಾಮನ ಭಾರ್ಯೆಯನ್ನು ಕದ್ದು ತಂದಮಾತ್ರಕ್ಕೆ ಅದರಿಂದ ನಿನಗೇನು? ನಿನ್ನ ಪಾಡಿಗೆ ನೀನು ಕಿಷ್ಕಿಂಧೆಗೆ ಹೋಗಿ ನಿನ್ನ ರಾಜ್ಯದಲ್ಲಿ ಸುಖದಿಂದಿರು! ಆದರೆ "ಆರಂಭಿಸಿದ ಕಾರ್ಯವನ್ನು ಹೇಗೆ ಬಿಡುವು"ದೆಂದು ಕೇಳುವೆಯಾ? ನೀನು ಈಗ ಉದ್ದೇಶಿಸಿ ಬಂದಿರುವ ಕಾರ್ಯವನ್ನು ಪೂರಯಿಸಬೇಕೆಂದರೆ ನಿನ್ನಿಂದ ಸಾಧ್ಯವೆ? ಎಂದಿಗೂ ಸಾಧ್ಯ

ವಲ್ಲ. ಮನುಷ್ಯರಿಗಾಗಲಿ, ಕಪಿಗಳಿಗಾಗಲಿ ಎಂದಿಗೂ ಈ ಲಂಕೆಯನ್ನು ಪ್ರವೇಶಿಸುವುದು ಶಕ್ಯವಲ್ಲ. ದೇವಗಂಧರ್ವಾದಿಗಳಾದರೂ ಇದನ್ನು ಪ್ರವೇಶಿಸಲಾರರು. ಇನ್ನು ನಿಮ್ಮಂತಹ ನರವಾನರರ ಸಂಗತಿಗಳನ್ನು ಹೇಳಬೇಕಾದುದೇನು?"ಎಂದು ನಾನು ಹೇಳಿದುದಾಗಿ ಸುಗ್ರೀವನಿಗೆ ಹೇಳು." ಎಂದನು. ಹೀಗೆ ರಾಕ್ಷಸೇಂದ್ರನಾದ ರಾವಣನು ಆಜ್ಞೆಮಾಡಿದೊಡನೆ, ಶುಕನು ಪಕ್ಷಿರೂಪವನ್ನು ಧರಿಸಿ, ಆಗಲೇ ಆಕಾಶಕ್ಕೆ ಹಾರಿ, ಸುಗ್ರೀವನಿದ್ದಸ್ಥಳಕ್ಕೆ ಹೊರಟನು. ಹೀಗೆ ಶುಕನು ಸಮುದ್ರದಮೇಲೆ ಅಂತರಿಕ್ಷಮಾರ್ಗದಿಂದ ಬಹುದೂರದವರೆಗೆ ಹಾರಿ ಬಂದು, ಸುಗ್ರೀವಾದಿವಾನರರಿದ್ದ ಸ್ಥಳವನ್ನು ಸಮೀಪಿಸಿ, ಆಕಾಶದಲ್ಲಿದ್ದಂತೆಯೇ ಸುಗ್ರೀವನನ್ನು ಕುರಿತು, ರಾವಣನು ತನ್ನೊಡನೆ ಹೇಳಿಕಳುಹಿಸಿದ ಮಾತುಗಳಲ್ಲಿ ಒಂದನ್ನೂ ಬಿಡದೆ ಕ್ರಮವಾಗಿ ಹೇಳಿದನು. ಹೀಗೆ ಶುಕನು ರಾವಣನ ಸಂದೇಶಗಳನ್ನು ತಿಳಿಸುತ್ತಿರುವಷ್ಟರಲ್ಲಿಯೇ, ಅಲ್ಲಿದ್ದ ವಾನರರೆಲ್ಲರೂ ಕೋಪಗೊಂಡು, ತಟ್ಟನೆ ಆಕಾಶಕ್ಕೆ ಹಾರಿ, ಅವನನ್ನು ಮುಷ್ಟಿಗಳಿಂದ ಹೊಡೆದು, ಅವನ ರೆಕ್ಕೆಗಳನ್ನು ಮುರಿಸಬೇಕೆಂಬ ಉದ್ದೇಶದಿಂದ ಅವನ ಸುತ್ತಲೂ ಮುತ್ತಿದರು. ಈ ವಾನರರೆಲ್ಲರೂ ಬಲಾತ್ಕಾರದಿಂದ ಆ ಶುಕನನ್ನು ಹಿಡಿದು ನಿಗ್ರಹಿಸಿ ಕೆಡಹಲು, ಆಗಲೇ ಅವನು ಶಕ್ತಿಗುಂದಿ ಥೊಪ್ಪನೆ ನೆಲಕ್ಕೆ ಬಿದ್ದನು. ಹೀಗೆ ವಾನರರು, ಸುತ್ತಿಮುತ್ತಿ ಪೀಡಿಸುತ್ತಿರಲು, ಶುಕನು ಅವರ ಹಿಂಸೆಯನ್ನು ತಡೆಯಲಾರದೆ, ರಾಮನನ್ನು ಕೂಗಿ ಮೊರೆಯಿಡುತ್ತ "ಎಲೈ ಕಕುತ್ಸ್ಥವಂಶಶಿಖಾಮಣಿಯೆ ! ಲೋಕದಲ್ಲಿ ದೂತರಾಗಿ ಬಂದವರನ್ನು ಕೊಲ್ಲುವುದುಂಟೆ? ಈ ವಾನರರು ನನ್ನನ್ನು ಕೊಲ್ಲುತ್ತಿರುವರಲ್ಲಾ! ನೀನಾದರೂ ಇವರನ್ನು ತಡೆದು ನನ್ನನ್ನು ಒದುಕಿಸಬೇಡವೆ?ಯಾವನು ತನ್ನ ಪ್ರಭುವು ಹೇಳಿಕಳುಹಿಸಿದ ಅಭಿಪ್ರಾಯವನ್ನು ಬಿಟ್ಟು, ತನಗೆ ತೋರಿದಂತೆ ತನ್ನ ಮತವನ್ನು ಹೇಳುವನೋ, ಅಂತಹ ದೂತನು ತನ್ನ ಸ್ವಾಮಿಯ ಸಂದೇಶವನ್ನು ಮೀರಿ ನಡೆದ ಹೀನದೂತನೆನಿಸಿಕೊಳ್ಳುವುದರಿಂದ, ಅಂತಹ ದೂತರನ್ನು ಕೊಂದರೂ ದೋಷವಿಲ್ಲ. ಹಾಗಿಲ್ಲದೆ ನಾನು ನನ್ನ ಪ್ರಭುವಿನ ಸಂದೇಶವನ್ನು ಇದ್ದುದಿದ್ದಂತೆ ತಿಳಿಸುತ್ತಿರುವಾಗಲೂ, ಈ ವಾನರರು ನನ್ನನ್ನು ಕೊಲ್ಲುತ್ತಿರುವರಲ್ಲಾ" ಎಂದನು. ಹೀಗೆ ಶುಕನು ದೈನ್ಯದಿಂದ ಗೋಳಿಡುವುದನ್ನು ಕೇಳಿ,



೨೨೨೧. ವಾನರರು ಶುಕನೆಂಬ ರಾಕ್ಷಸದೂತನನ್ನು ಪ್ರಹರಿಸುತ್ತಿರುವಾಗ, ರಾಮನು ಬೇಡೆಂದು ಅವರನ್ನು ತಡೆದುದು.

ರಾಮನು ಅವನಲ್ಲಿ ಮರುಕಗೊಂಡು,ಅವನನ್ನು ಸುತ್ತಿಮುತ್ತಿ ಹೊಡೆಯುತಿ ದ್ದ ವಾನರರನ್ನು ಕುರಿತು “ಎಲೆ ವಾನರರೆ!ಅವನನ್ನು ಕೊಲ್ಲಬೇಡಿರಿ” ಎಂದು ನಿಯಮಿಸಿದನು?ರಾಮಾಜ್ಞೆಯಿಂದ ವಾನರರು ಅವನನ್ನು ಬಿಟ್ಟುಬಿಡಲು, ಅ ವನು ಸ್ವಲ್ಪಧೈರ್ಯವನ್ನು ಹೊಂದಿ,ಮುರಿದ ರೆಕ್ಕೆಗಳಿಂದಲೇ ಪ್ರಯತ್ನಪಟ್ಟು ತಿರುಗಿ ಮೇಲೆಹಾರಿ,ಅಂತರಿಕ್ಷದಲ್ಲಿ ನಿಂತು, ವಾನರರನ್ನು ಕುರಿತು. “ಸುಗ್ರೀ ವಾ!ನೀನು ಮಹಾಬಲವುಳ್ಳವನು!ಶಕ್ತಿಸಂಪನ್ನನು!ಮೇಲಾದ ಪರಾಕ್ರಮವು ಳ್ಳವನು! ಘಾತುಕನಾದ ರಾವಣನು ಸಮಸ್ತಲೋಕಗಳನ್ನೂ ಗೋಳಾಡಿ ಸತಕ್ಕವನೆಂಬುದನ್ನು ನೀನುಕಾಣೆಯಾ?ಈಗನಾನುನಿನ್ನಿಂದ ಅವನ ಮಾತಿಗೆ ತಕ್ಕಪ್ರತ್ಯುತ್ತರವನ್ನುತಿಳಿದುಕೊಳ್ಳದೆ ಹೋದಪಕ್ಷದಲ್ಲಿ,ನನ್ನನ್ನು ಕೊಂದೇ ಬಿಡುವನು. ಆದುದರಿಂದ ಈಗ ನಾನು ನಿನ್ನಮಾತಿನಿಂದ ಅವನಿಗೆ ತಿಳಿಸಬೇ ಕಾದುದೇನು?ಹೇಳು!”ಎಂದನು.ಶುಕನು ಹೇಳಿದ ಈ ಮಾತನ್ನು ಕೇಳಿ, ವಾ ನರರಾಜನಾಗಿಯೂ,ಮಹಾಬಲಾಢ್ಯನಾಗಿಯೂ ಇರುವ ಸುಗ್ರೀವನು, ತನ್ನ ಎಣೆಯಿಲ್ಲದ ಧೈರ್ಯಗುಣಕ್ಕೆ ತಕ್ಕಂತೆ ಆ ದೂತನನ್ನು ಕುರಿತು “ಎಲೆ ರಾ ಕ್ಷಸದೂತನೆ! ನೀನು ನನ್ನ ಮಾತಿನಿಂದ ರಾವಣನನ್ನು ಕುರಿತು, “ ನೀನು ನನಗೆ ಮಿತ್ರನೂ ಅಲ್ಲ? ನಿನ್ನಲ್ಲಿ ನಾನು ದಯೆಯನ್ನು ತೋರಿಸಬೇಕಾದು ದೂ ಇಲ್ಲ ಹಿಂದೆ ಯಾವಾಗಲೂ ನಾನು ನಿನ್ನಿಂದ ಉಪಕಾರವನ್ನು ಪಡೆ ದವನೂ ಅಲ್ಲ! ನಿನ್ನಲ್ಲಿ ನನಗೆ ಪ್ರೀತಿಗೂ ಕಾರಣವಿಲ್ಲ! ಇಷ್ಟೇ ಅಲ್ಲದೆ ನೀನೂ, ನಿನಗೆ ಸಂಬಂಧಿಸಿದವರೆಲ್ಲರೂ ನನ್ನ ಮಿತ್ರನಾದ ರಾಮನಿಗೆ ಶತ್ರು ಗಳಾದುದರಿಂದ,ನನಗೂ ನೀನು ಶತ್ರುವೇಹೊರತು ಬೇರೆಯಲ್ಲ. ನನ್ನಣ್ಣ ನಾದ ವಾಲಿಗೆ ನೀನು ಪರಮಮಿತ್ರನೆಂದು ಹೇಳಿಕೊಂಡೆಯಲ್ಲವೆ? ಆಕಾ ರಣದಿಂದಲೂ ನೀನು ನನಗೆ ಶತ್ರುವಂತೆ ವಧ್ಯನೇ ಹೊರತು ವಿಶ್ವಾಸಪಾ ತ್ರನಲ್ಲ.ನಮ್ಮಿಂದ ಲಂಕೆಗೆ ಪ್ರವೇಶಿಸುವುದೇ ಸಾಧ್ಯವಲ್ಲವೆಂದು ಹೇಳಿದೆಯ ಷ್ಟೆ? ಎಲೆ ಹುಚ್ಚನೆ! ಆ ಭ್ರಾಂತಿಯನ್ನುಬಿಡು! ಇನ್ನು ಶೀಘ್ರದಲ್ಲಿಯೇ ನಾನು ಲಂಕೆಗೆ ಬಂದು, ಅಲ್ಲಿನ ಯುದ್ಧದಲ್ಲಿ ರಾಕ್ಷಸರಾಜನಾದ ನಿನ್ನನ್ನೂ ನಿನ್ನ ಮಕ್ಕಳನ್ನೂ, ನಿನ್ನ ಬಂಧುಗಳನ್ನೂ, ನಿನ್ನ ದಾಯಾದರನ್ನೂ, ಇನ್ನೂ ನಿನಗೆ ಸೇರಿದವರೆಲ್ಲರನ್ನೂ ವಧಿಸುವೆನು ನೋಡು! ನಿಮಿಷಮಾತ್ರ ದಲ್ಲಿ ನಿನ್ನ ಲಂಕಾನಗರಿಯನ್ನೇ ಸುಟ್ಟು ಬೂದಿಮಾಡುವನೆಂದು ತಿಳಿ! ಎಲೆ

ಮೂಢ ರಾವಣಾ! ಇನ್ನು ಮೇಲೆ ನಿನ್ನನ್ನು ದೇವತೆಗಳೊಡಗೂಡಿದ ದೇವೇಂದ್ರನೇ ಬಂದು! ಬಚ್ಚಿಟ್ಟುಕೊಂಡರೂ, ನಿನ್ನ ಮಾಯೆಯಿಂದ ನೀನೇ ಕಣ್ಣಿಗೆ ಕಾಣದೆ ತಲೆತಪ್ಪಿಸಿಕೊಂಡರೂ, ಸೂರ್ಯಬಿಂಬದ್ವಾರದಲ್ಲಿ ಪ್ರವೇಶಿಸಿದರೂ ರಾಮನ ಕೈಯಿಂದ ತಪ್ಪಿಸಿಕೊಳ್ಳಲಾರೆ! ಇದು ನಿಜವು! ರಾಮನ ದ್ವೇಷಕ್ಕೆ ಪಾತ್ರನಾದ ನಿನ್ನನ್ನು ಪಿಶಾಚರಲ್ಲಿಯಾಗಲಿ, ರಾಕ್ಷಸರಲ್ಲಿಯಾಗಲಿ, ಗಂಧರ್ವರಲ್ಲಿಯಾಗಲಿ, ದೈತ್ಯರಲ್ಲಿಯೇ ಆಗಲಿ, ಮೂರು ಲೋಕಗಳಲ್ಲಿಯೂ ಯಾವನೊಬ್ಬನೂ ರಕ್ಷಿಸಿಕೊಳ್ಳಬಲ್ಲನೆಂದು ನನಗೆ ತೋರಲಿಲ್ಲ. ಮುಪ್ಪಿನಿಂದ ಕೇವಲ ಬಲಹೀನನಾದ ಜಟಾಯುವನ್ನು ಕೊಂದ ನಿನ್ನ ವೀರ್ಯಕ್ಕೆ ನೀನೇ ಹಿಗ್ಗುವೆಯಾ? ಛೀ ಮೂಢನೆ! ನಮ್ಮನ್ನು ಹಾಗೆಂದೆಣಿಸಬೇಡ! ಅದೂ ಹೋಗಲಿ! ರಾಮನಾಗಲಿ, ಲಕ್ಷ್ಮಣನಾಗಲಿ, ಕಣ್ಣಿದಿರಿಗಿದ್ದಾಗ ನೀನು ನಿನ್ನ ವೀರ್ಯವನ್ನು ತೋರಿಸಿ ಸೀತೆಯನ್ನು ಕರೆತಂದೆಯಾ? ಅದೂ ಇಲ್ಲ! ಕಳ್ಳನಂತೆ ಹೊಂಚುಹಾಕಿ ಆಕೆಯನ್ನು ಕದ್ದುತಂದೆಯಲ್ಲಾ! ಈಗಲೂ ನಿನಗೆ ಮುಂದೆ ಬರಬಹುದಾದ ಅನರ್ಥವೇನೆಂದು ತಿಳಿದಿಲ್ಲ! ಮಹಾಬಲಾಢ್ಯನಾಗಿಯೂ, ಮಹಾಬುದ್ಧಿವಂತನಾಗಿಯೂ, ದೇವತೆಗಳಿಗೂ ದುರ್ಜಯನಾಗಿಯೂ ಇರುವ ರಘುತಿಲಕನಾದ ಶ್ರೀರಾಮನೇ ನಿನ್ನ ಪ್ರಾಣಗಳನ್ನು ಕಳೆಯತಕ್ಕವನೆಂದು ಇನ್ನೂ ನಿನಗೆ ತಿಳಿಯಲಿಲ್ಲವೆ?" ಎಂದು ನಾನು ಹೇಳಿದುದಾಗಿ ತಿಳಿಸು" ಎಂದನು. ಇಷ್ಟರಲ್ಲಿ ವಾಲಿಪುತ್ರನಾದ ಅಂಗದನು ಸುಗ್ರೀವನನ್ನು ಕುರಿತು. "ಎಲೆ ಮಹಾರಾಜನೆ! ಇದೇನು? ಈ ನೀಚರಾಕ್ಷಸನೊಡನೆ ನಿನಗೆ ಇಷ್ಟು ಸಂಭಾಷಣಗಳೇಕೆ? ಇವನು ನಿಜವಾಗಿಯೂ ದೂತನಾಗಿ ಬಂದವನಲ್ಲ! ಇವನು ರಾವಣನಿಗೆ ಗೂಢಚಾರನೆಂದೇ ನನಗೆ ತೋರುವುದು. ಇವನು ಇಲ್ಲಿ ನಮ್ಮೆದಿರಾಗಿ ನಿಂತು ಮಾತಾಡುವ ನೆವದಿಂದಲೇ, ನಮ್ಮ ಸೈನ್ಯದ ಪ್ರಮಾಣಗಳನ್ನೆಲ್ಲಾ ಕಂಡುಕೊಳ್ಳುತ್ತಿರುವನು. ಇವನನ್ನು ನಾವು ಇಲ್ಲಿಯೇ ಹಿಡಿದು ಕೊಂದುಬಿಡಬೇಕು. ಇವನನ್ನು ತಿರುಗಿ ಲಂಕೆಯ ಕಡೆಗೆ ಬಿಡಬಾರದೆಂದೇ ನನಗೆ ತೋರುವುದು." ಎಂದನು. ಇಷ್ಟರಲ್ಲಿಯೇ ಸುಗ್ರೀವಾಜ್ಞೆಯಿಂದ ಕೆಲವು ವಾನರರು ಆಕಾಶಕ್ಕೆ ಹಾರಿ, ಆ ಶುಕನನ್ನು ಹಿಡಿದು, ಅನಾಥನಂತೆ ಗೋಳಿಡುತ್ತಿರುವ ಆ ರಾಕ್ಷಸನನ್ನು ಹಗ್ಗಗಳಿಂದ ಕಟ್ಟಿತಂದರು. ಆಮೇಲೆ ಕೋಪಸ್ವಭಾವವುಳ್ಳ ಕೆಲವು ವಾನರರು ಆ

ಶುಕನನ್ನು ಸುತ್ತಿಮುತ್ತಿ ಪೀಡಿಸುತ್ತಿರಲು, ಆತನು ತಿರುಗಿ ಮಹಾತ್ಮನಾದ ರಾಮನನ್ನು ಕೂಗಿ ಮೊರೆಯಿಡುತ್ತ "ಅಯ್ಯೋ! ರಾಮಾ! ಈ ವಾನರರು ನನ್ನ ರೆಕ್ಕೆಗಳನ್ನು ಮುರಿದು ಕಣ್ಣುಗಳನ್ನು ಕಿಳುತ್ತಿರುವರಲ್ಲಾ! ಇನ್ನು ನನ್ನ ಗತಿಯೇನು? ನಾನು ನಿಜವಾಗಿಯೂ ಯಾವತಪ್ಪನ್ನೂ ಮಾಡಿದವನಲ್ಲ. ದೂತಕಾರ್ಯಕ್ಕಾಗಿ ಬಂದವನು! ಹೀಗಿರುವಾಗಲೂ ಈ ವಾನರರ ಹಿಂಸೆಯಿಂದ ನಾನು ಇಲ್ಲಿ ಪ್ರಾಣವನ್ನು ಬಿಟ್ಟರೆ, ನೀನೇ ನನ್ನನ್ನು ಕೊಲ್ಲಿಸಿದಂತಾಗುವುದು. ನಾನು ಹುಟ್ಟಿದುದು ಮೊದಲು ಸಾಯುವವರೆಗೂ ಮಾಡಿದ ಪಾಪಗಳಿಗೆಲ್ಲಕ್ಕೂ ನೀನೇಭಾಗಿಯಾಗಬೇಕಾಗುವುದು." ಎಂದು ಕೂಗಿಕೊಂಡನು. ಈ ವಿಲಾಪವನ್ನು ಕೇಳಿದೊಡನೆ ರಾಮನು ಆವನಲ್ಲಿ ಮರುಕಗೊಂಡು, ವಾನರರನ್ನು ಕುರಿತು, "ಎಲೆ ವಾನರರೆ! ಅವನು ದೂತನು. ಆವನನ್ನು ಕೊಲ್ಲಬೇಡಿರಿ! ಅವನ ಕಟ್ಟುಗಳನ್ನು ಬಿಚ್ಚಿ ಕಳುಹಿಸಿಬಿಡಿರಿ!" ಎಂದು ಹೇಳಿ ಆ ವಾನರರಿಗೆ ಆಜ್ಞೆಮಾಡಿದನು. ಇಲ್ಲಿಗೆ ಇಪ್ಪತ್ತನೆಯ ಸರ್ಗವು.

---

**{ ರಾಮನು ದರ್ಭಶಯನದಲ್ಲಿದ್ದು ಮೂರುರಾತ್ರಿಗಳವರೆಗೆ ಸಮುದ್ರವನ್ನಾರಾಧಿಸಿದರೂ, ಸಮುದ್ರನು ಪ್ರಸನ್ನನಾಗದಿರಲು, ಕೋಪದಿಂದ ಬಾಣಪ್ರಯೋಗಕ್ಕೆ ತೊಡಗಿದುದು. ಲಕ್ಷ್ಮಣನು ಬೇಡವೆಂದುತಡೆದುದು. }**

ಆಮೇಲೆ ರಘುನಂದನನಾದ ಶ್ರೀರಾಮನು, ಸಮುದ್ರತೀರದಲ್ಲಿ ದರ್ಭೆಗಳನ್ನು ಹಾಸಿಕೊಂಡು ಸಮುದ್ರಕ್ಕಿದಿರಾಗಿ ಕೈಮುಗಿದು ಪೂರ್ವಾಭಿಮುಖವಾಗಿ ಮಲಗಿಬಿಟ್ಟನು. ಪರಂತಪನಾದ ಆ ರಾಮನು ಹೀಗೆ ದರ್ಭಶಯನದಲ್ಲಿ ಮಲಗಿದಾಗ, ಸರ್ಪದೇಹದಂತೆ ಮೃದುವಾಗಿ ಉದ್ದವಾದ ತನ್ನ ಬಲದೋಳನ್ನೇ ತಲೆದಿಸೆಗಿಟ್ಟುಕೊಂಡು, ಆ ಸಮುದ್ರಕ್ಕಿದಿರಾದ ಬೇರೊಂದು ಮಹಾಸಮುದ್ರದಂತೆ ಮಲಗಿದನು. ಮೊದಲು ಅಯೋಧ್ಯೆಯಲ್ಲಿದ್ದಾಗ, ಯಾವಭುಜವು ಬಗೆಬಗೆಯ ರತ್ನಾಭರಣಗಳಿಂದಲಂಕೃತವಾಗಿ ಶೋಭಿಸುತಿತ್ತೋ, [1] ಯಾವಭುಜವನ್ನು ಎಷ್ಟೋಮಂದಿ ಉತ್ತಮಸ್ತ್ರೀಯ

---

1 ಇಲ್ಲಿ "ಭುಜೈಃ ಪರಮನಾರೀಣಾಯಭಿಮೃಷ್ಟಮನೇಕಧಾ" ಎಂದುಮೂಲವು. ಇಲ್ಲಿ ರಾಮನ ಭುಜಕ್ಕೆ ಅನೇಕಸ್ತ್ರೀಯರ ಕರಸ್ಪರ್ಶವನ್ನು ಹೇಳಿರುವುದರಿಂದ, ರಾಮ

ರು, ಕಟಕಕೇಯೂರಾದಿಮುಕ್ತಾಭರಣಗಳಿಂದಲಂಕೃತಗಳಾದ ತಮ್ಮ

---

ನಿಗೆ ಸೀತೆ ಯೊಬ್ಬಳೇ ಅಲ್ಲದೆ ಇನ್ನೂ ಅನೇಕಪತ್ನಿಯರುಂಟೆಂದು ಕೆಲವರು ಹೇಳುವರು. ಇದು ಸರಿಯಲ್ಲ. ಇಲ್ಲಿ ವರನಾರಿಯರೆಂದರೆ ಅಂತಃಪುರದಲ್ಲಿ ಅಲಂಕಾರಕಾರ್ಯಕ್ಕೆ ನಿಯೋಗಿಸಲ್ಪಡತಕ್ಕ ಉತ್ತಮಸ್ತ್ರೀರಂಧ್ರಿಯರೆಂದರ್ಥವು. ಹಾಗೆಯೇ "ಅಭಿಮೃಷ್ಟಮ್" ಎಂಬುದಕ್ಕೂ ಸ್ಪರ್ಶಯೋಗ್ಯವೆಂದೇ ಅರ್ಥವು. ಅಥವಾ ವರನಾರಿಯರೆಂದರೆ ಭೂನೀಳಾದಿದಿವ್ಯಮಹಿಷಿಯರೆಂದೂ ಅರ್ಥಮಾಡಬಹುದು." ಮನುಷ್ಯರೂಪದಿಂದಿರುವ ರಾಮನಿಗೆ ಭೂನೀಳಾದಿ ದಿವ್ಯಮಹಿಷಿಯರೊಡನೆ ಸಂಬಂಧವು ಹೇಗೆ?" ಎಂದು ಶಂಕಿಸಬಹುದು. ರಾಮನು "ಆತ್ಮಾನಂ ಮಾನುಷಂ ಮನ್ಯೇ" ಎಂದು ತನಗೆ ತಾನು ಮನುಷ್ಯನೆಂಬ ಭಾವನೆಯುಳ್ಳವನಾಗಿದ್ದರೂ, ಮೊದಲು ಬಾಲಕಾಂಡದಲ್ಲಿ "ಜಜ್ಞೇವಿಷ್ಣುಸ್ಸನಾತನಃ" ಎಂದು ನಿಜಸ್ಥಿತಿಯನ್ನರಿತು ಹೇಳಿದ ವಾಲ್ಮೀಕಿಮಹಾಮುನಿಗೆ, ಅವನಲ್ಲಿ ಪರತ್ವಜ್ಞಾನವೇ ಸ್ಥಿರವಾಗಿ ನೆಲೆಗೊಂಡಿರುವುದರಿಂದ, ಆ ಭಾವನೆಯಿಂದಲೇ ಈ ವಾಕ್ಯವನ್ನು ಹೇಳಿರಬಹುದು. ಆದುದರಿಂದ ವರನಾರಿಯರೆಂಬುದಕ್ಕೆ ಇತರ ಪತ್ನಿಯರೆಂದರ್ಥವಲ್ಲವು. ರಾಮನಿಗೆ ಬೇರೆ ಪತ್ನಿಯರಿಲ್ಲದುದಕ್ಕಾಗಿಯೇ ಉತ್ತರಕಾಂಡದಲ್ಲಿ ಇವನು ಯಜ್ಞಕಾರ್ಯಕ್ಕಾಗಿ ಸುವರ್ಣದಿಂದ ಸೀತಾಪ್ರತಿಮೆಯನ್ನು ಮಾಡಿಟ್ಟುಕೊಂಡುದಾಗಿ ಕಾಣಿಸುವುದು. "ಆದರೆ ಭಟ್ಟಾಚಾರ್ಯರು ಪತ್ನಿಯರಿಗೆ ಪ್ರತಿನಿಧಿ ಭಾವವನ್ನು ವಿಧಿಸಲಿಲ್ಲವಲ್ಲಾ" ಎಂದು ಆಕ್ಷೇಪಿಸಬಹುದು. "ಈ ವಿಷಯದಲ್ಲಿ ಧರ್ಮಸಂಸ್ಥಾಪನಾರ್ಥವಾಗಿ ಅವತರಿಸಿರುವ ಆ ರಾಮನ ಆಚಾರವೇ ಮೇಲಾದ ಪ್ರಮಾಣವಾಗಿರುವಾಗ, ಇದಕ್ಕೆ ಬೇರೆ ಪ್ರಮಾಣವೇಕೆ? ವಾಸ್ತವಕ್ಕೆ ಆಚಾರವೇ ಪ್ರಥಮ ಪ್ರಮಾಣವು. ಶ್ರುತಿಯೂ ಪೂರ್ವಾಚಾರವನ್ನು ಪ್ರದರ್ಶಿಸಿಯೇ ಕರ್ಮವನ್ನು ವಿಧಿಸುವುದು. ಆಪಸ್ತಂಬರೂಕೂಡ "ಧರ್ಮಜ್ಞಸಮಯಃ ಪ್ರಮಾಣಂ ವೇದಾಶ್ಚ" ಎಂದು ಧರ್ಮಜ್ಞಸಮಯರೂಪವಾದ ಆಚಾರವನ್ನೇ ಪ್ರಥಮ ಪ್ರಮಾಣವನ್ನಾಗಿ ಹೇಳಿರುವರು. ಹಾಗೆಯೇ ಸ್ಮೃತಿಕಾರರೂ, "ಶ್ರುತಿರ್ವಿಭಿನ್ನಾ ಸ್ಮೃತಯೋಽಪಿ ಭಿನ್ನಾ ನಚೈಕೋಮುನಿರ್ಯಸ್ಯ ವಚಃ ಪ್ರಮಾಣಮ್ । ಧರ್ಮಸ್ಯತತ್ತ್ವಂ ನಿಹಿತಂ ಗುಹಾಯಾಂ ಮಹಾಜನೋಯೇನಗತಸ್ಸಪಂಥಾಃ" ಎಂದು ಶಿಷ್ಟಾಚಾರವೇ ಪ್ರಮಾಣವೆಂದು ನಿರ್ಣಯಿಸಿರುವರು. ಆದುದರಿಂದ ರಾಮನ ಆಚಾರವೇ ಉತ್ತಮವಾದ ಪ್ರಮಾಣವೇಹೊರತು, ಅದರ ಮುಂದೆ ವಿರುದ್ಧನ್ಯಾಯಗಳಾವುವೂ ನಿಲ್ಲವು. ರಾಜಸೂಯಾಶ್ವಮೇಧಾದಿಗಳಲ್ಲಿ ಪಟ್ಟಮಹಿಷಿಯಂತೆ ವಾವಾತೆ, ಪರಿವೃಕ್ತಿಯೆಂಬವರಿಬ್ಬರೂ ಇರಬೇಕಾದುದು ವಿಧಿಯು. ಹೀಗಿದ್ದರೂ ಅವರಿಲ್ಲದ ಸಂದರ್ಭಗಳಲ್ಲಿ ಅವರಿಂದ ನಡೆಯಬೇಕಾದ ಕಾರ್ಯವುಮಾತ್ರ ನಡೆಸಲ್ಪಡುವುದಿಲ್ಲವಷ್ಟೇಹೊರತು, ಅವರಿಂದ ಕರ್ಮಕ್ಕೇನೂ ವೈಕಲ್ಯವುಬಾರದು. ಕುಂಟರು, ಕುರುಡರು ಮೊದಲಾದ ಅಂಗಹೀನರಿಗೆ

ನಾವು ಶೀತಲಜಲವಿಂದಲೂ, ಉತ್ತಮಫಲಗಳಿಂದಲೂ ತುಂಬಿದ ಪ್ರದೇಶ ದಲ್ಲಿ ನಮ್ಮ ಸೈನ್ಯವನ್ನಿಳಿಸಿ,ಈಗಲೇ ಆಸೈನ್ಯಗಳನ್ನು ಬೇರೆಬೇರೆಯಾಗಿಯೂ ವಿಭಾಗಿಸಿ,ಗರುಡವ್ಯೂಹವನ್ನಾಗಿ ನಿಲ್ಲಿಸಿಡುವುದು ಮೇಲು!ಅದೋ ನೋಡು! ಕ್ಷುದ್ರಜನಗಳಿಗೆ ನಾಶಸೂಚಕಗಳಾಗಿಯೂ, ಭಯಂಕರವಾಗಿಯೂ, ಇ ರುವ ಯುದ್ಧವು ಸಮೀಪಿಸಿದಂತೆ ತೋರುವುದು.ಇದರಿಂದ ಕಪಿಗಳಲ್ಲಿಯೂ, ಕರಡಿಗಳಲ್ಲಿಯೂ,ರಾಕ್ಷಸರಲ್ಲಿಯೂ, ಪ್ರಮುಖರಾದ ವೀರರಿಗೆ ವಿಶೇಷವಾ ಗಿ ನಾಶವುಂಟಾಗುವಂತೆಯೂ ನನಗೆ ತೋರುತ್ತಿರುವುದು.ವಾಯುವು ಕಲು ಷವಾಗಿ ಬೀಸುತ್ತಿರುವುದು. [1] ಭೂಮಿಯು ನಡುಗುವುದು. ಪರ್ವತಾಗ್ರಗ ಳು ಅದಿರುತ್ತಿರುವುವು. ಮರಗಳು ಇದ್ದಕ್ಕಿದ್ದ ಹಾಗೆ ಮುರಿದು ಬೀಳುವು ವು. ಅದೋ! ಆಕಾಶದಲ್ಲಿ ಮೇಘಗಳು, ತೋಳಗಳಂತೆ ಬಣ್ಣವುಳ್ಳವುಗಳಾ ಗಿ, ಭಯಂಕರಸ್ವರೂಪವನ್ನು ಹೊಂದಿ ಕ್ರೂರಸ್ವರದಿಂದ ಮೊಳಗುತ್ತಿರು ವುವು. [2] ಮತ್ತು ಆ ಮೇಘಗಳು ರಕ್ತಬಿಂದುಗಳೊಡನೆ ಮಿಶ್ರವಾದ ಜಲವ ನ್ನು ವರ್ಷಿಸುತ್ತಿರುವುವು. ರಕ್ತಚಂದನದಂತಿರುವ ಮೇಘದೊಡನೆ ಸೇರಿ ಸಂಧ್ಯಾಕಾಲವು ಅತ್ಯಂತಭಯಂಕರವಾಗಿರುವುದು. ಜ್ವಲಿಸುತ್ತಿರುವ ಸೂರ್ಯಬಿಂಬದಿಂದ ಅಗ್ನಿಪಿಂಡಗಳು ಉದಿರುವುವು ನೋಡು ! ಮೃಗಪಕ್ಷಿ ಗಳೆಲ್ಲವೂ ಕ್ರೂರಸ್ವರೂಪವುಳ್ಳವುಗಳಾಗಿ ಸೂರ್ಯನಿಗಿದಿರಾಗಿ ನಿಂತು ಸುತ್ತ ಲೂ ಕ್ರೂರಸ್ವರದಿಂದ ಕೂಗುತ್ತಿರುವುವು.ಇವೆಲ್ಲವೂ ನೋಡುವಾಗಲೇ ಮ ಹಾಭಯವನ್ನು ಹುಟ್ಟಿಸುತ್ತಿರುವುವು.[3]ರಾತ್ರಿಯಲ್ಲಿ ಚಂದ್ರನು ಕಾಂತಿಗುಂ

---

1 ಸಂಧ್ಯಾಕಾಲದ ಭೂಕಂಪವು ರಾಜರಿಗೆ ಮಹಾನಿಷ್ಟಸೂಚಕವೆಂದು ನಿಮಿತ್ತ ಶಾಸ್ತ್ರವು. ಈ ವಿಷಯದಲ್ಲಿ "ಯಾಮತ್ರಯಾಷ್ಟ ಭೂಕಂಪೋ ದ್ವಿಜಾತೀನಾಮುಪ ದ: । ಅರಿಷ್ಟದಃ ಕ್ಷಿತೀಶಾನಾಂಸಂಧ್ಯಯೋರುಭಯೋರಪಿ"ಎಂದು ವಸಿಷ್ಠವಚನವು.

2 ವಿದ್ಯುಲ್ಲಾಪತನಂಚೈವ ದಿವಾ ನಕ್ಷತ್ರದರ್ಶನಂ । ದಿವಾ ನಿಸ್ತಥಾ ಶಾಪಸ್ತೃಣ ರಕ್ತಪ್ರವರ್ಷಣಂ" ಎಂದು ರಕ್ತವರ್ಷವು ಸುರಿಯುವುದು ಬಹಳ ದೊಡ್ಡ ದುರ್ನಿಮಿ ತ್ತವೆಂದು ಮಿಹಿರವಚನವು.

3 ಚಂದ್ರಕಿರಣವು ಸಂತಾಪಕರವಾಗಿದ್ದರೆ ಮಹೋತ್ಪಾತಸೂಚಕವೆಂದು ನಿಮಿತ್ತನ ಶಾಸ್ತ್ರವು.

ದಿ ತನ್ನ ಕಿರಣದಿಂದ ಸಂತಾಪ ಗೊಳಿಸುತ್ತಿರುವನು. ಅದೋ ಅಲ್ಲಿ ಸೂರ್ಯನ ಸುತ್ತಲೂ[1] ಕೆಂಪು, ಕಪ್ಪು, ಮತ್ತು ಎಳಗೆಂಪುಬಣ್ಣಗಳ ಮಿಶ್ರ ರೇಖೆಯುಳ್ಳ ಪರಿವೇಷವು ಕುರುಚಾಗಿ, ಭಯಂಕರವಾಗಿ, ಹಿಂದೆ ಯಾವಾಗಲೂ ನೋಡದ ಅದ್ಭುತಾಕಾರದಿಂದ ಕಾಣುವುದು ನೋಡು. ಇದನ್ನು ನೋಡಿದರೆ ಪ್ರಳಯಕಾಲದಲ್ಲಿ ಲೋಕಕ್ಷಯಸೂಚಕವಾಗಿ ಹುಟ್ಟುವ ಪರಿವೇಷದಂತೆಯೇ ತೋರುತ್ತಿರುವುದು. ವತ್ಸಲಕ್ಷ್ಮಣಾ! ಅದೋ! ಅತ್ತಲಾಗಿ[2] ನಿರ್ಮಲವಾದ ಸೂರ್ಯಮಂಡಲದ ನಡುವೆ, ರಂಧ್ರಾಕಾರವಾಗಿ ಕಪ್ಪಾದ ಕಳಂಕವು ಕಾಣುವುದು ನೋಡು. ಆಕಾಶದ ನಕ್ಷತ್ರಗಳೆಲ್ಲವೂ ವಿಶೇಷವಾಗಿ ಧೂಳಿಯಿಂದ ಮುಚ್ಚಿ, ಕಾಂತಿಗುಂದಿ ಮಲಿನವಾಗಿ ಲೋಕಕ್ಕೆ ಪ್ರಳಯವನ್ನು ಸೂಚಿಸುವಂತಿರುವುವು. ಹಾಗೆ, ಹದ್ದು ಮೊದಲಾದ ಬಹಳ ಬಲವುಳ್ಳ ಮಾಂಸಾಹಾರಿಪಕ್ಷಿಗಳೂಕೂಡ, ಕೇವಲದುರ್ಬಲಗಳಾದ ಸಣ್ಣಸಣ್ಣ ಹಕ್ಕಿಗಳಿಂದ ಪ್ರತಿಹತಗಳಾಗಿ ಕೆಳಗೆ ಬೀಳುವುದನ್ನುನೋಡು. ಅಲ್ಲಲ್ಲಿ ನರಿಗಳು ಭಯಂಕರವಾದ ಅಮಂಗಳಧ್ವನಿಯಿಂದ ಊಳಿಡುತ್ತಿರುವುವು. ವತ್ಸಲಕ್ಷ್ಮಣಾ! ಈ ಮಹೋತ್ಪಾತಗಳನ್ನು ನೋಡಿದರೆ, ಇನ್ನು ಮುಂದೆ ನಮಗೂ, ರಾಕ್ಷಸರಿಗೂ ದೊಡ್ಡಯುದ್ಧವು ಪ್ರಾಪ್ತವಾಗಿ, ಅದರಲ್ಲಿ ಶೂರರಾದ ವಾನರರೂ, ರಾಕ್ಷಸರೂ ಒಬ್ಬರಮೇಲೊಬ್ಬರು ಪ್ರಯೋಗಿಸುವ ಬೆಟ್ಟಗುಡ್ಡಗಳಿಂದಲೂ, ಖಡ್ಗಾದ್ಯಾಯುಧಗಳಿಂದಲೂ, ಭೂಮಿಯೆಲ್ಲ

---

1 ಇಲ್ಲಿ ಮೂರುಬಣ್ಣಗಳಿಂದ ,ಮೂರುಮಂಡಲವನ್ನು ಹೇಳುವುದರಿಂದಲೂ, ಸಾಯಂಕಾಲದ ವೇಳೆಯಾದುದರಿಂದಲೂ, ಇಲ್ಲಿ ಹೇಳಲ್ಪಟ್ಟ ಪರಿವೇಷವು ರಾಜರಿಗೆ ನಾಶಸೂಚಕವೆಂದು ಗ್ರಹಿಸಬೇಕು. ಈ ವಿಷಯದಲ್ಲಿ" ದ್ವಿಮಂಡಲಶ್ಚಮೂಪಘ್ನೋ ನೃಪಘ್ನೋ ಯ ಸ್ತ್ರಿಮಂಡಲ:" ಎಂದು ಕಾಶ್ಯಪವಚನವು. ಇದಲ್ಲದೆ॥ ದಿನಕರಪರಿವೇಷ: ಪೂರ್ವಯಾಮೇತು ಪೀಡಾ । ದಿನಕರಪರಿವೇಷೋ ವೃಷ್ಟಿಯುದ್ಧಂ ದ್ವಿತೀಯೇ । ದಿನಕರಪರಿವೇಷಂ ಕ್ಷೇಮಮಾಹು ಸ್ತೃತೀಯೇ।ದಿನಕರಪರಿವೇಷ ಸ್ಸರ್ವನಾಶಶ್ಚತುರ್ಥೇ॥" ಎಂದು ಈ ಪರಿವೇಷವೇ ಚತುರ್ಥಯಾಮದಲ್ಲಿ ಎಂದರೆ ಸಾಯಂಕಾಲದಲ್ಲಿ ಕಾಣಿಸಿದಾಗ ಸರ್ವನಾಶ ಸೂಚಕವೆಂದು ವಚನವು.

2 "ಚಂದ್ರಾರ್ಕಮಂಡಲ ಚ್ಛಿದ್ರಂ ದೃಷ್ಟ್ವಾ ತ್ವಜನ ಪದಕ್ಷಯ:" ಎಂಬಂತೆ ಸೂರ್ಯಬಿಂಬದಲ್ಲಿ ರಂಧ್ರವು ಕಾಣುವುದು ರಾಜನಾಶಸೂಚಕವೆಂದು ಶಕುನಶಾಸ್ತ್ರವು.



೨೨೨೬. ರಾಮನು ಮೂರುರಾತ್ರಿಗಳವರೆಗೆ ದರ್ಭಶಯನದಲ್ಲಿ ಮಲಗಿ, ಸಮುದ್ರನನ್ನು ಉಪಾಸನಮಾಡಿದುದು.

ಈ ಮೊದಲಾದ ಗುಣಗಳೆಲ್ಲವೂ ಸತ್ಪುರುಷರಿಗೆ ಅವಶ್ಯವಾಗಿರಬೇಕಾದ ಸುಗುಣಗಳೆಂಬುದರಲ್ಲಿ ಸಂದೇಹವಿಲ್ಲ. ಆದರೇನು? ಈ ಸದ್ಗುಣಗಳನ್ನೇ ಹೀಗೆ ನೀಚರಾದವರಲ್ಲಿ ತೋರಿಸಿದರೆ, ಅವರು ಆ ಗುಣವುಳ್ಳವರನ್ನು ಅಸಮರ್ಥರೆಂದು ಗ್ರಹಿಸಿಬಿಡುವರು. ಇಂತಹ ಅವಿವೇಕಿಗಳಲ್ಲಿ ಈ ಸದ್ಗುಣಗಳನ್ನು ತೋರಿಸುವುದರಿಂದ ಕೈಲಾಗದವನೆಂದು ಹೇಳಿಸಿ ಕೊಳ್ಳುವುದೊಂದೇ ಫಲವು. ಅಜ್ಞರಾದ ಜನರು ಆತ್ಮಸ್ತುತಿಮಾಡಿ ಕೊಳ್ಳುವವನನ್ನೂ, ದಯೆಯಿಲ್ಲದವನನ್ನೂ, ವಂಚಕನನ್ನೂ, ಜನರಲ್ಲಿ ಸಲಿಗೆಯಿಲ್ಲದವನನ್ನೂ ನ್ಯಾಯವಿವೇಚನೆಯಿಲ್ಲದೆ ಶಿಕ್ಷಿಸುವವನನ್ನೂ, ಬಹಳ ಸಮರ್ಥನೆಂದು ತಿಳಿದು ಗೌರವಿಸುವರು. ಲಕ್ಷ್ಮಣಾ! ಮುಖ್ಯವಾಗಿ ಲೋಕದಲ್ಲಿ ಮೃದುತ್ವದಿಂದ ಬಲವಂತನೆಂಬ ಕೀರ್ತಿಯೂ ಬಾರದು. ಪರಾಕ್ರಮವುಳ್ಳವನೆಂಬ ಯಶಸ್ಸೂ ಬಾರದು. ಯುದ್ಧದಲ್ಲಿ ಜಯವೂ ಬಾರದು. ದುರ್ಜನರಲ್ಲಿ ಮಾತ್ರ ಸಾಮವೆಂಬುದು ಕೆಲಸಕ್ಕೇ ಬಾರದು. ಇಂತವರಲ್ಲಿ ದಂಡೋಪಾಯವೇ ಮೇಲಾದ ಸಾಧನವು. ಎಲೆ ವತ್ಸನೆ! ಇದೋ ನೋಡು! ಈಗಲೇ ನಾನು ನನ್ನ ಬಾಣಗಳಿಂದ ಈ ಸಮುದ್ರವನ್ನು ಕಲಕಿ ಬಿಡುವೆನು ನೋಡು! ನನ್ನ ಬಾಣಗಳಿಂದ ಇದರಲ್ಲಿರುವ ಮಹಾಮಕರಗಳೆಲ್ಲವೂ ಛಿನ್ನಭಿನ್ನಗಳಾಗಿ ಈ ಸಮುದ್ರದ ನೀರನ್ನೆಲ್ಲಾ ವ್ಯಾಪಿಸಿ ಮೇಲೆತೇಲಾಡುವಂತೆ ಮಾಡುವೆನು ನೋಡು! ಅಲ್ಲಲ್ಲಿರುವ ಮಹಾಸರ್ಪಗಳ ದೊಡ್ಡದೇಹಗಳೂ, ಗಜಾಕೃತಿಯುಳ್ಳ ಮೀನುಗಳ ಸುಂಡಿಲುಗಳೂ, ನನ್ನ ಬಾಣಗಳಿಂದ ಕತ್ತರಿಸಲ್ಪಡುವುದನ್ನೂ ನೋಡು! ಈಗಲೇ ನನ್ನ ಬಾಣಗಳನ್ನು ಪ್ರಯೋಗಿಸಿ, ಶಂಖಗಳಿಂದಲೂ, ಮುತ್ತುಚಿಪ್ಪುಗಳಿಂದಲೂ, ಮೀನುಗಳಿಂದಲೂ, ಮೊಸಳೆಗಳಿಂದಲೂ ತುಂಬಿದ ಈ ಸಮುದ್ರವನ್ನು ನಿಮಿಷಮಾತ್ರದಲ್ಲಿ ಶೋಷಿಸುವುದನ್ನಾದರೂ ನೋಡು! ಲಕ್ಷ್ಮಣಾ! ನಾನು ತಾಳ್ಮೆಯಿಂದ ಸುಮ್ಮನಿರುವುದನ್ನು ನೋಡಿ, ಈ ಸಮುದ್ರವು ನನ್ನನ್ನು ಕೈಲಾಗದವನೆಂದು ತಿಳಿದಹಾಗಿದೆ. ಛೀ! ಇಂತಹ ನೀಚಜನದಲ್ಲಿ ತಾಳ್ಮೆಯೆಂಬುದು ಎಂದಿಗೂ ಕೆಲಸಕ್ಕೆ ಬಾರದು! ಇಂತವನಲ್ಲಿ ಕೋಪವೇ ಯುಕ್ತವೇ ಹೊರತು, ಸಾಮದಿಂದ ಈ ಸಮುದ್ರವು ನಮಗೆ ತನ್ನ

ರೂಪವನ್ನು ತೋರಿಸುವ ಹಾಗಿಲ್ಲ. [1] ವತ್ಸಲಕ್ಷ್ಮಣಾ! ನನ್ನ ಬಿಲ್ಲನ್ನೂ, ವಿಷಸರ್ಪಗಳಿಂತಿರುವ ನನ್ನ ಕ್ರೂರಬಾಣಗಳನ್ನೂ ತಂದುಕೊಡು. ಈ ಸಮುದ್ರವನ್ನು ಶೋಷಿಸಿಬಿಡುವೆನು! ನಮ್ಮ ಕಡೆಯ ಕಪಿಗಳು ಇದನ್ನು ಕಾಲುನಡೆಯಿಂದಲೇ ದಾಟಿಹೋಗಲಿ ! ಈ ಸಮುದ್ರನು ಅಕ್ಷೋಭ್ಯನೆಂದು ಲೋಕದಲ್ಲಿ ಖ್ಯಾತಿಹೊಂದಿದವನಲ್ಲವೆ? ಈಗ ನಾನು ಅವನಿಗೆ ಆ ಖ್ಯಾತಿಯನ್ನೇ ಹೋಗಲಾಡಿಸುವೆನು ನೋಡು! ಆಗಾಗ ಅಲೆಗಳಿಂದ ತುಂಬಿ ತುಳುಕುತಿದ್ದರೂ, ಸುತ್ತಲೂ ಇರುವ ತನ್ನ ಎಲ್ಲೆಕಟ್ಟನ್ನು ಮೀರದೆ ಸ್ಥೈರ್ಯದಿಂದಿರುವ ಈ ಸಮುದ್ರನನ್ನು, ಈಗ ನನ್ನ ಬಾಣಗಳಿಂದ ತನ್ನ ಎಲ್ಲೆಯನ್ನು ಮೀರುವಂತೆ ಮಾಡುವೆನು ನೋಡು! ಈ ಮಹಾಸಮುದ್ರವನ್ನು, ನಾನು ಅದರಲ್ಲಿ ಕಾವಲಿರುವ ಅನೇಕದೈತ್ಯದಾನವಸಮೂಹದೊಡನೆ ಕ್ಷೋಭಹೊಂದಿಸುವುದನ್ನಾದರೂ ನೋಡು!" ಎಂದನು. ಹೀಗೆಂದು ಹೇಳಿ ರಾಮನು, ಕೈಯಲ್ಲಿ ಥ

---

1 ಇಲ್ಲಿ "ಚಾಪಮಾನಯ ಸೌಮಿತ್ರೇ ಶರಾಂಶ್ಚಾಶೀವಿಷೋಪಮಾ೯ " ಎಂದು ಮೂಲವು. ಸರ್ವಶಕ್ತನಾದ ರಾಮನು ಮೊದಲು ಎಷ್ಟೋವಿನಯದಿಂದ ಸಮುದ್ರನನ್ನು ಉಪಾಸನೆಮಾಡಿ ಪ್ರಾರ್ಥಿಸಿದರೂ ಅವನು, ಪ್ರತ್ಯಕ್ಷನಾಗದುದಕ್ಕಾಗಿ, ಆಗಲೇ ಅವನನ್ನು ನಿಗ್ರಹಿಸಿಬಿಡಬಹುದಾಗಿದ್ದರೂ, ದಯಾಸ್ವಭಾವದಿಂದ ಅವನನ್ನು ನಿಗ್ರಹಿಸಲಾರದೆ, ಹೇಗಾದರೂ ಅವನು ತನಗೆ ಪ್ರತ್ಯಕ್ಷನಾಗಲೆಂದು ಇದುವರೆಗೆ ಮಾತಿನಿಂದ ಹೆದರಿಸಿ, ಈಗ ಕಾರ್ಯದಿಂದಲೂ ಹೆದರಿಸುವನು. ಇಷ್ಟುಕಾಲವಿಳಂಬಕ್ಕೂ ಅವನ ದಯಾಸ್ವಭಾವವೇ ಕಾರಣವೇ ಹೊರತು ಬೇರೆಯಲ್ಲವು. ಮೇಲಿನ ವಾಕ್ಯಗಳ ಗೂಢಾರ್ಥವೇನೆಂದರೆ:—(ಚಾಪಮಾನಯ) ಗುಣಹೀನನಾದ ಇವನನ್ನು ನಿಗ್ರಹಿಸುವುದಕ್ಕೆ ಗುಣಯುಕ್ತವಾದ ನನ್ನ ಬಿಲ್ಲನ್ನು ತಂದಿಡು! (ಚಾಪಮಾನಯ) ಈತನ ಅನಮ್ರತೆಯನ್ನು ನೀಗಿಸುವುದಕ್ಕಾಗಿ ನಮ್ರವಾದ ಬಿಲ್ಲನ್ನು ತಂದುಕೊಡು! (ಚಾಪಮಾನಯ) ಇವನ ಕಟ್ಟನ್ನು ಕದಲಿಸುವುದಕ್ಕಾಗಿ ಕಟ್ಟುಳ್ಳ ನನ್ನ ಬಿಲ್ಲನ್ನು ತಂದುಕೊಡು! ( ಸೌಮಿತ್ರೇ ) "ರಾಮೇಪ್ರಮಾದಂ ಮಾಕಾರ್ಷೀಃ" ಎಂದು ನಿನ್ನ ತಾಯಿಯಾದ ಸುಮಿತ್ರೆಯು ನಿನಗೆ ಹೇಳಿದ ಮಾತನ್ನು ಮರೆತೆಯೇನು? (ಶರಾಂಶ್ಚಾಶೀವಿಷೋಪಮಾ೯) ಮುಳ್ಳನ್ನು ಮುಳ್ಳಿನಿಂದಲೇ ಕಿಳಬೇಕು. ಉಷ್ಣವನ್ನು ಉಷ್ಣದಿಂದಲೇ ಶಮನಮಾಡಬೇಕು, ವಿಷವನ್ನು ವಿಷದಿಂದಲೇ ಅಡಗಿಸಬೇಕಲ್ಲವೆ? ಹಾಗೆಯೇ ಇಲ್ಲಿನ ಶರವನ್ನು (ನೀರನ್ನು) ಶೋಷಿಸುವುದಕ್ಕಾಗಿ ಶರಗಳನ್ನೇ (ಬಾಣಗಳನ್ನು) ತಂದುಕೊಡು! " ಎಂದು ಹೇಳಿದುದಾಗಿ ಭಾವವು.

ನುಸ್ಸನ್ನು ಹಿಡಿದು, ಕೋಪದಿಂದ ಕಣ್ಣಾಲೆಗಳನ್ನು ತಿರುಗಿಸುತ್ತ, ಪ್ರಳಯ ಕಾಲಾಗ್ನಿಯಂತೆ ಜ್ವಲಿಸುತಿದ್ದನು. ಅವನನ್ನು ತಡೆಯುವುದು ಯಾರಿಗೂ ಸಾಧ್ಯವಿಲ್ಲದಂತಾಯಿತು. ಹೀಗೆ ಕೋಪೋದ್ರಿಕ್ತನಾದ ರಾಮನು, ಸಮಸ್ತಜಗತ್ತನ್ನೂ ನಡುಗಿಸುತ್ತ, ಭಯಂಕರವಾದ ತನ್ನ ಧನುಸ್ಸನ್ನೆಳೆದು, ಕಟ್ಟೆ, ಇಂದ್ರನು ವಜ್ರಾಯುಧಗಳನ್ನು ಪ್ರಯೋಗಿಸುವಂತೆ ಅನೇಕ ಕ್ರೂರಬಾಣಗಳನ್ನು ಪ್ರಯೋಗಿಸಿದನು. ತೇಜಸ್ಸಿನಿಂದ ಜ್ವಲಿಸುತಿದ್ದ ಆ ಬಾಣಗಳೆಲ್ಲವೂ ಮಹಾವೇಗವುಳ್ಳವುಗಳಾಗಿ ಬಂದು ಸಮುದ್ರಜಲದೊಳಗೆ ಪ್ರವೇಶಿಸುತಿದ್ದುವು. ಆಗ ಪಾತಾಳದವರೆಗಿದ್ದ ಮಹಾಸರ್ಪಗಳೆಲ್ಲವೂ ಭಯದಿಂದ ನಡುಗಿಹೋದುವು. ಅನೇಕಮತ್ಸ್ಯಗಳಿಂದಲೂ, ಮೊಸಳೆಗಳಿಂದಲೂ ತುಂಬಿದ ಆ ಮಹಾಸಮುದ್ರದಲ್ಲಿ, ಅಲೆಗಳ ಪ್ರವಾಹವೇಗವು, ಬಾಣದ ಗಾಳಿಯ ಬಡಿತದಿಂದುಂಟಾದ ಮಹಾಧ್ವನಿಯೊಡನೆ ಮತ್ತಷ್ಟು ಭಯಂಕರವಾಯಿತು. ಆಗ ಆ ಸಮುದ್ರದ ಸ್ಥಿತಿಯನ್ನು ಕೇಳಬೇಕೆ? ಸುತ್ತಲೂ ಅಲೆಗಳು ಮೇಲೆಮೇಲೆ ಉಬ್ಬಿಬಂದು, ತೀರಪ್ರದೇಶಕ್ಕೆ ಅಪ್ಪಳಿಸಿ ಹೊಡೆಯುತ್ತಿರುವುವು. ಕೆಳಗಿದ್ದ ಶಂಖಗಳೂ, ಮುತ್ತುಚಿಪ್ಪುಗಳೂ, ಮೇಲೆದ್ದು ತೇಲುತ್ತಿರುವುವು. ನಡುನಡುವೆ ಸಮುದ್ರಜಲವು ಶೋಷಿಸುತ್ತಬಂದು ಹೊಗೆಯೇಳುತ್ತಿರುವುದು. ಒಳಗಿದ್ದ ಮಹಾಸರ್ಪಗಳೆಲ್ಲವೂ ಬಾಣವೇಗಕ್ಕೆ ಸಿಕ್ಕಿಸಂಕಟಪಟ್ಟು ತತ್ತಳಿಸುತ್ತ, ಮುಖಗಳಿಂದಲೂ, ಕಣ್ಣುಗಳಿಂದಲೂ ಉರಿಯನ್ನು ಕಾರುತ್ತಿರುವುವು. ಪಾತಾಳವಾಸಿಗಳಾದ ಮಹಾವೀರ್ಯವುಳ್ಳ ದಾನವರೂ ಕೂಡ ಭಯದಿಂದ ನಡುಗುತ್ತಿರುವರು. ಆ ಸಮುದ್ರದಮೇಲೆ ದೊಡ್ಡದೊಡ್ಡತರಂಗಗಳು ವಿಂಧ್ಯಮಂದರಪರ್ವತಗಳಂತೆ ಮಹೋನ್ನತಗಳಾಗಿ, ಮೊಸಳೆ, ಮೀನು, ಮುಂತಾದ ಪ್ರಾಣಿಗಳೊಡನೆ ಲಕ್ಷೋಪಲಕ್ಷ ಸಂಖ್ಯೆಯಿಂದ ಹಾರಿ ಬೀಳುತ್ತಿರುವುವು. ಅಲ್ಲಲ್ಲಿ ದೊಡ್ಡದೊಡ್ಡ ಅಲೆಗಳು ಸುತ್ತಿಸುತ್ತಿ ಹೊಡೆಯುತ್ತಿರುವುವು. ಪಾತಾಳವಾಸಿಗಳಾದ ಉರಗರೂ, ರಾಕ್ಷಸರೂ ಭಯದಿಂದ ತತ್ತಳಿಸುವರು. ಅಲ್ಲಲ್ಲಿ ಮಹಾಗ್ರಾಹಗಳು ತಲೆಕೆಳಗಾಗಿ ಉರುಳುತ್ತಿರುವುವು. ಆ ಮಹಾಸಮುದ್ರವನ್ನೇ ಅಡಿಮೇಲಾಗಿ ಮಗುಚಿದಂತೆ ಜಲಪ್ರವಾಹವು ಉಕ್ಕಿಬರುತ್ತಿರುವುದು. ಹೀಗೆ

ಸಮುದ್ರಕ್ಕುಂಟಾದ ಮಹಾಕ್ಷೋಭವನ್ನೂ, ಇತ್ತಲಾಗಿ ರಾಮನು ಅತ್ಯುಗ್ರವೇಗದಿಂದ ಧನುಸ್ಸನ್ನೆಳೆಯುತ್ತ, ಕೋಪದಿಂದ ಆಗಾಗ ನಿಟ್ಟುಸಿರುಬಿಡುತ್ತಿರುವುದನ್ನೂ ನೋಡಿ,ಲಕ್ಷ್ಮಣನು ಭಯಪಟ್ಟು ಇನ್ನು ತಾನು ಸುಮ್ಮನಿದ್ದರೆ ಲೋಕವೆಲ್ಲವೂ ದಗ್ಧವಾಗುವುದೆಂದೆಣಿಸಿ, ಥಟ್ಟನೆ ಮುಂದೆ ಬಂದು "ಅಣ್ಣಾ! ಬೇಡಬೇಡ" ಎಂದು ತಡೆಯುತ್ತ ಕೊನೆಗೆ ರಾಮನ ಕೈಯಲ್ಲಿದ್ದ ಆ ಧನುಸ್ಸನ್ನೇ ತನ್ನ ಕೈಯಿಂದ ಹಿಡಿದುಕೊಂಡನು. ಇಲ್ಲಿಗೆ ಇಪ್ಪತ್ತೊಂದನೆಯ ಸರ್ಗವು.

---

ರಾಮನು ಬ್ರಹ್ಮಾಸ್ತ್ರವನ್ನು ಬಿಡುವುದಕ್ಕೆ ಯತ್ನಿಸಿದಮೇಲೆ, ಸಮುದ್ರನು ಪ್ರತ್ಯಕ್ಷನಾಗಿ ಸೇತುವನ್ನು ಕಟ್ಟುವುದಕ್ಕಾಗಿ ನಲನನ್ನು ನಿಯೋಗಿಸಿ, ರಾಮನು ಹೂಡಿದ್ದ ಬ್ರಹ್ಮಾಸ್ತ್ರವನ್ನು ತನ್ನಲ್ಲಿದ್ದ ದ್ರುಮಕುಲ್ಯದ ಮೇಲೆ ಬಿಡುವಂತೆ ಪ್ರಾರ್ಥಿಸಿದುದು. ರಾಮನು ನಲನಿರ್ಮಿತವಾದ ಸೇತುವಿನಿಂದ ಸಮುದ್ರವನ್ನು ದಾಟಿ ಸುವೇಲಾಪ್ರಾಂತ್ಯದಲ್ಲಿ ಸೈನ್ಯವನ್ನಿಳಿಸಿದುದು. ದೇವತೆಗಳ ಸ್ತೋತ್ರವು.

ಇಷ್ಟಾದರೂ ಸಮುದ್ರವು ತನಗೆ ಕಾಣಿಸಿ ಕೊಳ್ಳದಿರುವುದನ್ನು ನೋಡಿ, ರಾಮನು ಕೋಪಗೊಂಡು, ಸಮುದ್ರನನ್ನು ಕುರಿತು, ಭಯಂಕರವಾಕ್ಯದಿಂದ, "ಎಲೆ ಸಮುದ್ರಾ! ಇದೋ! ಈಗಲೇ ನಿನ್ನನ್ನು ಪಾತಾಳದವರೆಗೂ ಶೋಷಿಸುವಂತೆ ಮಾಡುವೆನು. ! ನನ್ನ ಬಾಣಗಳಿಂದ ಇನ್ನು ಕ್ಷಣಕಾಲದಲ್ಲಿಯೇ ನಿನ್ನ ಜಲವೆಲ್ಲವೂ ಕುದಿದು, ಹಬೆಯಾಗಿ ಹಾರಿಹೋಗುವಂತೆ ಮಾಡುವೆನಲ್ಲದೆ, ನೆಲದೊಳಗೆ ತೇವವೇ ಇಲ್ಲದಂತೆ ಒಣಗಿಸುವೆನು ನೋಡು ! ಇನ್ನು ನಿನ್ನಲ್ಲಿ ಒಂದು ಜಲಜಂತುವಾದರೂ ಬದುಕದೆ ಎಲ್ಲವೂ ದಗ್ಧವಾಗುವುವು. ನಿನ್ನ ನೀರೊಣಗಿ ದೊಡ್ಡಧೂಳಿಯೇ ಮೇಲೇಳುವುದು! ಎಲೆ ಸಮುದ್ರನೆ ! ನನ್ನ ಬಿಲ್ಲಿನಿಂದ ಹೊರಟ ಬಾಣವನ್ನೇ ಸೇತುವನ್ನಾಗಿ ಮಾಡಿ, ಅದರಿಂದ ಈ ಕಪಿಗಳನ್ನು ಕಾಲುನಡೆಯಿಂದಲೇ ದಾಟಿಸುವೆನೆಂದು ತಿಳಿ! ಅನೇಕರಾಕ್ಷಸರಿಗೆ ನೀನು ಆಶ್ರ

ಯನಾಗಿರುವೆ. ಅವರ ಸಹವಾಸ ದೋಷದಿಂದಲೇ ನಿನಗೆ ಇಷ್ಟಾದರೂ ನನ್ನ ವೀರ್ಯವಾಗಲಿ, ನನ್ನ ಬಲವಾಗಲಿ, ತಿಳಿಯಲಿಲ್ಲವೆಂದು ತೋರುತ್ತಿದೆ. ಮುಂದೆ ನನ್ನಿಂದ ನಿನಗೆ ಸಂಭವಿಸಬಹುದಾದ ಕಷ್ಟವನ್ನಾದರೂ ನೀನು ಆಲೋಚಿಸಿ ತಿಳಿಯದಿರುವೆ? ಆದರೇನು? ಇರಲಿ! ಇನ್ನು ನನ್ನ ಶಕ್ತಿಯನ್ನು ನಿನಗೆ ತೋರಿಸುವೆನು ನೋಡು!" ಎಂದನು. ಹೀಗೆಂದು ಹೇಳಿದೊಡನೆ ಮಹಾಬಲಾಢ್ಯನಾದ ರಾಮನು [1]ಬ್ರಹ್ಮದಂಡಕ್ಕೆ ಸಮಾನವಾದ ಒಂದು ಕ್ರೂರಬಾಣವನ್ನು ತೆಗೆದು, ಅದನ್ನು ಬ್ರಹ್ಮಾಸ್ತ್ರಮಂತ್ರದಿಂದ ಅಭಿಮಂತ್ರಿಸಿ, ಧನುಸ್ಸಿನಲ್ಲಿ ಸಂಧಾನ ಮಾಡಿ,ಅದರ ನಾಣನ್ನೆಳೆದನು. ಹೀಗೆರಾಮನು ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿ ನಾಣನ್ನೆಳೆದೊಡನೆ, ಬ್ರಹ್ಮಾಂಡಕಟಾಹವೇ ಬೇಧಿಸಿದಂತಾಯಿತು. ಭೂಮ್ಯಾಕಾಶಗಳೆರಡೂ ಎರಡು ಹೋಳಾಗುವಂತೆ ತೋರಿತು. ಪರ್ವತಗಳೆಲ್ಲವೂ ನಡುಗಿಹೋದುವು. ಸಮಸ್ತಲೋಕಕ್ಕೂ ಒಂದು ಗಾಢಾಂಧಕಾರವು ಮುಚ್ಚಿದಂತಾಯಿತು. ಸಮಸ್ತದಿಕ್ಕುಗಳೂ ಮಲಿನವಾದವು! ನದಿಗಳೂ, ಸರೋವರಗಳೂ ಕಲಕಿಹೋದುವು. ಸೂರ್ಯಚಂದ್ರರಿಬ್ಬರೂ ನಕ್ಷತ್ರಗಳೊಡನೆ ವಕ್ರಗತಿಯಿಂದ ನಡೆಯಲಾರಂಭಿಸಿದರು. ಸೂರ್ಯಕಿರಣಗಳಿಗೆ ಪ್ರಕಾಶವೇ ತಗ್ಗಿತು. [2] ಉಲ್ಕೆಗಳಂತೆ ನಕ್ಷತ್ರಗಳು ಉದಿರುತಿದ್ದುವು. ಅಂತರಿಕ್ಷದಲ್ಲಿ ಮಹಾಧ್ವನಿಗಳೊಡನೆ [3] ನಿ

---

1 ಇಲ್ಲಿ ಬ್ರಹ್ಮದಂಡವೆಂದರೆ ಬ್ರಹ್ಮಶಾಪವು. ಬ್ರಹ್ಮಶಾಪದಂತೆ ಅಮೋಘವಾದುದೆಂದು ಭಾವವು. ಅಥವಾ ಬ್ರಹ್ಮದಂಡವೆಂದರೆ ಭಯಂಕರವಾದ ಒಂದು ಉತ್ಪಾತಕೇತುವಿಶೇಷವು. ನಾರದಸಂಹಿತೆಯಲ್ಲಿ "ಪಿತಾಮಹಾತ್ಮಜ: ಕ್ರೂರಸ್ತ್ರಿವರ್ಣ ಶ್ಶಿಖರಾನ್ವಿತ: । ಬ್ರಹ್ಮದಂಡಾಹ್ವಯಃ ಕೇತುಸ್ಸರ್ವಭೂತವಿನಾಶನ:"ಬ್ರಹ್ಮನಿಂದ ಹುಟ್ಟಿ, ಕ್ರೂರವಾಗಿ, ಮೂರುವರ್ಣವುಳ್ಳದಾಗಿ, ಶಿಖರದಿಂದ ಕೂಡಿದುದು ಬ್ರಹ್ಮದಂಡನಾಮಕವಾದ ಕೇತುವೆಂದೂ, ಇದು ಸರ್ವಭೂತವಿನಾಶಕವೆಂದೂ ಹೇಳಲ್ಪಟ್ಟಿದೆ.

2 ಉಲ್ಕೆಯೆಂದರೆ"ಉಲ್ಕಾ ಶಿರಸಿ ವಿಶಾಲಾ ನಿಪತಂತೀ ವರ್ಧತೇಚ ತನುಪುಚ್ಛಾ" ಅಗಲವಾದ ತಲೆಯಿಂದಲೂ,ಸಣ್ಣಬಾಲದಿಂದಲೂ ಕೂಡಿ ಕೆಳಗೆ ಬೀಳುತ್ತಬೀಳುತ್ತ ಹೆಚ್ಚುತ್ತಿರುವುದು ಉಲ್ಕೆ(ಅಥವಾ ಆಕಾಶದಕೊಳ್ಳಿ)ಯೆಂದು ವರಾಹಮಿಹಿರವಚನವು.

3 ನಿರ್ಘಾತವೆಂದರೆ, "ಪವನ: ಪವನಾಭಿಹತೋ ಗಗನಾದವನೌ ಯದಾ ಸಮಾಪತತಿ ! ಭವತಿ ತದಾ ನಿರ್ಘಾತಸ್ಸ ಚ ಪಾಪೋ ದೀರ್ಘಖಗವಿರುತ:" ಬಿರುಗಾಳಿ

ಘೂರ್ಣಿತವು ಹೊರಡುತಿತ್ತು. ಆಕಾಶದಲ್ಲಿ ಆವಹ ನಿವಹಾದಿ ಸಪ್ತಮಾರುತಗಳೂ ಕ್ರಮವಾಗಿ ಮಹಾವೇಗದಿಂದ ಬೀಸುತಿದ್ದುವು. ವಾಯುವೇಗದಿಂದ ಚದರಿದ ಮೇಘಗಳು ಆಕಾಶವೆಲ್ಲವನ್ನೂ ವ್ಯಾಪಿಸಿದುವು. ದೊಡ್ಡ ವೃಕ್ಷಗಳೆಲ್ಲವೂ ಮುರಿದುಬಿದ್ದುವು. ಪರ್ವತಶಿಖರಗಳೂ ಖಂಡಪರ್ವತಗಳೂ, ವಾಯುವೇಗದಿಂದ ಉರುಳುತಿದ್ದುವು. ಆಕಾಶದಲ್ಲಿ ಮಹಾಮೇಘಗಳು ಒಂದಾಗಿ ಸೇರಿ ಮಹಾಧ್ವನಿಯೊಡನೆ ಮಿಂಚಿನ ಕಿಡಿಗಳನ್ನು ಕಕ್ಕುತಿದ್ದುವು. ಆ ಕಿಡಿಗಳು [1] ಮಹಾಶನಿಗಳಂತೆ ನೆಲಕ್ಕೆ ಬೀಳುತಿದ್ದುವು. ಪ್ರಪಂಚದಲ್ಲಿ ಕಣ್ಣಿಗೆ ಕಾಣುವ ಮನುಷ್ಯಾದಿಭೂತಗಳೂ, ಅದೃಶ್ಯಗಳಾದ ಪಿಶಾಚಾದಿಭೂತಗಳೂ ಭಯದಿಂದ ನಡುಗಿ ತತ್ತಳಿಸುತ್ತ ಭಯಂಕರಧ್ವನಿಯೊಡನೆ, ನೆಲಕ್ಕುರುಳಿ ದುಃಖದಿಂದಲೂ, ಸಂಕಟದಿಂದಲೂ ನಿಶ್ಚಲವಾಗಿ ಬಿದ್ದಿದ್ದುವು. ರಾಮನು ಬ್ರಹ್ಮಾಸ್ತ್ರವನ್ನು ಸಂಧಾನಮಾಡಿದಾಗಲೇ ಆ ಮಹಾಸಮುದ್ರವು ತನ್ನಲ್ಲಿರುವ ಸಮಸ್ತ ಭೂತಗಳೊಡನೆಯೂ, ಸರ್ಪಗಳೊಡನೆಯೂ, ರಾಕ್ಷಸರೊಡನೆಯೂ, ದೊಡ್ಡದೊಡ್ಡ ಅಲೆಗಳೊಡನೆಯೂ, ಉಲ್ಲೋಲಕಲ್ಲೋಲವಾಗಿ, ಮೊದಲು ರಾಮನು ಸಾಮಾನ್ಯವಾಗಿ ತನ್ನಮೇಲೆ ಬಾಣವನ್ನು ಬಿಟ್ಟಾಗ ತನಗುಂಟಾದ ದುರವಸ್ಥೆಗಿಂತಲೂ, ಅತಿ ಭಯಂಕರವಾದ ಸ್ಥಿತಿಯನ್ನು ಹೊಂದಿತು. ರಾಮನು ಬ್ರಹ್ಮಾಸ್ತ್ರವನ್ನು ಸಂಧಿಸಿದೊಡನೆ ಸಮುದ್ರ ಜಲಪ್ರವಾಹವು ತನ್ನ ಎಲ್ಲೆಯನ್ನು ಮೀರಿ ಅತ್ತಲಾಗಿ ಒಂದುಯೋಜನದೂರಕ್ಕೆ ಒತ್ತಿ ಹೋಯಿತು. (ಒಂದು ಯೋಜನದಷ್ಟು ಕೆಳಕ್ಕಿಳಿದು ಹೋಯಿತು) ಆಗ ಪರಂತಪನಾದ ರಾಮನಾದರೋ, ಹೀಗೆ ಭಯದಿಂದ ಪಲಾಯನಮಾಡುತ್ತಿರುವ ಆ ಸಮುದ್ರನಮೇಲೆ ಮರುಕದಿಂದ, ಮುಂದೆ ಬಾಣವನ್ನು ಪ್ರಯೋಗಿಸಲಾರದೆ ನಿಂತಿರಲು, ಇಷ್ಟರಲ್ಲಿ ಉಬ್ಬಿ ಬರು

---

ಯು ಒಂದಕ್ಕೊಂದು ಇದಿರಿದಿರಾಗಿ ಬಂದು ಅಪ್ಪಳಿಸಿ ಆಕಾಶದಿಂದ ಕೆಳಕ್ಕಿಳಿಯುವಾಗ ಭಯಂಕರವಾಗಿ ಹುಟ್ಟುವ ಧ್ವನಿಯೇ ನಿರ್ಘಾತವೆನಿಸುವುದೆಂದು ವರಾಹಮಿಹಿರರು.

[1] ಅಶನಿಯೆಂದರೆ "ಅಶನಿಸ್ಸ್ವನೇನ ಮಹತಾ ಯುಕ್ತಾ ನೃಗಜಾಶ್ವಪಶುತರುಮುಖೇಷು । ನಿಪತತಿ ವಿದಾರಯಂತೀ ಧರಾತಲಂ ಚಕ್ರಸಂಸ್ಥಾನಾ" ಮಹಾಧ್ವನಿಯಿಂದ ಕೂಡಿ, ಚಕ್ರಾಕಾರವಾಗಿ ಮನುಷ್ಯಗಜಾದಿಗಳ ಮುಖದಲ್ಲಿ ಬೀಳುತ್ತ ಭೂಮಿಯನ್ನು ಸೀಳಿಕೊಂಡು ಹೋಗುವುದು ಅಶನಿಯೆಂದು ವರಾಹಮಿಹಿರರು.



೨೨೩.೨. ಸಮುದ್ರನು ಪ್ರತ್ಯಕ್ಷನಾಗದುದನ್ನು ನೋಡಿ, ರಾಮನು ಬ್ರಹ್ಮಾಸ್ತ್ರವನ್ನು ಸಂಧಾನಮಾಡಿದುದು.

ತ್ತಿದ್ದ ಜಲಪ್ರವಾಹದ ಮಧ್ಯದಿಂದ ಸಮುದ್ರರಾಜನು ಮೇಲಕ್ಕೆದ್ದು, ಮ
ಹಾಮೇರುಪರ್ವತದಿಂದ ಉದಿಸಿಬರುವ ಸೂರ್ಯನಂತೆ ಪ್ರಕಾಶಿಸಿದನು. ಆಗ
ಸಮುದ್ರನು ನುಣುಪಾದ ವೈಡೂರ್ಯಮಣಿಯಂತೆ ಬಣ್ಣವುಳ್ಳವನಾಗಿಯೂ
ಮೇಲಾದ ಸ್ವರ್ಣಾಭರಣಗಳಿಂದಲಂಕೃತನಾಗಿಯೂ, ಕೆಂಪುಬಟ್ಟೆಯನ್ನೂ,
ಕೆಂಪಾದ ಪುಷ್ಪಮಾಲಿಕೆಯನ್ನೂ ಧರಿಸಿದವನಾಗಿಯೂ, ಕಮಲದಳದಂತೆ
ಕಣ್ಣುಳ್ಳವನಾಗಿಯೂ ಗೋಚರಿಸಿದನು. ,ಅವನಸುತ್ತಲೂ ಉರಿಯನ್ನು
ಕಾರುವ ಮಹಾಸರ್ಪಗಳು ಹೆಡೆಯಾಡುತಿದ್ದುವು. ಅವನ ತಲೆಯಲ್ಲಿ ಸಮ
ಸ್ತಪುಷ್ಪಗಳನ್ನೂ ಸೇರಿಸಿ ಕಟ್ಟಿದ ಪುಷ್ಪಮಾಲಿಕೆಯು ಶೋಭಿಸುತಿತ್ತು.
ಸ್ವರ್ಣಾಭರಣಗಳಿಂದಲೂ, ಕುಂದಣದೊಡವೆಗಳಿಂದಲೂ, ರತ್ನಖಚಿತಗ
ಳಾದ ಇತರಭೂಷಣಗಳಿಂದಲೂ, ಅಲಂಕೃತನಾಗಿ ನಿಂತಿದ್ದ ಆ ಸಮುದ್ರ
ರಾಜನು, ಅನೇಕಗೈರಿಕಾದಿಧಾತುಗಳಿಂದ ಶೋಭಿತವಾದ ಹಿಮವತ್ಪರ್ವತ
ದಂತೆ ತೋರುತಿದ್ದನು. ಅವನ ಕಂಠದಲ್ಲಿ ಬಿಂದೆಳೆಯ ಮುತ್ತಿನಹಾರವೂ
ಅದರ ನಡುವೆ, ಮಹಾವಿಷ್ಣುವಿನ ಕೌಸ್ತುಭಕ್ಕೆ ಒಡಹುಟ್ಟಿದ ಕೆಂಪುಕಲ್ಲಿನ
ಪದಕವೂ, ಅತನ ವಿಸ್ತಾರವಾದ ಎದೆಯಲ್ಲಿ ಅತ್ಯಂತಕಾಂತಿ:ವಿಶಿಷ್ಟವಾಗಿ
ಹೊಳೆಯುತಿತ್ತು.ಮತ್ತು ಸುತ್ತಿಸುತ್ತಿ ಬರುವ ತರಂಗ ಪರಂಪರೆಗಳಿಂದ
ಲೂ,ತನಗೆ ಅನುಚರರಾದ ವಾತಮೇಘುಗಳಿಂದಲೂ,ಅಲ್ಲಲ್ಲಿ ಬೆದರಿ ಬಿಳುತ್ತಿ
ರುವ ಮಹಾಗ್ರಾಹಗಳಿಂದಲೂ, ಭಯದಿಂದ ತತ್ತಳಿಸುವ ಪನ್ನಗರಾಕ್ಷಸಾ
ದಿ ದೇವಯೋನಿಗಳಿಂದಲೂ :ಕೂಡಿದವನಾಗಿ, (ನಾನಾವಿಧ ಸುಂದರ ರೂ
ಪವುಳ್ಳ ಗಂಗೆ ಸಿಂಧು ಮೊದಲಾದ ನದೀ ದೇವತೆಗಳಿಂದಲೂ ಪರಿವೇಷ್ಟಿತ
ನಾಗಿ) ರಾಮನಿಗೆ [1] ಪ್ರತ್ಯಕ್ಷನಾದನು. ವೀರ್ಯವಂತನಾದ ಆ ಸಮುದ್ರನು
ತಾನಾಗಿಯೇ ರಾಮನ ಹೆಸರನ್ನು ಹಿಡಿದು ಕೂಗಿ ಕರೆಯುತ್ತ, ಮುಂದೆ
ಬಂದು, ಧನುರ್ಬಾಣಗಳನ್ನು ಧರಿಸಿ ನಿಂತಿದ್ದ ಆ ರಘುಕುಲೋತ್ತಮನಿಗೆ
ಕೈಮುಗಿದು ವಿನಯದಿಂದ ವಿಜ್ಞಾಪಿಸುವನು. ‹‹ಎಲೆ, ಸೌಮ್ಯನೆ! ಪ್ರಪಂ

---

1 ಸಮುದ್ರನು ತನಗೆ ವಿರೋಧಿಗಳಾದ ದ್ರುಮಕುಲ್ಯವಾಸಿಗಳನ್ನು ಕೊಲ್ಲಿಸುವು ದಕ್ಕಾಗಿಯೇ,ರಾಮನು ಬ್ರಹ್ಮಾಸ್ತ್ರವನ್ನು ಸಂಧಾನಮಾಡುವವರೆಗೂ ತಾನು ಕಾಣಿಸಿಕೊಳ್ಳದೆ ತಡಮಾಡಿದನೆಂದು ತಿಳಿಯಬೇಕು.

ಚದಲ್ಲಿ ಪೃಥಿವಿ, ಅಪ್ಪು, ತೇಜಸ್ಸು. ವಾಯು, ಆಕಾಶಗಳೆಂಬ ಪಂಚಭೂತ ಗಳೂ ತಮ ತಮಗೆ ಸ್ಥಿರವಾದ ಒಂದೊಂದು [1]ಮರ್ಯಾದೆಯನ್ನು ಹಿಡಿದು, ತಮ್ಮತಮ್ಮ ಸ್ವಭಾವದಿಂದಿರುವುವು. ಇದು ನಿನಗೆ ತಿಳಿಯದ ವಿಷಯವಲ್ಲ. ಅದರಂತೆ ನಾನೂ ಇತರರಿಗೆ ದಾಟಲಸಾಧ್ಯನಾಗಿ ಅಗಾಧನಾಗಿರುವುದು ನನಗೆ ಸ್ವಭಾವವೇ ಹೊರತು ಬೇರೆಯಲ್ಲ. ನಾನು ಈ ಸ್ವಭಾವವನ್ನು ಬಿ ಟ್ಟು ಹೋಗಬಹುದೆ? ಆಳವಿಲ್ಲದೆ ಇತರರಿಂದ ಸುಲಭವಾಗಿ ದಾಟಿಹೋಗು ವುದಕ್ಕೆ ತಕ್ಕಂತೆ ನಾನು ನನ್ನ ಸ್ವಭಾವವನ್ನು ವ್ಯತ್ಯಾಸಪಡಿಸಿಕೊಂಡರೆ, ವಿರುದ್ಧಸ್ವಭಾವವನ್ನು ಹೊಂದಿದಂತಾಗುವುದಲ್ಲವೆ? ಇದ್ದ ಸ್ಥಿತಿಯನ್ನು ನಿನಗೆ ತಿಳಿಸಿರುವೆನು. ಇದಕ್ಕಾಗಿಯೇ ನಾನು ನಿನಗೆ ಕಾಣಿಸಿಕೊಳ್ಳುತಿದ್ದೆನು. ರಾಮಾ! ಒಂದುವೇಳೆ ನೀನು ಜಲವನ್ನಾದರೂ ಸ್ತಂಭಿಸಿಟ್ಟುಕೊಂಡು ನ ನಗೆಮಾತ್ರ ದಾರಿಯನ್ನು ಕೊಡಬಾರದೆ?"ಎಂದು ಕೇಳಬಹುದು. ನೀನು ರಾ ಜಕುಮಾರನಾದುದರಿಂದ ಲೋಕದಲ್ಲಿ ಅವರವರ ಮರ್ಯಾದೆಯನ್ನು ನೀನೇ ನಿರ್ಣಯಿಸತಕ್ಕವನು. ಇತರರಿಗೆ ಬಾಧೆಯಿಲ್ಲದಂತೆ ರಕ್ಷಿಸತಕ್ಕವನೂ ನೀ ನೇ ಅಲ್ಲವೆ? ಹೀಗಿರುವಾಗ ನಾನು ಕಾಮದಿಂದಲಾಗಲಿ, ಲೋಭದಿಂದ ಲಾಗಲಿ, ನಿನ್ನ ಭಯಕ್ಕಾಗಲಿ, ಅನೇಕಜಲಜಂತುಗಳಿಗಾಶ್ರಯವಾದ ನನ್ನ ಜಲವನ್ನು ಸ್ತಂಭಿಸಿಟ್ಟಪಕ್ಷದಲ್ಲಿ,ಆ ಪ್ರಾಣಿಗಳಿಗೆಲ್ಲಕ್ಕೂ ಬಾಧೆಯುಂಟಾಗು ವುದಲ್ಲವೆ! ಆದುದರಿಂದ ನನ್ನ ನೀರನ್ನು ನಾನು ಎಷ್ಟುಮಾತ್ರವೂ ಸ್ತಂಭಿ ಸಲಾರೆನು. ಆದರೆ ಇದರಿಂದ ನಿನ್ನ ಕಾರ್ಯವು ಕೆಡುವುದೆಂದೆಣಿಸಬೇಡ! ನ ನ್ನಿಂದ ಸಾಧ್ಯವಾದಮಟ್ಟಿಗೆ ನಿನಗೆ ಸಹಾಯಮಾಡುವೆನು. ನಿನ್ನ ಸೇನೆಯು ಈ ನನ್ನ ಜಲಪ್ರವಾಹವನ್ನು ದಾಟಿ ಹೋಗುವವರೆಗೂ,ನನ್ನಲ್ಲಿರುವ ಮೀನು, ಮೊಸಳೆ, ಮುಂತಾದ ಜಲಜಂತುಗಳಾವುವೂ ಬಾಧಿಸದಂತೆ ತಡೆದಿಡಬಲ್ಲೆನು. ಇಷ್ಟು ಸಹಾಯವನ್ನುಮಾತ್ರ ನಾನು ಮಾಡಬಹುದು. ಮತ್ತು ಈ ವಾನ ರರು ಸಮುದ್ರವನ್ನು ದಾಟುವ ವಿಷಯದಲ್ಲಿ ನಾನು ಬೇರೊಂದು ವಿಧವಾ

---

1 ಇಲ್ಲಿ ಭೂಮಿಗೆ ಕಾಠಿನ್ಯವೂ, ವಾಯುವಿಗೆ ಸದಾಗಮನ ತಿರ್ಯಗ್ಗಮನಗಳೂ, ಆಕಾಶಕ್ಕೆ ಅವಕಾಶಪ್ರದಾನವೂ, ನೀರಿಗೆ ಅಗಾಧತ್ವವೂ, ಅಗ್ನಿಗೆ ಊರ್ಧ್ವಜ್ವಲನವೂ ಸ ಹಜಸ್ವಭಾವವೆಂದು ತಿಳಿಯಬೇಕು.

ದ ಸಹಾಯವನ್ನೂ ಮಾಡಬಹುದು. ಇವರು ಸೇತುವನ್ನು ಕಟ್ಟುವುದಕ್ಕಾಗಿ ಅದಕ್ಕೆ ಬೇಕಾದ ಸಾಮಗ್ರಿಗಳನ್ನು ನನ್ನ ಮೇಲೆ ಸಂಗ್ರಹಿಸಿಟ್ಟರೂ,ಅದನ್ನು ಚದರಿಸಿದೆ ಸ್ಥಿರವಾಗಿ ನಿಲ್ಲಿಸಿಕೊಳ್ಳುವೆನು. ನೀನು ಸೇತುವನ್ನು ಕಟ್ಟಿಸಬಹುದು." ಎಂದನು. ಆಗ ರಾಮನು ಸಮುದ್ರನನ್ನು ನೋಡಿ "ಎಲೆ, ಸಮುದ್ರರಾಜನೆ?ಒಳ್ಳೆಯದು! ಹಾಗಿದ್ದಪಕ್ಷದಲ್ಲಿ ಈಗ ನಾನು ನಿನ್ನ ಮೇಲೆ ಪ್ರಯೋಗಿಸುವುದಕ್ಕಾಗಿ,ಈ ಬ್ರಹ್ಮಾಸ್ತ್ರವನ್ನು ಬಿಲ್ಲಿನಲ್ಲಿ ಸಂಧಾನಮಾಡಿರುವೆನು.ಈ ಬಾಣವು ಅಮೋಘವಾದುದು!ಇದು ವ್ಯರ್ಥವಾಗತಕ್ಕುದಲ್ಲ. ಇದನ್ನು ಎಲ್ಲಿಗೆ ಬಿಡಲಿ?ಹೇಳು"ಎಂದನು.ಆಗ ಸಮುದ್ರನು ರಾಮನ ಮಾತನ್ನು ಕೇಳಿ, ಆ ರಾಮನು ಬಿಲ್ಲಿನಲ್ಲಿ ಸಂಧಾನಮಾಡಿದ್ದ ಬಾಣವನ್ನೂ ನೋಡಿ,ತನ್ನಲ್ಲಿ ರಾಮನು ಪ್ರಸನ್ನನಾದುದಕ್ಕಾಗಿ ಉಲ್ಲಾಸಹೊಂದಿದ ಮುಖವುಳ್ಳವನಾಗಿ,ರಾಮನನ್ನು ಕುರಿತು."ಎಲೈ ರಾಜಪುತ್ರನೆ!ಇಲ್ಲಿಗೆ ಸಮೀಪವಾಗಿ ಉತ್ತರಭಾಗದಲ್ಲಿ ಬಹಳರಮಣೀಯವಾದ ದ್ರುಮಕುಲ್ಯವೆಂಬ ಒಂದು ಪ್ರದೇಶವುಂಟು. ಅದು ಅತ್ಯಂತಪರಿಶುದ್ಧವಾದುದು. ನಿನ್ನಂತೆಯೇ ಲೋಕದಲ್ಲಿ ಮಹಾಪ್ರಸಿದ್ಧಿಯನ್ನು ಹೊಂದಿರುವುದು.ಆದರೆ ಆ ಸ್ಥಳದಲ್ಲಿ ಘೋರರೂಪಿಗಳಾಗಿಯೂ,ಕ್ರೂರಕರ್ಮಿಗಳಾಗಿಯೂ ಇರುವ ಕೆಲವು ಶೂದ್ರರು ವಾಸಮಾಡುತ್ತಿರುವರು. ಅವರು ನನಗೆ ಕೇವಲಶತ್ರುಗಳು! ಬಹಳ ಪಾಪಾತ್ಮರು. ಅವರು ನನ್ನನ್ನು ಮುಟ್ಟಿ ನನ್ನ ನೀರನ್ನು ಕುಡಿಯುತ್ತಿರುವರು. ಪಾಪಕರ್ಮಿಗಳಾದ ಆ ದುಷ್ಟರ ಸ್ಪರ್ಶವನ್ನು ನಾನು ಸಹಿಸಲಾರೆನು. ಆದುದರಿಂದ ಅಮೋಘವಾದ ಈ ನಿನ್ನ ಬಾಣವನ್ನು ಅಲ್ಲಿ ಅವರಮೇಲೆ ಪ್ರಯೋಗಿಸಿ ಸಾರ್ಥಕಪಡಿಸು."ಎಂದನು. ಈ ಮಾತನ್ನು ಕೇಳಿ ರಾಮನು, ಸಮುದ್ರರಾಜನ ಇಷ್ಟದಂತೆ ಅವನು ಕೈತೋರಿಸಿದ ಕಡೆಗೆ ತನ್ನ ಬಾಣವನ್ನು ಪ್ರಯೋಗಿಸಿಬಿಟ್ಟನು. ಸಿಡಿಲಿಗೆ ಸಮಾನವಾಗಿ ಜ್ವಲಿಸುತಿದ್ದ ಆ ಬಾಣವನ್ನು ಪ್ರಯೋಗಿಸಿದೊಡನೆ, ಆ ಸ್ಥಳವೆಲ್ಲವೂ ಅದರಿಂದ ದಗ್ಧವಾಗಿ ಮರುಕಾಂತಾರವೆಂದು ಲೋಕದಲ್ಲಿ ಪ್ರಸಿದ್ಧವಾಯಿತು. ಆ ಬಾಣದಲಗು ಭೂಮಿಗೆ ನಾಟಿಕೊಂಡು ಹೋಗುವಾಗ, ಆ ರಂಧ್ರದ ಮೂಲಕವಾಗಿ ಪಾತಾಳದಿಂದ ನೀರು ಮೇಲಕ್ಕೆ ಹಾರಿತು. ಅದರಿಂದ ಮಹಾಧ್ವನಿಯೊಂ

ದು ಹುಟ್ಟಿತು. ಆ ರಂಧ್ರವೇ ಒಂದು ದೊಡ್ಡ ಬಾವಿಯಂತಾಯಿತು. ಆ ರಂಧ್ರಕ್ಕೆ ವ್ರಣಕೂಪವೆಂದೂ ಹೆಸರಾಯಿತು. ಈ ವ್ರಣಕೂಪದಿಂದ ನೀರು ಮೇಲಕ್ಕೆ ಹಾರಿ ಎಡೆಬಿಡದೆ ಪ್ರವಹಿಸುತ್ತಿರುವುದರಿಂದ ಸಮುದ್ರಜಲದಂತೆ ಯಾವಾಗಲೂ ಅಶೋಷ್ಯವಾಗಿ ಕಾಣುತ್ತಿರುವುದು. ಆ ಸ್ಥಳದಲ್ಲಿ ರಾಮಬಾಣವು ಬಿದ್ದುದರಿಂದುಂಟಾದ ಮಹಾಧ್ವನಿಯು ಅತ್ಯಂತ ಭಯಂಕರವಾಯಿತು. ದ್ರುಮಕುಲ್ಯವೆಂಬ ಪ್ರದೇಶದಲ್ಲಿ ಮೊದಲು ಶೂದ್ರಾದಿ ಪಾಪಜಾತಿಗಳಿಂದ ಸ್ಪರ್ಶಿಸಲ್ಪಡುತಿದ್ದ ನೀರೆಲ್ಲವೂ, ರಾಮನು ಬಿಟ್ಟ ಬಾಣದಿಂದ ಕ್ಷಣಮಾತ್ರದಲ್ಲಿ ಶೋಷಿಸಿ ಹೋಗಲು, ಮೂರು ಲೋಕಗಳಲ್ಲಿಯೂ ಆ ಸ್ಥಳವು ಮರುಕಾಂತಾರವೆಂದೇ ಪ್ರಸಿದ್ಧವಾಯಿತು. [1] ಹೀಗೆ ದಶರಥಪುತ್ರನಾದ ರಾಮನು ಸಮುದ್ರದನಡುವೆ ಇದ್ದ ಮರುಕಾಂತಾರವನ್ನು ದಹಿಸಿ, ಕೊನೆಗೆ ಪ್ರಸನ್ನನಾಗಿ ಆ ಮರುಕಾಂತಾರಕ್ಕೆ ವರವನ್ನು ಕೊಟ್ಟಿರುವನು. ಹೀಗೆ ರಾಮನು ವರವನ್ನು ಕೊಟ್ಟಮೇಲೆ, ಆ ಮರುಕಾಂತಾರವು ಪಶುಗಳಿಗೆ ಬೇಕಾದ ಗರಿಕೆ ಮೊದಲಾದುವುಗಳಿಂದ ಸಮೃದ್ಧವಾಗಿಯೂ, ರೋಗನಿವಾರಕವಾಗಿಯೂ, ಬಗೆಬಗೆಯ ಹಣ್ಣುಗಳಿಂದಲೂ ಹೂಗಳಿಂದಲೂ, ಮಧುಪದಾರ್ಥಗಳಿಂದಲೂ ತುಂಬಿದುದಾಗಿಯೂ, ತುಪ್ಪ, ಹಾಲು, ಸುಗಂಧದ್ರವ್ಯಗಳು, ಬಗೆಬಗೆಯ ಮೂಲಿಕೆಗಳು ಮುಂತಾದ ಸಮಸ್ತ ಭೋಗ್ಯದ್ರವ್ಯಗಳಿಂದಲೂ ಶೋಭಿತವಾಯಿತು. ರಾಮನ ವರಪ್ರದಾನದಿಂದ ಅಲ್ಲಿನ ಪ್ರದೇಶವೆಲ್ಲವೂ ಈಗಲೂ ಶುಭಕರವಾಗಿಯೇ ಪ್ರಕಾಶಿಸುತ್ತಿರುವುದು. ಆಮೇಲೆ ಸಮುದ್ರನು ರಾಮನನ್ನು ಕುರಿತು. ‹‹ಎಲೆ ಸೌಮ್ಯನೆ! ಇದೋ! ಈ ನಳನೆಂಬವನು ವಿಶ್ವಕರ್ಮನ ಮಗನು. ಇವನ ತಂದೆಯು ತನ್ನ ಪತ್ನಿಗೆ ‹‹ನಿನಗೆ ನನ್ನಂತಹ ಕುಮಾರನೇ ಹುಟ್ಟಲಿ"ಎಂದು ವರವನ್ನು ಕೊಟ್ಟುದರಮೇಲೆ, ಈತನು ವಿಶ್ವಕರ್ಮನಿಗೆ ಸ

---

1 ಇಲ್ಲಿ "ಶೋಷಯಿತ್ವಾ ತತಃ ಕುಕ್ಷಿಂ.........ವರಂ ತಸ್ಮೈ ದದೌ ವಿದ್ವಾನ್ಮರವೇ ಮರವಿಕ್ರಮಃ" ಎಂದು ಮೂಲವು. ಮನುಷ್ಯಸ್ವಭಾವವುಳ್ಳ ರಾಮನಿಗೆ ವರದಾನಶಕ್ತಿಯೆಲ್ಲಿ?" ಎಂಬ ಭ್ರಾಂತಿಯನ್ನು ನಿವಾರಿಸುವುದಕ್ಕಾಗಿಯೇ "ಅಮರವಿಕ್ರಮನೆಂಬ ವಿಶೇಷಣವು. ಇಲ್ಲಿ "ಶೋಷಯಿತ್ವಾ"ಎಂಬುದಕ್ಕೆ "ಮೋಕ್ಷಯಿತ್ವಾ" ಎಂಬ ಪಾಠಾಂತವೂ ಉಂಟು. ಈ ಪಾಠದಲ್ಲಿ "ಶೂದ್ರಸ್ಪರ್ಶದಿಂದ ಬಿಡಿಸಿ" ಎಂದರ್ಥವು.

ಮಾನನಾಗಿಯೇ ಹುಟ್ಟಿರುವನು. ಶಿಲ್ಪವಿದ್ಯೆಯಲ್ಲಿ ತನ್ನ ತಂದೆಗೆ ಸಾಟಿಯಾ ಗಿರುವನು. ಈ ನಳನೆಂಬ ವಾನರನು ಸಿಶ್ಚಿಂತೆಯಿಂದ ನನ್ನ ಮೇಲೆ ಸೇತುವ ನ್ನು ಕಟ್ಟಲಿ? ಆ ಸೇತುವನ್ನು ಮುಳುಗಿಸದಂತೆ ನಾನು ಧರಿಸುವೆನು ! ವಿಶ್ವ ಕರ್ಮನಂತೆಯೇ ಈತನು ನನಗೆ ಪ್ರೀತಿಪಾತ್ರನು." ಎಂದನು. ಸಮುದ್ರನು ಈ ಮಾತನ್ನು ಹೇಳಿ, ಹಾಗೆಯೇ ಅಂತರ್ಧಾನವನ್ನು ಹೊಂದಿ ಕಣ್ಮರೆಯಾ ದನು. ಆಗ ವಾನರಶ್ರೇಷ್ಠನಾಗಿಯೂ, ಮಹಾಬಲಾಢ್ಯನಾಗಿಯೂ ಇರು ವ ನಲನು, ಮೇಲಕ್ಕೆದ್ದು ರಾಮನ ಮುಂದೆ ನಿಂತು "ಎಲೈ ರಾಜನೆ ! ವಿ ಸ್ತಾರವಾದ ಈಸಮುದ್ರಲ್ಲಿ ನಾನು ಸೇತುವನ್ನುಕಟ್ಟುವೆನು.ಈ ಸಮುದ್ರ ನು ಹೇಳಿದುದು ನಿಜವು.ನನ್ನತಂದೆಯ ಸಾಮರ್ಥ್ಯವೇ ನನಗುಂಟು.ಆಶಕ್ತಿಯಿಂ ದಲೇ ಈಗ ಈ ಕಾರ್ಯವನ್ನು ನೆರವೇರಿಸುವೆನು" ಎಂದು ಹೇಳಿ, ಆಮೇಲೆ ಅ ಲ್ಲಿದ್ದ ಸಮಸ್ತವಾನರರನ್ನೂ ನೋಡಿ "ಎಲೈ ವಾನರರೆ ! ಲೋಕದಲ್ಲಿ ಪುರುಷನಿಗೆ ದಂಡೋಪಾಯವೇ ಮೇಲಾದ ಉಪಾಯವೆಂದು ನನ್ನ ಅ ಭಿಪ್ರಾಯವು. ಕೃತಜ್ಞತೆಯಿಲ್ಲದವರಲ್ಲಿ ತಾಳ್ಮೆಯಾಗಲಿ, ಸಾಮವಾಗಲಿ ದಾನವಾಗಲಿ, ಯಾವುದೂ ಕೆಲಸಕ್ಕೆ ಬಾರದು. ಈ ಸಂದರ್ಭಗಳಲ್ಲಿ ತಾಳ್ಮೆ ಯನ್ನು ಸುಡಬೇಕು. ಇದಕ್ಕೆ ನಮಗೆ ಬೇರೆ ನಿದರ್ಶನವೇಕೆ ! ಭಯಂಕರ ನಾದ ಈ ಮಹಾಸಮುದ್ರನು ಸಗರನಿಂದಲೇ ನಿರ್ಮಿಸಲ್ಪಟ್ಟವನು. ಹಾಗಿ ದ್ದರೂ ಈ ಸಮುದ್ರನಿಗೆ ಉಪಕಾರಸ್ಮರಣೆಯಿಲ್ಲದೆ ಹೋಯಿತು. ರಾ ಮನು ದಂಡಿಸುವನೆಂಬ ಭಯದಿಂದಲೇ ಅವನು ನಮಗೆ ಸ್ವಾಧೀನನಾದ ನು. ಈತನಿಗೆ ಸೇತುಬಂಧನದ ಕಾರ್ಯವನ್ನು ನೋಡಬೇಕೆಂಬ ಆಶೆಯೂ ಹುಟ್ಟಿದಂತಿದೆ. ಆದರಿಂದಲೇ ನಮಗೆ ಅವಕಾಶವನ್ನು ಕೊಟ್ಟಿರುವನೇ ಹೊರತು ಬೇರೆಯಲ್ಲ! ಮೊದಲು ನನ್ನ ತಂದೆಯಾದ ವಿಶ್ವಕರ್ಮನು ಮಂ ದರಪರ್ವತದಲ್ಲಿ ನನ್ನ ತಾಯಿಗೆ ತನ್ನಂತೆಯೇ ಪುತ್ರನು ಹುಟ್ಟುವಂತೆ ವರ ವನ್ನು ಕೊಟ್ಟುದೂ ನಿಜವು. ನಾನು ವಿಶ್ವಕರ್ಮನಿಗೆ ಮಗನು. ಶಿಲ್ಪವಿದ್ಯೆ ಯಲ್ಲಿಯೂ ನಾನು ಆತನಿಗೆ ಸಾಟಿಯಾಗಿರುವೆನು. ಆದರೆ ಇದುವರೆಗೆ ಆ ವಿಷಯವೊಂದೂ ನನ್ನ ನೆನಪಿಗೆ ಬಾರದೆ ಹೋಯಿತು. ಈ ಸಮುದ್ರರಾ ಜನೇ ನನಗೆ ಈ ವಿಷಯವನ್ನು ನೆನಪಿಗೆ ತಂದಂತಾಯಿತು. ಇದೂ ಅಲ್ಲದೆ ನನ್ನ ಗುಣಗಳನ್ನು ನಾನಾಗಿಯೇ ಹೇಳಿ ಕೊಳ್ಳುವುದು ನನ್ನ ಸ್ವಭಾ

ವಲ್ಲ. ಈ ಸಮುದ್ರರಾಜನು ಹೇಳುವುದಕ್ಕೆ ಮೊದಲು ನಾನಾಗಿಯೇ ಅದನ್ನು ನಿಮಗೆ ತಿಳಿಸಿದ್ದರೂ, ಅದು ಆತ್ಮಸ್ತುತಿಯಾಗುತಿದ್ದುದರಿಂದ, ನಾನು ಈ ಮಹಾಕಾರ್ಯವನ್ನು ಆರಂಭಿಸುವ ವಿಷಯದಲ್ಲಿ ನಿಮಗೆ ನಂಬಿಕೆಯೂ ಹುಟ್ಟುತ್ತಿರಲಿಲ್ಲ. ಸಮುದ್ರದಲ್ಲಿ ಸೇತುವನ್ನು ಕಟ್ಟುವುದಕ್ಕೆ ನಿಜವಾಗಿಯೂ ನನಗೆ ಶಕ್ತಿಯುಂಟು. ಈಗಲೇ ನಮ್ಮ 'ಕಡೆಯ ಸಮಸ್ತವಾನರರೂ ಈಸೇತುಬಂಧನಕ್ಕೆ ತಕ್ಕ ಪ್ರಯತ್ನವನ್ನು ಮಾಡಲಿ!" ಎಂದನು. ಆಗ ಸಮಸ್ತವಾನರರೂ ರಾಮಾಜ್ಞೆಯನ್ನು ಪಡೆದು, ಅತ್ಯುತ್ಸಾಹದಿಂದ ಗುಂಪುಗುಂಪಾಗಿ ಸೇರಿ, ಶತಸಹಸ್ರಸಂಖ್ಯೆಯಿಂದ ಅಲ್ಲಲ್ಲಿನ ಕಾಡುಗಳಿಗೆ ನುಗ್ಗಿದರು. ಹೀಗೆ ಪರ್ವತಾಕಾರವುಳ್ಳ ಅನೇಕವಾನರಶ್ರೇಷ್ಠರು ಕಾಡುಕಾಡಾಗಿ ಹೊರಟು, ಅಲ್ಲಲ್ಲಿರುವ ನಾನಾವೃಕ್ಷಗಳನ್ನು ಕಿತ್ತು ತಂದು ಸಮುದ್ರದ ಕಡೆಗೆ ಸೇರಿಸುತಿದ್ದುದು. ಆ ವಾನರರು ಅಲ್ಲಲ್ಲಿ ಸಿಕ್ಕಿದ, ಸಾಲೆ, ಅಶ್ವಕರ್ಣ, ಆಲ, ಬಿದಿರು, ಗಿರಿಮಲ್ಲಿಕೆ, ತಾಳೆ, ಅರ್ಜುನ, ತಿಲಕ, ನೇವಿ, ಬಿಲ್ವ, ಏಳೆಲೆಬಾಳೆ, ಪುಷ್ಪಭರಿತಗಳಾದ ಕರ್ಣಿಕಾರಗಳು, ಮಾವು, ಆಸುಗೆ,ಮಂತಾದ ನಾನಾಬಗೆಯ ಮರಗಿಡುಗಳನ್ನೆಲ್ಲಾ ಕಿತ್ತುತಂದು ಸಮುದ್ರಕ್ಕೆ ತುಂಬುತಿದ್ದರು. ಆ ವಾನರರೊಬ್ಬೊಬ್ಬರೂ ಕಾರ್ಯಾತುರದಿಂದ ಕೆಲವು ಮರಗಳನ್ನು ಮೂಲಸಹಿತವಾಗಿಯೇ ಕಿಳುವರು.ಕೆಲವನ್ನು ಬೇರಿಲ್ಲದೆ ಮುರಿದುಹಾಕುವರು. ಹೀಗೆ ಕೈಗೆಸಿಕ್ಕಿದುವನ್ನೆಲ್ಲಾ ಜೋಡಿಸಿಕೊಂಡು ಇಂದ್ರಧ್ವಜಗಳಂತೆ ಅವುಗಳನ್ನು ಮೇಲಕ್ಕೆತ್ತಿ ಹಿಡಿದುತಂದು ಸಮುದ್ರದಲ್ಲಿ ಹಾಕುತಿದ್ದರು. ಮತ್ತು ಅಲ್ಲಲ್ಲಿ ಕೆಲವರು ತಾಳೆಯ ಮರಗಳನ್ನೂ,ಕೆಲವರು ದಾಳಿಂಬಿಯಹೊದರುಗಳನ್ನೂ, ಕೆಲವರು ತೆಂಗಿನ ತೋಲೆಗಳನ್ನೂ,ಕೆಲವರು ವಿಭೀತಕವೃಕ್ಷಗಳನ್ನೂ,ಕೆಲವರು ಪಗಡೆಯ ಮರಗಳನ್ನೂ, ಕೆಲವರು ಖದಿರವಕ್ಷಗಳನ್ನೂ, ಕೆಲವರು ಬೇವಿನ ಓಂಡುಗಳನ್ನೂ ಹೊತ್ತುತಂದು ಸೇರಿಸಿದರು. ಮಹಾಬಲವುಳ್ಳವರಾಗಿಯೂ, ಮಹಾಕಾಯವುಳ್ಳವರಾಗಿಯೂ ಇದ್ದ ಕೆಲವು ವಾನರವೀರು,ಆನೆಯ ಪ್ರಮಾಣವುಳ್ಳ ದೊಡ್ಡದೊಡ್ಡ ಕಲ್ಲುಬಂಡೆಗಳನ್ನೂ,ಪರ್ವತಗಳನ್ನೂ ಮೀಟಿ ತೆಗೆದು, ಬಂಡಿ ಮೊದಲಾದ ಯಂತ್ರಗಳಿಂದ ಅವುಗಳನ್ನು ಸಾಗಿಸಿತರುತಿದ್ದರು.ಹೀಗೆ ಆ ವಾನರರು ಪರ್ವತಗಳನ್ನು ಸಮುದ್ರದಲ್ಲಿ ತಂದು ಹಾಕುತಿದ್ದಾಗ, ಆ ವೇಗಕ್ಕೆ ಸಮುದ್ರದ ನೀ



೨೨೪೫. ರಾಮಾದಿಗಳು ವಾನರಸಮೂಹದೊಡನೆ, ಸೇತುಮಾರ್ಗವಾಗಿ ಸಮುದ್ರವನ್ನು ದಾಟಿದುದು.

ವೂ ವ್ಯಾಪ್ತವಾಗಿ, ರಕ್ತಮಾಂಸಗಳ ಕೆಸರಿನಿಂದಲೇ ತುಂಬಿಹೋಗಬ
ಹುದೆಂದೂ ತೋರುವುದು. ಎಲೆ ವತ್ಸನೆ! ಇನ್ನು ನಾವು ತಡಮಾಡಬಾರ
ದು. ನಮ್ಮ ವಾನರರೊಡಗೂಡಿ ಈಗಲೇ ಲಂಕೆಯನ್ನು ಮುತ್ತುವೆವು."
ಎಂದನು. ಧರ್ಮಾತ್ಮನಾಗಿಯೂ, ಯುದ್ಧೋತ್ಸಾಹವುಳ್ಳವನಾಗಿಯೂ, ಉ
ತ್ತಮಧನುಸ್ಸನ್ನು ಕೈಯಲ್ಲಿ ಹಿಡಿದವನಾಗಿಯೂ ಇದ್ದ ರಾಮನು ಈ
ಮಾತನ್ನು ಹೇಳಿ, ಆಗಲೇ ಲಂಕಾಭಿಮುಖನಾಗಿ ಆ ವಾನರಸೈನ್ಯದ ಮುಂ
ದೆ ಹೊರಟನು. ಅಲ್ಲಿದ್ದ ಸಮಸ್ತವಾನರವೀರರೂ, ವಿಭೀಷಣಸುಗ್ರೀ
ವರನ್ನು ಮುಂದಿಟ್ಟುಕೊಂಡು ಶತ್ರುಗಳನ್ನು ಕೊಲ್ಲುವ ವಿಷಯದಲ್ಲಿ ದೃ
ಢನಿಶ್ಚಯವುಳ್ಳವರಾಗಿ, ಸಂತೋಷದಿಂದ ಸಿಂಹನಾದವನ್ನು ಮಾಡುತ್ತ
ಬಂದರು. ಶ್ರೀರಾಮನಪ್ರೀತಿಗಾಗಿ, ವೀರರಾದ ಆ ವಾನರರೆಲ್ಲರೂ, ಬಾ
ಲಗಳನ್ನಾಡಿಸುವುದೇ ಮೊದಲಾದ, ಯುದ್ಧೋತ್ಸಾಹ ಸೂಚಕಗಳಾದ
ಚೇಷ್ಟೆಗಳನ್ನು ಮಾಡುತ್ತಿರಲು,ರಾಮನು, [1] ಅವರ ಮಹೋತ್ಸಾಹವನ್ನು
ನೋಡಿ ಸಂತೋಷಿಸುತ್ತ ಮುಂದೆ ನಡೆದನು. ಇಲ್ಲಿಗೆ ಇಪ್ಪತ್ತು ಮೂರನೆ
ಯ ಸರ್ಗವು.

---

ರಾಮನು ಸೇನೆಯನ್ನು ಗರುಡವ್ಯೂಹವಾಗಿ ನಿಲ್ಲಿಸಿ
ದುದು. ಅತ್ತಲಾಗಿ ಶುಕನು ರಾವಣನಬಳಿಗೆ ಹೋದ
ಮೇಲೆ, ರಾಮನನ್ನು ಗೆಲ್ಲುವುದಶಕ್ಯವೆಂದು ಅವನಿಗೆ
ತಿಳಿಸಿ, ಸೀತೆಯನ್ನು ರಾಮನಿಗೊಪ್ಪಿಸುವಂತೆ ಹಿತ
ವನ್ನು ಹೇಳಿದುದು.

ಹೀಗೆ ರಾಮನು ತನ್ನ ಸೈನ್ಯವನ್ನು ತಂದಿಳಿಸಿದಾಗ, ಆ ವಾನರವೀ
ರರ ಸೇನೆಯು, ಚಂದ್ರನನ್ನನುಸರಿಸಿ ನಿಂತ ಶುಭನಕ್ಷತ್ರಗಳಿಂದ ತುಂ
ಬಿದ ಶರತ್ಕಾಲದ ಪೂರ್ಣಿಮಾರಾತ್ರಿಯಂತೆ ಶೋಭಿಸುತಿತ್ತು. ಮಹಾ
ಸಮುದ್ರದಂತೆ ಕೊನೆಮೊದಲಿಲ್ಲದ ಆ ದೊಡ್ಡ ವಾನರಸೇನೆಯು ಬಂದಿ

---

1 ರಾಮನಿಗೆ ವಾನರರು ಈ ದುರ್ಗವನ್ನು ನೋಡಿ ಉತ್ಸಾಹಭಂಗವನ್ನು ಹೊಂ
ದಿರಬಹುದೆಂಬ ಶಂಕೆಯುಂಟಾಗಿದ್ದು, ಈಗ ಅವರ ಉತ್ಸಾಹಚೇಷ್ಟೆಯನ್ನು ನೋಡು
ವುದರಿಂದ ಆ ಶಂಕೆಯು ನಿವೃತ್ತಿಸಿ ಸಂತೋಷವುಂಟಾಯಿತೆಂದು ತಿಳಿಯಬೇಕು.

ಳಿದಾಗ, ಅದರ ಪೀಡೆಯಿಂದ ಭಯಪಟ್ಟಂತೆ ಭೂಮಿಯು ನಡುಗಿತು. ಈ ವಾನರಸೈನ್ಯವು ಅಲ್ಲಿಗೆ ಬಂದಿಳಿದಾಗಲೇ ಲಂಕೆಯೊಳಗಣ ರಾಕ್ಷಸಸೈನಿಕರ ಆಕ್ರೋಶವೂ, ಭೇರೀಮೃದಂಗಾದಿ ವಾದ್ಯಧ್ವನಿಗಳ ಗದ್ದಲವೂ ಈ ವಾನರರ ಕಿವಿಗೆ ಕೇಳಿಸಿತು. ಆ ಅಟ್ಟಹಾಸವನ್ನು ಕೇಳಿದಾಗ ಒಬ್ಬೊಬ್ಬ ವಾನರರಿಗೂ ಕೋಪದಿಂದ ಮೈಯಲ್ಲಿ ರೋಮಾಂಚವು ಹುಟ್ಟಿತು. ಆ ರಾಕ್ಷಸರ ವೀರವಾದವನ್ನು ಕೇಳುತಿದ್ದಷ್ಟೂ, ಇವರಿಗೆ ಮೇಲೆಮೇಲೆ ಸಂತೋಷವೂ ಉಕ್ಕಿಬರುತಿತ್ತು. ಆ ರಾಕ್ಷಸರ ಅಟ್ಟಹಾಸವನ್ನು ಕೇಳಿ ಸಹಿಸಲಾರದೆ ಒಬ್ಬೊಬ್ಬರೂ ಅದಕ್ಕಿಂತಲೂ ಮೇಲೆ ಉಚ್ಚಧ್ವನಿಯಿಂದ ಸಿಂಹನಾದವನ್ನು ಮಾಡುತಿದ್ದರು. ಆಕಾಶದಲ್ಲಿ ಮೇಘಗಳು ಗುಡುಗಿದಂತೆ ವಾನರರು ದರ್ಪದಿಂದ ಮಾಡಿದ ಗರ್ಜನೆಗಳನ್ನು ಲಂಕೆಯಲ್ಲಿದ್ದ ರಾಕ್ಷಸರೂ ಕೇಳಿದರು. ಅಲ್ಲಿ ರಾಮನು ವಿಚಿತ್ರಗಳಾದ ಧ್ವಜಗಳಿಂದಲೂ, ಪತಾಕೆಗಳಿಂದಲೂ ಶೋಭಿತವಾದ ಲಂಕಾನಗರಿಯನ್ನು ದೂರದಿಂದಲೇ ನೋಡಿದನು. ಆಗಲೇ ಅವನಿಗೆ ಸೀತೆಯ ಸ್ಮರಣವುಂಟಾಯಿತು. ಅವನ ಮನಸ್ಸಿನಲ್ಲಿ ವ್ಯಸನವೂ ಹುಟ್ಟಿತು. ಹೀಗೆ ದುಃಖಿತನಾದ ರಾಮನು ತನ್ನಲ್ಲಿ ತಾನು, “ಹಾ! ನಮ್ಮ ಸಾಕೇತನಗರದಲ್ಲಿ ಸಮಸ್ತರಾಜಭೋಗಗಳನ್ನೂ ಅನುಭವಿಸುತ್ತಿರಬೇಕಾದ ಆ ಹರಿಣಾಕ್ಷಿಯು, ಈಗ ಈ ಲಂಕೆಯಲ್ಲಿ ಅಂಗಾರಕನಿಂದ ಭಂಗಹೊಂದಿದ ರೋಹಿಣಿಯಂತೆ ದುಃಷ್ಟನಾದ ರಾವಣನ ಕೈಯಲ್ಲಿ ಸೆರೆಸಿಕ್ಕಿರುವಳಲ್ಲಾ!” ಎಂದು ಮಹಾವ್ಯಸನದಿಂದ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಟ್ಟನು. ರಾಮನಿಗೆ ಮನಸ್ಸಿನಲ್ಲಿ ಇಷ್ಟು ವ್ಯಸನವಿದ್ದರೂ, ಶತ್ರುಜಯಕ್ಕಾಗಿ ಹೊರಡುವಾಗ ದುಃಖದಿಂದ ಉತ್ಸಾಹಭಂಗವನ್ನು ತೋರಿಸಬಾರದೆಂದು, ಆ ವ್ಯಸನವನ್ನು ತನ್ನಲ್ಲಿಯೇ ಅಡಗಿಸಿಟ್ಟುಕೊಂಡು, ಕಾಲೋಚಿತವಾಕ್ಯದಿಂದ ಸಮೀಪದಲ್ಲಿದ್ದ ಲಕ್ಷ್ಮಣನನ್ನು ನೋಡಿ. “ಲಕ್ಷ್ಮಣಾ! ಆಕಾಶವನ್ನು ಭೇದಿಸುವಂತೆ ಮಹೋನ್ನತವಾಗಿ ಕಾಣಿಸುತ್ತಿರುವ ಲಂಕಾನಗರಿಯನ್ನು ನೋಡಿದೆಯಾ? ವಿಶ್ವಕರ್ಮನು ಆ ತ್ರಿಕೂಟಪರ್ವತದ ಶಿಖರದಮೇಲೆ ತನ್ನ ಸಂಕಲ್ಪದಿಂದಲೇ ನಿರ್ಮಿಸಿಟ್ಟಂತೆ ಕಾಣುವುದು ನೋಡು! ಬಿಳುಪಾದ ಅನೇಕಸೌಧಗಳಿಂದ ತುಂಬಿ

ದ ಆ ಲಂಕಾನಗರಿಯು, ಬಿಳೀಮೇಘಗಳಿಂದ ಮುಚ್ಚಿದ ಆಕಾಶದಂತೆಯೇ ಕಾಣುವುದು ನೋಡು! ಅಲ್ಲಿನ ಪುಷ್ಪಿತಗಳಾದ ತೋಟಗಳು, ಬಗೆಬಗೆಯ ವನಪಕ್ಷಿಗಳ ಕಲಕಲಧ್ವನಿಯಿಂದಲೂ, ಮಲ್ಲಿಗೆ ಮೊದಲಾದ ಹೂಗಿಡಗಳಿಂದಲೂ ಹೇಗೆ ಶೋಭಿಸುತ್ತಿರುವುವು ನೋಡಿದೆಯಾ? ಅಲ್ಲಲ್ಲಿ ಫಲರಸವನ್ನು ಕುಡಿದು ಕೊಬ್ಬಿದ ವನಪಕ್ಷಿಗಳಿಂದಲೂ, ಮಕರಂದಪಾನದಿಂದ ಕೊಬ್ಬಿ ಕೂಗಿಡುವ ದುಂಬಿಗಳಿಂದಲೂ, ಚಿಗುರುಗಳ ಗೊಂಚಲಲ್ಲಿ ಸೇರಿ ನಲಿಯುವ ಕೋಗಿಲೆಗಳಿಂದಲೂ ಮನೋಹರಗಳಾದ ಅಲ್ಲಿನ ತೋಟಗಳನ್ನು, ಸುಖಸ್ಪರ್ಶವಾದ ಮಂದಮಾರುತವು ಆಗಾಗ ಅಲುಗಿಸುತ್ತಿರುವ ಸೊಗಸನ್ನು ನೋಡು" ಎಂದು ತೋರಿಸುತಿದ್ದನು. ಹೀಗೆ ರಾಮನು ಲಕ್ಷ್ಮಣನಿಗೆ ಲಂಕೆಯ ಸೊಗಸನ್ನು ತೋರಿಸುತಿದ್ದು, ಕೊನೆಗೆ ಶಾಸ್ತ್ರರೀತಿಯಿಂದ ತನ್ನ ಕಡೆಯ ಸೈನ್ಯವನ್ನು ವ್ಯೂಹರೂಪವಾಗಿ ವಿಭಾಗಿಸಬೇಕೆಂದೆಣಿಸಿ, ಅಲ್ಲಿದ್ದ ವಾನರಸೇನಾಪತಿಗಳನ್ನು ಕುರಿತು "ಎಲೈ ವಾನರರ! ಈಗಲೇ ನಾವು ಇಲ್ಲಿ ವ್ಯೂಹವನ್ನು ನಿರ್ಮಿಸಬೇಕು. ಆದುದರಿಂದ ನಿಮ್ಮಲ್ಲಿ, ವೀರ್ಯವಂತನಾದ ಅಂಗದನು ನೀಲನೊಡನೆ ಸೇರಿ ತನ್ನ ಸೇನೆಯೊಡಗೂಡಿ ವ್ಯೂಹಕ್ಕೆ ವಕ್ಷಸ್ಥಲದಲ್ಲಿರಲಿ! ವಾನರಶ್ರೇಷ್ಠನಾದ ಋಷಭನು ತನ್ನ ಕಡೆಯ ವಾನರರೊಡನೆ ಆ ವ್ಯೂಹಕ್ಕೆ ಬಲಭಾಗದಲ್ಲಿರಲಿ! ಮದದಾನೆಯಂತೆ ದುರ್ಜಯನಾಗಿಯೂ, ವೇಗಶಾಲಿಯಾಗಿಯೂ ಇರುವ ಗಂಧಮಾದನನು ತನ್ನ ಸೈನ್ಯದೊಡನೆ ಆ ವ್ಯೂಹದ ಎಡಭಾಗವನ್ನು ರಕ್ಷಿಸುತ್ತಿರಲಿ! ನಾನು ಲಕ್ಷ್ಮಣನೊಡನೆ ಸೇರಿ, ಅದರತಲೆಯ ಕಡೆಯಲ್ಲಿ ಎಚ್ಚರಿಕೆಯಿಂದ ಕಾವಲಿರುವೆನು. ಜಾಂಬವಂತನೂ ಸುಷೇಣನನೂ, ವೇಗದರ್ಶಿಯೂ, ಈ ಮೂವರೂ ಬುದ್ಧಿವಂತರಾಗಿಯೂ ವಾನರಭಲ್ಲೂಕಸಮೂಹಗಳಿಗೆ ಪ್ರಮುಖರಾಗಿಯೂ ಇರುವುದರಿಂದ, ಅವರು ಅದರ ಉದರಸ್ಥಾನವನ್ನು ರಕ್ಷಿಸುತ್ತಿರಲಿ! ಕಪಿರಾಜನಾದ ಸುಗ್ರೀವನು ತನ್ನ ಸೇನೆಯೊಡನೆ ಜಘನಸ್ಥಾನದಲ್ಲಿದ್ದುಕೊಂಡು, ತೇಜಸ್ವಿಯಾದ ವರುಣನು ಭೂಮಿಯ ಪಶ್ಚಿಮಭಾಗವನ್ನು ರಕ್ಷಿಸುವಂತೆ ಅದರ ಪುಚ್ಛಭಾಗವನ್ನು ರಕ್ಷಿಸುತ್ತಿರಲಿ!" ಎಂದನು. ಹೀಗೆ ರಾಮಾಜ್ಞೆಯಿಂದ ಆ ವಾನರಸೇನೆಯೆಲ್ಲವೂ ಗರುಡವ್ಯೂಹವಾಗಿ ನಿಲ್ಲಿಸಲ್ಪ

ಟ್ಟಿತು. ರಾಮಾಜ್ಞೆಯಂತೆಯೇ ವಾನರಪ್ರಭುಗಳು ಆಯಾಕಡೆಗಳಲ್ಲಿ ನಿಂತು ಎಚ್ಚರಿಕೆಯಿಂದ ಅದನ್ನು ರಕ್ಷಿಸುತಿದ್ದರು. ಹೀಗೆ ವ್ಯೂಹವಾಗಿ ನಿಲ್ಲಿಸಲ್ಪಟ್ಟ ಆ ದೊಡ್ಡವಾನರಸೈನ್ಯವು, ಮೇಘಗಳ ಸಂಚಾರಯೋಗ್ಯವಾದ ಆಕಾಶದಂತೆ ಕಾಣಿಸುತಿತ್ತು. ಆಗಲೇ ಅಲ್ಲಿದ್ದ ವಾನರರು ಪರ್ವತಶಿಖರಗಳನ್ನೂ, ದೊಡ್ಡದೊಡ್ಡಮರಗಳನ್ನೂ ಹಿಡಿದು, ಯುದ್ಧದಲ್ಲಿ ರಾಕ್ಷಸರನ್ನು ಕೊಲ್ಲಬೇಕೆಂಬ ಮಹೋತ್ಸಾಹದಿಂದ ಪ್ರಯಾಣಸನ್ನದ್ಧರಾಗಿ ನಿಂತು, ತಮ್ಮಲ್ಲಿ ತಾವು. ‘‘ಈ ಪರ್ವತಶಿಖರಗಳಿಂದ ಬೀಸಿಬಡಿದಾಗಲಿ, ನಮ್ಮ ಮುಷ್ಟಿಗಳಿಂದ ಹೊಡೆದಾಗಲಿ, ಆ ಲಂಕೆಯನ್ನು ಪುಡಿಪುಡಿಯಾಗಿ ಮಾಡಿ ಧೂಳೆಬ್ಬಿಸಿಯೇ ಬರಬೇಕು’’ಎಂದು ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡರು ಆಮೇಲೆ ಮಹಾತೇಜಸ್ವಿಯಾದ ರಾಮನು ಸುಗ್ರೀವನನ್ನು ಕುರಿತು. ‘‘ಎಲೆ ವಾನರರಾಜನೆ! ನಮ್ಮ ಸೇನೆಯೆಲ್ಲವನ್ನೂ ನಾವು ಕ್ರಮವಾಗಿ ವಿಭಾಗಿಸಿ ಬಲಪಡಿಸಿಕೊಂಡುದಾಯಿತಲ್ಲವೆ? ಇನ್ನಾದರೂ ಈ ಶುಕನನ್ನು ಬಿಟ್ಟುಬಿಡು” ಎಂದನು. ಈ ರಾಮಾಜ್ಞೆಯನ್ನು ಕೇಳಿದೊಡನೆ, ಸುಗ್ರೀವನು ರಾವಣದೂತನಾದ ಶುಕನನ್ನು ಬಿಡಿಸಿ ಕಳುಹಿಸಿಬಿಟ್ಟನು. ವಾನರರ ಕೈಯಿಂದ ಬಲವಾಗಿ ಪೆಟ್ಟುತಿಂದು ಕೊನೆಗೆ ರಾಮನ ಮಾತಿನಿಂದ ಬಿಡುಗಡೆಹೊಂದಿದ ಆ ಶುಕನು, ಭಯದಿಂದ ನಡುಗುತ್ತ, ನಿಮಿಷಮಾತ್ರವೂ ಅಲ್ಲಿ ನಿಲ್ಲದೆ, ಹಿಂತಿರುಗಿ ತನ್ನ ಪ್ರಭುವಾದ ರಾವಣನಬಳಿಗೆ ಹೋದನು. ಈ ಶುಕನನ್ನು ನೋಡಿದೊಡನೆ ರಾವಣನು ನಗುತ್ತ, ಆತನನ್ನುಕುರಿತು ‘‘ಶುಕಾ! ಇದೇನು? ಬಹಳನೊಂದು ಬಂದವನಂತೆ ಕಾಣುವೆಯಲ್ಲಾ! ನಿನ್ನರೆಕ್ಕೆಗಳೂ ಮುರಿದಹಾಗಿದೆ!ಕಪಿಗಳು ನಿನ್ನ ರೆಕ್ಕೆಗಳನ್ನು ಕಟ್ಟಿಹಾಕಿದ್ದರೇನು?ಕಪಿಗಳು ಚಪಲಸ್ವಭಾವವುಳ್ಳವರಾದುದರಿಂದ, ಅವರು ಕೈಗೆ ಸಿಕ್ಕಿದವರನ್ನು ಸುಮ್ಮಗೆ ಬಿಡುವರಲ್ಲ!ನೀನು ಅವರ ಕೈಗೇನೂ ಸಿಕ್ಕಿಬಿಳಲಿಲ್ಲವಷ್ಟೆ?”ಎಂದು ಕೇಳುತಿದ್ದು ಕೊನೆಗೆ, ‘‘ಅದು ಹೇಗಾದರೂ ಇರಲಿ! ವಾನರರಾಜನಾದ ಸುಗ್ರೀವನು ನನ್ನ ಮಾತಿಗೆ ಹೇಳಿದ ಪ್ರತ್ಯುತ್ತರವೇನು? ಅದನ್ನು ಮೊದಲು ಹೇಳು?’’ ಎಂದನು.ಹೀಗೆ ರಾವಣನು ಆತುರದಿಂದ ತನ್ನನ್ನು ಕೇಳಲು, ಶುಕನು ಭಯದಿಂದ ತಡವರಿಸುತ್ತ,ಆ ರಾವಣನನ್ನು ನೋಡಿ‘ ಎಲೆ ಮಹಾರಾಜನೆ!ನಾನು ಇಲ್ಲಿಂ

ದಹೊರಟಿನಷ್ಟೆ? ಆ ಕ್ಷಣವೇ ಸಮುದ್ರದ ಉತ್ತರತೀರಕ್ಕೆ ಹೋಗಿ, ಅಲ್ಲಿ ಸುಗ್ರೀವನನ್ನು ನೋಡಿ, ಮೃದುವಾಗಿಯೂ, ಕಿವಿಗಿಂಪಾಗಿಯೂ ಇರುವ ಮಾತಿನಿಂದಲೇ ಆತನಿಗೆ ನೀನು ಹೇಳಿದ ಮಾತುಗಳನ್ನೆಲ್ಲಾ ಕ್ರಮವಾಗಿ ಒಂದನ್ನೂ ತಪ್ಪದೆ ವಿವರವಾಗಿ ಹೇಳಿದೆನು. ಆ ವಾನರರು ನನ್ನನ್ನು ನೋಡಿದಮಾತ್ರದಲ್ಲಿಯೇ ಬಹಳಕೋಪಗೊಂಡವರಾಗಿ, ಆಕಾಶಕ್ಕೆ ಹಾರಿ ನನ್ನನ್ನು ಹಿಡಿದುಕೊಂಡರು. ಹಾಗೆ ಹಿಡಿದುದುಮಾತ್ರವೇ ಅಲ್ಲ! ಮುಷ್ಟಿಗಳಿಂದ ಹೊಡೆದು ನನ್ನ ಸುಳಿವೇ ಕಾಣದಂತೆ ಕೊಲ್ಲುವುದಕ್ಕೂ ಪ್ರಯತ್ನಿಸಿದರು. ಎಲೆ ರಾಕ್ಷಸೇಂದ್ರನೆ! ನನಗೆ ಅವರೊಡನೆ ಬಾಯೆತ್ತಿ ಮಾತಾಡುವುದಕ್ಕೂ ಅವಕಾಶವಿಲ್ಲದೆ ಹೋಯಿತು. ಇನ್ನು ಅವರಿಂದ ಪ್ರತ್ಯುತ್ತರವನ್ನು ಕೇಳಿ ತಿಳಿಯುವುದೆಲ್ಲಿ? ಉಸಿರೆತ್ತುವುದಕ್ಕೂ ಸಾಧ್ಯವಿಲ್ಲದೆ ಹೋಯಿತು. ಆ ವಾನರರು ಸಹಜವಾಗಿಯೇ ಬಹಳಕೋಪಸ್ವಭಾವವುಳ್ಳವರು! ಮಹಾಕ್ರೂರರು! ಮಹಾಪ್ರಭೂ! ಇನ್ನು ಹೆಚ್ಚಾಗಿ ಹೇಳಿದುದರಿಂದೇನು? ವಿರಾಧನನ್ನೂ, ಕಬಂಧನನ್ನೂ, ಖರನನ್ನೂ ಕೊಂದ ಪ್ರಸಿದ್ಧವೀರನಾದ ಆ ರಾಮನು, ಇತ್ತಲಾಗಿ ಸೀತೆಯಿರುವ ಸ್ಥಲವನ್ನೇ ಕುರಿತು ಹೊರಟುಬಂದಿರುವನು. ಇದಕ್ಕಾಗಿ ಮಹಾಧನುರ್ಧಾರಿಯಾದ ಆತನು, ಈ ಸಮುದ್ರದಲ್ಲಿ ಸೇತುವನ್ನು ಕಟ್ಟಿ, ಅದನ್ನು ದಾಟಿಯೂ ಬಂದುಬಿಟ್ಟನು. ನಮ್ಮ ಕಡೆಯ ರಾಕ್ಷಸರನ್ನು ಹುಲ್ಲಿಗಿಂತಲೂ ಕಡೆಯಾಗಿ ಎಣಿಸಿರುವನು. ಅದೋ! ಆಗಲೇ! ನಮ್ಮ ಲಂಕಾದ್ವಾರಕ್ಕೂ ಬಂದು ಸೇರಿಬಿಟ್ಟನು. ಪರ್ವತಗಳಂತೆಯೂ, ಮೇಘಗಳಂತೆಯೂ, ಮಹಾಕಾಯವುಳ್ಳ ಅನೇಕ ಋಕ್ಷವಾನರರಸೈನ್ಯವು, ಸಹಸ್ರಸಂಖ್ಯೆಯಿಂದ ಸೇರಿ, ಈ ಭೂತಲವೆಲ್ಲವನ್ನೂ ವ್ಯಾಪಿಸುವಂತೆ ನಿಂತಿರುವುದು. ಎಲೆ ಮಹಾರಾಜನೆ! ಅಲ್ಪವಾದ ನಮ್ಮ ರಾಕ್ಷಸಸೈನ್ಯವೆಲ್ಲಿ? ಅತಿಮಹತ್ತಾದ ಆ ವಾನರಸೇನೆಯೆಲ್ಲಿ? ದೈತ್ಯರಿಗೂ, ದೇವತೆಗಳಿಗೂ ಹೇಗೋ ಹಾಗೆ ಎಷ್ಟುಮಾತ್ರವೂ ಸಂಬಂಧವಿಲ್ಲ. ಅದೋ! ಆ ಸೇನೆಯು ಆಗಲೇ ಕೋಟೆಯನ್ನು ಹತ್ತಿ ಬರುತ್ತಿರುವುದು. ನೀನು ಶೀಘ್ರದಲ್ಲಿಯೇ ಮುಂದಿನ ಕಾರ್ಯವನ್ನು ನೋಡು! ನೀನು ಈಗಲೇ ರಾಮನಿಗೆ ಸೀತೆಯನ್ನಾದರೂ ಒಪ್ಪಿಸಿಬಿಡು! ಇಲ್ಲವೇ ಜೆನ್ನಾಗಿ ಯುದ್ಧವನ್ನು ನಡೆಸುವುದಕ್ಕೆ ತಕ್ಕ ಪ್ರಯತ್ನವನ್ನಾದರೂ ಮಾಡು!

ಇವೆರಡರಲ್ಲಿ ಯಾವುದಾದರೂ ಒಂದು ಕೆಲಸವನ್ನು ಶೀಘ್ರದಲ್ಲಿಯೇ ನಡೆಸಬೇಕು. ಈಗಮಾತ್ರ ಕಾಲವಿಳಂಬವನ್ನು ಮಾಡಬಾರದು" ಎಂದನು
ಶುಕನು ಹೇಳಿದ ಈ ಮಾತನ್ನು ಕೇಳಿದೊಡನೆ ರಾವಣನಿಗೆ ಮಿತಿಮೀರಿದ ಕೋಪವುಂಟಾಯಿತು. ಅವನ ಕಣ್ಣುಗಳೆಲ್ಲವೂ ಕೆಂಡದಂತೆ ಕೆಂಪಾದುವು. ಆ ಶುಕನನ್ನು ತನ್ನ ದೃಷ್ಟಿಯಿಂದಲೇ ಸುಟ್ಟುಬಿಡುವಂತೆ ನೋಡುತ್ತ, "ಶುಕಾ! ನೀನೇನು ಹೇಳಿದೆ? ಸೀತೆಯನ್ನು ರಾಮನಿಗೊಪ್ಪಿಸುವುದೆ? ದೇವಗಂಧರ್ವದಾನವರೆಲ್ಲರೂ ಒಟ್ಟಾಗಿಸೇರಿ ನನ್ನೊಡನೆ ಯುದ್ಧಕ್ಕೆ ಬಂದರೂ, ನಾನು ಸೀತೆಯನ್ನೊಪ್ಪಿಸುವವನಲ್ಲ! ಆ ದೇವಜಾತಿಯೇ ಅಲ್ಲದೆ, ಈ ಚತುರ್ದಶಭುವನಗಳೂ ಒಂದಾಗಿ ಸೇರಿ ಬಂದು ನನ್ನನ್ನು ಹೆದರಿಸಿದರೂ ನಾನು ಸೀತೆಯನ್ನು ಕೊಡುವವನಲ್ಲ! ವಸಂತಋತುವಿನಲ್ಲಿ ಪುಷ್ಪಿಸಿದ ಗಿಡಗಳ ಮೇಲೆ, ಮದಿಸಿದ ದುಂಬಿಗಳು ಬಂದು ಬೀಳುವಂತೆ, ನನ್ನ ಬಾಣಗಳು ಯಾವಾಗ ರಾಮನಮೇಲೆ ಬೀಳುವುವೆಂದೇ ನಾನು ಇದಿರುನೋಡುತ್ತಿರುವೆನು. ಬಹುಕಾಲದಿಂದ ಯುದ್ಧವಿಲ್ಲದೆ ಬತ್ತಳಿಕೆಯಲ್ಲಿ ಶಾಂತವಾಗಿ ಮಲಗಿರುವ ಜಾಜ್ವಲ್ಯಮಾನಗಳಾದ ನನ್ನ ಬಾಣಗಳು, ನನ್ನ ಬಿಲ್ಲಿನಿಂದ ತಂಡತಂಡವಾಗಿ ಹೊರಟು, ಕೊಳ್ಳಿಗಳಿಂದ ಕಾಡಾನೆಗಳನ್ನು ಓಡಿಸುವಂತೆ ಯಾವಾಗ ಆ ರಾಮನನ್ನು ಓಡಿಸುವೆವೆಂದೇ ನಿರೀಕ್ಷಿಸುತ್ತಿರುವುವು. ಎಲೆ ಚಾರನೆ! ಆ ರಾಮನು ವಿರಾಧಾದಿರಾಕ್ಷಸರನ್ನು ಕೊಂದವನೆಂದು ಅವನ ಬಲವನ್ನು ಹೇಳಿದೆಯಲ್ಲವೆ? ಅದರೇನು? ಸೂರ್ಯನು ಉದಿಸಿಬರುವಾಗಲೇ ಇತರಗ್ರಹಗಳ ಕಾಂತಿಯನ್ನಡಗಿಸುವಂತೆ, ನಾನು ದೊಡ್ಡ ಸೇನೆಯೊಡನೆ ಹೋಗಿ ನಿಂತಾಗಲೇ ಅವನ ಶಕ್ತಿಯು ನಿಶ್ಶೇಷವಾಗಿ ಅಡಗಿ ಹೋಗುವುದೆಂದು ತಿಳಿ! ನನಗೆ ಸಮುದ್ರದಂತೆ ವೇಗವೂ, ವಾಯುವಿನಂತೆ ಗತಿಯೂ ಇರುವುದೆಂದು ಇನ್ನೂ ಆ ರಾಮನಿಗೆ ತಿಳಿದಿಲ್ಲವೆಂದು ತೋರುತ್ತಿದೆ. ಆದಕ್ಕಾಗಿಯೇ ಅವನು ನನ್ನೊಡನೆ ಯುದ್ಧಕ್ಕೆ ಪ್ರಯತ್ನಿಸುತ್ತಿರುವನು. ವಿಷಸರ್ಪಗಳಂತೆ ನನ್ನ ಬತ್ತಳಿಕೆಯಲ್ಲಿ ಮಲಗಿರುವ ನನ್ನ ಬಾಣಗಳ ರೀತಿಯನ್ನು ಆ ರಾಮನು ಹಿಂದೆ ಯಾವಾಗಲೂ ಕಂಡವನಲ್ಲ. ಅದರಿಂದಲೇ ನನ್ನೊಡನೆ ಯುದ್ಧವನ್ನಪೇಕ್ಷಿಸಿ ಬರುತ್ತಿರುವನು. ಆ ರಾಮನು ಇದುವರೆಗೆ ಯುದ್ಧದಲ್ಲಿ ನನ್ನ ವೀರ್ಯವನ್ನೂ ಕಂಡವನಲ್ಲ. ಶುಕಾ! ಇನ್ನು ಹೆಚ್ಚು ಮಾತಿನಿಂ

ದೇನು? ಇದೋ! ಈ ನನ್ನ ಬಿಲ್ಲೇ ವೀಣೆಯು! ಬಾಣಗಳೆಂಬ ತಾಡನದಂಡಗ ಳಿಂದ ಅದನ್ನು ನುಡಿಸುವೆನು ನೋಡು! ಅದರಲ್ಲಿ ಹುಟ್ಟುವ ಧನುಷ್ಟಂಕಾ ರ ಧ್ವನಿಯೂ, ಯುದ್ಧದಲ್ಲಿ ನನ್ನ ಬಾಣದಿಂದ ನೊಂದು ಕೂಗಿಡುವವರ ರೋಪನ ಧ್ವನಿಯೂ, ಬಾಣಗಳನ್ನು ತಪ್ಪುವ ಧ್ವನಿಯೂ, ಮಂದ್ರ,ಮ ಧ್ಯಮ, ತಾರಗಳೆಂಬ ಮೂರು ಸ್ವರಗಳೆಂದು ತಿಳಿ! ಇಂತಹ ವೀಣಾಧ್ವನಿ ಯೊಡನೆ ನಾನು ಯುದ್ಧರಂಗವೆಂಬ ರಂಗಸ್ಥಳವನ್ನು ಪ್ರವೇಶಿಸಿ ನಡೆಸು ವ ಚಮತ್ಕಾರವನ್ನಾದರೂ ನೋಡು! ಎಲೆ ಚಾರನೆ! ಈಗ ಮುಂದೆ ಬರು ವ ಯುದ್ಧವು ನನಗೊಂದು ವಿನೋದವೇ ಹೊರತು ಬೇರೆಯಲ್ಲ! ಸಾವಿರಕ ಣ್ಣುಳ್ಳ ದೇವೇಂದ್ರನಿಂದಾಗಲಿ, ವರುಣನಿಂದಾಗಲಿ, ಯಮನಿಂದಾಗಲಿ, ಕುಬೇರನಿಂದಾಗಲಿ, ಯುದ್ಧದಲ್ಲಿ ನನ್ನನ್ನು ಎಷ್ಟೋಕ್ರೂರ ಬಾಣಗಳಿಂದಾ ದರೂ ತಡೆಯುವುದು ಸಾಧ್ಯವಲ್ಲ" ಎಂದನು. ಇಲ್ಲಿಗೆ ಇಪ್ಪತ್ತನಾಲ್ಕನೆ ಯ ಸರ್ಗವು.

---

> ತಿರುಗಿ ರಾವಣನು ಶುಕಸಾರಣರೆಂಬ ಚಾರರಿಬ್ಬರ ನ್ನು ಕಳುಹಿಸಿದುದು. ವಿಭೀಷಣನು ಅವರನ್ನು ಹಿ ಡಿದು ರಾಮನಿಗೊಪ್ಪಿಸಿದುದು. ರಾಮನು ಅವರಲ್ಲಿ ಕ ರುಣೆಯಿಂದ ಅವರಿಗೆ ವಾನರಸೈನ್ಯವೆಲ್ಲವನ್ನೂ ತೋ ರಿಸಿ ಅವರನ್ನು ಬಿಡಿಸಿ ಕಳುಹಿಸಿದುದು. ಅವರು ತಾವು ಹೋಗಿಬಂದ ವೃತ್ತಾಂತವನ್ನು ರಾವಣನಿಗೆ ತಿಳಿಸಿದುದು.

ದಶರಥಪುತ್ರನಾದ ರಾಮನು ವಾನರಸೈನ್ಯದೊಡನೆ ಸಮುದ್ರ ವನ್ನೂ ದಾಟಿಬಂದನೆಂಬ ಸುದ್ದಿಯನ್ನು ಕೇಳಿ ರಾವಣನು, ತನ್ನ ಮಂ ತ್ರಿಗಳಾದ ಶುಕಸಾರಣರಿಬ್ಬರನ್ನೂ ನೋಡಿ "ಎಲೈ ಮಂತ್ರಿಗಳೆ? ವಾ ನರಸೈನ್ಯವೆಲ್ಲವೂ ದುಸ್ತರವಾದ ಆ ಸಮುದ್ರವನ್ನು ದಾಟಿ ಬಂದು ಬಿಟ್ಟಿರುವುದು. ಸಮುದ್ರದಲ್ಲಿ ಸೇತುಬಂಧನವೆಂಬುದನ್ನು ನಾವುಹಿಂದೆ ಯಾವಾಗಲೂ ಕಂಡುಕೇಳಿದುದೇ ಇಲ್ಲ. ರಾಮನು ಸಮುದ್ರದಲ್ಲಿಯೂ ಸೇತುವನ್ನು ಕಟ್ಟಿರುವನಂತೆ! ಆದರೆ ಇನ್ನೂ ನನಗೆ ಆ ವಿಷಯದಲ್ಲಿ ನಂಬಿಕೆ ಯು ಹುಟ್ಟಲಿಲ್ಲ. ಮಹಾಸಮುದ್ರವೆಂದರೇನು? ಸೇತುವನ್ನು ಕಟ್ಟುವುದೆಂ

ದರೇನು ? ಅವು ಹೇಗಾದರೂ ಹೋಗಲಿ! ಈಗ ಮುಖ್ಯವಾಗಿ ನನಗೆ ಆ ವಾನರಸೈನ್ಯವು ಯಾವರೀತಿಯಲ್ಲಿರುವುದೆಂದು ಚೆನ್ನಾಗಿ ತಿಳಿಯಬೇಕಾಗಿದೆ. ಆದುದರಿಂದ ನೀವು ಆ ವಾನರರಿಗೆ ತಿಳಿಯದಂತೆ ರಹಸ್ಯವಾಗಿ ಅವರ ಸೈನ್ಯವನ್ನು ಪ್ರವೇಶಿಸಿ, ಆ ವಾನರಸೇನೆಯ ಪರಿಮಾಣವನ್ನೂ, ಅವರ ವೀರ್ಯವನ್ನೂ, ಅವರಲ್ಲಿ ಪ್ರಮುಖರಾರೆಂಬುದನ್ನೂ, ರಾಮನಿಗೂ ಸುಗ್ರೀವನಿಗೂ, ಯಾರು ಯಾರು ಮಂತ್ರಿಗಳೆಂಬುದನ್ನೂ ತಿಳಿದು ಬರಬೇಕು. ಮತ್ತು ಆ ವಾನರಸೇನೆಯಲ್ಲಿ ಯುದ್ಧಕ್ಕೆ ಮುಂದಾಗಿ ನಿಲ್ಲುವ ಧೀರರಾರೆಂಬುದನ್ನೂ ತಿಳಿದು ಬರಬೇಕು. ಇದಲ್ಲದೆ ಆ ಮಹಾಸಮುದ್ರದಲ್ಲಿ ಸೇತುವನ್ನು ಕಟ್ಟಿದ ರೀತಿಯೇನೆಂಬುದನ್ನೂ, ಅವರ ಸೇನಾನಿವೇಶಸ್ಥಳವನ್ನೂ, ಈಗ ರಾಮನು ಮಾಡುತ್ತಿರುವ ಪ್ರಯತ್ನವನ್ನೂ, ಅವನ ವೀರ್ಯವೆಷ್ಟೆಂಬುದನ್ನೂ, ಅವನ ಆಯುಧಗಳ ರೀತಿಯನ್ನೂ, ಲಕ್ಷ್ಮಣನ ಪರಾಕ್ರಮವನ್ನೂ, ಇದ್ದುದಿದ್ದಂತೆ ನೀವು ತಿಳಿದು ಬರಬೇಕು. ಮತ್ತು ಮಹಾತೇಜಸ್ವಿಗಳಾದ ಆ ವಾನರರಿಗೆ ಪ್ರಧಾನಸೇನಾಪತಿಯಾರೆಂಬುದನ್ನೂ ಕಂಡುಕೊಳ್ಳಬೇಕು. ನೀವಿಬ್ಬರೂ ಈಗಲೇ ಹೋಗಿ ಈ ವಿಷಯಗಳೆಲ್ಲವನ್ನೂ, ಯಥಾರ್ಥವಾಗಿ ತಿಳಿದು ಬನ್ನಿರಿ!" ಎಂದು ನಿಯಮಿಸಿದನು. ಶುಕಸಾರಣರಿಬ್ಬರೂ ರಾವಣಾಜ್ಞೆಯಂತೆ ಆಗಲೇ ಲಂಕೆಯನ್ನು ಬಿಟ್ಟುಹೊರಟು, ತಮ್ಮ ಮಾಯೆಯಿಂದ ಕಪಿಗಳಂತೆಯೇ ರೂಪವನ್ನು ಧರಿಸಿ, ವಾನರಸೈನ್ಯಕ್ಕೆ ನುಗ್ಗಿದರು. ಆ ರಾಕ್ಷಸರಿಬ್ಬರೂ ಅಲ್ಲಿ ಹೋಗಿ, ನೋಡುವಾಗಲೇ ಭಯದಿಂದ ರೋಮಾಂಚವನ್ನುಹುಟ್ಟಿಸುವಂತೆ ಕೊನೆಮೊದಲಿಲ್ಲದೆ ನಿಂತಿದ್ದ ಆ ದೊಡ್ಡ ಸೈನ್ಯವನ್ನು ನೋಡಿ,ಆಶ್ಚರ್ಯದಿಂದ ಬೆರಗಾಗಿ,ಅದರ ಪರಿಮಾಣವೆಷ್ಟೆಂದು ತಿಳಿಯಲಾರದೆ. ಹೋದರು. ದಗವಿಗಳಲ್ಲಿಯೂ, ಕಮರಿಗಳಲ್ಲಿಯೂ,ಗುಹೆಗಳಲ್ಲಿಯೂ, ಸಮುದ್ರ ತೀರಗಳಲ್ಲಿಯೂ, ಕಾಡುಗಳಲ್ಲಿಯೂ,ಉದ್ಯಾನವನಗಳಲ್ಲಿಯೂ, ಚಲ್ಲಾಚದರಾಗಿ ಸೇರಿಕೊಂಡಿದ್ದುದರಿಂದ,ಅದನ್ನು ಲೆಕ್ಕ ಮಾಡುವುದಕ್ಕೂ ಸಾಧ್ಯವಿಲ್ಲವೆ ಹೋಯಿತು. ಅದಲ್ಲದೆ ಆ ವಾನರರಲ್ಲಿ ಇನ್ನೂ ಸಮುದ್ರವನ್ನು ದಾಟಿ ಬರುತಿದ್ದವರು ಕೆಲವರು! ಆಗಲೇ ದಾಟಿ ಬಂದವರು ಕೆಲವರು! ದಾಟುವುದಕ್ಕೆ ಉದ್ಯೋಗಿಸುತಿದ್ದವರು ಕೆಲ

ವರು! ಮೊದಲೇ ಬಂದಿಳಿದಿದ್ದವರು ಕೆಲವರು! ಆಗಾಗ ಇಳಿಯುತಿದ್ದವರು ಕೆಲವರು! ಹೀಗೆ ಆವಾನರಸೈನ್ಯವು ನಾನಾದಿಕ್ಕುಗಳಿಂದಲೂ, ನಾನಾರೀತಿಯಿಂದ ಬಂದು ಸೇರುತ್ತ, ಆಗಾಗ ಅತಿಭಯಂಕರವಾದ ಸಿಂಹನಾದವನ್ನೂ ಮಾಡುತಿತ್ತು. ಮಹಾಬಲಸಂಪನ್ನವಾಗಿಯೂ, ಅಕ್ಷೋಭ್ಯವಾಗಿಯೂ ಇದ್ದ ಆ ವಾನರಸೈನ್ಯವು ಬೇರೊಂದು ಸಮುದ್ರವೋ ಎಂಬಂತೆ ಈ ರಾಕ್ಷಸರಿಗೆ ಕಾಣಿಸಿತು. ಇಷ್ಟರಲ್ಲಿ ಈ ರಾಕ್ಷಸರಿಬ್ಬರೂ ವೇಷಧಾರಿಗಳಾಗಿ ಬಂದಿರುವರೆಂಬ ಸಂಗತಿಯು ವಿಭೀಷಣನಿಗೆ ತಿಳಿದುಹೋಯಿತು. ಆಗಲೇ ವಿಭೀಷಣನು ಆ ಶುಕಸಾರಣರಿಬ್ಬರನ್ನೂ ಹಿಡಿದು ತಂದು ರಾಮನ ಮುಂದೆ ನಿಲ್ಲಿಸಿ "ರಾಮಾ! ಇದೋ ನೋಡು! ಇವರಿಬ್ಬರೂ ರಾಕ್ಷಸೇಶ್ವರನಾದ ಆ ರಾವಣನ ಮಂತ್ರಿಗಳು! ಇವರಿಗೆ ಶುಕಸಾರಣರೆಂದು ಹೆಸರು. ಇವರಿಬ್ಬರೂ ನಮ್ಮ ರಹಸ್ಯವನ್ನು ತಿಳಿದುಕೊಂಡುಹೋಗುವುದಕ್ಕಾಗಿ ಕಪಿವೇಷದಿಂದ ಗೂಢಚಾರರಾಗಿ ಬಂದಿರುವರು." ಎಂದನು. ಇದನ್ನು ಕೇಳಿದೊಡನೆ, ಶುಕಸಾರಣರಿಬ್ಬರೂ ತಮ್ಮ ಪ್ರಾಣದಮೇಲೆಯೇ ಆಸೆಯನ್ನು ಬಿಟ್ಟು, ಭಯದಿಂದ ನಡುಗುತ್ತಾ, ರಾಮನ ಮುಂದೆ ಕೈಮುಗಿದು ನಿಂತು "ಎಲೆ ಸೌಮ್ಯನೆ! ನಾವಿಬ್ಬರೂ ರಾವಣಾಜ್ಞೆಯಿಂದ ನಿನ್ನ ಸೈನ್ಯದ ಪರಿಮಾಣವೆಷ್ಟೆಂದು ತಿಳಿದುಕೊಂಡು ಹೋಗುವುದಕ್ಕಾಗಿ ಗೂಢಚಾರರಾಗಿ ಇಲ್ಲಿಗೆ ಬಂದೆವು. ಇದು ನಿಜವು" ಎಂದನು. ರಾಮನು ಮಹಾತ್ಮನಾಗಿಯೂ, ಸರ್ವಭೂತಹಿತಪರನಾಗಿಯೂ, ಕೃಪೆಯೇ ಸಹಜಸ್ವಭಾವವುಳ್ಳವನಾಗಿಯೂ ಇದ್ದುದರಿಂದ, ಶತ್ರುಗಳಾಗಿ ಬಂದ ರಾಕ್ಷಸರಲ್ಲಿಯೂ, ವಾತ್ಸಲ್ಯವನ್ನು ತೋರಿಸುತ್ತ, ಅವರ ಮಾತನ್ನು ಆಶ್ಚರ್ಯದಿಂದ ಕೇಳಿ, ರಾವಣನ ಮಂದಬುದ್ಧಿಯನ್ನು ಕುರಿತು ನಸುನಗುತ್ತ, ಅವರನ್ನು ಕುರಿತು "ಎಲೆ ರಾಕ್ಷಸರೆ! ಹೆದರಬೇಡಿರಿ! ನೀವು ನಿಮ್ಮ ಪ್ರಭುವಿನ ಆಜ್ಞೆಯಂತೆ, ಈ ನಮ್ಮ ಸೈನ್ಯವೆಲ್ಲವನ್ನೂ ಚೆನ್ನಾಗಿ ನೋಡಿ, ನಮ್ಮನ್ನೂ ಪರೀಕ್ಷಿಸಿ, ನಿಮ್ಮ ಕಾರ್ಯವೆಲ್ಲವನ್ನೂ ಪೂರ್ಣವಾಗಿ ಮುಗಿಸಿಕೊಂಡಿದ್ದಪಕ್ಷದಲ್ಲಿ, ಈಗಲೂ ನೀವು ಯಥೇಚ್ಛವಾಗಿ ನಿಮ್ಮ ಪಟ್ಟಣಕ್ಕೆ ತಿರುಗಿ ಹೋಗಬಹುದು. ಹಾಗಿಲ್ಲದೆ ಇಲ್ಲಿ ನಿಮಗೆ ತಿಳಿಯಬೇಕಾದ ಅಂಶವೇನಾದರೂ ಉ

ಳಿದಿದ್ದರೆ, ಮತ್ತೊಮ್ಮೆ ನೀವು ಚೆನ್ನಾಗಿ ನೋಡಿಯೂ ಬರಬಹುದು. ನಿಮಗೆ ಸಮ್ಮತವಾದರೆ ಈ ವಿಭೀಷಣನೇ ನಿಮ್ಮನ್ನು ಕರೆದುಕೊಂಡು ಹೋಗಿ ತೋರಿಸುವನು. ನೀವು ನನ್ನ ಕೈಗೆ ಸಿಕ್ಕಿದಮಾತ್ರಕ್ಕೆ ನಿಮ್ಮ ಪ್ರಾಣವುಳಿಯದೆಂದು ಭಯಪಡಬೇಕಾದುದಿಲ್ಲ. ಆಯುಧವಿಲ್ಲದವರನ್ನಾಗಲಿ, ದೂತರಾಗಿ ಬಂದವರನ್ನಾಗಲಿ ಯಾವಾಗಲೂ ಕೊಲ್ಲಬಾರದು. ಈ ಎರಡು ವಿಧದಿಂದಲೂ ನೀವು ಅವಧ್ಯರಾಗಿರುವಿರಿ! ಹೆದರಬೇಡಿರಿ!" ಎಂದು ಹೇಳಿ, ಆ ಮೇಲೆ ವಿಭೀಷಣನನ್ನು ಕುರಿತು "ವಿಭೀಷಣಾ! ಇವರನ್ನು ಬಿಟ್ಟುಬಿಡು! ಇವರು ಸಾಮಾದ್ಯುಪಾಯಗಳಿಂದ ಶತ್ರುಪಕ್ಷವನ್ನು ಭೇದಿಸುವುದರಲ್ಲಿ ಸಮರ್ಥರೆಂಬುದೇನೋ ನಿಜವು. ಈಗ ಆ ಕಾರ್ಯಕ್ಕಾಗಿಯೇ ನಮ್ಮಲ್ಲಿ ಬಂದವರಾಗಿದ್ದರೂ, ಅಭಯವನ್ನು ಕೇಳುತ್ತಿರುವರು. ಆದುದರಿಂದ ಇವರನ್ನು ಬಿಟ್ಟುಬಿಡು" ಎಂದು ಹೇಳಿ, ತಿರುಗಿ ಆ ಚಾರರನ್ನು ಕುರಿತು "ಎಲೆ ರಾಕ್ಷಸರೆ! ನೀವು ಇಲ್ಲಿಂದ ಲಂಕೆಗೆ ಹೋಗಿ,ನಿಮ್ಮ ಪ್ರಭುವಾದ ರಾವಣನೊಡನೆ,ಈಗ ನಾನು ಹೇಳುವ ಈ ಮಾತುಗಳನ್ನು ಹೀಗೆಯೇ ಹೇಳಬೇಕು. "ರಾವಣಾ! ನೀನು ಯಾವ ಭುಜಬಲವನ್ನು ನಂಬಿ ನನ್ನ ಪತ್ನಿಯಾದ ಸೀತೆಯನ್ನು ಕದ್ದುತಂದೆಯೋ,ಆ ನಿನ್ನ ಬಲವನ್ನು ಈಗ ನೀನು ನಿನ್ನ ಸೈನ್ಯಗಳೊಡನೆಯೂ, ನಿನ್ನ ಬಂಧುವರ್ಗಗಳೊಡನೆಯೂ ಯಥೇಷ್ಟವಾಗಿ ತೋರಿಸಬಹುದು! ನಾಳೆ ಪ್ರಾತಃಕಾಲದಲ್ಲಿ ನಿನ್ನ ಲಂಕಾಪುರವು, ಅದರ ಕೋಟೆ, ಕೊತ್ತಲಗಳೊಡನೆಯೂ, ಪುರದ್ವಾರಗಳೊಡನೆಯೂ, ಅಲ್ಲಿನ ರಾಕ್ಷಸಸೈನ್ಯಗಳೊಡನೆಯೂ, ನನ್ನ ಬಾಣಗಳಿಂದ ಧೂಳಿದ್ದುಹೋಗುವುದನ್ನು ನೋಡು. ರಾವಣಾ! ನಾಳೆ ಬೆಳಗಾಗುವಷ್ಟರಲ್ಲಿ, ವಜ್ರಧಾರಿಯಾದ ಇಂದ್ರನು ದಾನವರಮೇಲೆ ತನ್ನ ವಜ್ರವನ್ನು ಪ್ರಯೋಗಿಸುವಂತೆ,ನಾನು ಸೇನಾಸಮೇತನಾದ ನಿನ್ನ ಮೇಲೆ ಭಯಂಕರವಾದ ನನ್ನ ಕೋಪವನ್ನು ಪ್ರಯೋಗಿಸುವ ರೀತಿಯನ್ನಾದರೂ ನೋಡು! ಇನ್ನು ನೀನು ನಿನ್ನ ಸೈನ್ಯಗಳೊಡನೆ! ಸಿದ್ಧನಾಗಿರು." ಎಂದು ನಾನು ಹೇಳಿದುದಾಗಿ ತಿಳಿಸಿರಿ!" ಎಂದನು. ಹೀಗೆ ರಾಮನು ರಾವಣನಿಗೆ ತನ್ನ ಸಂದೇಶವನ್ನು ಹೇಳಲು, ಶುಕಸಾರಣರಿಬ್ಬರೂ, ರಾಮನ ದಯಾಸ್ವಭಾವಕ್ಕೂ, ಅವನ ಧರ್ಮವತ್ಸಲತೆಗೂ ಸಂ

ವು ಲೋಕದಲ್ಲಿ ಬೇರೊಬ್ಬನುಂಟೆ?" ಎಂದನು. ಹೀಗೆ ರಾಕ್ಷಸೇಶ್ವರನಾದ ರಾವಣನು ಸಾರಣನನ್ನು ಪರುಷವಾಕ್ಯದಿಂದ ಧಿಕ್ಕರಿಸಿ, ಆ ವಾನರಸೈನ್ಯವನ್ನು ತಾನೇ ಕಣ್ಣಾರೆ ನೋಡಬೇಕೆಂಬ ಕುತೂಹಲವುಳ್ಳವನಾಗಿ, ಆಗಲೇ ಅಲ್ಲಿಂದ ಹೊರಟು,ಹಿಮದಂತೆ ಬಿಳುಪಾಗಿಯೂ,ಅನೇಕತಾಳವೃಕ್ಷಗಳ ಪ್ರಮಾಣದಷ್ಟು ಮಹೋನ್ನತವಾಗಿಯೂ ಇಸ್ತ ಒಂದು ಪ್ರಾಸಾದವನ್ನೇರಿದನು.ಕೋಪೋದ್ರಿಕ್ತನಾದ ಆ ರಾವಣನು ಶುಕಸಾರಣರೊಡಗೂಡಿ ಪ್ರಾಸಾದದಮೇಲೆ ನಿಂತು, ಅಲ್ಲಿಂದ ಸಮುದ್ರವನ್ನೂ, ಪರ್ವತಗಳನ್ನೂ,ಕಾಡುಗಳನ್ನೂ ನೋಡುತ್ತ, ತ್ರಿಕೂಟಪರ್ವತಕ್ಕೆ ಕೆಳಗಿದ್ದ ಭೂಪ್ರದೇಶವೆಲ್ಲವೂ ವಾನರಸೇನೆಯಿಂದಲೇ ನಿಬಿಡವಾಗಿ ತುಂಬಿಹೋಗಿರುವುದನ್ನೂ ಕಂಡನು. ಹೀಗೆ ಕೊನೆಮೊದಲಿಲ್ಲದೆ, ಅಸಂಖ್ಯಾತವಾಗಿದ್ದ, ಆ ದೊಡ್ಡವಾನರಸೇನೆಯನ್ನು ನೋಡಿ ರಾವಣನು,ಸಾರಣನನ್ನು ಕುರಿತು "ಸಾರಣಾ! ಈ ವಾನರ ಗುಂಪಿನಲ್ಲಿ ಬಹಳಶೂರರೆನಿಸಿದವರಾರು?ಯಾರಿಗೆ ಹೆಚ್ಚುಬಲವುಂಟು? ಇವರಲ್ಲಿ ಮಹೋತ್ಸಾಹದಿಂದ ಯುದ್ಧಕ್ಕೆ ಮುಂದಾಗಿ ನಿಲ್ಲುವವರಾರು! ಇವರಲ್ಲಿ ಯಾರ ಮಾತನ್ನು ಸುಗ್ರೀವನು ವಿಶೇಷವಾಗಿ ನಂಬುವನು? ಇವರಲ್ಲಿ ಪ್ರಧಾನಯೂಥಪತಿಗಳಾರು? ಸೇನಾಪತಿಗಳಾದ ಕಪಿಗಳಾರು? ಇವೆಲ್ಲವನ್ನೂ ಯಥಾಸ್ಥಿತನಾಗಿ ನನಗೆ ತಿಳಿಸು"!ಎಂದು ಕೇಳಿದನು. ಈ ಮಾತನ್ನು ಕೇಳಿ ಸಾರಣನು ಆ ವಾನರಪ್ರಮುಖರ ಬಲಪರಾಕ್ರಮಗಳನ್ನು ಚೆನ್ನಾಗಿ ತಿಳಿದವನಾಗಿದ್ದುದರಿಂದ, ರಾವಣನಿಗೆ ಅವರವರನ್ನು ಬೇರೆಬೇರೆಯಾಗಿ ತಿಳಿಸುತ್ತ, ಅತನನ್ನು ಕುರಿತು "ಎಲೆ ಮಹಾರಾಜನೆ! ಅದೋ! ಅಲ್ಲಿ ಒಬ್ಬ ವಾನರನು ನಮ್ಮ ಲಂಕೆಗಿದಿರಾಗಿ ಸಿಂಹನಾದವನ್ನು ಮಾಡುತ್ತ, ಲಕ್ಷಯೂಥಪತಿಗಳಿಂದ ಪರಿವೃತನಾಗಿ ನಿಂತಿರುವುದನ್ನು ನೋಡಿದೆಯಾ ? ಅವನ ಮಹಾಧ್ವನಿಗೆ ನಮ್ಮ ಲಂಕೆಯೆಲ್ಲವೂ, ತೋರಣಪ್ರಾಕಾರಗಳೊಡನೆಯೂ, ಪುರೋಪವನಗಳೊಡನೆಯೂ ನದನದಿಯೂ,ಪರ್ವತಾರಣ್ಯಗಳೊಡನೆಯೂ, ಪುರೋಪವನಗಳೊಡನೆಯೂ ನಡುಗುವಂತಿರುವುದು ನೋಡು! ಅವನಿಗೆ ನೀಲನೆಂದು ಹೆಸರು. ವಾನರೇಂದ್ರನಾಗಿಯೂ, ಮಹಾತ್ಮನಾಗಿಯೂ ಇರುವ ಸುಗ್ರೀವನ ಸಮಸ್ತಸೈನ್ಯಕ್ಕೂ ಈತನೇ ಪ್ರಧಾನಸೇನಾನಾಯಕನು. ಅದೋ! ಅಲ್ಲಿ ತೋಳುಗಳ

ನ್ನು ಮೇಲಕ್ಕೆತ್ತಿ ನೆಲದಮೇಲೆ ಕಾಲೂರಿ ನಿಂತಿರುವ ವೀರ್ಯವಂತನಾದ ಮ ತ್ತೊಬ್ಬ ವಾನರನು ನಮ್ಮ ಲಂಕೆಗಿದಿರಾಗಿ ಮೇಲೆಮೇಲೆ ಕೋಪದಿಂದ ಉಬ್ಬುವುದನ್ನೂ, ಪರ್ವತಶಿಖರದಂತಿರುವ ಆತನ ಮಹೋನ್ನತಾಕಾರವ ನ್ನೂ,ಕಮಲಕಿಂಜಲ್ಕದಂತಿರುವ ಅವನ ಮೈಬಣ್ಣವನ್ನೂ ನೋಡಿದೆಯಾ? ಆ ವಾನರಯೂಥಪತಿಯು, ಕೋಪದಿಂದ ಆಗಾಗ ತನ್ನ ಬಾಲವನ್ನೆತ್ತಿ ಬಡಿಯುತ್ತಿರುವಾಗ,ಅದರಿಂದುಂಟಾದ ಮಹಾಧ್ವನಿಯೇ ಹತ್ತು ದಿಕ್ಕುಗಳಲ್ಲಿ ಯೂ ಪ್ರತಿಧ್ವನಿಯನ್ನುಂಟುಮಾಡುವುದನ್ನು ನೋಡಿದೆಯಾ? ಇವನನ್ನೇ ವಾನರರಾಜನಾದ ಸುಗ್ರೀವನು ಯೌವರಾಜ್ಯದಲ್ಲಿ ಇರಿಸಿರುವನು. ಇವನಿಗೆ ಅಂಗದನೆಂದು ಹೆಸರು. ಈಗಲೇ ಇವನು ನಿನ್ನನ್ನು ಯುದ್ಧಕ್ಕೆ ಕರೆಯುತ್ತಿ ರುವನು ನೋಡು. ಇವನು ವಾಲಿಗೆ ತಕ್ಕ ಪುತ್ರನು! ಸುಗ್ರೀವನಿಗೆ ಬಹಳ ಪ್ರೇಮಪಾತ್ರನು. ದೇವೇಂದ್ರನಿಗೆ ವರುಣನು ಹೇಗೋ,ಹಾಗೆ ಇವನು ರಾ ಮನಿಗಾಗಿ ತನ್ನ ಪರಾಕ್ರಮದ ಸರ್ವಸ್ವವನ್ನೂ ತೋರಿಸಬೇಕೆಂದು ಪ್ರ ಯತ್ನಿಸಿರುವನು. ಹಿಂದೆ ಮಹಾವೇಗಶಾಲಿಯಾದ ಹನುಮಂತನು, ರಾ ಮನ ಕಾರ್ಯಕ್ಕಾಗಿ ಇಲ್ಲಿಗೆ ಬಂದು ಸೀತೆಯನ್ನು ನೋಡಿಹೋದನಷ್ಟೆ? ಅವೆ ಲ್ಲಕ್ಕೂ ಇವನ ಬುದ್ಧಿಯೇ ಮೂಲವು! ವೀರ್ಯವಂತನಾದ ಈ ಅಂಗದನು ತನ್ನೊಡನೆ ಕೊನೆಮೊದಲಿಲ್ಲದಷ್ಟು ವಾನರಸೇನೆಯನ್ನೂ ಕರೆತಂದಿರುವನು. ಆ ಸೈನ್ಯದಿಂದಲೇ ನಿನ್ನನ್ನು ಇದಿರಿಸುವುದಕ್ಕೆ ಸಿದ್ಧನಾಗಿಯೂ ನಿಂತಿರು ವನು. ಈತನನ್ನು ಜಯಿಸುವುದು ಲೋಕದಲ್ಲಿ ಯಾರಿಗೂ ಸಾಧ್ಯವಿಲ್ಲ. ಅ ದೋ! ಅಲ್ಲಿ ವಾಲಿಪುತ್ರನಾದ ಅಂಗದನಹಿಂದೆ, ದೊಡ್ಡಸೈನ್ಯದೊಡನೆ ನಿಂ ತಿರುವವನೇ ನಳನೆಂಬವನು! ಆತನೂ ನಿನ್ನೊಡನೆ ಯುದ್ಧಕ್ಕಾಗಿಯೇ ಕಾದಿ ರುವನು. ಅವನೇ ಸೇತುವನ್ನು ಕಟ್ಟಿದವನು. ಎಲೆ ಮಹಾರಾಜನೆ! ಅದೋ ಅಲ್ಲಿ ಆ ನಳನ ಹಿಂದೆ! ದೇಹವನ್ನುಬ್ಬಿಸಿ, ಸಿಂಹನಾದಗಳಿಂದ ಗರ್ಜಿಸುತ್ತ, ಕೋಪದಿಂದ ಮೇಲೆದ್ದುನಿಂತಿರುವ ಕೆಲವುವಾನರವೀರರನ್ನು ನೋಡಿದೆಯಾ ಅವರನ್ನಿದಿರಿಸುವುದು ಯಾರಿಗೂ ಸಾಧ್ಯವಲ್ಲ. ಒಬ್ಬೊಬ್ಬರೂ ಭಯಂಕ ರಾಕಾರವುಳ್ಳವರು!ಒಬ್ಬೊಬ್ಬರೂ ಬಹಳಕ್ರೂರರು! ಒಬ್ಬೊಬ್ಬರೂ ಚಂ ಡಪರಾಕ್ರಮವುಳ್ಳವರು! ಅವರ ಸಂಖ್ಯೆಯೆಷ್ಟೆಂಬುದನ್ನು ನೋಡು ?

ಒಂದು ಸಹಸ್ರಕೋಟಿಗೆಮೇಲೆ, ಎಂಬತ್ತುಲಕ್ಷವಿರುವುದು. ಈ ಸೈನ್ಯವ ಲ್ಲದೆ ಚಂದನವನವಾಸಿಗಳಾದ ಬೇರೆ ಅನೇಕವಾನರವೀರರೂ ಈನಳನನ್ನು ಹಿಂ ಬಾಲಿಸಿಬಂದಿರುವರು. ಈ ಸಮಸ್ತಸೇನೆಯೂ ನಳನ ಪರಿವಾರವು. ಈ ನಳ ನೊಬ್ಬನೇ, ತನ್ನ ಸೇನೆಯೊಡನೆ ನಮ್ಮಲಂಕೆಯನ್ನು ಮರ್ದಿಸಬೇಕೆಂದಿರು ವನು. ಅದೋ ಅತ್ತಲಾಗಿ ಬೆಳ್ಳಿಯಂತೆ ಶುಭ್ರದೇಹವುಳ್ಳ ವಾನರನೊಬ್ಬನಿ ರುವನು ನೋಡು. ಅವನಿಗೆ ಶ್ವೇತನೆಂದು ಹೆಸರು. ಈತನಿಗೆ ಯುದ್ಧದಲ್ಲಿ ಬ ಹಳ ಕುತೂಹಲವುಂಟು. ಪರಾಕ್ರಮದಲ್ಲಿಯೂ, ಬುದ್ಧಿಯಲ್ಲಿಯೂ. ವೀರ್ಯ ದಲ್ಲಿಯೂ, ಇವನು ಮೂರುಲೋಕದಲ್ಲಿಯೂ ಪ್ರಸಿದ್ಧಿಹೊಂದಿದವನು. ಎಲೆ ಮಹಾರಾಜನೆ! ಈತನಿಗಿರುವ ಯುದ್ಧಾತುರವೆಷ್ಟೆಂಬುದನ್ನು ನೋಡಿದೆ ಯಾ? ಆಗಲೇ ಅವನು ಸುಗ್ರೀವನಲ್ಲಿಗೆ ಹೋಗಿ,ತಾನೊಬ್ಬನೇ ಲಂಕೆಯನ್ನು ಧ್ವಂಸಮಾಡಿ ಬರುವುದಾಗಿ ಹೇಳಿ, ಅವನ ಅನುಮತಿಯನ್ನೂ ಪಡೆದು, ಅ ದಕ್ಕೆ ತಕ್ಕಂತೆ ತನ್ನ ವಾನರಸೈನ್ಯವನ್ನೂ ಕ್ರಮವಾಗಿ ವಿಭಾಗಿಸಿ, ಅವರನ್ನು ಮೇಲೆಮೇಲೆ ಪ್ರೋತ್ಸಾಹಿಸುತ್ತ. ಆತುರದಿಂದ ಬರುತ್ತಿರುವನು ನೋಡು. ಇದೋ ಇತ್ತಲಾಗಿರುವವನು ಕುಮುದನೆಂಬ ಯೂಥಪತಿಯು. ಇವನು ಪೂರ್ವದಲ್ಲಿ ಗೋಮತೀತೀರದಲ್ಲಿ ಅತಿರಮಣೀಯವಾಗಿಯೂ, ನಾನಾವೃ ಕ್ಷಗಳಿಂದ ನಿಬಿಡವಾಗಿಯೂ ಇದ್ದ ಸಂಕೋಚನವೆಂಬ ಪರ್ವತದಮೇಲೆ ಸು ತ್ತುತ್ತಾ, ಅಲ್ಲಿನ ರಾಜ್ಯವನ್ನು ಪಾಲಿಸುತಿದ್ದನು. ಈಗ ಸುಗ್ರೀವನ ಸಹಾ ಯಕ್ಕಾಗಿ ಬಂದಿರುವನು. ಇವನು ತನ್ನ ಕಡೆಯಿಂದ ಹತ್ತುಕೋಟಿವಾನರ ಸೇನೆಯನ್ನು ಕರೆತಂದಿರುವನು. ಇವನ ಬಾಲದಲ್ಲಿರುವ ಕೂದಲುಗಳೇ ಎ ಷ್ಟೋಮಾರುದ್ದವಿರುವುವು. ಅವುಗಳ ವಿಚಿತ್ರವರ್ಣವನ್ನು ನೋಡಿದೆಯಾ? ಕೆಂಪು, ಹಳದಿ, ಬಿಳುಪು, ಅಚ್ಚಬಿಳುಪು, ಮುಂತಾದ ನಾನಾಬಣ್ಣದ ಕೂದಲುಗಳು ಕಲೆತಿರುವುವು. ಈ ಕುಮುದನೆಂಬ ಕಪಿಯು ಬಹಳಭಯಂ ಕರಕಾರ್ಯಗಳನ್ನು ನಡೆಸತಕ್ಕವನು. ಎಂತಹ ಮಹಾಪತ್ತಿನಲ್ಲಿಯೂ ಸ್ವಲ್ಪ ಮಾತ್ರವೂ ದೈನ್ಯವನ್ನು ತೋರಿಸುವವನಲ್ಲ! ಬಹಳ ಪ್ರಚಂಡನು! ಅತ್ಯಂತ ಕೋಪಸ್ವಭಾವವುಳ್ಳವನು! ಯುದ್ಧಕ್ಕಾಗಿಯೇ ಕಾಲೆತ್ತಿನಿಂತಿರುವನು. ಈ ತನೂ ತನ್ನ ಸೈನ್ಯದೊಡನೆ, ತಾನೊಬ್ಬನೇ ನಮ್ಮ ಲಂಕೆಯನ್ನು ಮ

{ಸಾರಣನು ಮತ್ತೆ ಕೆಲವು ಪ್ರಧಾನವಾನರಯೂಥಪತಿಗ
ಳನ್ನು ರಾವಣನಿಗೆ ತೋರಿಸಿದುದು.}

"ಎಲೆ ಮಹಾರಾಜನೆ! ಆ ರಾಮನಿಗಾಗಿ ತಮ್ಮ ಪ್ರಾಣವನ್ನೂ ಲಕ್ಷಿಸದೆ ಹೋರಾಡತಕ್ಕ ಇನ್ನೂ ಕೆಲವು ಪ್ರಧಾನಯೂಥಪತಿಗಳನ್ನು ತೋರಿಸುವೆನು ನೋಡು! ಇದೋ ಇವನು ಹರನೆಂಬ ಯೂಥಪತಿಯು! ಭಯಂಕರಕಾರ್ಯವುಳ್ಳ ಈತನ ಬಾಲದಲ್ಲಿರುವ ಕೂದಲುಗಳೇ ಎಷ್ಟೋ ಮಾರುದ್ದವಿರುವುವು! ಮತ್ತು ಆವು, ಕೆಂಪು, ಹಳದಿ, ಬಿಳುಪು, ಮಂತಾದ ವಿಚಿತ್ರವರ್ಣಗಳಿಂದ ಕೂಡಿ, ಮೇಘಗಳಲ್ಲಿ ಇನ್ದ್ರಧನುಸ್ಸೇ ಮೊದಲಾದ ರೂಪಗಳಿಂದ ಪ್ರಸರಿಸುವ ಸೂರ್ಯಕಿರಣಗಳಂತೆ ವಿರಳವಾಗಿ ಮೇಲಕ್ಕೆ ನಿಗುರಿರುವುವು. ನೋಡು! ಈತನ ಹಿಂದೆ ಸುಗ್ರೀವನಿಗೆ ಕಿಂಕರರಾದ ಅನೇಕವಾನರಶ್ರೇಷ್ಠರು, ನೂರುನೂರಾಗಿಯೂ, ಸಾವಿರಸಾವಿರವಾಗಿಯೂ ಗುಂಪುಸೇರಿ, ದೊಡ್ಡದೊಡ್ಡಗಿಡಗಳನ್ನೇ ಕೈಯಿಂದೆತ್ತಿಕೊಂಡು, ಈ ಲಂಕೆಯನ್ನು ಮುತ್ತುವುದಕ್ಕಾಗಿ ಆತುರದಿಂದ ಬರುವರು ನೋಡು. ಈ ಹರನೆಂಬವನು ಮಹಾತೇಜಸ್ವಿಗಳಾದ ಸಹಸ್ರಕೋಟಿವಾನರರೊಡಗೂಡಿ, ಯುದ್ಧದಲ್ಲಿ ನಿನ್ನನ್ನು ತಾನೇ ಜಯಿಸಿಬಿಡಬೇಕೆಂಬ ಆತುರದಿಂದಿರುವನು.ಎಲೈ ರಾಜನೆ, ಅದೋ! ಅಲ್ಲಿ ಕಾಳಮೇಘಗಳಂತೆಯೂ,ಕಾಡಿಗೆಯಂತೆಯೂ,ಕಪ್ಪುಬಣ್ಣವುಳ್ಳ ಆ ಕರಡಿಗಳಗುಂಪನ್ನು ನೋಡಿದೆಯಾ?ಅವುಗಳನ್ನು ಲೆಕ್ಕಮಾಡುವುದಕ್ಕೇ ಸಾಧ್ಯವಲ್ಲ!ಇವುಗಳನ್ನು ನಿನಗೆಪ್ರತ್ಯೇಕವಾಗಿ ನಿರ್ದೇಶಿಸಿ ತೋರಿಸಬೇಕೆಂದರೂ ನನಗೆ ಶಕ್ಯವಲ್ಲ. ಈ ಸೈನ್ಯವು ಸಮುದ್ರವೇಲೆಯಂತೆ ಅಪಾರವಾಗಿ ನಿಂತಿರುವುದು.ಇವರಲ್ಲಿ ಒಬ್ಬೊಬ್ಬರೂ ಸತ್ಯಪರಾಕ್ರಮವುಳ್ಳವರು. ಇವರಲ್ಲಿ ಕೆಲವರು ಪರ್ವತಗಳಲ್ಲಿಯೂ, ಕೆಲವರು ವಿಷಮಪ್ರದೇಶಗಳಲ್ಲಿಯೂ, ಕೆಲವರು ನದೀತೀರಗಳಲ್ಲಿಯೂ ವಾಸವಾಗಿರತಕ್ಕವರು. ಈ ಭಯಂಕರವಾದ ಭಲ್ಲೂಕಸೈನ್ಯವೆಲ್ಲವೂ ನಿನ್ನ ಮೇಲೆ ಯುದ್ಧಕ್ಕಾಗಿಯೇ ಬರುತ್ತಿರುವುವು. ಅದೋ! ಅಲ್ಲಿ ಭಯಂಕರಗಳಾದ ಕಣ್ಣುಗಳಿಂದಲೂ, ಭಯಂಕರಾಕಾರದಿಂದಲೂ ಕೂಡಿ, ಮೇಘಗಳ ನಡುವೆ ಕಾಣುವ ಪರ್ಜನ್ಯನಂತೆ, ಆ ಭಲ್ಲೂಕಸೇನೆಯ ಮಧ್ಯದಲ್ಲಿರುವ ಈತನೆ

ಧೂಮ್ರನೆಂಬ ಯೂಥಪತಿಯು! ಇವನೇ ಭಲ್ಲೂಕಸೈನ್ಯಕ್ಕೆ ಮುಖ್ಯಾಧಿಪ ತಿಯು!ನರ್ಮದಾನದಿಯ ನೀರನ್ನು ಕುಡಿದು ಕೊಬ್ಬಿ, ಋಕ್ಷವಂತವೆಂಬ ಪ ರ್ವತದಲ್ಲಿ ವಾಸಮಾಡುತ್ತಿರುವನು. ಇದೋ ಇತ್ತಲಾಗಿ ಪರ್ವತದಂತೆ ಮಹಾ ಕಾಯವುಳ್ಳ ಈತನನ್ನು ನೋಡು! ಇವನು ಆ ಧೂಮ್ರನ ತಮ್ಮನು. ರೂ ಪದಲ್ಲಿ ಅಣ್ಣನಿಗೆ ಸಮಾನನಾಗಿ, ಪರಾಕ್ರಮದಲ್ಲಿ ಅವನಿಗಿಂತಲೂ ಮೇಲೆ ನಿಸಿಕೊಂಡಿರುವನು. ಇವನೇ ಜಾಂಬವಂತನೆಂಬವನು. ಅಲ್ಲಿ ಕಾಣುವ ದೊಡ್ಡ ಸೈನ್ಯದಲ್ಲಿ ಪ್ರಧಾನರಾದ ಯಾವಯಾವ ಯೂಥಪತಿಗಳುಂಟೋ, ಅವರೆಲ್ಲರಿಗೂ ಈತನು ಪ್ರಧಾನನು! ಮಹಾಪರಾಕ್ರಮಿಯು! ಪ್ರಭುವಿನ ಮನಸ್ಸನ್ನು ಅನುವರ್ತಿಸಿ ನಡೆಯತಕ್ಕವನು! ಯುದ್ಧದಲ್ಲಿ ಶತ್ರುಗಳ ಪರಾ ಕ್ರಮವನ್ನು ಸ್ವಲ್ಪಮಾತ್ರವೂ ಸಹಿಸಲಾರನು! ಮಹಾಧೀಮಂತನಾದ ಈ ಜಾಂಬವಂತನು, ಮೊದಲು ದೇವಾಸುರಯುದ್ಧದಲ್ಲಿ, ಇಂದ್ರನಿಗೆ ದೊ ಡ್ಡ ಸಹಾಯವನ್ನು ಮಾಡಿ, ಅವನಿಂದ ಎಷ್ಟೋವರಗಳನ್ನು ಪಡೆದು ಬಂದಿ ರುವನು. ಈ ಜಾಂಬವಂತನಲ್ಲಿರುವ ಸೈನ್ಯಗಳನ್ನು ಇಷ್ಟೆಷ್ಟೆಂದು ನಿರ್ಣಯಿ ಸುವುದಕ್ಕೂ ಸಾಧ್ಯವಲ್ಲ! ಇವನ ಕಡೆಯ ಸೈನಿಕರೆಲ್ಲರೂ ಪರ್ವತದಂತೆ ದೊಡ್ಡ ಆಕಾರವುಳ್ಳವರು! ದೊಡ್ಡ ರೋಮಗಳುಳ್ಳವರು! ಅಗ್ನಿಯಂತೆ ತೇ ಜಸ್ಸುಳ್ಳವರು! ಮೃತ್ಯು ದೇವತೆಗಾದರೂ ಹೆದರುವವರಲ್ಲ! ರಾಕ್ಷಸರಿಗೂ, ಪಿಶಾಚರಿಗೂ, ಸಮಾನರಾಗಿರುವರು. ಇವರು ಆಗಾಗ ಪರ್ವತಶಿಖರಗಳ ನ್ನೇರಿ,ಅಲ್ಲಿ ಮಹಾಮೇಘಗಳಂತಿರುವ ವಿಸ್ತಾರವಾದ ಕಲ್ಲುಗಳನ್ನು ಕಿತ್ತು,ಅ ದನ್ನೇ ಆಯುಧಗಳಂತೆ ಪ್ರಯೋಗಿಸುವರು! ಎಲೆ ರಾಜನೆ! ಅದೋ ಅತ್ತ ಲಾಗಿ ಮಹೋತ್ಸಾಹದಿಂದ ಹಾರಿಹಾರಿ ನೆಗೆಯುವಂತೆ ಕಾಣುವ ಆ ವಾನ ರವೀರನನ್ನು ನೋಡಿದೆಯಾ ? ಇತರವಾನರರೆಲ್ಲರೂ ಅವನನ್ನು ಆಶ್ಚರ್ಯ ದಿಂದ ನೋಡುತ್ತ ನಿಂತಿರುವುದನ್ನೂ ನೋಡು! ಇವನೇ ದಂಭನೆಂಬ ಯೂ ಥಪತಿಯು! ಇವನು ಬಹಳ ಬಲಾಢ್ಯನಾದುದರಿಂದ, ಆಗಾಗ ದೇವಾಸುರ ಯುದ್ಧದಲ್ಲಿ ತನ್ನ ಬಲವನ್ನು ತೋರಿಸಿ, ಇಂದ್ರನನ್ನು ಸಂತೋಷಪಡಿಸಿ ಬ ರುತ್ತಿರುವನು. ಇದೋ!ಇವನು ಸನ್ನಾದನೆಂಬ ಯೂಥಪತಿಯು. ವಾನರರೆ ಲ್ಲರಿಗೂ ಪಿತಾಮಹನು. ಈತನು ನಡೆಯುವಾಗ ತನ್ನ ಒಂದೊಂದು ಹೆಜ್ಜೆ

ಗೂ ಒಂದೊಂದುಯೋಜನದುದ್ದವುಳ್ಳ ಪರ್ವತವನ್ನೇ ದಾಟಿ ಹೋಗಬಲ್ಲ ನು. ಇವನು ಮೇಲಕ್ಕೆದ್ದುನಿಂತರೆ, ಒಂದು ಯೋಜನದುದ್ದವುಳ್ಳ ಪರ್ವ ತವೂಕೂಡ ಇವನ ದೇಹಕ್ಕಿಂತಲೂ ತಗ್ಗಾಗಿ ಕಾಣುವುದು. ಚತುಷ್ಪಾತ್ತು ಗಳಲ್ಲಿ ಇವನಿಗಿಂತಲೂ ದೊಡ್ಡ ರೂಪವುಳ್ಳ ಪ್ರಾಣಿಯು ಒಂದಾದರೂ ಇಲ್ಲ. ಮೊದಲು ದೇವದಾನವರ ಯುದ್ಧದಲ್ಲಿ, ಈತನೂ ಸೇರಿ ಯುದ್ಧಮಾ ಡಿ ಪರಾಜಯವನ್ನು ಹೊಂದದೆ ಬಂದಿರುವನು. ವೀರ್ಯದಲ್ಲಿ ಇಂದ್ರನಿಗೆ ಸ ಮಾನನಾಗಿರುವನು. ಇವನು ಒಬ್ಬ ಗಂಧರ್ವಕನ್ಯೆಯಲ್ಲಿ ಅಗ್ನಿದೇವನಿಗೆ ಹು ಟ್ಟಿದವನು.ದೇವಾಸುರ.ಯುದ್ಧದಲ್ಲಿ ದೇವತೆಗಳ ಸಹಾಯಕ್ಕಾಗಿಯೇ ಅಗ್ನಿ ಯು ಇವನನ್ನು ಹುಟ್ಟಿಸಿದನು. ಎಲೆ ರಾಕ್ಷಸೇಂದ್ರನೇ! ಅದೋ! ಅತ್ತಲಾ ಗಿ ಕ್ರಥನನೆಂಬ ಬೇರೊಬ್ಬ ಯೂಥಪತಿಯಿರುವನು ನೋಡು! ಕುಬೇರನಿಂ ದ ಪಾಲಿತವಾಗಿಯೂ, ಪ್ರಸಿದ್ಧವಾದ ಜಂಬೂವೃಕ್ಷದಿಂದ ಕೂಡಿದು ದಾಗಿಯೂ, ಅನೇಕಕಿನ್ನರರಿಂದ ಸೇವಿಸಲ್ಪಟ್ಟ ಪರ್ವತಗಳಿಗೆಲ್ಲಕ್ಕೂ ರಾ ಜನಾಗಿಯೂ, ನಿನ್ನಣ್ಣನಾದ ಕುಬೇರನಿಗೆ ಯಾವಾಗಲೂ ಸುಖಾಶ್ರಯ ವಾಗಿಯೂ ಇರುವ ಹಿಮವತ್ಪರ್ವತವೇ ಇವನ ವಾಸಸ್ಥಳವು . ಶ್ರೀಮಂತ ನಾಗಿಯೂ, ಬಲಾಢ್ಯನಾಗಿಯೂ ಇರುವ ಈ ವಾನರೋತ್ತಮನು, ಯು ದ್ಧದಲ್ಲಿ ಯಾವಾಗಲೂ ಆತ್ಮಸ್ತುತಿಯನ್ನು ಮಾಡಿಕೊಳ್ಳುವವನಲ್ಲ. ಅ ದೋ! ಅವನು ಸಹಸ್ರಕೋಟಿವಾನರರೊಡನೆ ನಿನ್ನ ಮೇಲೆ ದಂಡೆತ್ತಿ ಬರುತ್ತಿರುವನು ನೋಡು! ಇವನು ತಾನೊಬ್ಬನೇ ನಮ್ಮ ಲಂಕೆಯೆಲ್ಲವನ್ನೂ ಧ್ವಂಸಮಾಡಬೇಕೆಂಬ ಆತುರದಿಂದಿರುವನು. ಇದೋ! ಇತ್ತಲಾಗಿ ಬೇರೊ ಬ್ಬ ಯೂಥಪತಿಯಿರುವನು ನೋಡು. ಇವನಿಗೆ ಪ್ರಮಾಥಿಯೆಂದು ಹೆಸರು.[1] ಇವನು ಪೂರ್ವದಲ್ಲಿ ಗಜಾಕಾರದಿಂದ ಮಹರ್ಷಿಗಳನ್ನು ಬಾಧಿಸುತಿದ್ದ ಶಂ

1 ಪೂರ್ವದಲ್ಲಿ ಶಂಬಸಾದನನೆಂಬ ರಾಕ್ಷಸನೊಬ್ಬನು, ಗಜಾಕಾರದಿಂದ ಮುನಿಗ ಳನ್ನು ಬಹಳವಾಗಿ ಬಾಧಿಸುತ್ತಿರಲು,ಆ ಮಹರ್ಷಿಗಳು ಹನುಮಂತನ ತಂದೆಯಾದ ಕೇ ಸರಿಯೆಂಬ ವಾನರನನ್ನು ಪ್ರೇರಿಸಿ, ಅವನ ಕೈಯಿಂದ ಆ ರಾಕ್ಷಸನನ್ನು ಕೊಲ್ಲಿಸಿದರು. ಇದಕ್ಕಾಗಿ ಋಷಿಗಳು ಸಂತೋಷಿಸಿ,ಅವನಿಗೆ ಮಹಾಪರಾಕ್ರಮಶಾಲಿಯಾದ ಹನುಮಂ ತನು ಪುತ್ರನಾಗಿ ಹುಟ್ಟುವಂತೆ ವರವನ್ನುಕೊಟ್ಟರು. ಅದುಮೊದಲು ಆನೆಗಳಿಗೂ ಕಪಿಗಳಿಗೂ ವೈರವು ಹುಟ್ಟಿತೆಂದು ಪೂರ್ವಕಥೆಯು.

ಬಸಾಧನನೆಂಬ ರಾಕ್ಷಸನವೇಷದಿಂದ ಆನೆಗಳಿಗೂ, ಕಪಿಗಳಿಗೂ ಹುಟ್ಟಿದ ದೊಡ್ಡವೈರವನ್ನು ಈಗಲೂ ಮನಸ್ಸಿನಲ್ಲಿಟ್ಟುಕೊಂಡು, ಗಂಗಾಸಮೀಪ ದಲ್ಲಿರುವ ಆನೆಗಳ ಹಿಂಡನ್ನು ಸುತ್ತಲೂ ಹೆದರಿಸಿ ಓಡಿಸುತ್ತ, ಅಲ್ಲಲ್ಲಿ ಸುತ್ತು ತ್ತಿರುವನು. ಈತನು ರಣರಂಗದಲ್ಲಿ ಶ್ರಮಪಟ್ಟುಯುದ್ಧಮಾಡಬೇಕಾದ ಅವ ಶ್ಯವೇ ಇಲ್ಲ. ತನ್ನ ಸಂಚಾರದಿಂದಲೇ ಶತ್ರುಗಳನ್ನು ನಾಶಮಾಡಬಲ್ಲನು! ಇ ವನು ಅಲ್ಲಲ್ಲಿ ಪರ್ವತಗುಹೆಗಳಲ್ಲಿಯೇ ವಾಸಮಾಡುತ್ತಿದ್ದು, ಅಲ್ಲಲ್ಲಿ ಕೈಗೆ ಸಿಕ್ಕಿ ದ ಗಿಡಗಳಿಂದ ಆನೆಗಳನ್ನೂ, ಆನೆಗಳಿಂದ ಗಿಡಗಳನ್ನೂ, ಬೆಟ್ಟಗಳಿಂದ ಆನೆಗಳ ನ್ನೂ, ಆನೆಗಳಿಂದ ಬೆಟ್ಟಗಳನ್ನೂ ಬಡಿದು ಧ್ವಂಸಮಾಡುತ್ತಿರುವನು. ಈ ಸೇ ನಾಪತಿಯು ದೇವಲೋಕದಲ್ಲಿ ದೇವೇಂದ್ರನು ಹೇಗೋ ಹಾಗೆ, ಗಂಗಾನ ದಿಯಸಮೀಪದಲ್ಲಿ ಮಂದರಪರ್ವತಕ್ಕೆ ಸಮಾನವಾದ ಉಶೀರಬೀಜವೆಂಬ ಬೆಟ್ಟದ ಮೇಲೆ ಸುಖವಾಗಿ ವಿಹರಿಸುತ್ತಿರುವನು. ಇವನ ಕೈಕೆಳಗೆ ಹತ್ತು ಕೋಟಿವಾನರರಿರುರು. ಅವರಲ್ಲಿ ಒಬ್ಬೊಬ್ಬರೂ ಮಹಾಪರಾಕ್ರಮಿಗಳು! ಒ ಬ್ಬೊಬ್ಬರೂ ಯುದ್ಧದಲ್ಲಿ ಮಹೋತ್ಸಾಹವುಳ್ಳವರು! ಒಬ್ಬೊಬ್ಬರೂ ಮದ ದಿಂದ ಕೊಬ್ಬಿ ಸಿಂಹನಾದಮಾಡುವವರು! ಒಬ್ಬೊಬ್ಬರೂ ಬಲಾಢ್ಯರು! ಒಬ್ಬೊಬ್ಬರೂ ಧೀರರು! ಇಂತಹ ಹತ್ತುಕೋಟಿವಾನರರಿಗೆ ಈತನು ನಾ ಯಕನಾಗಿರುವನು. ಎಲೆ ರಾಜನೆ! ಬಿರುಗಾಳಿಯ ಬಡಿತದಿಂದುಬ್ಬಿಬರುವ ಮಹಾಮೇಘದಂತೆ, ಅದ್ಭುತಾಕಾರದಿಂದ ಕಾಣುವ ಈ ಪ್ರಮಾಥಿಯೆಂಬ ಯೂಥಪತಿಯನ್ನಿದಿರಿಸುವುದು, ಲೋಕದಲ್ಲಿ ಬೇರೆ ಯಾರಿಗೂ ಸಾಧ್ಯ ವಲ್ಲ! ಎಲೆ ರಾಜನೆ! ಅದೋ ಅತ್ತಲಾಗಿ ವಾಯುವೇಗದಿಂದ ಸುತ್ತಿಸುತ್ತಿ ನಾನಾಕಡೆಗಳಿಗೂ ವ್ಯಾಪಿಸಿದ ಕೆಂಪಾದ ದೊಡ್ಡಧೂಳಿಯೊಡನೆ, ಮಹಾ ಸೈನ್ಯವೊಂದು ಬಹಳ ಸಂಭ್ರಮದಿಂದ ನಿಂತಿರುವುದಲ್ಲವೆ? ಅದೇ ಪ್ರಮಾಥಿ ಯ ಸೈನ್ಯವು! ಅದೋ ಅಲ್ಲಿ ಕರಿಯಮುಖವುಳ್ಳವುಗಳಾಗಿಯೂ ಭಯಂ ಕರಗಳಾಗಿಯೂ, ಮಹಾಬಲವುಳ್ಳವುಗಳಾಗಿಯೂ ಇರುವ ಗೋಲಾಂ ಗೂಲಗಳು, (ಸಿಂಗಳೀಕಗಳು) ಆ ಸೇತುಬಂಧನವನ್ನು ನೋಡಿ ಉತ್ಸಾಹ ದಿಂದುಬ್ಬುತ್ತ, ಲಕ್ಷೋಪಲಕ್ಷವಾಗಿ ಗುಂಪುಗೂಡಿ, ಗವಾಕ್ಷನೆಂಬ ತಮ್ಮ ಯೂಥಪತಿಯನ್ನು ಹಿಂಬಾಲಿಸಿ, ಈ ನಮ್ಮ ಲಂಕೆಯನ್ನು ಸೂರೆಮಾ

ಡಬೇಕೆಂದು ಬರುತ್ತಿರುವುವು ನೋಡು. ಎಲೆ ಮಹಾರಾಜನೆ! ಯಾವ ಪರ್ವತದಲ್ಲಿ, ಯಾವಾಗಲೂ ಪುಷ್ಪಫಲಸಮೃದ್ಧಗಳಾಗಿಯೂ, ಕೇಳಿದವರಿಗೆ ಕೇಳಿದುದನ್ನು ಕೊಡತಕ್ಕುವುಗಳಾಗಿಯೂ, ಭ್ರಮರಗಳಿಗೆ ನಿತ್ಯನಿವಾಸವಾಗಿಯೂ ಇರುವ ವೃಕ್ಷಗಳು ತುಂಬಿರುವುವೋ, ಯಾವುದರ ಸಮೀಪದಲ್ಲಿ ಸೂರ್ಯನು ಅದರಂತೆಯೇ ಬಂಗಾರದ ಬಣ್ಣವನ್ನು ಹೊಂದಿ ಸಂಚರಿಸುವನೋ, ಯಾವುದರ ಕಾಂತಿಯಿಂದ ಅಲ್ಲಿನ ಮೃಗಪಕ್ಷಿಗಳೆಲ್ಲವೂ ಅದೇ ಬಣ್ಣದಿಂದ ಶೋಭಿಸುವುವೋ, ಯಾವುದರ ತಪ್ಪಲಲ್ಲಿಲ ಮಹಾತ್ಮರಾದ ಎಷ್ಟೋಮಂದಿ ಮಹರ್ಷಿಗಳು ಎಡೆಬಿಡದೆ ವಾಸವಾಡುತ್ತಿರುವರೋ, ಎಲ್ಲಿ ಯಾವಾಗಲೂ ಫಲಸಮೃದ್ಧಗಳಾಗಿಯೂ, ರುಚಿರುಚಿಯಾದ ಹಣ್ಣುಗಳನ್ನು ಬಿಡತಕ್ಕುವುಗಳಾಗಿಯೂ ಇರುವ ಗಿಡಗಳೂ ಮೇಲಾದ ಜೇನಿನ ರಸಗಳೂ,ಹೇರಳವಾಗಿರುವುವೋ, ಅಂತಹ ಮನೋಹರವಾದ ಮೇರುಪರ್ವತದಲ್ಲಿ ಈಕೇಸರಿಯೆಂಬ ಯೂಥಪತಿಯು ಕ್ರೀಡಿಸುತ್ತಿರುವನು.ಎಲೆ ರಾಜನೆ! ಅತ್ತಲಾಗಿ ಅರುವತ್ತುಸಾವಿರ ಬೆಟ್ಟಗಳುಂಟು!ಅವೆಲ್ಲವೂ!ಸುವರ್ಣಮಯಗಳಾಗಿ ಅತಿರಮಣೀಯಗಳಾಗಿರುವುವು. ರಾಕ್ಷಸರಲ್ಲಿ ನೀನು ಹೇಗೋಹಾಗೆ ಆ ಪರ್ವತಗಳಿಗೆ ಮೇರುಪರ್ವತವೇ ಮುಖ್ಯವೆನಿಸಿಕೊಂಡಿರುವುವು. ಅಲ್ಲಿ ಹೀಗೆ ಕಪಿಲವರ್ಣವುಳ್ಳವರೂ, ಶ್ವೇತವರ್ಣವುಳ್ಳವರೂ, ಕೆಂಪುಮುಖವುಳ್ಳವರೂ, ಜೇನಿನಂತೆ ಪಿಂಗಳವರ್ಣವುಳ್ಳವರೂ, ವಾಸಮಾಡುತ್ತಿರುವರು. ಅವರೊಬ್ಬೊಬ್ಬರಿಗೂ, ಅತಿತೀಕ್ಷ್ಣಗಳಾದ ಉಗುರುಗಳೂ, ಕೋರೆಹಲ್ಲುಗಳೂ ಇರುವುವು. ಅವುಗಳನ್ನೇ ಅವರು ಆಯುಧಗಳನ್ನಾಗಿ ಉಪಯೋಗಿಸುವರು. ಅವರೆಲ್ಲರೂ ನಾಲ್ಕು ಕೋರೆಗಳುಳ್ಳ ಸಿಂಹಗಳಂತೆಯೂ, ಇದಿರಿಸುವುದಕ್ಕಾಗದ ಹೆಬ್ಬುಲಿಗಳಂತೆಯೂ ಇರುವರು! ಒಬ್ಬೊಬ್ಬರೂ ಅಗ್ನಿಯಂತೆ ಉಗ್ರಸ್ವರೂಪವುಳ್ಳವರು! ವಿಷಸರ್ಪಗಳಂತೆ ಕೋಪಸ್ವಭಾವವುಳ್ಳವರು!ಉದ್ದವಾದ ದೊಡ್ಡಬಾಲವುಳ್ಳವರು! ಒಬ್ಬೊಬ್ಬರೂ ಮದದಾನೆಗಳನ್ನು ಮಗುಚುವ ದೇಹಬಲವುಳ್ಳವರು! ದೊಡ್ಡಬೆಟ್ಟಗಳಂತೆ ಆಕಾರವುಳ್ಳವರು. ಮಹಾಮೇಘದಂತೆ ಧ್ವನಿಯುಳ್ಳವರು!ದುಂಡಗೆ ಪಿಂಗಳವರ್ಣವಾಗಿ ಕೊನೆಯಲ್ಲಿ ಕೆಂಪುವರ್ಣವುಳ್ಳ ಕಣ್ಣುಳ್ಳವರು!ಅವರ ನಡೆಯೂ, ಅವರ

ಧ್ವಸಿಯೂ,ಅತಿಭಯಂಕರವಾಗಿರುವುವು. ಇವರೆಲ್ಲರೂ ನಮ್ಮ ಲಂಕೆಯನ್ನು ನೋಡಿ, ಈಗಲೇ ಇದನ್ನು ಮರ್ದಿಸಿ ಧ್ವಂಸಮಾಡುವಂತೆ ಕಾಣುವರು. ಎಲೆ ರಾಜನೆ! ಅದೋ! ಆ ವಾನರರನಡುವೆ ಅವರೆಲ್ಲರಿಗೂ ಪ್ರಮುಖನಾದ ಸೇನಾಪತಿಯೊಬ್ಬನಿರುವನು ನೋಡು. ಅವನು ಬಹಳ ವೀರ್ಯಶಾಲಿಯು. ಲೋಕದಲ್ಲಿ ಈತನಿಗೆ ಶತಬಲಿಯೆಂದು ಪ್ರಸಿದ್ಧವಾದ ಹೆಸರುಂಟು. ಈತನು ಜಯಾಪೇಕ್ಷೆಯಿಂದ ಯಾವಾಗಲೂ ಸೂರ್ಯನನ್ನು ಉಪಾಸನೆಮಾಡುತ್ತಿರುವನು. ಈತನೂ ತಾನೊಬ್ಬನೇ ಈ ಲಂಕೆಯನ್ನು ಸೂರೆ ಮಾಡಬೇಕೆಂದಿರುವನು. ಎಣೆಯಿಲ್ಲದ ಬಲಪರಾಕ್ರಮಗಳಿಂದ ಕೂಡಿ, ಲೋಕದಲ್ಲಿ ಶೂರನೆನಿಸಿಕೊಂಡ ಈತನು, ಎಷ್ಟುಮಾತ್ರವೂ ತನ್ನ ಪೌರುಷವನ್ನು ಬಿಡತಕ್ಕವನಲ್ಲ. ಈ ಶತಬಲಿಯು ರಾಮನಿಗೆ ಪ್ರಿಯವನ್ನುಂಟು ಮಾಡುವ ವಿಷಯದಲ್ಲಿ ತನ್ನ ಪ್ರಾಣಗಳನ್ನೂ ಲಕ್ಷಿಸುವವನಲ್ಲ! ಎಲೆ ಮಹಾರಾಜನೆ! ಗಜನೆಂದೂ, ಗವಾಕ್ಷನೆಂದೂ, ಗವಯನೆಂದೂ, ನಲನೆಂದೂ, ನೀಲನೆಂದೂ ಪ್ರಸಿದ್ಧರಾದ ಐದುಮಂದಿ ಯೂಥಪತಿಗಳುಂಟು. ಅವರಲ್ಲಿ ಒಬ್ಬೊಬ್ಬನಿಗೂ ಹತ್ತು ಕೋಟಿಸೈನ್ಯಗಳುಂಟು. ಇದಲ್ಲದೆ ವಿಂಧ್ಯಪರ್ವತದಲ್ಲಿ ವಾಸಮಾಡತಕ್ಕ ವಾನರರು ಬೇರೆ ಎಷ್ಟೋಮಂದಿಯಿರುವರು. ಅವರನ್ನು ಲೆಕ್ಕಮಾಡುವುದೇ ಸಾಧ್ಯವಲ್ಲ! ಈ ವಾನರರೆಲ್ಲರೂ ಮಹಾಮಹಿಮೆಯುಳ್ಳವರು! ಎಲ್ಲರೂ ಪರ್ವತಾಕಾರವುಳ್ಳವರು! ಎಲ್ಲರೂ ಕ್ಷಣಮಾತ್ರದಲ್ಲಿ ಈ ಪ್ರಪಂಚದಲ್ಲಿರುವ ಪರ್ವತಗಳೆಲ್ಲವನ್ನೂ ತಮ್ಮ ಬಾಹುಬಲದಿಂದಲೇ ಬಡಿದು ಪುಡಿಪುಡಿಯಾಗಿ ಮಾಡುವುದಕ್ಕೂ ಸಮರ್ಥರು." ಎಂದನು. ಇಲ್ಲಿಗೆ ಇಪ್ಪತ್ತೇಳನೆಯ ಸರ್ಗವು.

---

ಸಾರಣನು ತಿಳಿಸದೆಬಿಟ್ಟ ಬೇರೆಕೆಲವು ವಿಷಯಗಳನ್ನು ಶುಕನು ರಾವಣನಿಗೆ ಹೇಳಿ ತೋರಿಸಿದುದು.

ಹೀಗೆ ಸಾರಣನು ಹೇಳಿದುದೆಲ್ಲವನ್ನೂ ಕೇಳಿ ಶುಕನು, ಅವನು ಪೂರ್ಣವಾಗಿ ಹೇಳದೆ ಬಿಟ್ಟ ಕೆಲವು ವಿಷಯಗಳನ್ನು ತಾನು ರಾವಣನಿಗೆ

ತಿಳಿಸಬೇಕೆಂದು ಮುಂದೆಬಂದು, ಕೈನೀಡಿ ರಾವಣನಿಗೆ ವಾನರಸೈನ್ಯವನ್ನು ತೋರಿಸುತ್ತ "ಎಲೆ ರಾಜನೆ! ಅದೋ! ಅಲ್ಲಿ ಮದಿಸಿದ ಮಹಾಗಜಗಳಂತೆ ಯೂ, ಗಂಗಾತೀರದಲ್ಲಿರುವ ಆಲದ ಮರಗಳಂತೆಯೂ, ಹಿಮವತ್ಪರ್ವತದ ಮೇಲಿನ ಸಾಲೆಯಮರಗಳಂತೆಯೂ, ಮಹಾಕಾಯವುಳ್ಳ ಆ ವಾನರರನ್ನು ನೋಡಿದೆಯಲ್ಲವೆ? ಎಲೆ ಮಹಾರಾಜನೆ! ಅವರೊಡನೆ ಯುದ್ಧಕ್ಕೆ ನಿಲ್ಲುವು ದೇ ಅಸಾಧ್ಯವು. ಅವರೆಲ್ಲರೂ ಬಹಳಬಲಾಢ್ಯರು! ಕಾಮರೂಪಿಗಳು! ದೈತ್ಯ ದಾನವರಿಗೆ ಸಾಟಿಯಾದವರು! ಯುದ್ಧದಲ್ಲಿ ದೇವತೆಗಳಂತೆ ಪರಾಕ್ರಮವು ಳ್ಳವರು! ಅವರಲ್ಲಿ ಕೆಲವರು ಅಲ್ಲಲ್ಲಿ ಒಂಭತ್ತುಸಹಸ್ರಕೋಟಿಗಳಾಗಿ ಯೂ, ಕೆಲವರು ಐದುಸಹಸ್ರಕೋಟಿಗಳಾಗಿಯೂ, ಕೆಲವರು ಏಳುಸಹ ಸ್ರಕೋಟಿಗಳಾಗಿಯೂ, ಕೆಲವರು ಸಾವಿರಶಂಖ ಸಂಖ್ಯೆಯುಳ್ಳವರಾಗಿ ಯೂ, ಕೆಲವರು ನೂರಾರುಬೃಂದಗಳಾಗಿಯೂ, ಅಲ್ಲಲ್ಲಿ ಬೇರೆಬೇರೆ ಸೇನೆ ಗಳಾಗಿ ಕೂಡಿರುವರು. ಇವರೆಲ್ಲರೂ ಸುಗ್ರೀವನಿಗೆ ಸಹಾಯಕರು. ಯಾ ವಾಗಲೂ ಅವನಿಗೆ ಬೆಂಬಲವಾಗಿ ಕಿಷ್ಕಿಂಧೆಯಲ್ಲಿಯೇ ಇರುವರು. ಎಲ್ಲ ರೂ ದೇವಗಂಧರ್ವಾಂಶಗಳಿಂದ ಕಾಮರೂಪಿಗಳಾಗಿಯೇ ಹುಟ್ಟಿರುವರು. ಎಲೆ ದೇವನೆ! ಅದೋ! ಅಲ್ಲಿ ಅಂದವಾದ ರೂಪಯೌವನಗಳುಳ್ಳ ಇಬ್ಬರು ವಾನರರನ್ನು ನೋಡುತ್ತಿರುವೆಯಲ್ಲವೆ? ಅವರಿಬ್ಬರಿಗೂ ಮೈಂದದ್ವಿವಿದರೆಂ ದು ಹೆಸರು. ಯುದ್ಧದಲ್ಲಿ ಅವರಿಗೆ ಸಾಟಿಯಾದವರು ಯಾರೂ ಇಲ್ಲ! ಅವ ರಿಬ್ಬರೂ, ಬ್ರಹ್ಮನ ಅನುಜ್ಞೆಯಿಂದ ಅಮೃತಪಾನಮಾಡಿರುವರು. ಅವರು ತಾವಿಬ್ಬರೇ ಈ ಲಂಕೆಯನ್ನು ಧ್ವಂಸಮಾಡಬೇಕೆಂದಿರುವರು. ಅವರಿಬ್ಬರಿ ಗೂ ಪಕ್ಕದಲ್ಲಿ ಪರ್ವತಾಕಾರವುಳ್ಳ, ಮತ್ತಿಬ್ಬರು ವಾನರರು, ಹತ್ತು ಕೋ ಟಿವಾನರಸೈನ್ಯದಿಂದ ಪರಿವೃತರಾಗಿ ನಮ್ಮ ಲಂಕೆಯನ್ನು ಕಣ್ಣಿಟ್ಟು ನೋ ಡುತ್ತಿರುವರು ನೋಡು. ಅವರಿಬ್ಬರಿಗೂ ಸುಮುಖದುರ್ಮುಖರೆಂದು ಹೆಸರು. ಅವರುಮೃತ್ಯುದೇವನ ಮಕ್ಕಳು.ತಂದೆಯಾದ ಯಮನಂತೆಯೇ ಎ ಣೆಯಿಲ್ಲದ ಪರಾಕ್ರಮವುಳ್ಳವರು. ಎಲೆ ರಾಜನೆ! ಇದೋ ಇತ್ತಲಾಗಿ ಮದ ದಾನೆಯಂತೆ ನಿಂತಿರುವ ಒಬ್ಬ ವಾನರರನ್ನುನೋಡುವೆಯಲ್ಲವೆ?ಇವನಿಗೆಕೋ ಪವುಂಟಾದರೆಮಾತ್ರ ಸಮುದ್ರವನ್ನೇ ಕಲಕಿಬಿಡಬಲ್ಲನು. ಇವನೇ ಮೊ

ದಲು ನಮ್ಮ ಲಂಕೆಗೆ ಬಂದು ಸೀತೆಯನ್ನು ನೋಡಿ, ನಿನ್ನೊಡನೆ ಮಾತಾಡಿ ಹೋದವನು. ಮೊದಲೇ ನೀನು ಈತನನ್ನು ನೋಡಿರುವೆ? ತಿರುಗಿ ಬಂದಿರುವನು ನೋಡು? ಇವನು ಕೇಸರಿಯೆಂಬ ವಾನರನ ಕ್ಷೇತ್ರದಲ್ಲಿ ಹುಟ್ಟಿದವನು. ವಾಯುವಿಗೆ ಹುಟ್ಟಿದವನೆಂದು ಹೇಳಿಕೊಳ್ಳುವರು. ಇವನನ್ನು ಹನುಮಂತನೆನ್ನುವರು. ಇವನೇ ಮೊದಲು ಸಮುದ್ರವನ್ನು ಹಾರಿ ಇಲ್ಲಿಗೆ ಬಂದಿದ್ದವನು. ಇವನು ಕಾಮರೂಪಿಯು! ಮಹಾಬಲಾಢ್ಯನು! ಪರ್ವತಾಕಾರವುಳ್ಳವನು! ವಾಯುವಿನಂತೆ ತಡೆಯಿಲ್ಲದ ಗಮನವೇಗವುಳ್ಳವನು. ಬಹಳ ಸಮರ್ಥನು! ಮೊದಲು ಈತನು ಹುಟ್ಟಿದಾಗಲೇ ಹಸಿವಿನ ಆತುರದಿಂದ, ಆಗಲೇ ಉದಿಸಿಬಂದ ಸೂರ್ಯಬಿಂಬವನ್ನು ನೋಡಿ, ತನ್ನ ಬಲದ ಕೊಬ್ಬಿನಿಂದ "ನನಗೆ ಎಷ್ಟಾದರೂ ಹಸಿವು ತೀರದು. ಈ ಸೂರ್ಯನನ್ನು ಹಿಡಿದು ಭಕ್ಷಿಸುವೆನು" ಎಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಆ ಸೂರ್ಯಬಿಂಬವನ್ನೇ ಕಿತ್ತು ತಿನ್ನಬೇಕೆಂದೆಣಿಸಿ ಮೂರು ಸಹಸ್ರಯೋಜನಗಳ ದೂರದವರೆಗೆ ತಾನಿದ್ದ ಮೇರುಪರ್ವತದಿಂದ [1]ಕೆಳಕ್ಕೆ ಧುಮಿಕಿ, ದೇವಋಷಿದಾನವಾದಿಗಳಿಗೂ ಸಮೀಪಿಸಲಸಾಧ್ಯನಾದ ಸೂರ್ಯನಿಗಿದಿರಾಗಿ ಹೋದನು. ಆದರೆ ಆಸೂರ್ಯಬಿಂಬದ ಬಳಿಗೆ ಹೋಗುವುದಕ್ಕೆ ಅವನಿಗೂ ಸಾಧ್ಯವಿಲ್ಲದೆ ಹೋಯಿತು. ಅಲ್ಲಿಂದ ಹಾಗೆಯೇ ಉದಯಪರ್ವತದಮೇಲೆ ಬಿದ್ದನು. ಇವನು ವೇಗದಿಂದ

---

1 ಇಲ್ಲಿ "ಸೂರ್ಯಬಿಂಬವು ಎಲ್ಲಕ್ಕಿಂತಲೂ ಮೇಲಿರುವಾಗ, ಹನುಮಂತನು ಮೂರು ಸಹಸ್ರಯೋಜನಗಳ ದೂರಕ್ಕೆ ಕೆಳಕ್ಕೆ ಧುಮಿಕಿದನೆಂದು ಹೇಳಿದುದು ಹೇಗೆ?" ಎಂಬ ಶಂಕೆಯುಂಟಾಗಬಹುದು ಕೇಸರಿಯೆಂಬ ಹನುಮಂತನ ತಂದೆಯು ಮೇರುಪರ್ವತಶಿಖರದಲ್ಲಿ ವಾಸಮಾಡುವವನು. ಸೂರ್ಯನು ಆ ಪರ್ವತದ ಮಧ್ಯಭಾಗದಲ್ಲಿರುವನು. ಈ ಸೂರ್ಯರಥಮಾರ್ಗಕ್ಕಿಂತಲೂ ಶಿಖರವು ಮೂರುಸಹಸ್ರಯೋಜನಗಳ ಎತ್ತರದಲ್ಲಿದ್ದುದರಿಂದ, ಅಲ್ಲಿಂದ ಇಳಿದುಬಂದುದಾಗಿಯೇ ಹೇಳಬೇಕು ಅಥವಾ ಇಲ್ಲಿ ಮೂಲದಲ್ಲಿರುವ "ತ್ರಿಯೋಜನಸಹಸ್ರಂತು ಅಧ್ವಾನಮವತೀರ್ಯವಾ" ಎಂಬ ವಾಕ್ಯದಲ್ಲಿ, ತ್ರಿಯೋಜನಸಹಸ್ರವೆಂಬುದನ್ನು ಅನೇಕಯೋಜನಗಳಿಗೆ ಉಪಲಕ್ಷಣವಾಗಿಟ್ಟುಕೊಂಡು, ಬಹುದೂರಕ್ಕೆ ಹಾರಿಹೋದನೆಂದೂ ಹೇಳಬಹುದು. ಸೂರ್ಯನಿಗೂ ಭೂಮಿಗೂ ಒಂದುಲಕ್ಷಯೋಜನದೂರವಿರುವುದಾಗಿ ನಿರ್ಣಯಿಸಲ್ಪಟ್ಟಿರುವುದರಿಂದ ಹಾಗೆ ಗ್ರಹಿಸಬೇಕಾಗುವುದು.

ಕೆಳಕ್ಕೆ ಬಿದ್ದಾಗ,ಆಪರ್ವತದಮೇಲಿನ ಒಂದು ಶಿಲೆಗೆ ಇವನ ದವಡೆಯು ತಾಟ ಸಿತು. ಆ ಪೆಟ್ಟಿನಿಂದ ಸ್ವಲ್ಪವಾಗಿ ಗಾಯತಗುಲಿ ಆದವಡೆಯು ಉಬ್ಬಿಕೊಂ ಡಿತು.ಆದರಿಂದಲೇ ಈತನಿಗೆ ಹನುಮಂತನೆಂದೂ ಹೆಸರಾಯಿತು. ವಿಶ್ವಾಸಾ ರ್ಹನಾದ ಒಬ್ಬ ಆಪ್ತನಿಂದ ನನಗೆ ಈ ಹನುಮಂತನ ಸಂಗತಿಯು ತಿಳಿಯಿತು. ಇವನು ಕಾಮರೂಪಿಯಾದುದರಿಂದ,ಇವನ ಬಲವನ್ನಾಗಲಿ, ರೂಪವನ್ನಾ ಗಲಿ, ಮಹಿಮೆಯನ್ನಾಗಲಿ,ಹೀಗೆಂದು ನಿರ್ಣಯಿಸಿ ಹೇಳುವುದಕ್ಕೇ ಸಾಧ್ಯ ವಲ್ಲ. ಇವನು ತಾನೊಬ್ಬನೇ ಈ ಲಂಕೆಯೆಲ್ಲವನ್ನೂ ಧ್ವಂಸಮಾಡಿ ಹೋಗ ಬೇಕೆಂದು ಕಾದಿರುವನು. ಎಲೆ ಮಹಾರಾಜನೆ! ಇವರೆಲ್ಲರೂ ಹಾಗಿರಲಿ! ಅ ದೋ ಆ ಹನುಮಂತನ ದೇಹದೊಡನೆ ಒಂದಾಗಿ ಸೇರಿಕೊಂಡಂತೆ,ಅವನ ಹೆ ಗಲನ್ನೇರಿ ಕುಳಿತಿರುವ ಮಹಾಪುರುಷನನ್ನು ನೋಡಿದೆಯಾ?ಆ ಹನುಮಂತನ ಭುಜವನ್ನೇರಿರುವುದರಿಂದಲೇ ಅವನು ಎಂತಹ ಶೂರನೆಂಬುದುವ್ಯಕ್ತವಾಗು ವುದು. ಅವನ ಶ್ಯಾಮವರ್ಣವಾದ ದೇಹಕಾಂತಿಯನ್ನೂ,ಅರಳಿದ ಕಮಲಗ ಳಂತಿರುವ ಆತನ ಕಣ್ಣುಗಳನ್ನೂ ನೋಡು! ಮೇರುಪರ್ವತದ ಸುವರ್ಣ ಶಿಖರವನ್ನೇರಿ ಕುಳಿತ ಕಾಲಮೇಘದಂತೆ ಕಾಣುವನು ನೋಡು! ಆತನೇ ಇಕ್ಷ್ವಾಕುವಂಶದವರಲ್ಲಿ ಅತಿರಥನೆನಿಸಿಕೊಂಡವನು. ಅವನೇ ಖರವಧಾ ದಿಗಳಿಂದ ಲೋಕಪ್ರಸಿದ್ಧವಾದ ಪೌರುಷವುಳ್ಳವನು. [1]ಧರ್ಮವೆಂಬುದು ಈತನಲ್ಲಿ ಲವಮಾತ್ರವೂ ಚಲಿಸತಕ್ಕುದಲ್ಲ. ಲೇಶಮಾತ್ರವೂ ಧರ್ಮವನ್ನು ಮೀರಿ ಹೋಗುವವನಲ್ಲ. ಬ್ರಹ್ಮಾಸ್ತ್ರವನ್ನು ಚೆನ್ನಾಗಿ ಬಲ್ಲವನು. ಸಮಸ್ತ ವೇದಗಳನ್ನೂ ತಿಳಿದವನು. ವೇದವಿತ್ತುಗಳಾದ ವಸಿಷ್ಠಾದಿಗಳಿಗೂ ಮೇಲೆ ನಿಸಿದವನು. ಇವನ ಪೌರುಷವನ್ನು ಸಾಮಾನ್ಯವೆಂದು ತಿಳಿಯಬೇಡ! ಇವ ನು ತನ್ನ ಬಾಣಗಳಿಂದ ಆಕಾಶದಲ್ಲಿ ಸಂಚರಿಸುವ ವಿಮಾನಾದಿಗಳನ್ನೂ

---

1 "ಖರಯುದ್ಧದಲ್ಲಿ ಹಿಂದಕ್ಕೆ ಸರಿದುದು; ಕಣ್ಮರೆಯಾಗಿದ್ದು ವಾಲಿಯನ್ನು ಕೊಂದುದು; ಇವೆಲ್ಲವೂ ರಾಮನಲ್ಲಿ ಧರ್ಮಾತಿಕ್ರಮವಲ್ಲವೆ. ಹೀಗಿರುವಾಗ ರಾಮನನ್ನು ಧರ್ಮವನ್ನು ಮೀರುವವನಲ್ಲವೆಂದು ಹೇಗೆ ಹೇಳಬಹುದು?" ಎಂಬ ಶಂಕೆಯುಂಟಾಗಬ ಹುದು. ಇವೊಂದೂ ಧರ್ಮವಿರುದ್ಧವಲ್ಲವೆಂಬುದಕ್ಕೆ ಆಯಾ ಸಂದರ್ಭಗಳಲ್ಲಿಯೇ ತಕ್ಕ ಕಾರಣಗಳನ್ನು ನಿರೂಪಿಸಿ ವ್ಯಾಖ್ಯಾನವನ್ನು ಕಾಣಿಸಿರುವೆವು.

ಭೇದಿಸಬಲ್ಲನು! ಪರ್ವತಗಳನ್ನೂ ಪುಡಿಮಾಡುವನು! ಮೃತ್ಯುವಿನಂತೆ ಕೋಪವುಳ್ಳವನು! ಇಂದ್ರನಂತೆ ಪರಾಕ್ರಮವುಳ್ಳವನು! ನೀನು ಜನಸ್ಥಾನದಿಂದ ಕದ್ದುತಂದಿರುವ ಸೀತೆಯೆಂಬವಳು ಇವನ ಹೆಂಡತಿಯೇ! ಎಲೆ ರಾಜನೆ! ಇವನೇ ರಾಮನು! ನಿನ್ನಮೇಲೆ ಯುದ್ಧಕ್ಕಾಗಿ ದಂಡೆತ್ತಿ ಬರುತ್ತಿರುವನು! ಅದೋ! ಅವನ ಬಲಪಾರ್ಶ್ವದಲ್ಲಿ, ಅಚ್ಚಬಂಗಾರದಂತೆ ಮೈಬಣ್ಣವುಳ್ಳವನಾಗಿಯೂ, ವಿಸ್ತಾರವಾದ ಎದೆಯುಳ್ಳವನಾಗಿಯೂ, ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿಯೂ, ಸುರುಳಿಗಟ್ಟಿದ ಕಪ್ಪಾದ ತಲೆಕೂದಲುಳ್ಳವನಾಗಿಯೂ ಇರುವ ಆ ರಾಜಕುಮಾರನನ್ನು ನೋಡಿದೆಯಾ? ಅವನೇ ಆ ರಾಮನಿಗೆ ತಮ್ಮನಾದ ಲಕ್ಷ್ಮಣನೆಂಬವನು. ರಾಮನಿಗೆ ಇವನು ಪ್ರಾಣದಂತೆ ಪ್ರಿಯನಾದವನು. ಇವನು ರಾಜನೀತಿಯಲ್ಲಿಯೂ,ಯುದ್ಧದಲ್ಲಿಯೂ ಬಹಳ ನಿಪುಣನು. ಸಮಸ್ತ ಶಾಸ್ತ್ರಗಳನ್ನೂ ಬಲ್ಲವನು. ಶತ್ರುಗಳ ವೀರ್ಯವನ್ನು ಸಹಿಸತಕ್ಕವನಲ್ಲ! ಲೋಕದಲ್ಲಿ ಇವನನ್ನು ಜಯಿಸುವುದು ಬೇರೊಬ್ಬರಿಗೆ ಸಾಧ್ಯವೇ ಅಲ್ಲ. ಬಹಳಜಯಶೀಲನು.ಪರಾಕ್ರಮಶಾಲಿಯು! ಬಲದಲ್ಲಿಯೂ, ಬುದ್ಧಿಯಲ್ಲಿಯೂ ಮೇಲೆನಿಸಿಕೊಂಡವನು. ರಾಮನಿಗೆ ಬಲದ ಭುಜದಂತೆಯೂ,ಹೊರಗಿನ ಪ್ರಾಣದಂತೆಯೂ ಇರುವನು. ಈತನು ರಾಮನ ಕೆಲಸಕ್ಕಾಗಿ ಪ್ರಾಣವನ್ನಾದರೂ ಕೊಡುವನು. ರಾಮನಿಗೆ ಸ್ವಲ್ಪವೂ ಶ್ರಮವಿಲ್ಲದಂತೆ ತಾನೊಬ್ಬನೇ ನಿಂತು ಇಲ್ಲಿನ ಸಮಸ್ತರಾಕ್ಷಸರನ್ನೂ ಕೊಲ್ಲಬೇಕೆಂದು ಆತುರಪಡುತ್ತಿರುವನು. ಅದೋ! ಅಲ್ಲಿ ರಾಮನ ಎಡಭಾಗದಲ್ಲಿ ನಿಂತಿರುವವನನ್ನು ನೋಡಿದೆಯಾ? ಅವನೇ ಮುಂದೆ ಈ ನಮ್ಮ ಲಂಕಾರಾಜ್ಯಕ್ಕೆ [1] ರಾಜನಾಗಬೇಕಾದ ನಮ್ಮ ವಿಭೀಷಣನು! ಅವನನ್ನು ಸುತ್ತಿ ನಿಂತಿರುವ ನಾಲ್ಕುಮಂದಿರಾಕ್ಷಸರನ್ನು ನೋಡು. ಎಲೆ ಮಹಾರಾಜನೆ! ಆಗಲೇ ರಾಮನು, ತಾನು ಅವಾಪ್ತಸಮಸ್ತಕಾಮನಾದುದರಿಂದ ಲಂಕಾರಾಜ್ಯವನ್ನಪೇಕ್ಷಿಸದ ಮಹಾಶ್ರೀಮಂತನಾದರೂ, ವಿಭೀಷಣಸುಗ್ರೀವಾದಿ

---

1 ಇಲ್ಲಿ "ರಾಜಾಪ್ಯೇಷ ವಿಭೀಷಣ:" ಎಂದು ಮೂಲವು. ಇಲ್ಲಿ "ಹ" ಎಂಬ ವರ್ಣವು. ಗಾಯತ್ರಿಯ ಹದಿನಾರನೆಯ ಅಕ್ಷರವಾದುದರಿಂದ, ಇಲ್ಲಿ ಹದಿನಾರನೆಯ ಗ್ರಂಥ ಸಹಸ್ರವು ಆರಂಭಿಸುವುದೆಂದು ಗ್ರಾಹ್ಯವು.

ಗಳನ್ನು ತನ್ನ ಕೈಕೆಳಗಿನ ರಾಜರನ್ನಾಗಿರಿಸಿ, ತಾನು ರಾಜರಾಜನೆನಿಸಿಕೊಳ್ಳ ಬೇಕೆಂದು, ಆ ವಿಭೀಷಣನಿಗೆ ಲಂಕಾರಾಜ್ಯದಲ್ಲಿ ಅಭಿಷೇಕವನ್ನೂ ನಡೆ ಸಿಬಿಟ್ಟನು! ನಿನ್ನ ತಮ್ಮನಾದ ಈ ವಿಭೀಷಣನೂ, ರಾಮನ ಸಹಾಯಾರ್ಥ ವಾಗಿ, ನಿನ್ನಮೇಲೆ ಯುದ್ಧೋದ್ಯುಕ್ತನಾಗಿ ಆತುರದಿಂದ ಬರುತ್ತಿರುವನು. ಅದೋ! ಆ ರಾಮನಿಗೂ, ವಿಭೀಷಣನಿಗೂ ನಡುವೆ ಬೆಟ್ಟದಂತೆ ನಿಶ್ಚಲವಾ ಗಿ ನಿಂತಿರುವ ವಾನರನೊಬ್ಬನನ್ನು ನೋಡುವೆಯಲ್ಲವೆ? ಅವನೇ ವಾನರ ರಾಜನಾದ ಸುಗ್ರೀವನು! ಯಾವ ಯುದ್ಧದಲ್ಲಿಯೂ, ಪರಾಜಯವಿಲ್ಲದವ ನು. ಪರ್ವತಗಳಲ್ಲಿ ಹಿಮವಂತವು ಹೇಗೋ ಹಾಗೆ ಸಮಸ್ತವಾನರರಿಗೂ ಮೇಲೆನಿಸಿಕೊಂಡು, ತೇಜಸ್ಸಿನಿಂದಲೂ, ಯಶಸ್ಸಿನಿಂದಲೂ, ಬುದ್ಧಿ ಯಿಂದಲೂ, ಜ್ಞಾನದಿಂದಲೂ ವಂಶೋನ್ನತಿಯಿಂದಲೂ, ಎಲ್ಲರನ್ನೂ ಮೀರಿರುವನು. ಕಾಡುಗಳಿಂದಲೂ, ವೃಕ್ಷಗಳಿಂದಲೂ ದುರ್ಗಮವಾದ ಕಿಷ್ಕಿಂಧೆಯೆಂಬ ಗುಹೆಯೇ ಇವನ ವಾಸಸ್ಥಳವು. ಪ್ರಾಕಾರಾದಿಪರ್ವತ ದುರ್ಗಗಳಿಂದ, ಪ್ರವೇಶಿಸಲಸಾಧ್ಯವಾದ ಆ ಕಿಷ್ಕಿಂಧೆಯಲ್ಲಿ ಈತನು ತ ನ್ನ ಪ್ರಧಾನಯೂಥಪತಿಗಳೊಡಗೂಡಿ, ವಾನರ ರಾಜ್ಯವನ್ನು ನಡೆಸು ತ್ತಿರುವನು. ಇವನ ಎದೆಯಲ್ಲಿ ನೂರುಕಮಲಗಳುಳ್ಳ, ಕಾಂಚನಮಾಲಿಕೆ ಯೊಂದು ಶೋಭಿಸುತ್ತಿರುವುದು ನೋಡು! ಇದು ದೇವಜಾತಿಗೂ, 'ಮನು ಷ್ಯಜಾತಿಗೂ ಕೂಡ ಆಸೆಯನ್ನು ಹುಟ್ಟಿಸುವಷ್ಟು ಮಹಾಮಹಿಮೆಯುಳ್ಳು ದು! ಇದರಲ್ಲಿ ವೀರಲಕ್ಷ್ಮಿಯು ನೆಲೆಗೊಂಡಿರುವುದರಿಂದ, ಈ ಮಾಲಿಕೆ ಯನ್ನು ಧರಿಸಿ ನಿಂತವನಿಗೆ ಎಂದಿಗೂ ಅಪಜಯವಿಲ್ಲ. ರಾಮನು ವಾಲಿಸುಗ್ರೀ ವರಯುದ್ಧದಲ್ಲಿ ವಾಲಿಯನ್ನು ಕೊಂದು, ಅವನಲ್ಲಿದ್ದ ಈ ಕಾಂಚನಮಾಲಿಕೆ ಯನ್ನೂ, ತಾರೆಯನ್ನೂ, ಶಾಶ್ವತವಾದ ವಾನರರಾಜ್ಯವನ್ನೂ ಈ ಸುಗ್ರೀ ವನಿಗೆ ಸೇರಿಸಿಬಿಟ್ಟನು. ಎಲೆ ಮಹಾರಾಜನೆ! ಇನ್ನು ಇಲ್ಲಿ ಕಾಣುವ ವಾನರ ಸೈನ್ಯದ ಒಟ್ಟು ಸಂಖ್ಯೆಯನ್ನು ತಿಳಿಸುವೆನು ಕೇಳು! ನೂರುಸಹಸ್ರಗಳನ್ನು ಒಂದುಲಕ್ಷವೆಂದೂ, ನೂರು ಲಕ್ಷಗಳನ್ನು ಒಂದುಕೋಟಿಯೆಂದೂ ಪಂ ಡಿತರು ನಿರ್ಣಯಿಸಿರುವರಷ್ಟೆ? ನೂರು ಸಹಸ್ರಕೋಟಿಗಳು ಒಂದು ಶಂ ಖವೆನಿಸುವುದು. ನೂರುಸಾವಿರಶಂಖಗಳಿಗೆ ಮಹಾಶಂಖವೆಂದು ವ್ಯವಹಾ

ರವು. ನೂರುಸಾವಿರ ಮಹಾಶಂಖಗಳು ಒಂದು ಬೃಂದವೆನಿಸುವುದು. ನೂರುಸಾವಿರಬೃಂದಗಳಿಗೆ ಮಹಾಬೃಂದವೆಂದು ಹೆಸರು. ನೂರುಸಾವಿರ ಮಹಾಬೃಂದಗಳು ಪದ್ಮವೆನಿಸುವುದು. ಅಂತಹ ನೂರುಸಾವಿರಪದ್ಮಗಳಿಗೆ ಮಹಾಪದ್ಮವೆಂದು ಹೆಸರು. ನೂರುಸಾವಿರ ಮಹಾಪದ್ಮಗಳಿಗೆ ಖರ್ವವೆಂದು ವ್ಯವಹಾರವು. ನೂರುಸಾವಿರಖರ್ವಗಳನ್ನು ಮಹಾಖರ್ವವೆನ್ನುವರು. ಸಾವಿರ ಮಹಾಖರ್ವಗಳು ಸಮುದ್ರವೆನಿಸುವುದು. ನೂರುಸಾವಿರಸಮುದ್ರಗಳು ಓಘವೆನಿಸುವುದು. ನೂರುಸಾವಿರ ಓಘಗಳಿಗೆ ಮಹೌಘವೆಂದು ಹೆಸರು. ಹೀಗೆ ಆಯಾಸೇನಾಪತಿಗಳ ಕೆಳಗೆ ಬೇರೆಬೇರೆಯಾಗಿ ಸಹಸ್ರಕೋಟಿಗಳು, ನೂರುಶಂಖಗಳು, ಸಹಸ್ರ ಮಹಾಶಂಖಗಳು, ನೂರುಬೃಂದಗಳು, ಸಾವಿರಮಹಾಬೃಂದಗಳು, ನೂರುಪದ್ಮಗಳು, ಸಾವಿರಮಹಾಪದ್ಮಗಳು, ನೂರುಖರ್ವಗಳು, ನೂರುಸಮುದ್ರಗಳು, ನೂರು ಮಹೌಘಗಳು, ಕೋಟಿಮಹೌಘಗಳು, ಹೀಗೆ ಸಮುದ್ರದಂತೆ ಅಪಾರವಾದ ದೊಡ್ಡಸೇನೆಯಿರುವುದು. ಇಂತಹ ಸೇನಾಪತಿಗಳೊಡಗೂಡಿ ವಿಭೀಷಣನನ್ನೂ, ಅವನ ಮಂತ್ರಿಗಳನ್ನೂ ಸಂಗಡಕರೆದುಕೊಂಡು,ಸುಗ್ರೀವನು ನಿನ್ನಮೇಲೆ ಯುದ್ಧಕ್ಕಾಗಿ ಬರುತ್ತಿರುವನು. ಎಲೆ ಮಹಾರಾಜನೆ! ಜ್ವಲಿಸುವ ಕ್ರೂರಗ್ರಹದಂತೆ ಕಾಣುತ್ತಿರುವ ಈ ಮಹಾಸೈನ್ಯವನ್ನು ಚೆನ್ನಾಗಿ ನೋಡು?ಇನ್ನು ಮುಂದೆ ನಮಗೆ ಈಶತ್ರುಗಳಿಂದ ಪರಾಜಯವಿಲ್ಲದೆ ಹೇಗೆ ಜಯವುಂಟಾಗಬೇಕೋ ಅದಕ್ಕೆ ತಕ್ಕ ಪ್ರಯತ್ನವನ್ನುಮಾಡು" ಎಂದನು. ಇಲ್ಲಿಗೆ ಇಪ್ಪತ್ತೆಂಟನೆಯ ಸರ್ಗವು.

---

ರಾವಣನು ಶುಕಸಾರಣರನ್ನು ಧಿಕ್ಕರಿಸಿ,ತಿರುಗಿ ರಾಮನ ಬಳಿಗೆ ಶಾರ್ದೂಲಾದಿಚಾರಣರನ್ನು ಕಳುಹಿಸಿದುದು. ಅವರನ್ನೂ ವಿಭೀಷಣನು ಹಿಡಿದು ರಾಮಸಮ್ಮುಖದೆ ನಿಲ್ಲಿಸಿದುದು.

ರಾವಣನು, ಶುಕನು ತೋರಿಸಿದ ವಾನರಯೂಥಪತಿಗಳನ್ನೂ, ರಾಮನನ್ನೂ, ಅವನ ಸಮೀಪದಲ್ಲಿದ್ದ ತನ್ನ ತಮ್ಮನಾದ ವಿಭೀಷಣನನ್ನೂ,ರಾಮನಿಗೆ ಬಲದ ಭುಜದಂತಿದ್ದ ಲಕ್ಷ್ಮಣನನ್ನೂ, ಭಯಂಕರಪರಾಕ್ರಮವು

ಳ್ಳವಾನರರಾಜನಾದ ಸುಗ್ರೀವನನ್ನೂ ಕ್ರಮವಾಗಿ ನೋಡುತ್ತ ಬಂದನು. ಹಾಗೆಯೇ, ಗಜ, ಗವಾಕ್ಷ, ಗವಯ, ಮೈಂದ, ದ್ವಿವಿದರೇ ಮೊದಲಾದ ಯೂಥಪತಿಗಳನ್ನೂ, ವಾಯುಪುತ್ರನಾದ ಅಂಗದನನ್ನೂ, ಮಹಾಪರಾಕ್ರಮಿಯಾದ ಹನುಮಂತನನ್ನೂ, ದುರ್ಜಯನಾದ ಜಾಂಬವಂತನನ್ನೂ, ಸುಷೇಣನನ್ನೂ, ಕುಮುದನನ್ನೂ, ನೀಲನನ್ನೂ, ನಲನನ್ನೂ ನೋಡಿದನು. ಇವರೆಲ್ಲರನ್ನೂ ನೋಡಿದಮೇಲೆ ಅವನ ಮನಸ್ಸಿಗೆ ಸ್ವಲ್ಪವಾಗಿ ಭಯವು ತೋರಿತು. ಹಾಗಿದ್ದರೂ ಆ ಭಯವನ್ನು ಹೊರಕ್ಕೆ ತೋರಿಸದೆ, ಶತ್ರುಸ್ತುತಿಯನ್ನು ಮಾಡುತಿದ್ದ ಆ ಶುಕಸಾರಣರ ಮಾತಿಗೆ ಕೋಪಗೊಂಡು, ಅವರನ್ನು ಪರುಷವಾಕ್ಯಗಳಿಂದ ಬೆದರಿಸಿದನು. ವಿನಯದಿಂದ ನಮ್ರರಾಗಿ ನಿಂತಿದ್ದ ಆ ಶುಕಸಾರಣರಿಬ್ಬರನ್ನೂ ನೋಡಿ, ರಾವಣನು ಕೋಪದಿಂದ ತಡವರಿಸುವ ನುಡಿಗಳಿಂದ "ಎಲೆ ಚಾರರೆ! ಸಾಕು ಸುಮ್ಮನಿರಿ! ನಿಗ್ರಹಾನುಗ್ರಹಗಳಲ್ಲಿ ಸಮರ್ಥನಾದ ರಾಜನಮುಂದೆ, ಅವನ ಆಶ್ರಯದಿಂದ ಬದುಕುತ್ತಿರುವ ಮಂತ್ರಿಗಳು, ಅವನ ಮನಸ್ಸಿಗೆ ಹಿತವಲ್ಲದ ಮಾತನ್ನು ಹೇಳುವುದು ಎಷ್ಟುಮಾತ್ರವೂ ಯುಕ್ತವಲ್ಲ. ಹೀಗಿರುವಾಗ ನಮ್ಮ ಶತ್ರುಗಳು ನಮ್ಮ ಮೇಲೆ ದಂಡೆತ್ತಿ ಬಂದಿರುವಾಗ, ಈ ಯುದ್ಧಾರಂಭಕಾಲದಲ್ಲಿ, ನೀವಿಬ್ಬರೂ ಹೀಗೆ ಆ ನನ್ನ ಶತ್ರುಗಳನ್ನೇ ನನ್ನ ಮುಂದೆ ಸ್ತೋತ್ರಮಾಡುತ್ತಿರುವಿರಲ್ಲಾ! ನಿಮಗೆ ರಾಜನೀತಿಶಾಸ್ತ್ರದಲ್ಲಿ ಸಾರಭೂತವಾದ ಭೃತ್ಯರ ನಡತೆಯೇ ತಿಳಿದಿಲ್ಲವೆಂದು ತೋರುತ್ತಿದೆ. ಜ್ಞಾನವೃದ್ಧರಾಗಿಯೂ, ವಯೋವೃದ್ಧರಾಗಿಯೂ, ಶೀಲಸಂಪನ್ನರಾಗಿಯೂ ಇದ್ದು ನೀತಿಶಾಸ್ತ್ರಗಳನ್ನುಪದೇಶಿಸುವ ಗುರುಗಳಲ್ಲಿ, ಇದುವರೆಗೆ ನೀವು ಸೇವೆಮಾಡಿದುದೆಲ್ಲವೂ ವ್ಯರ್ಥವು. ನೀವು ಎಷ್ಟು ರಾಜನೀತಿಶಾಸ್ತ್ರವನ್ನೋದಿದರೇನು? ಅದರ ಸೂಕ್ಷ್ಮಾರ್ಥಗಳನ್ನು ನೀವು ಚೆನ್ನಾಗಿ ತಿಳಿದಿಲ್ಲ. ಒಂದುವೇಳೆ ಆ ಅರ್ಥವನ್ನು ತಿಳಿದಿದ್ದರೂ ನಿಮ್ಮಲ್ಲಿ ಅದಕ್ಕೆ ತಕ್ಕ ಅನುಷ್ಠಾನವಿಲ್ಲ. ಇದರಿಂದ, ನೀವು ಕೇವಲಜ್ಞಾನಭಾರವನ್ನು ಹೊತ್ತು ತಿರುಗುವಂತಾಯಿತೇ ಹೊರತು, ಆ ಜ್ಞಾನದಿಂದ ಉಪಯೋಗವನ್ನು ಪಡೆದವರಲ್ಲ. ಹೀಗೆ ನಿಮ್ಮಂತಹ ಮೂರ್ಖರಾದ ಮಂತ್ರಿಗಳಿಂದ ಕೂಡಿದ ನಾನು, ಯಾವಾಗಲೋ ಶತ್ರುಗಳಿಂದ ಹತನಾಗಿ ಸಾಯಬೇಕಾಗಿಯೇ ಇತ್ತು! ಹಾಗಿದ್ದರೂ ದೈವಯೋಗದಿಂದ ನಾನು ಇನ್ನೂ

ಚೇತರಿಸಿ ಕೊಂಡಿರುವೆನು. ಎಲೆ ಚಾರರೆ! ನಾನು ಆಜ್ಞೆಯನ್ನು ಮಾಡು ವಾಗ ನನ್ನ ನಾಲಗೆಯೊಂದೇ ಈ ಸಮಸ್ತಲೋಕಕ್ಕೂ ಶುಭಾಶುಭಗಳನ್ನು ಕೈಗೂಡಿಸುವುದು. ಹೀಗಿರುವಾಗಲೂ, ನನ್ನ ಮುಂದೆಯೇ ನೀವು ಹೀಗೆ ಕರ್ಣಕಠೋರಗಳಾದ ಮಾತುಗಳನ್ನು ನುಡಿಯುತ್ತಿರುವಿರಲ್ಲಾ! ಮರಣ ಕ್ಕೂ ನೀವು ಹೆದರುವವರಲ್ಲವೇನು? ಎಲೆ ಮೂಢರೆ! ಹೆಚ್ಚಾಗಿ ಹೇಳಿದುದ ರಿಂದೇನು? ಕಾಡಿನಲ್ಲಿ ದೊಡ್ಡ ಕಾಡುಗಿಚ್ಚು ತಗುಲಿದರೂ, ಅಲ್ಲಿನ ಗಿಡಗಳು ಬದುಕಬಹುದು. ರಾಜನಲ್ಲಿ ತಪ್ಪಿನಡೆದ ನಿಮ್ಮಂತಹ ರಾಜದ್ರೋಹಿಗಳು ಮಾತ್ರ ಎಂದಿಗೂ ಕ್ಷೇಮದಿಂದಿರಲಾರರು! ನೀವು ನಮಗೆ ಮೊದಲು ಮಾ ಡಿದ ಉಪಕಾರಗಳು ಈಗಲೂ ನನ್ನನೆನಪಿಗೆ ಬರುತ್ತಿರುವುದರಿಂದ, ಆ ಕೃತ ಜ್ಞತೆಯೇ ಈಗ ನನಗೆ ನಿಮ್ಮಲ್ಲಿ ಹುಟ್ಟಿರುವ ತೀವ್ರವಾದ ಕೋಪವನ್ನು ತಗ್ಗಿಸುತ್ತಿರುವುದು. ಹಾಗಿಲ್ಲದಿದ್ದರೆ ಶತ್ರುಪಕ್ಷವನ್ನು ಹಿಡಿದು ಕೊಂಡಾಡು ತ್ತಿರುವ ಪಾಪಿಗಳಾದ ನಿಮ್ಮನ್ನು ಈಗ ಇಲ್ಲಿಯೇ ಕೊಂದುಬಿಡುತಿದ್ದೆನು. ಛೀ ನೀಚರೆ! ತೊಲೆದುಹೋಗಿರಿ? ನನ್ನ ಕಣ್ಣೆದುರಿಗೆ ನಿಲ್ಲಬೇಡಿರಿ? ನಿಮ್ಮಿಂದ ನಾನು ಮೊದಲು ಪಡೆದಿರುವ ಉಪಕಾರಗಳನ್ನು ನೆನೆಸಿಕೊಂಡರೆ ನಿಮ್ಮ ನ್ನು ಕೊಲ್ಲುವುದಕ್ಕೆ ನನಗೆ ಮನಸ್ಸು ಬಾರದು. ನೀವು ಕೃತಘ್ನರೆಂದೂ, ನನ್ನಲ್ಲಿ ಸ್ನೇಹವಿಲ್ಲದವರೆಂದೂ, ನನಗೆ ತೋರಿದಾಗಲೇ ನೀವು ಕೆಟ್ಟಿರಿ! ನಿಮ ಗೆ ಬೇರೆವಧವೇ ಬೇಕಾದುದಿಲ್ಲ. ಹೋಗಿರಿ" ಎಂದನು. ಇದನ್ನು ಕೇಳಿದೊಡ ನೆ ಶುಕಸಾರಣರಿಬ್ಬರೂ, ಬಹಳ ನಾಚಿಕೆಗೊಂಡು, ಆಗಲೂ ತಮ್ಮ ಪದ್ಧ ತಿಯನ್ನುಬಿಡದೆ ರಾಜನಮುಂದೆ ಹೇಳಬೇಕಾದ ಜಯಶಬ್ದವನ್ನು ಹೇಳಿ ಹೊರಟು ಹೋದರು. ಆಮೇಲೆ ರಾವಣನು ಸಮೀಪದಲ್ಲಿದ್ದ ಮಹೋದ ರನನ್ನು ಕರೆದು, "ಮಹೋದರಾ! ರಾಜನೀತಿಯಲ್ಲಿ ನಿಪುಣರಾದ ಕೆಲವು ಚಾ ರರನ್ನು ಈಗಲೇ ನನ್ನ ಬಳಿಗೆ ಕರೆತರಿಸು."ಎಂದನು. ರಾಜಾಜ್ಞೆಯಂತೆ ಕೆಲವು ಚಾರರು, ವೇಗದಿಂದ ಬಂದು ರಾವಣನ ಮುಂದೆ ಜಯಶಬ್ದವನ್ನು ಹೇಳಿ ಕೈ ಮುಗಿದು ನಿಂತರು. ಆಗ ರಾವಣನು, ನಂಬಿಕೆಗೆ ಪಾತ್ರರಾಗಿಯೂ, ಶೂರ ರಾಗಿಯೂ, ಧೈರ್ಯಶಾಲಿಗಳಾಗಿಯೂ, ತನ್ನಲ್ಲಿ ನಿಜವಾದ ಭಕ್ತಿಯುಳ್ಳವರಾ ಗಿಯೂ ಇದ್ದ ಆ ಚಾರರನ್ನು ನೋಡಿ "ಎಲೆ ಚಾರರೆ! ನೀವು ಈಗಲೇ ಇ ಲ್ಲಿಂದ ರಾಮನ ಬಳಿಗೆಹೋಗಿ,ಅವನು ಮುಂದೆ ನಡೆಸಬೇಕೆಂದಿರುವ ಪ್ರಯ

ತ್ನವೇನೆಂದು ಪರೀಕ್ಷಿಸಿ ಚೆನ್ನಾಗಿ ತಿಳಿದುಬರಬೇಕು. ಅವನ ಪ್ರಯತ್ನವು ಶಿಥಿಲವಾಗಿದ್ದಪಕ್ಷದಲ್ಲಿ, ನಾವು ಈಗಲೇ ಅವನನ್ನು ಹೆದರಿಸಿಬಿಡಬಹುದು. ಮಂತ್ರಿಗಳಲ್ಲಿ ಆತನಿಗೆ ಅಂತರಂಗಭೂತರಾರೆಂಬುದನ್ನೂ, ಅವನೊಡನೆ ನಿಜವಾದ ಸ್ನೇಹದಿಂದ ಕಲೆತಿರುವ ಸ್ನೇಹಿತರಾರೆಂಬುದನ್ನೂ ತಿಳಿದು, ಅವರನ್ನೂ ಚೆನ್ನಾಗಿ ಪರೀಕ್ಷಿಸಿಬರಬೇಕು. ಅವರಲ್ಲಿ ಪರಸ್ಪರಸ್ನೇಹವಾದರೂ ಶಿಥಿಲವಾಗಿದ್ದಂತೆ ತೋರಿದಪಕ್ಷದಲ್ಲಿ,ನಾವು ಈಗಲೇ ಭೇದೋಪಾಯವನ್ನವಲಂಬಿಸಿ ಅವರಿಗಿರುವ ಸ್ನೇಹದ ಕಟ್ಟನ್ನು ಕದಲಿಸಿಬಿಡಬಹುದು.ಇದಲ್ಲದೆನೀವು ಅಲ್ಲಿಗೆ ಹೋದಮೇಲೆ, ಆ ರಾಮನು ಹೇಗೆ ನಿದ್ರಿಸುವನೋ,ಹೇಗೆ ಎಚ್ಚರಗೊಂಡಿರುವನೋ, ಯಾವ ಯಾವ ಕೆಲಸಗಳನ್ನು ಮಾಡುತ್ತಿರುವನೋ, ಅವೆಲ್ಲವನ್ನೂ ಚೆನ್ನಾಗಿ ತಿಳಿದುಬರಬೇಕು. ಅವನು ಒಂಟಿಯಾಗಿ ನಿದ್ರಿಸುವವನಾಗಿದ್ದರೂ, ಎಚ್ಚರಗೊಂಡಾಗ ಚಿಂತಾಪರನಾಗಿದ್ದರೂ, ಮುಂದಿನ ಪ್ರಯತ್ನಗಳಲ್ಲಿ ಇಷ್ಟಾಗಿ ಆತುರವನ್ನು ತೋರಿಸದವನಾಗಿದ್ದರೂ, ನಾವು ಬೇರೆ ಬೇರೆ ಉಪಾಯಗಳಿಂದ ಅವನನ್ನು ನಿಗ್ರಹಿಸುವುದಕ್ಕೆ ಪ್ರಯತ್ನಿಸಬಹುದು. ನೀವು ಪ್ರಚ್ಛನ್ನರಾಗಿಯೇ ಇದ್ದು, ನಾನು ಹೇಳಿದುದೆಲ್ಲವನ್ನೂ ತಿಳಿದುಬರಬೇಕು. ಬುದ್ಧಿವಂತರಾದ ರಾಜರು ಚಾರರಮೂಲಕವಾಗಿಯೇ ಶತ್ರುವಿನ ರಹಸ್ಯವನ್ನು ಪೂರ್ಣವಾಗಿ ತಿಳಿದು, ಯುದ್ಧದಲ್ಲಿ ಸ್ವಲ್ಪಪ್ರಯತ್ನದಿಂದಲೇ ಅವರನ್ನು ನಿಗ್ರಹಿಸಬಹುದು" ಎಂದನು. ಇದನ್ನು ಕೇಳಿ ಆಚಾರರೆಲ್ಲರೂ ಹಾಗೆಯೇ ಆಗಲೆಂದು ಹೇಳಿ, ಅತ್ಯಂತಸಂತುಷ್ಟರಾಗಿ, ಶಾರ್ದೂಲನನ್ನು ಮುಂದಿಟ್ಟುಕೊಂಡು ಪ್ರಭುವಾದ ರಾವಣನಿಗೆ ಪ್ರದಕ್ಷಿಣನಮಸ್ಕಾರಗಳನ್ನು ಮಾಡಿ,ಆಗಲೇ ರಾಮಲಕ್ಷ್ಮಣರಿದ್ದಕಡೆಗೆ ಹೊರಟರು. ಈಚಾರರೆಲ್ಲರೂ, ತಮ್ಮ ವೇಷವನ್ನು ಮರೆಸಿಕೊಂಡು ಸುವೇಲಪರ್ವತದ ಸಮೀಪಕ್ಕೆ ಬಂದು,ಅಲ್ಲಿ ವಿಭೀಷಣಸುಗ್ರೀವರೊಡನೆ ಸೇರಿದ್ದ ರಾಮಲಕ್ಷ್ಮಣರನ್ನು ಕಂಡರು.ವಾನರಸೇನೆಯನ್ನು ನೋಡಿದಾಗಲೇ ಅವರ ಮನಸ್ಸಿನಲ್ಲಿ ಭಯವು ಹುಟ್ಟಿತು. ಇಷ್ಟರಲ್ಲಿ ಧರ್ಮಾತ್ಮನಾದ ವಿಭೀಷಣನು ಆ ರಾಕ್ಷಸರು ವೇಷಧಾರಿಗಳಾಗಿ ಬಂದಿರುವುದನ್ನು ತಿಳಿದುಕೊಂಡನು. ಈ ಸಂಗತಿಯು ವಿಭೀಷಣನಿಗೆ ತಿಳಿದೊಡನೆಯೇ ಆತನು, ಅವರನ್ನುನೋಡಿ ಹೆದರಿಸಿ, ಅವರಲ್ಲಿ ಪ್ರಮುಖನಾಗಿದ್ದ ಶಾರ್ದೂಲನೆಂಬವನನ್ನು ಮಾತ್ರಹಿಡಿದು, ಅವನು ಬಹಳ

ಪುಷ್ಟನೆಂಬುವಕ್ಕಾಗಿ ಅಲ್ಲಿದ್ದ ವಾನರಯೂಥಪತಿಗಳ ವಶಕ್ಕೊಪ್ಪಿಸಿಬಿಟ್ಟ ನು. ಆಗ ಅಲ್ಲಿದ್ದ ವಾನರರೆಲ್ಲರೂ ಸೇರಿ, ಆ ಶಾರ್ದೂಲನನ್ನು ಸುತ್ತಿ ಮುತ್ತಿ ಸಾಯುವಹಾಗೆ ಕೊಲ್ಲುತ್ತಿರಲು, ಅದನ್ನು ನೋಡಿ ಪರಮದಯಾಳು ವಾದ ರಾಮನು ಮರುಕಗೊಂಡು ಅವನನ್ನು ಬಿಡಿಸಿದನು. ಹಾಗೆಯೇ ವಾನರರು ಅಲ್ಲಲ್ಲಿ ಸಿಕ್ಕಿದ ಇತರಚಾರರನ್ನೂ ಹೊಡೆಯುತ್ತಿರಲು, ರಾಮ ನು ಅವರೆಲ್ಲರನ್ನೂ ಬಿಡಿಸಿಬಿಟ್ಟನು. ಹೀಗೆ ಲಂಕೆಯಿಂದ ಬಂದ ರಾಕ್ಷಸದೂ ತರೆಲ್ಲರೂ,ವಾನರರ ಕೈಗೆ ಸಿಕ್ಕಿ ಸತ್ತುಸುಣ್ಣವಾಗಿ, ಬದುಕಿದರೆ ಸಾಕೆಂದು ನಿಟ್ಟುಸಿರು ಬಿಡುತ್ತ ಹಿಂತಿರುಗಿ ಲಂಕೆಗೆ ಓಡಿಹೋದರು.ಅವರೆಲ್ಲರೂ ಪರದೇ ಶದ ವೃತ್ತಾಂತಗಳನ್ನು ಆಗಾಗ ತಿಳಿದುಬರುವುದರಲ್ಲಿ ಬಹಳ ನಿಪುಣರಾಗಿದ್ದ ರೂ, ಈ ವಾನರಸೇನೆಯಲ್ಲಿ ತಮ್ಮ ನೈಪುಣ್ಯವು ಸಾಗದೆ ಹೋದುದಕ್ಕಾಗಿ ಚಿಂತಾಕ್ರಾಂತರಾಗಿ,ರಾವಣನಬಳಿಗೆ ಹೋಗಿ, ರಾಮನ ಪ್ರಭಾವವನ್ನೂ,ಅತ ನಲ್ಲಿರುವ ಭಯಂಕರವಾನರಸೇನೆಯನ್ನೂ, ಅವರೆಲ್ಲರೂ ಸುವೇಲಪರ್ವತದ ಸಮೀಪದಲ್ಲಿ ಬಂದು ಸೇರಿರುವುದನ್ನೂ ಕ್ರಮವಾಗಿ ತಿಳಿಸಿದರು. ಇಲ್ಲಿಗೆ ಇಪ್ಪತ್ತೊಂಬತ್ತನೆಯ ಸರ್ಗವು.

---

ರಾಮನು ವಾನರವೀರರೊಡನೆ ಸುವೇಲಾದ್ರಿಯ ಸಮೀಪ ದಲ್ಲಿ ಬಂದಿಳಿದಿರುವುದನ್ನು ಶಾರ್ದೂಲಾದಿಗಳು ರಾವಣ ನಿಗೆ ತಿಳಿಸಿದುದು.

ಹೀಗೆ ಶಾರ್ದೂಲನೇ ಮೊದಲಾದ ಚಾರರೆಲ್ಲರೂ, ರಾವಣನಬಳಿಗೆ ಬಂದು, ರಾಮನು ಮಹಾಸೈನ್ಯದೊಡನೆ ಬಂದು ಸುವೇಲಪರ್ವತದಲ್ಲಿ ಆ ಸೇ ನೆಯನ್ನಿಳಿಸಿರುವನೆಂದು ರಾವಣನಿಗೆ ತಿಳಿಸಿದರು. ಇದನ್ನು ಕೇಳಿ, ರಾವಣನ ಮನಸ್ಸಿನಲ್ಲಿ ಮೊದಲಿದ್ದಭಯವು ಇನ್ನೂ ಹೆಚ್ಚಿತು. ಆಗ ಅವನು ಶಾರ್ದೂ ಲನನ್ನು ನೋಡಿ “ಶಾರ್ದೂಲಾ! ಇದೇನು? ನಿನ್ನ ಮುಖದ ಕಾಂತಿಯು ಮೊದಲಿನಂತೆ ಉಲ್ಲಾಸವಿಲ್ಲ! ಬಹಳ ದೀನನಂತೆಯೂ ಕಾಣುವೆಯ ಲ್ಲಾ! ಕಾರಣವೇನು? ಕೋಪಗೊಂಡ ಆ ಶತ್ರುಗಳ ಕೈಗೆ ನೀನು ಸಿಕ್ಕಲಿ ಲ್ಲವಷ್ಟೆ? ಅಲ್ಲಿನ ಸಂಗತಿಗಳೆಲ್ಲವನ್ನೂ ಚೆನ್ನಾಗಿ ತಿಳಿಯುವುದಕ್ಕೆ ತಕ್ಕ ಅ ವಕಾಶವೂ ಸಿಕ್ಕಿತಷ್ಟೆ!” ಎಂದನು. ಹೀಗೆ ರಾವಣನು ತನ್ನನ್ನು ಪ್ರಶ್ನೆಮಾ

ಡುತ್ತಿರಲು, ಶಾರ್ದೂಲನು, ತಾನು ವಾನರಸೇನೆಯಲ್ಲಿ ಪಟ್ಟ ಕಷ್ಟವನ್ನು ನೆನೆಸಿಕೊಂಡು, ಭಯದಿಂದ ನಡುಗುತ್ತ, ಕುಗ್ಗಿದ ಧ್ವನಿಯಿಂದ ರಾವಣನನ್ನು ಕುರಿತು, "ಎಲೆ ರಾಜನೆ! ನಾನೇನು ಹೇಳಲಿ? ಆ ವಾನರೋತ್ತಮರ ರಹಸ್ಯವನ್ನು ತಿಳಿಯಬೇಕೆಂದರೆ, ಎಷ್ಟೋ ನಿಪುಣರಾದ ಗೂಢಚಾರರಿಗೂ ಸಾಧ್ಯವಿಲ್ಲ. ಆ ವಾನರರೆಲ್ಲರೂ ಬಹಳ ಪರಾಕ್ರಮಿಗಳು! ಬಹಳ ಬಲಾಢ್ಯರು! ಇದರಮೇಲೆ ಶ್ರೀರಾಮನಿಂದ ರಕ್ಷಿತರಾಗಿರುವುದರಿಂದ, ನಮಗೆ ಅವರೊಡನೆ ಮಾತಾಡುವುದೇ ಶಕ್ಯವಲ್ಲ! ಇನ್ನು ಅವರನ್ನು ಪರೀಕ್ಷಿಸುವುದೆಂದರೇನು ? ದಾರಿಯಲ್ಲಿ ಯಾವಕಡೆಯನ್ನು ನೋಡಿದರೂ ಪರ್ವತಾಕಾರವುಳ್ಳ ವಾನರರು ತುಂಬಿರುವರು. ಹಾಗಿದ್ದರೂ ನಾನು ಎಷ್ಟೋ ಪ್ರಯತ್ನದಿಂದ ಆ ಸೇನೆಯೊಳಗೆ ಪ್ರವೇಶಿಸಿಬಿಟ್ಟೆನು. ನಾನು ಅಲ್ಲಿಗೆ ಪ್ರವೇಶಿಸಿದುದುಮಾತ್ರವೇಹೊರತು ಬೇರೆ ಯಾವ ಕಾರ್ಯವೂ ಸಾಗಲಿಲ್ಲ! ಒಂದುಕಡೆಯನ್ನಾದರೂ ಸುತ್ತಿ ನೋಡಲಿಲ್ಲ. ಇಷ್ಟರಲ್ಲಿಯೇ ಅವರು ನನ್ನನ್ನು ಕಂಡುಹಿಡಿದುಬಿಟ್ಟರು. ನಮ್ಮ ಜಾತಿಯ ಕೆಲವು ರಾಕ್ಷಸರೇ, ನನ್ನನ್ನು ಬಲಾತ್ಕಾರದಿಂದ ಹಿಡಿದುಕೊಂಡು ಹೋಗಿ ವಾನರರ ಕೈಗೊಪ್ಪಿಸಿಬಿಟ್ಟರು. ಆಗಲೇ ವಾನರರೆಲ್ಲರೂ ಸೇರಿ, ಮುಷ್ಟಿಗಳಿಂದಲೂ, ಮೊಳಕಾಲುಗಳಿಂದಲೂ, ಅಂಗೈಗಳಿಂದಲೂ, ಹೊಡೆದು, ಬಡಿದು,ಹಲ್ಲುಗಳಿಂದ ಕಡಿದು, ನನ್ನನ್ನು ಸಾಯುವ ಸ್ಥಿತಿಗೆ ತಂದುಬಿಟ್ಟರು. ಬಲಾಢ್ಯರಾದ ಆವಾನರರೆಲ್ಲರೂ ನನ್ನ ಕೈಕಾಲುಗಳನ್ನು ಕಟ್ಟಿ,ತಮ್ಮ ಸೇನೆಯಸುತ್ತಲೂ ಮೆರವಣಿಗೆತಂದರು. ನನ್ನ ಅಂಗಾಂಗಗಳೆಲ್ಲವೂ ರಕ್ತಮಯವಾದುವು. ನನಗೆ ಮೈಮೇಲೆ ಪ್ರಜ್ಞೆತಪ್ಪಿದಂತಾಯಿತು. ನನ್ನ ಇಂದ್ರಿಯಗಳೆಲ್ಲವೂ ಕದಲಿಹೋದುವು.ಹೀಗೆ ವಾನರರೆಲ್ಲರೂ ನನ್ನನ್ನು ಸಾಯಬಡಿಯುತ್ತಿರಲು, ಅವರಿಗೆ ನಾನು ಎಷ್ಟೋ ವಿಧದಿಂದ ಕೈಮುಗಿದು ಬೇಡಿಕೊಳ್ಳುತಿದ್ದೆನು. ಹಾಗೆಯೇ ಅವರು ನನ್ನನ್ನು ತಮ್ಮ ಸೈನ್ಯದಲ್ಲೆಲ್ಲಾ "ಇದೋ ಇವನು ಚಾರನು ! ರಾಕ್ಷಸದೂತನು." ಎಂದು ಸಾರುತ್ತ,ಸುತ್ತಿಸಿಕೊಂಡು ಬಂದು ರಾಮಸಿದ್ಧಸ್ಥಲಕ್ಕೆ ಕರೆತಂದರು. ಅಲ್ಲಿಯೂ ನಾನು,ನನ್ನನ್ನು ಪ್ರಾಣದಿಂದ ಬಿಟ್ಟರೆ ಸಾಕೆಂದು ಕೈಮುಗಿದು ಬೇಡುತಿದ್ದೆನು.ಆಗ ರಾಮನೇ ನನ್ನನ್ನುದಯೆಯಿಂದ ರಕ್ಷಿಸಿದನು.ಹೇಗೋ ಅದೃಷ್ಟವಶದಿಂದ ಬದುಕಿ ಬಂದೆನು.ಅದೋ!ಅಲ್ಲಿ ರಾಮನು,ಬೆಟ್ಟಗಳಿಂದಲೂ,

ಕಲ್ಲುಗಳಿಂದಲೂ,ಮಹಾಸಮುದ್ರವನ್ನು ತುಂಬಿ,ಸೇತುವಿನ ಮೂಲಕವಾಗಿ ಸಮುದ್ರವನ್ನು ದಾಟಿ, ಸರ್ವ್ವಯೂಥಗಳೊಡನೆ ಸಿದ್ಧನಾಗಿ ಬಂದಿರುವನು. ಇನ್ನು ಶೀಘ್ರದಲ್ಲಿಯೇ ನಮ್ಮ ಲಂಕೆಯ ಬಾಗಿಲಿಗೂ ಬರುವುದರಲ್ಲಿರುವನು. ಗರುಡವ್ಯೂಹವಾಗಿ ಏರ್ಪಟ್ಟಿರುವ ತನ್ನ ದೊಡ್ಡ ವಾನರಸೈನ್ಯದೊಡನೆ, ರಾಮನು ತಪ್ಪದೆ ಈ ನಮ್ಮಲಂಕೆಗೆ ದಂಡೆತ್ತಿಬರುವನು. ಶೀಘ್ರದಲ್ಲಿಯೇ ಅವನು ನಮ್ಮ ಹೊರಗಿನ ಪ್ರಾಕಾರವನ್ನೂ ಮುತ್ತುವನು. ನೀನು ಈಗಲೇ ರಾಮನಿಗೆ ಸೀತೆಯನ್ನೊಪ್ಪಿಸಿಬಿಡು! ಇಲ್ಲವೇ ಅವನೊಡನೆ ಸರಿಯಾಗಿ ಯುದ್ಧವನ್ನು ನಡೆಸುವುದಕ್ಕಾದರೂ ತಕ್ಕ ಸನ್ನಾಹಗಳಿಂದ ಸಿದ್ಧನಾಗಿರು! ಶೀಘ್ರದಲ್ಲಿಯೇ ಈ ಎರಡರಲ್ಲಿ ಯಾವುದಾದರೂ ಒಂದನ್ನು ನಡೆಸಬೇಕು." ಎಂದನು. ಶಾರ್ದೂಲನು ಹೇಳಿದ ಈ ವಾಕ್ಯವನ್ನು ಕೇಳಿ ರಾವಣನು ತನ್ನಲ್ಲಿ ತಾನೇ ಸ್ವಲ್ಪಹೊತ್ತಿನವರೆಗೆ ಆಲೋಚಿಸಿ ತಿರುಗಿ ಶಾರ್ದೂಲನನ್ನು ಕುರಿತು, "ಶಾರ್ದೂಲಾ! ಏನು ಹೇಳಿದೆ? ಸೀತೆಯನ್ನು ರಾಮನಿಗೆ ಕೊಡುವುದೆ? ಸಾಕು ಸುಮ್ಮನಿರು! ದೇವಗಂಧರ್ವದಾನವರೆಲ್ಲರೂ ಸೇರಿ ಏಕಕಾಲದಲ್ಲಿ ನನ್ನನ್ನಿದಿರಿಸಿದರೂ, ಸಮಸ್ತಲೋಕಗಳೂ ಒಂದಾಗಿ ಸೇರಿ ಬಂದು ನನ್ನನ್ನು ಹೆದರಿಸಿದರೂ,ನಾನು ಸೀತೆಯನ್ನು ರಾಮನಿಗೆ ಕೊಡುವವನಲ್ಲ! ಆ ಮಾತನ್ನುಬಿಡು!" ಎಂದು ಹೇಳಿ, ತಿರುಗಿ ರಾವಣನು ಮುಂದೆನಿಂತಿದ್ದ ಆ ಶಾರ್ದೂಲನನ್ನು ಕುರಿತು. "ಎಲೆ ಚಾರನೆ! ಅದು ಹಾಗಿರಲಿ! ನೀನು ಆ ವಾನರಸೇನೆಯನ್ನು ಚೆನ್ನಾಗಿ ಸುತ್ತಿ ನೋಡಿಬಂದಿರುವೆಯಷ್ಟೆ?. ಅವರಲ್ಲಿ ಪ್ರಧಾನಶೂರರಾರು? ಅವರ ಆಕಾರವೆಂತದು? ಅವರ ಶಕ್ತಿಯೇನು? ಯಾರನ್ನಿದಿರಿಸುವುದು ಸುಲಭವಲ್ಲ? ಅವರು ಯಾರ ಮಕ್ಕಳು? ಯಾರ ಮೊಮ್ಮಕ್ಕಳು? ಈ ಸಂಗತಿಗಳೆಲ್ಲವನ್ನೂ ಯಥಾಸ್ಥಿತವಾಗಿ ನನಗೆ ತಿಳಿಸು! ಇದನ್ನು ನೀನು ತಿಳಿಸಿದರೆ, ನಾನು ಆ ವಾನರರ ಬಲಾಬಲವನ್ನು ಚೆನ್ನಾಗಿ ತಿಳಿದು,ಅವರ ವಿಷಯದಲ್ಲಿ ಹೇಗೆ ನಡೆಯಬೇಕೋ ಅದನ್ನು ನಿರ್ಣಯಿಸಿಟ್ಟುಕೊಳ್ಳಬಹುದು. ಯುದ್ಧವನ್ನು ನಡೆಸುವವರು ಮೊದಲು ತಮ್ಮ ಶತ್ರುಗಳ ಬಲಾಬಲವನ್ನು ತಿಳಿದುಕೊಳ್ಳಬೇಕಾದುದು ಅತ್ಯವಶ್ಯವು." ಎಂದನು. ಆಮೇಲೆ ಆ ಶಾರ್ದೂಲನೆಂಬ ಚಾರನು ರಾವಣನ ಪ್ರಶ್ನೆಗೆ ತಕ್ಕಂತೆ ಕ್ರಮವಾಗಿ ಉತ್ತರವನ್ನು ಹೇಳುವುದಕ್ಕೆ ತೊಡಗಿ"ಎಲೆ

ಮಹಾರಾಜನೆ! ಆ ವಾನರಸೈನ್ಯಕ್ಕೆ ಸುಗ್ರೀವನೆಂಬವನೇ ರಾಜನು. ಅವನು ಋಕ್ಷರಜಸ್ಸಿನ ಮಗನು. ಯುದ್ಧದಲ್ಲಿ ಯಾರಿಗೂ ದುರ್ಜಯನಾಗಿರುವನು. ಆದೋ! ಅಲ್ಲಿ ಜಾಂಬವಂತನೆಂಬ ಮುದುಕನೊಬ್ಬನಿರುವನಲ್ಲವೆ? [1] ಅವನು ಗದ್ಗದನೆಂಬವನ ಮಗನು. ಗದ್ಗದನಿಗೆ ಧೂಮ್ರನೆಂಬ ಬೇರೊಬ್ಬ ಮಗನುಂಟು ಅದೋ! ಅತ್ತಲಾಗಿ ಹನುಮಂತನೆಂಬ ಕಪಿಯಿರುವನು ನೋಡು. ಆತನೇ ಮೊದಲು ನಮ್ಮ ಲಂಕೆಗೆ ಬಂದು, ಅಕ್ಷಾದಿರಾಕ್ಷಸರೆಲ್ಲರನ್ನೂ ತಾನೊಬ್ಬನೇ ಕೊಂದವನು. ಅವನ ತಂದೆಗೆ ಕೇಸರಿಯೆಂದು ಹೆಸರು. ಆ ಕೇಸರಿಯು ಬೃಹಸ್ಪತಿಯ ಮಗನು. ಅದೋ! ಅಲ್ಲಿ ಧರ್ಮಾತ್ಮನಾಗಿಯೂ, ವೀರ್ಯವಂತನಾಗಿಯೂ ಇರುವ [2] ಸುಷೇಣನು ಧರ್ಮದೇವತೆಯ ಪುತ್ರನು. ಇಲ್ಲಿರುವ ದಧಿಮುಖನೆಂಬ ಕಪಿಯು ಚಂದ್ರನ ಮಗನು. ಅದೋ ಅಲ್ಲಿ ಸುಮುಖನೆಂದೂ, ದುರ್ಮುಖನೆಂದೂ, ವೇಗದರ್ಶಿಯೆಂದೂ ಹೆಸರುಗೊಂಡ ಆ ಮೂವರು ವಾನರೋತ್ತಮರಿರುವರಲ್ಲವೆ? ಆ ಮೂವರೂ ಬ್ರಹ್ಮನಿಂದ ವಾನರರೂಪದಲ್ಲಿ ಸೃಷ್ಟಿಸಲ್ಪಟ್ಟ ಮೃತ್ಯುಗಳೋ ಎಂಬಂತೆ, ಮೃತ್ಯುಸಮಾನರಾಗಿಯೇ ಇರುವರು. ಅದೋ ಅಲ್ಲಿ ವಾನರಸೇನೆಗೆ ಮುಖ್ಯಾಧಿಪತಿಯಾದ ನೀಲನೆಂಬವನು ಅಗ್ನಿದೇವನ ಪುತ್ರನು. ಮೊದಲು ಕೇಸರಿಪುತ್ರನೆಂದು ನಾನು ನಿನಗೆ ತೋರಿಸಿದ ಹನುಮಂತನೆಂಬವನು, ವಾಯುದೇವನಿಗೆ ಔರಸಪುತ್ರನು. ಅದೋ ಅಲ್ಲಿ ಶತ್ರುಗಳಿಗೆ ದುರ್ಜಯನಾಗಿಯೂ, ಬಲದಿಂದಲೂ ಯೌವನದಿಂದಲೂ ಕೂಡಿದವನಾಗಿಯೂ ಇರುವ

---

1 ಜಾಂಬವಂತನು ಬ್ರಹ್ಮನ ಆಕಳಿಕೆಯಿಂದ ಹುಟ್ಟಿದವನಾಗಿರುವಾಗ, ಇಲ್ಲಿ ಗದ್ಗದನಿಗೆ ಪುತ್ರನೆಂದು ಹೇಳಿದುದು ಹೇಗೆಂದರೆ; ದ್ರೌಪದಿಯು ಅಗ್ನಿಪುತ್ರಿಯಾಗಿದ್ದರೂ, ಪಾಂಚಾಲಿಯೆನಿಸಿಕೊಂಡಂತೆ, ಈತನೂ ಗದ್ಗದನಿಗೆ ಸಾಕುಮಗನೆಂದು ತಿಳಿಯಬೇಕು.

2 ಹಿಂದೆ ಬಾಲಕಾಂಡದಲ್ಲಿ ಸುಷೇಣನನ್ನು ವರುಣಪುತ್ರನೆಂದು ಹೇಳಿದೆ, ಇಲ್ಲಿ ಧರ್ಮಪುತ್ರನೆಂದು ಹೇಳಿದುದು ಹೇಗೆ. ಎಂದರೆ, ಆ ವರುಣನನ್ನೇ ಇಲ್ಲಿ ಧರ್ಮನೆಂದು ಹೇಳಿರುವುದಾಗಿ ಗ್ರಹಿಸಿದರೂ ಗ್ರಹಿಸಬಹುದು. ಇಲ್ಲವೇ ಶಾರ್ದೂಲನೇ ಭಯದಿಂದ ತಬ್ಬಿಬ್ಬಾಗಿ ತಪ್ಪುಮಾತನ್ನಾಡಿರುವನೆಂದಾಗಲಿ, ಅಥವಾ ಈ ಸುಷೇಣನು ಆ ಸುಷೇಣನಿಗಿಂತ ಬೇರೆ ವಾನರನೆಂದಾಗಲೀ ಗ್ರಹಿಸಬಹುದು.

ಅಂಗದನೆಂಬವನು ದೇವೇಂದ್ರನ ಮುಮ್ಮಗನು. ಮೈಂದದ್ವಿವಿದರಿಬ್ಬರೂ ಅಶ್ವಿನೀದೇವತೆಗಳ ಮಕ್ಕಳು. ಅದೋ ಅಲ್ಲಿ ಗಜ, ಗವಯ, ಗವಾಕ್ಷ, ಶರಭ, ಗಂಧಮಾಧನರೆಂಬ ಐದುಮಂದಿ ವಾನರವೀರರು! ಕಾಲಯಮನಿಗೆ ಸಮಾನ ರಾಗಿ ನಿಂತಿರುವರು ನೋಡು. ಅವರೆಲ್ಲರೂ ಯಮನ ಮಕ್ಕಳು! ಎಲೆ ಮಹಾ ರಾಜನೆ! ಹೀಗೆ ಶ್ರೀಮಂತರಾಗಿಯೂ, ದೇವಾಂಶದಿಂದ ಹುಟ್ಟಿದವರಾಗಿ ಯೂ, ಯುದ್ಧೋತ್ಸಾಹವುಳ್ಳವರಾಗಿಯೂ ಇರುವ ಮಹಾಶೂರರಾದ ವಾನರಪ್ರಮುಖರು ಹತ್ತುಕೋಟಿಯವರೆಗೆ ಬಂದಿರುವರು.ಇವರು ಹುಟ್ಟಿ ದ ಸ್ಥಳವೇ ಮೊದಲಾದ ಇತರ ವಿಶೇಷಗಳೆಲ್ಲವನ್ನೂ ಹೇಳಿ ತಿಳಿಸುವುದಕ್ಕೆ ನನ್ನಿಂದ ಸಾಧ್ಯವಿಲ್ಲ. ಅದೋ ಆ ರಾಮನ ಸ್ವರೂಪವನ್ನು ನೋಡಿದೆಯಾ? ಸಿಂಹದಂತಿರುವ, ಅವನ ಮೈಕಟ್ಟನ್ನೂ, ಅವನ ಯೌವನಸಂಪತ್ತಿಯನ್ನೂ ನೋಡು! ಅವನೇ ಖರದೂಷಣತ್ರಿಶಿರರೆಂಬ ರಾಕ್ಷಸರನ್ನು ಕೊಂದವನು! ಅವನೇ ವಿರಾಧನನ್ನು ಕೊಂದವನು! ಅವನೇ ಕಾಲಯಮನಂತಿದ್ದ ಕಬಂಧ ನನ್ನೂ ಕೊಂದವನು! ಅವನು ದಶರಥರಾಜನ ಮಗನು. ಎಲೆ ರಾಜನೇ! ಪ ರಾಕ್ರಮದಲ್ಲಿ ಆ ರಾಮನಿಗೆ ಸಮನಾದವನು ಪ್ರಪಂಚದಲ್ಲಿ ಬೇರೊಬ್ಬ ನೂ ಇಲ್ಲವು! ಅವನ ಗುಣಗಳನ್ನೆಲ್ಲಾ ಹೇಳಬೇಕೆಂದರೆ ಭೂಮಿಯಲ್ಲಿ ಯಾ ವ ಮನುಷ್ಯನಿಗೂ ಸಾಧ್ಯವಲ್ಲ. ಈ ರಾಮನು ತಾನೊಬ್ಬನೇ ನಿಂತು ಜನ ಸ್ಥಾನದಲ್ಲಿದ್ದ ರಾಕ್ಷಸರನ್ನೆಲ್ಲಾ ಕೊಂದನು. ಅದೋ ! ಅವನ ಪಕ್ಕದಲ್ಲಿ ರುವ ಅವನ ತಮ್ಮನಾದ ಲಕ್ಷ್ಮಣನನ್ನು ನೋಡಿದೆಯಾ ? ಅವನೂ ದಶರ ಥರಾಜನ ಪುತ್ರನು. ಬಹಳ ಧರ್ಮಾತ್ಮನು. ಆನೆಯ ಸಲಗದಂತೆ ಎಣೆಯಿಲ್ಲ ದ ಬಲವುಳ್ಳವನು. ಅವನ ಬಾಣದ ದಾರಿಗೆ ಸಿಕ್ಕಿದಮೇಲೆ ದೇವೇಂದ್ರನೂ ಬದುಕಿ ಹೋಗಲಾರನು. ಅದೋ! ಅಲ್ಲಿ ಶ್ವೇತನೆಂದೂ, ಜ್ಯೋತಿರ್ಮುಖ ನೆಂದೂ,ಪ್ರಸಿದ್ಧರಾದ ಇಬ್ಬರು ವಾನರವೀರರಿರುವರು ನೋಡು! ಅವರಿಬ್ಬ ರೂ ಸೂರ್ಯನ ಮಕ್ಕಳು. ಅದೋ ಅಲ್ಲಿರುವ ಹೇಮಕೂಟವೆಂಬ ವಾನರನು ವರುಣನ ಮಗನು ಕಪಿಶ್ರೇಷ್ಠನಾದ ನಲನು ವಿಶ್ವಕರ್ಮನ ಮಗನು. ಬಹ ಳವೀರ್ಯಶಾಲಿಯಾಗಿಯೂ, ಬಲಶಾಲಿಯಾಗಿಯೂ ಇರುವ ಸುದುರ್ಧರನೆಂ ಬ ವಾನರನು ವಸುಪುತ್ರನು! ಎಲೆ ಮಹಾರಾಜನೆ! ಅದೋ ಅಲ್ಲಿ ಆಗಲೇ ರಾಮನಿಂದ ಲಂಕಾರಾಜ್ಯವನ್ನು ಹೊಂದಿ, ಅದಕ್ಕೆ ತಕ್ಕಂತೆ ತಾನೂ ರಾ

ಮನಿಗೆ ಪ್ರಿಯವನ್ನುಂಟುಮಾಡಬೇಕೆಂಬ ಆಸಕ್ತಿಯುಳ್ಳವನಾಗಿ ನಿಂತಿರುವ ಆ ರಾಕ್ಷಸೋತ್ತಮನನ್ನು ನೋಡಿದೆಯಾ? ಅವನೇ ನಿನ್ನ ತಮ್ಮನಾದ ವಿಭೀಷಣನು! ಎಲೆ ರಾಜನೆ! ಸುವೇಲಪರ್ವತಪ್ರಾಂತದಲ್ಲಿ ಬಂದಿಳಿಸಿರುವ ಆ ವಾನರಸೇನೆಯ ವಿವರವೆಲ್ಲವನ್ನೂ ನಾನು ಕ್ರಮವಾಗಿ ತಿಳಿಸಿಬಿಟ್ಟೆನು. ಇನ್ನು ಮುಂದಿನ ಕಾರ್ಯವು ನಿನಗೆ ಸೇರಿದುದು" ಎಂದನು.[1] ಇಲ್ಲಿಗೆ ಮೂವತ್ತನೆಯ ಸರ್ಗವು.

---

(ರಾವಣನು ಮಾಯಾವಿಯಾದ ವಿದ್ಯುಜ್ಜಿಹ್ವನಿಂದ ಕೃತ್ರಿಮವಾದ ರಾಮಶಿರಸ್ಸನ್ನೂ, ಧನುಸ್ಸನ್ನೂ, ಸೀತೆಯು ಹನುಮಂತನಮೂಲಕವಾಗಿ ಕಳುಹಿಸಿಕೊಟ್ಟ ಚೂಡಾಮಣಿಯನ್ನೂ ಮಾಯೆಯಿಂದ ಮಾಡಿಸಿ, ಅವುಗಳನ್ನು ಸೀತೆಗೆ ತಂದು ತೋರಿಸಿದುದು.)

ಹೀಗೆ ಶಾರ್ದೂಲಾದಿಚಾರರೆಲ್ಲರೂ, ಅಪರಿಮಿತವಾದ ಸೈನ್ಯದೊಡನೆ ರಾಮನು ಸುವೇಲಪರ್ವತದ ಬಳಿಯಲ್ಲಿ ಬಂದಿಳಿದಿರುವನೆಂದು ರಾವಣನಿಗೆ ತಿಳಿಸಿದರು. ಮಹಾಬಲಾಢ್ಯನಾದ ರಾಮನು ಹಾಗೆ ದೊಡ್ಡಸೈನ್ಯದೊಡನೆ ಬಂದಿರುವನೆಂಬ ವಿಷಯವನ್ನು ಕೇಳಿ, ರಾವಣನು ಮೇಲೆಮೇಲೆ ಭಯಾವಿಷ್ಟನಾಗಿ, ಮಂತ್ರಿಗಳನ್ನು ಕರೆದು ಆಲೋಚಿಸುವನು. "ಎಲೆ ಅಮಾತ್ಯರೆ! ನಮಗೆ ದೊಡ್ಡ ಮಂತ್ರಾಲೋಚನೆಯನ್ನು ನಡೆಸಬೇಕಾದ ಕಾಲವು ಸಮೀಪಿಸಿಬಿಟ್ಟಿತು. ಆದುದರಿಂದ ಮಂತ್ರಾಲೋಚನೆಯಲ್ಲಿ ನಿಪುಣರಾಗಿಯೂ, ನೀತಿಜ್ಞರಾಗಿಯೂ ಇರುವ ರಾಕ್ಷಸರೆಲ್ಲರನ್ನೂ ಈಗಲೇ ಸೇರಿಸಿ ಆಲೋಚಿಸಬೇಕು?" ಎಂದನು. ಈ ರಾಮಾಜ್ಞೆಯನ್ನು ಕೇಳಿದೊಡನೆ ಸಮಸ್ತ ಮಂತ್ರಿಗಳೂ ಬಂದು ರಾವಣನ ಮುಂದೆ ಸೇರಿದರು. ರಾವಣನು ಅವರೆಲ್ಲರೊಡನೆ ಕಲೆತು, ಸ್ವಲ್ಪಕಾಲದವರೆಗೆ ಆಲೋಚನೆಗಳನ್ನು ನ

---

1 ಈ ಸರ್ಗದಲ್ಲಿ ಹೇಳಲ್ಪಟ್ಟಿರುವ ವಾನರಜನ್ಮವಿಧಗಳೆಲ್ಲವೂ ಬಹಳವಾಗಿ, ಬಾಲಕಾಂಡದಲ್ಲಿ ಹೇಳಲ್ಪಟ್ಟುದಕ್ಕೆ ವಿರುದ್ಧಗಳಾಗಿರುವುದರಿಂದಲೂ, ಈಸರ್ಗವಿಲ್ಲದಿದ್ದರೂ ಪೂರ್ವೋತ್ತರಕಥೆಗಳು ಸರಿಹೋಗುವುದರಿಂದಲೂ, ಈ ಸರ್ಗವು ಕಲ್ಪಿತವೆಂದು ಕೆಲವರ ಅಭಿಪ್ರಾಯವು.

ಡೆಸುತ್ತಿದ್ದು, ಕೊನೆಗೆ ಯಾವುದು ಕಾಲೋಚಿತವೆಂದು ಚೆನ್ನಾಗಿ ನಿರ್ಧರಿಸಿ-
ಕೊಂಡು, ಆ ಮಂತ್ರಿಗಳನ್ನು ಹಿಂಪಕ್ಕೆ ಕಳುಹಿಸಿ,!ತಾನೂ ತನ್ನ ಮನೆಗೆ
ಹೋದನು. ಆ ಮೇಲೆ ರಾವಣನು, ಮಾಯೆಯಲ್ಲಿ ನಿಪುಣನಾಗಿಯೂ, ಮ-
ಹಾಬಲಾಢ್ಯನಾಗಿಯೂ ಇದ್ದ ವಿದ್ಯುಜ್ಜಿಹ್ವನೆಂಬ ರಾಕ್ಷಸನನ್ನು ಕರೆದು,
ಅವನನ್ನೂ ತನ್ನ ಹಿಂದೆಕರೆದುಕೊಂಡು ಸೀತೆಯಿದ್ದಸ್ಥಲಕ್ಕೆ ಹೊರಟನು.
ಸೀತೆಯನ್ನು ಸಮೀಪಿಸುವಷ್ಟರಲ್ಲಿ ರಾವಣನು ಮಾಯಾವಿಯಾದ ಆ ವಿ-
ದ್ಯುಜ್ಜಿಹ್ವನನ್ನು ನೋಡಿ "ಎಲೆ ವಿದ್ಯುಜ್ಜಿಹ್ವಾ! ಈಗ ನಾವು ಏನಾದರೂ
ಒಂದು ಮಾಯೆಯಿಂದ ಸೀತೆಯನ್ನು ಮೋಸಪಡಿಸಬೇಕು! ಅದಕ್ಕಾಗಿ
ನೀನು ಈಗಲೇ ಹೋಗಿ, ನಿನ್ನ ಮಾಯೆಯಿಂದ ರಾಮನ ತಲೆಯ ಹಾಗೆಯೇ
ಒಂದು ತಲೆಯನ್ನೂ, ಅವನ ಧನುಸ್ಸಿನಂತೆಯೇ ಬಾಣದಿಂದ ಕೂಡಿದ
ಒಂದು ಮಹಾಧನುಸ್ಸನ್ನೂ ಮಾಡಿ ಸಿದ್ಧವಾಗಿಟ್ಟಿರು!" ಎಂದನು. ರಾ-
ವಣನು ಈ ಮಾತನ್ನು ಹೇಳಿದೊಡನೆ ವಿದ್ಯುಜ್ಜಿಹ್ವನು, "ಮಹಾರಾಜನೆ!
ಅಪ್ಪಣೆ! ಹಾಗೆಯೇ ಆಗಲಿ" ಎಂದನು. ಇದನ್ನು ಕೇಳಿ ರಾವಣನು ಬಹಳ
ಸಂತೋಷಗೊಂಡು, ಆ ಸಂತೋಷಕ್ಕೆ ಪ್ರತಿಫಲವಾಗಿ ಬೆಲೆಯುಳ್ಳ ಒಂ-
ದು ಭೂಷಣವನ್ನು ಅವನ ಕೈಗೆ ಕೊಟ್ಟನು. ಆ ಮೇಲೆ ರಾಕ್ಷಸರಾಜನಾದ
ರಾವಣನು,ಸೀತೆಯನ್ನು ನೋಡಬೇಕೆಂಬ ಆತುರದಿಂದ ಅಶೋಕವನಕ್ಕೆ ಪ್ರ-
ವೇಶಿಸಿದನು. ಎಂದಿಗೂ ದುಃಖಾರ್ಹಳಲ್ಲದ ಆಸೀತೆಯಾದರೋ ಅಲ್ಲಿ ಮಹಾ-
ವ್ಯಸನದಿಂದ ಕೊರಗುತ್ತ, ತಲೆಯನ್ನು ತಗ್ಗಿಸಿ, ಬರೀನೆಲದಮೇಲೆ ಕುಳಿತು
ತನ್ನ ಪತಿಯನ್ನೇ ಧ್ಯಾನಿಸುತ್ತ ಸಂಕಟದಿಂದ ಕೊರಗುತ್ತಿದ್ದಳು. ಅನೇಕ
ಘೋರರಾಕ್ಷಸಿಯರು ಅವಳಮೇಲೆ ಕಾವಲಾಗಿ ಅತ್ತಿತ್ತ ಸುತ್ತುತ್ತಿದ್ದರು.
(ಪೂರ್ಣಚಂದ್ರನಿಗೆಣೆಯಾದಮುಖವುಳ್ಳಆ ಸೀತೆಯು ಹೀಗೆ ಘೋರರಾಕ್ಷ-
ಸಿಯರಿಂದ ಪರಿವೃತಳಾಗಿ, ಉತ್ಪಾತಮೇಘಸಮೂಹಗಳಿಂದ ಆವೃತವಾದ
ಚಂದ್ರರೇಖೆಯಂತೆ ಕಾಣುತಿದ್ದಳು.ಅವಳ ಮೈಮೇಲೆ ಮುತ್ತೈದೆತನಕ್ಕೆ ಚಿ-
ಹ್ನಗಳಾದಕೆಲವು ಭೂಷಣಗಳುಮಾತ್ರವೇ ಕಾಣುತಿದ್ದುವು.ಅವಳಾದರೋ
ಅಲ್ಲಿಗಾಳಿಯಿಂದಾಡಿಸಲ್ಪಟ್ಟ ಹೂಬಳ್ಳಿಯಂತೆ ಸಂಕಟದಿಂದ ತೂಗಾಡುವ-
ಳು!ಕ್ಷಣಕಾಲದವರೆಗೆ ತನ್ನಲ್ಲಿ ತಾನೇ ರಾಮನೊಡನೆ ಸೇರಿದಂತೆ ಸಂಕಲ್ಪಿ-
ಸಿಕೊಂಡು ಸಂತೋಷದಿಂದ ಹಿಗ್ಗುವಳು. ಉತ್ತರಕ್ಷಣದಲ್ಲಿಯೇ ತನ್ನ ದು-

ರವಸ್ಥೆಯನ್ನು ಚಿಂತಿಸಿ ದುಃಖದಿಂದ ಕುಗ್ಗುವಳು.ವ್ಯಸನದಿಂದ ಬಣ್ಣಗುಂ ದುವಳು. ಆಳದಿಂದ ಸ್ತಿಮಿತವಾಗಿ ನಿಂತಿರುವ ಗಂಗಾನದಿಯಂತೆ ದುಃಖಾ ತಿಶಯದಿಂದ ಏನೊಂದೂ ತೋರದೆ ಸ್ತಬ್ಧಳಾಗಿರುವಳು.)ಹೀಗೆ ಕುಳಿತಿದ್ದ ಸೀತೆಯ ಸಮೀಪಕ್ಕೆ ಹೋಗಿ ರಾವಣನು, ಅವಳಿಗೆ ದೊಡ್ಡ ಸಂತೋಷವಾ ರ್ತೆಯನ್ನು ಹೇಳುವವನಂತೆ ನಟಿಸುತ್ತ, ,ಅವಳನ್ನು ಕುರಿತು ನಿರ್ಭಯವಾಗಿ ‹‹ಎಲೆ ಕಲ್ಯಾಣಿ!ಇದುವರೆಗೆ ನಾನು ನಿನಗೆ ಎಷ್ಟೋಸಮಾಧಾನಗಳನ್ನು ಹೇ ಳಿದರೂ ಕೇಳದೆ, ಯಾವನ ಆಶ್ರಯವನ್ನು ನಂಬಿ ನನ್ನೊಡನೆ ಅಷ್ಟು ನಿ ಷ್ಠುರವಾಕ್ಯಗಳನ್ನಾಡಿದೆಯೋ, ಆ ನಿನ್ನ ಪತಿಯಾದ ರಾಮನು ಈಗಲೇ ಯುದ್ಧದಲ್ಲಿ ಹತನಾದನು. ಖರಾದಿರಾಕ್ಷಸರನ್ನು ಕೊಂದು ನನ್ನೊ ಡನೆ ಅವನು ವೈರವನ್ನು ಬೆಳೆಸಿದುದಕ್ಕೆ ತಕ್ಕಫಲವನ್ನು ತೋರಿಸಿಬಿ ಟ್ಟೆನು! ಎಲೆ ಸೀತೆ! ನಿನಗಿದ್ದ ಪ್ರಬಲವಾದ ಆಶ್ರಯವನ್ನು ನಿರ್ಮೂ ಲವಾಗಿ ಕಿತ್ತುಬಿಟ್ಟೆನು! ಇಂದಿಗೆ ನಿನ್ನ ಹೆಮ್ಮೆಯನ್ನು ಮುರಿದೆನು. ಇನ್ನು ನಾನು ನಿನ್ನನ್ನು ಹಿಂದಿನಂತೆ ಪ್ರಾರ್ಥಿಸಬೇಕಾದ ಅವಶ್ಯಕತೆಯೂ ಇಲ್ಲ. ನಿನ್ನ ವ್ಯಸನದಿಂದಲೇ ನೀನು ಬೇರೆ ದಿಕ್ಕಿಲ್ಲದುದಕ್ಕಾಗಿ ನನಗೆ ಭಾರ್ಯೆಯಾಗ ಬಹುದು. ಎಲೆ ಬುದ್ಧಿಯಿಲ್ಲದವಳೆ! ಇನ್ನಾದರೂ ನಿನ್ನ ಛಲವನ್ನು ಬಿಡು. ಸತ್ತವನಿಂದ ನಿನಗಾಗುವುದೇನು? ಎಲೆ ಭದ್ರೆ! ಈಗಲೂ, ನನ್ನ ಮಾತನ್ನು ಕೇಳು! ನನ್ನ ಭಾರ್ಯೆಯರೆಲ್ಲರಿಗೂ ನೀನೇ ಈಶ್ವರಿಯಾಗಿರು! ನೀನು ಮಂದ ಭಾಗ್ಯೆಯಾದುದರಿಂದಲೇ ಇದುವರೆಗೆ ಕೈಗೆ ಬಂದ ಪುರುಷಾರ್ಥವನ್ನನುಭವಿ ಸುವುದಕ್ಕೂ ಲಭ್ಯವಿಲ್ಲದೆ ಹೋಯಿತು. ಎಲೆ ಮೂಢೆ! ಏನೂ ತಿಳಿಯದಿದ್ದ ರೂ,ಎಲ್ಲವನ್ನೂ ತಿಳಿದವಳೆಂಬ ಹೆಮ್ಮೆಯು ಮಾತ್ರ ನಿನಗೆ ಪೂರ್ಣವಾಗಿರು ವುದು. ಎಲೆ ಸೀತೆ!ನಿನ್ನಪತಿಯು ವೃತ್ರಾಸುರನ ಸಾವಿನಂತೆ ಭಯಂಕರವಾ ದ ಕೊಲೆಗೆ ಸಿಕ್ಕಿ ಸತ್ತಿರುವನು. ನಾನು ಅವನನ್ನು ಕೊಂದ ರೀತಿಯನ್ನೂ ತಿಳಿಸುವೆನು ಕೇಳು? ನಿನ್ನಪತಿಯಾದ ರಾಮನು ನನ್ನನ್ನು ಕೊಲ್ಲಬೇಕೆಂಬ ಉದ್ದೇಶದಿಂದ, ಸುಗ್ರೀವನ ಕಡೆಯ ದೊಡ್ಡ ವಾನರಸೈನ್ಯದೊಡನೆ ಸಮು ದ್ರತೀರಕ್ಕೆ ಬಂದನಂತೆ ! ಹೀಗೆ ರಾಮನು ಲವಣಸಮುದ್ರದ ಉತ್ತರ ತೀರದಲ್ಲಿ ದೊಡ್ಡ ಸೇನೆಯೊಡನೆ ಬಂದಿಳಿಯುವಷ್ಟರಲ್ಲಿ ಸೂರ್ಯನು ಮುಳು ಗುತ್ತಬಂದನು. ಆ ಸೇನೆಯೆಲ್ಲವೂ ಮಾರ್ಗಾಯಾಸದಿಂದ ಬಹಳವಾಗಿ

ಬಳಲಿದ್ದುದರಿಂದ,ಆರಾತ್ರಿಯಲ್ಲಿ ಅಲ್ಲಿಯೇ ಮಲಗಿ ನಿದ್ರೆಹೋಗುತಿತ್ತು. ಅ
ರ್ಧರಾತ್ರಿಯಲ್ಲಿ ಆ ಸಮಸ್ತಸೈನ್ಯಗಳೂ ಸುಖನಿದ್ರೆಯಿಂದ ನಿದ್ರಿಸುತಿದ್ದಾ
ಗ, ಮೊದಲು ನಾನು ಚಾರರನ್ನು ಕಳುಹಿಸಿ ಅಲ್ಲಿನ ಸಂಗತಿಗಳನ್ನೆಲ್ಲಾ ತಿ
ಳಿದುಕೊಂಡೆನು. ಆಮೇಲೆ ನಮ್ಮ ಕಡೆಯ ಪ್ರಹಸ್ತನು ದೊಡ್ಡಸೈನ್ಯದೊ
ಡನೆ ಹೋಗಿ, ಆ ರಾಮಲಕ್ಷ್ಮಣರ ಆಶ್ರಯದಲ್ಲಿದ್ದ ಸಮಸ್ತಸೈನ್ಯಗಳ
ನ್ನೂ, ಆ ರಾತ್ರಿಯಲ್ಲಿಯೇ ನಿಶ್ಶೇಷವಾಗಿ ಹತಮಾಡಿ ಬಂದನು. ಅಲ್ಲಿ ನಮ್ಮ
ಕಡೆಯ ರಾಕ್ಷಸರು, ಅಡ್ಡಗತ್ತಿಗಳನ್ನೂ, ಪರಿಘಗಳನ್ನೂ, ಚಕ್ರಗಳನ್ನೂ,
ಕಬ್ಬಿಣದ'ಗುದಿಗಳನ್ನೂ, ಕತ್ತಿಗಳನ್ನೂ, ಬಾಣಗಳನ್ನೂ, ಶೂಲಗಳನ್ನೂ,
ಕೂಟಮುದ್ಗರಾದ್ಯಾಯುಧಗಳನ್ನೂ, ದಂಡಗಳನ್ನೂ, ಕೋಣತಗಳನ್ನೂ,
ಈಟಿಗಳನ್ನೂ, ದೊಡ್ಡಚಕ್ರಾಯುಧಗಳನ್ನೂ, ಕಬ್ಬಿಣದೊನಕೆಗಳನ್ನೂ
ಬೀಸಿಬೀಸಿ ಬಡಿದು, ಸಮಸ್ತವಾನರರನ್ನೂ ಕೊಂದು ಕೆಡಹಿದರು. ಆಮೇ
ಲೆ ಶತ್ರುಸಂಹಾರದಲ್ಲಿ ನಿಪುಣನಾಗಿಯೂ, ಆಯುಧಗಳನ್ನು ಪ್ರಯೋಗಿಸು
ವುದರಲ್ಲಿ ಹಸ್ತಚಾತುರ್ಯವುಳ್ಳವನಾಗಿಯೂ ಇದ್ದ ನಮ್ಮ ಪ್ರಹಸ್ತನು, ಸ
ಮಯವನ್ನು ನೋಡಿ ಆಸೈನ್ಯದನಡುವೆ ನುಗ್ಗಿ,ಅಲ್ಲಿ ನಿದ್ರಿಸುತಿದ್ದ ರಾಮ
ನ ತಲೆಯನ್ನೂ ಕತ್ತರಿಸಿ ಬಿಟ್ಟನು.ಇಷ್ಟರಲ್ಲಿ ನನ್ನ ತಮ್ಮನಾದ ವಿಭೀಷಣನು
ಭಯದಿಂದ ಆಕಾಶಕ್ಕೆ ಹಾರಿ ಓಡಿಹೋಗುತ್ತಿರಲು,ದೈವಿಕವಾಗಿ ಅವನೂ ನ
ಮ್ಮರಾಕ್ಷಸರ ಕೈಗೆ ಸಿಕ್ಕಿಬಿಟ್ಟನು ಲಕ್ಷ್ಮಣನೂ ಇತರವಾನರರೂ ಚದರಿ ದಿ
ಕ್ಕುದಿಕ್ಕಿಗೆ ಪಲಾಯನಮಾಡಿಬಿಟ್ಟರು. ಎಲೆ ಸೀತೆ! ಈಗಲೂ ಅಲ್ಲಿ ವಾನರ
ರಾಜನಾದ ಸುಗ್ರೀವನು ಕತ್ತುಮುರಿದು ಬಿದ್ದಿರುವನು. ಹನುಮಂತನೂ
ರಾಕ್ಷಸರಿಂದ ಹತನಾಗಿ ಮುಸುಡಿಯೇ ಇಲ್ಲದೆ ಬಿದ್ದಿರುವನು. ಜಾಂಬವಂತ
ನು ಭಯದಿಂದ ಮೇಲೆ ಹಾರುವಾಗ, ನಮ್ಮ ರಾಕ್ಷಸರು ಅವನನ್ನು ಹಿಡಿದು,
ಅವನ ಮೊಳಕಾಲುಗಳನ್ನು ಮುರಿದ,ಕೊಂದು ಕೆಡಹಿದರು.ಅವನನ್ನು ನಮ್ಮ
ರಾಕ್ಷಸಸೈನಿಕರು ನಾನಾವಿಧಗಳಾದ ಪಟ್ಟಸಗಳಿಂದ ಕತ್ತರಿಸಿರುವರು.ಕೊ
ಡಲಿಯಿಂದ ಕಡಿದ ಮರದಂತೆ ಅವನು ರಣರಂಗದಲ್ಲಿ ಬಿದ್ದಿರುವನು. ದೊಡ್ಡ
ದೇಹವುಳ್ಳವರಾಗಿಯೂ, ಶತ್ರುಗಳನ್ನಡಗಿಸುವುದರಲ್ಲಿ ಸಮರ್ಥರಾಗಿಯೂ
ಇದ್ದ ಮೈಂದದ್ವಿವಿದರೆಂಬ ವಾನರರಿಬ್ಬರನ್ನೂ, ನಮ್ಮ ರಾಕ್ಷಸರು ಹಿಡಿ
ದು, ಅವರ ನಡುವನ್ನು ಕತ್ತಿಗಳಿಂದ ಕತ್ತರಿಸಿ, ಚಿತ್ರವಧಮಾಡಿ ಕೊಲ್ಲು

ವಾಗ, ಅವರಿಬ್ಬರೂ ರಕ್ತಪ್ರವಾಹದಿಂದ ತೊಯ್ದು ಮೈಯುಳ್ಳವರಾಗಿ ನಿಟ್ಟುಸಿರುಬಿಟ್ಟು ಗೋಳಿಡುತ್ತ,ಪ್ರಾಣವನ್ನು ಬಿಟ್ಟರು.ಹಾಗೆಯೇ ಅಲ್ಲಿ ಪನಸನೆಂಬವನು ನಮ್ಮ ರಾಕ್ಷಸಭಟರಿಂದ ಹಲಸಿನ ಹಣ್ಣಿನಂತೆ ಚಿತ್ರವಿಚಿತ್ರವಾಗಿ ಕುಯ್ಯಲ್ಪಟ್ಟು ನೆಲದಲ್ಲಿ ಬಿದ್ದಿರುವನು. ದಧಿಮುಖನೆಂಬವನು ಅನೇಕ ಬಾಣಗಳಿಂದ ಗಾಯಪಟ್ಟು ಅಲ್ಲಿನ ಪರ್ವತಗುಹೆಯಲ್ಲಿ ಹೋಗಿ ಮಲಗಿರುವನು. ಮಹಾತೇಜಸ್ವಿಯಾದ ಕುಮುದನು ನಮ್ಮ ರಾಕ್ಷಸರ ಬಾಣಹತಿಯಿಂದ ನೊಂದು ಮಾತಾಡುವುದಕ್ಕೂ ತ್ರಾಣವಿಲ್ಲದೆ ಬಿದ್ದಿರುವನು. ನಮ್ಮ ರಾಕ್ಷಸಭಟರು ಯುವರಾಜನಾದ ಅಂಗದನನ್ನು ಹಿಡಿದು, ಅವನ ಅಂಗಾಂಗಗಳನ್ನೂ ಬಾಣಗಳಿಂದ ಚಿತ್ರವಿಚಿತ್ರವಾಗಿ ಖಂಡಿಸಿರುವರು. ಅವನು ರಕ್ತವನ್ನು ಕಾರುತ್ತ ಕಳಚಿಬಿದ್ದ ತೋಳ್ಬಳೆಗಳೊಡನೆ ನೆಲದಲ್ಲಿ ಬಿದ್ದಿರುವನು. ಎಲೆ ಸೀತೆ! ಇನ್ನೂ ಅಲ್ಲಿದ್ದ ವಾನರಸೈನಿಕರ ದುರವಸ್ಥೆಯನ್ನು ನಾನೇನೆಂದು ಹೇಳಲಿ! ನಮ್ಮ ರಾಕ್ಷಸರು ಅಲ್ಲಲ್ಲಿ ಮಲಗಿದ್ದ ವಾನರರಲ್ಲಿ ಕೆಲವರನ್ನು ಆನೆಗಳಿಂದಲೂ, ಕೆಲವರನ್ನು ಕುದುರೆಗಳಿಂದಲೂ ತುಳಿಸಿಬಿಟ್ಟರು. ಕೆಲವರಮೇಲೆ ರಥಗಳನ್ನು ಹರಿಯಿಸಿ ಅವುಗಳಿಂದಲೇ ಅವರ ದೇಹವನ್ನು ಅರೆದುಬಿಟ್ಟರು. ಬೇರೆಕೆಲವರು ಬಿರುಗಾಳಿಯ ಬಡಿತಕ್ಕೆ ಸಿಕ್ಕಿದ ಮೇಘಗಳಂತೆ,ಕುದುರೆಗಳ ಕಾಲಿನ ತುಳಿತಕ್ಕೆ ಸಿಕ್ಕಿ ನಜ್ಜುಗುಜ್ಜಾಗಿ ಬಿದ್ದಿರುವರು. ಕೆಲವು ವಾನರರು ಭಯದಿಂದ ನಾನಾದಿಕ್ಕುಗಳಿಗೆ ಪಲಾಯನಮಾಡುತ್ತಿರುವಾಗ, ನಮ್ಮ ರಾಕ್ಷಸರು ಆನೆಗಳಮೇಲೆ ಬೀಳುವ ಸಿಂಹಗಳಂತೆ ಅವರನ್ನು ಬೆನ್ನಟ್ಟಿ ಹೋಗಿ ಹಿಡಿದು ಕೊಂದಿರುವರು. ಇದಲ್ಲದೆ ಆ ವಾನರರು ಭಯದಿಂದ ಅಲ್ಲಲ್ಲಿ ಪಲಾಯನಮಾಡುವಾಗ,ಸಮುದ್ರದಲ್ಲಿ ಬಿದ್ದವರು ಕೆಲವರು! ಆಕಾಶಕ್ಕೆ ಹಾರಿದವರು ಕೆಲವರು! ಅಲ್ಲಿದ್ದ ಕರಡಿಗಳೆಲ್ಲವೂ ಕಪಿಸ್ವಭಾವವನ್ನವಲಂಬಿಸಿ ಮರವನ್ನೇರಿ ಕುಳಿತುವು. ಎಲೆ ಸೀತೆ!ಇಷ್ಟರಲ್ಲಿ ಮುಗಿಸಲಿಲ್ಲ. ನಮ್ಮ ರಾಕ್ಷಸರು, ಸಮುದ್ರತೀರಪ್ರದೇಶಗಳಲ್ಲಿಯೂ, ಬೆಟ್ಟಗಳಲ್ಲಿಯೂ, ಕಾಡುಗಳಲ್ಲಿಯೂ,ಅವಿತುಕೊಂಡಿರುವ ವಾನರರನ್ನು ಹುಡುಕಿ ಹುಡುಕಿ ಅನೇಕರನ್ನು ಹಿಡಿದುಕೊಂದಿರುವರು. ಹೀಗೆ ನಮ್ಮ ಸೈನಿಕರು ನಿನ್ನ ಪತಿಯನ್ನೂ, ಅವನ ಸೇನೆಯನ್ನೂ ನಿರ್ಮೂಲಮಾಡಿಬಿಟ್ಟರು. ಎಲೆ ಸೀತೆ! ರಕ್ತದಿಂದ ತೊಯ್ದು,ದೂಳಿನಿಂದ ತುಂಬಿ ಮಲಿನವಾಗಿರುವ ರಾಮ

ಶಿರಸ್ಸನ್ನುಕೂಡ ನಮ್ಮ ರಾಕ್ಷಸರು ಇಲ್ಲಿಗೆ ತಂದಿರುವರು" ಎಂದನು. ದು ರಾತ್ಮನಾದ ರಾವಣನು ಸೀತೆಯನ್ನು ಕುರಿತು ಹೀಗೆಂದು ಹೇಳಿ, ಆಮೇಲೆ ಸಮೀಪದಲ್ಲಿದ್ದ ರಾಕ್ಷಸಿಯೊಬ್ಬಳನ್ನು ಕರೆದು, ಸೀತೆಯ ಕಿವಿಗೆ ಬೀಳುವಂ ತೆ ಆವಳನ್ನು ಕುರಿತು. "ಎಲೆ ರಾಕ್ಷಸಿ! ಈಗಿನ ಯುದ್ಧದಲ್ಲಿ ಬಹಳ ಭಯಂ ಕರಕಾರ್ಯವನ್ನು ನಡೆಸಿ ಯುದ್ಧರಂಗದಿಂದ ರಾಮನ ತಲೆಯನ್ನು ತಾನಾಗಿ ಅ ಸೆಯಿಂದ ತಂದಿಟ್ಟಿರುವ ಆ ವಿದ್ಯುಜ್ಜಿಹ್ವನನ್ನು ಕರೆದು ಕೊಂಡುಬಾ!"ಎಂ ದನು. ಅದರಂತೆಯೇ ರಾಕ್ಷಸಿಯು ಹೋಗಿ ಈ ರಾಜಾಜ್ಞೆಯನ್ನು ತಿಳಿಸಿದ ಮೇಲೆ, ವಿದ್ಯುಜ್ಜಿಹ್ವನು ತಾನು ಮಾಯೆಯಿಂದ ನಿರ್ಮಿಸಿದ ರಾಮನ ತಲೆ ಯನ್ನೂ, ಧನುಸ್ಸನ್ನೂ, ಕೈಗೆತ್ತಿಕೊಂಡು ಬಂದು, ರಾವಣನಮುಂದೆ ನಿಂ ತು, ಆವನಿಗೆ ತಲೆಬಗ್ಗಿ ನಮಸ್ಕರಿಸಿದನು. ಆಗ ರಾವಣನು,ಮುಂದೆ ನಿಂತಿದ್ದ ವಿದ್ಯುಜ್ಜಿಹ್ವನನ್ನು ನೋಡಿ, "ವಿದ್ಯುಜ್ಜಿಹ್ವಾ! ನೀನು ಯುದ್ಧರಂಗದಿಂದ ತಂದ ರಾಮನ ತಲೆಯನ್ನು ಈ ಸೀತೆಯಮುಂದೆ ತಂದಿಡು? ಈ ಬಡಹೆಂಗ ಸು ತನ್ನ ಪತಿಗುಂಟಾದ ಈ ಚರಮಾವಸ್ಥೆಯನ್ನಾದರೂ ಚೆನ್ನಾಗಿ ನೋ ಡಲಿ" ಎಂದನು. ರಾವಣನು ಈ ಮಾತನ್ನು ಹೇಳಿದೊಡನೆ, ವಿದ್ಯುಜ್ಜಿಹ್ವ ನು ನೋಡುವುದಕ್ಕೆ ಅತಿಸುಂದರವಾದ ಆ ರಾಮನ ಮಾಯಾಶಿರಸ್ಸನ್ನು ತಂದು ಸೀತೆಯಮುಂದೆ ಇರಿಸಿ, ಅಲ್ಲಿ ನಿಮಿಷಮಾತ್ರವೂ ನಿಲ್ಲದೆ ಕಣ್ಮರೆ ಯಾದನು. ಆಮೇಲೆ ರಾವಣನು ವಿದ್ಯುಜ್ಜಿಹ್ವನು ತಂದಿದ್ದ ಲೋಕಪ್ರಸಿ ದ್ಧವಾದ ಮಾಯಾಧನುಸ್ಸನ್ನು ತಾನೇ ತನ್ನ ಕೈಯಿಂದ ತೆಗೆದುಕೊಂಡು ಹೋಗಿ ಸೀತೆಯಮುಂದಿಟ್ಟು "ಸೀತೇ! ಇದೋ ನೋಡು! ದೃಢವಾದ ಹೆದೆ ಯಿಂದ ಕೂಡಿದ ಈ ಧನುಸ್ಸೂ ಕೂಡ ನಿನ್ನ ರಾಮನದು! ಕೇವಲಮನುಷ್ಯ ಮಾತ್ರನಾದ ಆ ರಾಮನನ್ನು ನಮ್ಮ ಪ್ರಹಸ್ತನು ನಿನ್ನಿನ ರಾತ್ರಿಯಲ್ಲಿ ಕೊಂದು, ಇದನ್ನು ಇಲ್ಲಿಗೆ ತಂದುಕೊಟ್ಟನು."ಎಂದನು. ಹೀಗೆ ವಿದ್ಯುಜ್ಜಿ ಹ್ವನೂ, ರಾವಣನೂ ಕ್ರಮವಾಗಿ ಮಾಯಾರಾಮಶಿರಸ್ಸನ್ನೂ, ಮಾಯಾ ಧನುಸ್ಸನ್ನೂ ಸೀತೆಯಮುಂದೆ ತಂದಿಟ್ಟಮೇಲೆ, ತಿರುಗಿ ರಾವಣನು ಮಹಾ ಪತಿವ್ರತೆಯೆಂದು ಹೆಸರುಗೊಂಡ ಆಸೀತೆಯನ್ನು "ಎಲೆ ಭದ್ರೆ!ಇನ್ನಾದರೂ ನನಗೆ ಪ್ರಸನ್ನಳಾಗು" ಎಂದನು. ಇಲ್ಲಿಗೆ ಮೂವತ್ತೊಂದನೆಯಸರ್ಗವು.

---

—•o—◆—ಸೀತೆಯು ಮಾಯಾರಾಮಶಿರಸ್ಸನ್ನು ನೋಡಿ ಅಲಪಿಸಿದುದು.—◆—o•—

ಸೀತೆಯು, ತನ್ನ ಮುಂದೆ ತಂದಿರಿಸಿದ್ದ, ಕೃತ್ರಿಮವಾದ ರಾಮಶಿರಸ್ಸನ್ನೂ, ಉತ್ತಮವಾದ ಮಾಯಾಧನುಸ್ಸನ್ನೂ,ನೋಡಿದಳು. ಹಾಗೆಯೇ ಹನುಮಂತನು ಹಿಂದೆ ತನಗೆ ತಿಳಿಸಿದ,ರಾಮ ಸುಗ್ರೀವ ಸಂಬಂಧವನ್ನು,ಈಗ ರಾವಣನ ಬಾಯಿಯಿಂದಲೂ ಕೇಳಿದಳು. ಮತ್ತು ತನ್ನ ಪ್ರಿಯನಾದ ರಾಮನ ಕಣ್ಣುಗಳಂತೆಯೇ ಅಂದವಾದ ಕಣ್ಣುಗಳನ್ನೂ, ಅದೇಮುಖವರ್ಣವನ್ನೂ, ಅದೇವಿಧವಾದ ಮುಖದ ಸೊಗಸನ್ನೂ,ಅದೇ ತಲೆ ಕೂದಲುಗಳನ್ನೂ, ಅದೇ ಕುರುಳುಗಳ ಸೊಬಗನ್ನೂ, ಈ ಮಾಯಾಶಿರಸ್ಸಿನಲ್ಲಿಯೂ ನೋಡಿದಳು. ತಾನು, ಗುರುತಿಗಾಗಿ ಹನುಮಂತನ ಕೈಯಲ್ಲಿ, ರಾಮನಿಗೆ ಕಳುಹಿಸಿಕೊಟ್ಟ ಚೂಡಾಮಣಿಯೂ ಅಲ್ಲಿರುವುದನ್ನು ಕಂಡಳು. ಈ ಹೋಲಿಕೆಗಳೆಲ್ಲವೂ, ಅವಳಿಗೆ ಅದೇ ನಿಜವಾದ ರಾಮನ ತಲೆಯೆಂಬ ಭ್ರಾಂತಿಯನ್ನು ಹುಟ್ಟಿಸಿತು. ಅವಳ ದುಃಖವು ಮಿತಿಮೀರಿ ಹೋಯಿತು. ಸಂಕಟವನ್ನು ತಡೆಯಲಾರದೆ, ಕುರರಪಕ್ಷಿಯಂತೆ ಅತಿದೀನಧ್ವನಿಯಿಂದ ರೋದಿಸುವುದಕ್ಕೆ ತೊಡಗಿ, ರಾಮನ ಸ್ಥಿತಿಗಾಗಿ ಕೈಕೇಯಿಯನ್ನು ನಿಂದಿಸುತ್ತ, “ಎಲೆ ಕೈಕೇಯಿ! ನಿನ್ನಕೋರಿಕೆಯು ಕೈಗೂಡಿತು! ರಘುಕುಲಕ್ಕೆಲ್ಲವೂ ಆನಂದವರ್ಧಕನಾದ ನನ್ನಪ್ರಿಯನು ಇದೋ ಹತನಾಗಿರುವನು! ನಿನ್ನ ಇಷ್ಟಾರ್ಥವು ಕೈಗೂಡಿತೆ? ಕಲಹವನ್ನೇ ಉದ್ದೇಶವಾಗಿಟ್ಟುಕೊಂಡು ಇಷ್ಟನರ್ಥಗಳನ್ನು ತಂದಿಟ್ಟೆಯಲ್ಲಾ!ಅಯ್ಯೋ!ಆ ನನ್ನ ಪ್ರಿಯನಾದ ರಾಮನನ್ನು ಕಾಡಿಗೋಡಿಸುವವ ನೆಪದಿಂದ, ಅವನನ್ನು ಕೊಲ್ಲಬೇಕೆಂದೆಣಿಸಿ ಕೊನೆಗೆ ಕುಲವನ್ನೇ ಹಾಳುಮಾಡಿಬಿಟ್ಟೆಯಲ್ಲಾ? ನಿನ್ನ ಕಲಹವು ಕುಲನಾಶದಲ್ಲಿಯೇ ಪರ್ಯವಸಾನಹೊಂದಿತು!ಎಲೆ ಕೈಕೇಯಿ! ನೀನು ಹಾಗೆ ಲೋಕಾಭಿರಾಮನಾದ ಆ ರಾಮನಿಗೆ, ನಾರುಬಟ್ಟೆಯನ್ನುಡಿಸಿ ನನ್ನೊಡನೆ ಸೇರಿಸಿ ಕಾಡಿಗೆ ಕಳುಹಿಸಿದೆಯಲ್ಲವೆ? ಸರ್ವಲೋಕಪ್ರಿಯನಾದ ಆ ರಾಮನು ಹಾಗೆ ನಿನಗೆ”ಮಾಡಿದ ಅಪ್ರಿಯವೇನು ? ಎಂದು ಕೈಕೇಯಿಯನ್ನು ನಾನಾವಿಧವಾಗಿ ನಿಂದಿಸಿದಳು. ದುಃಖದಿಂದ ದೀನಳಾಗಿ ನಡುಗುತ್ತ ಆ ಸೀತೆಯು, ಹೀಗೆ ಕೈಕೇಯಿಯನ್ನು ನಿಂದಿಸುತಿದ್ದು ಹಾಗೆಯೇ, ಸಂಕಟವನ್ನು ತಡೆಯಲಾರದೆ,



೨೨೮೮. ರಾವಣನು ರಾಮನ ಮಾಯಾ ಶಿರಸ್ಸನ್ನು ಸೀತೆಗೆ ತೋರಿಸಿದುದು
ಸೀತೆಯ ವ್ಯಸನವು.

ಕಡಿದ ಬಾಳೆಯಗಿಡದಂತೆ ಪ್ರಜ್ಞೆತಪ್ಪಿ ನೆಲಕ್ಕೆ ಬಿದ್ದಳು. ಆಮೇಲೆ ತಾನಾಗಿ ಯೇ ಕ್ಷಣಕಾಲದಲ್ಲಿ ಹೇಗೋ ಚೇತರಿಸಿಕೊಂಡು, ತನ್ನಮುಂದಿದ್ದ ಮಾ ಯಾಶಿರಸ್ಸನ್ನು ಕೈಗೆತ್ತಿಕೊಂಡು, ಬಾರಿಬಾರಿಗೂ ಅದನ್ನಾಘ್ರಾಣಿಸಿ ಗೋ ಳಿಡುತಿದ್ದಳು. ಆಗಾಗ ಕಣ್ಣೀರುತುಳುಕುವುದರಿಂದ ಚೆನ್ನಾಗಿ ನೋಡುವು ದಕ್ಕೂ ಸಾಧ್ಯವಿಲ್ಲದುದಕ್ಕಾಗಿ, ತನ್ನಕಣ್ಣುಗಳನ್ನು ಪ್ರಯತ್ನಪಟ್ಟು ವಿಸ್ತಾ ರವಾಗಿ ಬಿಚ್ಚುವಳು! ಹೀಗೆ ದುಃಖವಶಳಾದ ಸೀತೆಯು, ಆ ತಲೆಯನ್ನು ನೋ ಡಿಸೋಡಿ "ಅಯ್ಯೋ! ನಾನು ಕೆಟ್ಟೆನು! ಎಲೆ ಮಹಾಬಾಹೂ! ನೀನು ನಿನ್ನ ಶತ್ರು ಗಳನ್ನು ಕೊಲ್ಲದೆಹೋಗುವವನಲ್ಲವೆಂಬ ವೀರವ್ರತವನ್ನು ಹಿಡಿದಿದ್ದವನಲ್ಲ ವೆ? ಆ ನಿನ್ನ ದೃಢವ್ರತವೂ ವಿಫಲವಾಯಿತಲ್ಲಾ! ಹಾ! ಪ್ರಿಯನೆ! ಈ ನಿನ್ನ ಮರ ಣಾವಸ್ಥೆಯನ್ನು ನಾನೇ ಕಣ್ಣಾರೆ ನೋಡಬೇಕಾಯಿತೆ! ಅಯ್ಯೋ ವಿಧವೆ ಯಾದೆನಲ್ಲಾ! ಪತ್ನಿಯ ಕಣ್ಣೆದುರಿಗೆ ಪತಿಯು ಮೃತಿಹೊಂದಿದಪಕ್ಷದಲ್ಲಿ, ಅದಕ್ಕೆ ಆ ಪತ್ನಿಯಲ್ಲಿರುವ ದೋಷಗಳೇ ಕಾರಣವೆಂದು ಹೇಳುವರು! ಹೀ ಗೆ ನಾನು ಬದುಕಿರುವಾಗಲೇ ನನ್ನ ಕಣ್ಣೆದುರಿಗೆ ನೀನು ಮರಣವನ್ನು ಹೊಂ ದಿದೆಯಲ್ಲಾ? ಇದಕ್ಕೆ ನನ್ನದೋಷಗಳೇ ಕಾರಣವೇಹೊರತು ಬೇರೆಯಲ್ಲ! ಸದಾಚಾರಶೀಲನಾದ ನಿನ್ನಲ್ಲಿ ಲೇಶಮಾತ್ರವೂ ದೋಷವನ್ನೆಣಿಸುವುದಕ್ಕಿ ಲ್ಲ! ಹಾ! ಪ್ರಿಯನೆ! ಪರಮಪಾಪಿನಿಯಾದ ನನ್ನಿಂದ ನಿನಗೂ ಈ ಅವಸ್ಥೆ ಯುಂಟಾಯಿತೆ? ಎಲೆ ಆರ್ಯನೆ! ನಾನು ಇದುವರೆಗೆ ದುಃಖದಮೇಲೆ ದುಃಖವ ನ್ನೇ ಅನುಭವಿಸುತ್ತಬಂದೆನು! ಈಗ ದುಃಖವೆಂಬ ಮಹಾಸಮುದ್ರದಲ್ಲಿ ಮು ಳುಗಿಯೇ ಹೋದೆನು! ಮಂದಭಾಗ್ಯೆಯಾದನನ್ನನ್ನು ರಕ್ಷಿಸಬೇಕೆಂದು ಬಂದು ನೀನೂ ಈಗ ಹತನಾದೆಯಲ್ಲಾ! ಇನ್ನು ನನ್ನಗತಿಯೇನು? ರಾಮಾ! ಅತ್ತೆಯಾದ ಕೌಸಲ್ಯಾದೇವಿಯು ಪರಮಪ್ರೇಮಪಾತ್ರನಾದ ನಿನ್ನಂತಹ ಪುತ್ರನನ್ನು ಕಳೆದುಕೊಂಡಮೇಲೆ ಅವಳ ದುಃಖಕ್ಕೆ ಮಿತಿಯುಂಟೆ! ಕರುವನ್ನು ಕಳೆದು ಕೊಂಡ ಹಸುವಿನಂತೆ ನಿನ್ನನ್ನಗಲಿ ಎಷ್ಟು ದುಃಖಪಡುವಳೋ? ಹಾ! ಆ ರ್ಯಪುತ್ರನೆ? ಎಷ್ಟೋಮಂದಿ ಜೋಯಿಸರು ನಿನ್ನನ್ನು ದೀರ್ಘಾಯುವೆಂದು ಹೇಳುತಿದ್ದರಲ್ಲಾ! ಅವರ ಮಾತುಗಳೆಲ್ಲವೂ ಅಸತ್ಯವಾಯಿತು! ಅಲ್ಪಾ ಯುಸ್ಸಿನಲ್ಲಿಯೇ ನಿನಗೆ ಮರಣವುಂಟಾಯಿತು! ಅಥವಾ ಅವರನ್ನು ಅಸತ್ಯವಾ ದಿಗಳೆಂದು ಹೇಳುವುದೇಕೆ? ಸಮಸ್ತಭೂತಗಳಿಗೂ ಕಾರಣಭೂತವಾದ

ಕಾಲವೆಂಬುದು (ಪರಮಾತ್ಮನು) ಅವರವರ ದುಷ್ಕರ್ಮಗಳನ್ನು ಪಕ್ವಮಾ ಡುವರೀತಿಗೆ ತಕ್ಕಂತೆ, ಭವಿಷ್ಯದರ್ಥಗಳನ್ನು ತಿಳಿದ ಪ್ರಾಜ್ಞನಾದ ಸತ್ಪು ರುಷನಿಗೂಕೂಡ ಅವರವರ ವಿಷಯವಾದ ಪ್ರಜ್ಞೆಯು ಬದಲಾಯಿಸಿಹೋ ಗುವುದು. ಹಾಗೆಯೇ ನಿನ್ನ ವಿಷಯದಲ್ಲಿಯೂ!ಆ ಜ್ಯೋತಿಷ್ಕರ ಪ್ರಜ್ಞೆಯು ಕೆಟ್ಟುಹೋಗಿರಬಹುದಾದುದರಿಂದಲೇ, ಅವರ ಮಾತು ಅಸತ್ಯವೆನಿಸಿಕೊಂ ಡಿತು. ಎಲೆ! ಪ್ರಿಯನೆ! ನೀನು ಸಮಸ್ತವ್ಯಸನಗಳನ್ನೂ ನಿವಾರಿಸುವುದಕ್ಕೆ ಬೇಕಾದ ಉಪಾಯಗಳೆಲ್ಲವನ್ನೂ ತಿಳಿದವನು. ನೀತಿಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವನು. ಹೀಗಿರುವಾಗಲೂ ನೀನು ಮೃತ್ಯುವಿನ ಕೈಗೆ ಸಿಕ್ಕಿಬಿದ್ದುದು ಹೇ ಗೆ? ಹಾ ಕಷ್ಟವೆ? ನೀನು ಸಮುದ್ರತೀರದಲ್ಲಿ ಬಂದಿಳಿದ ಆ ರಾತ್ರಿಯು ಎ ಷ್ಟುಘೋರವಾದುದು! ಕ್ರೂರವಾಗಿಯೂ, ಭಯಂಕರವಾಗಿಯೂ ಇದ್ದ ಆಕಾಲರಾತ್ರಿಯು ಕಮಲದಂತೆ ಕಣ್ಣುಳ್ಳ ನಿನ್ನ ಸೌಂದರ್ಯವನ್ನು ನೋಡಿ ಮೋಹಿಸಿ, ನಿನ್ನನ್ನಾಲಿಂಗಿಸುವುದಕ್ಕಾಗಿಯೇ ನನ್ನಿಂದ ನಿನ್ನನ್ನಗಲಿಸಿ ಕದ್ದು ಯ್ದಿರಬೇಕು! ಎಲೆಮಹಾಬಾಹೂ!ದಿಕ್ಕಿಲ್ಲದೆದುಃಖಿಸುತ್ತಿರುವನನ್ನನ್ನು ಬಿಟ್ಟು ಈ ಭೂಮಿಯನ್ನಾಲಿಂಗಿಸಿ ಮಲಗಿರುವೆಯಲ್ಲಾ! ನನಗಿಂತಲೂ ಈ ಭೂ ಮಿಯೇ ನಿನಗೆ ಪ್ರಿಯತಮಳಾದಳೆ? ಪುರುಷೋತ್ತಮನಾದ ನಿನಗಿದು ಯು ಕ್ತವೆ? ಎಲೆ ವೀರನೆ! ಚಿನ್ನದ ಕಟ್ಟುಗಳಿಂದ ರಮ್ಯವಾದ ಯಾವ ಈ ನಿನ್ನ ಧನುಸ್ಸನ್ನು ನಾವಿಬ್ಬರೂ ಸೇರಿ ಯಾವಾಗಲೂ ಗಂಧಮಾಲ್ಯಾದಿಗಳಿಂದ ಪೂಜಿಸುತಿದ್ದೆವೋ, ಅಂತಹ ಪ್ರಿಯಧನುಸ್ಸೂ ಹೀಗೆ ದಿಕ್ಕಿಲ್ಲದ ಸ್ಥಿತಿಯನ್ನು ಹೊಂದಿತಲ್ಲಾ! ಎಲೆ ದೋಷರಹಿತನೆ! ನೀನಾದರೋ ಈಗ ಸ್ವರ್ಗದಲ್ಲಿ ಸಮ ಸ್ತ ಪಿತೃದೇವತೆಗಳೊಡಗೂಡಿರುವ ಪೂಜ್ಯನಾದ ನಿನ್ನ ತಂದೆ ದಶರಥಮ ಹಾರಾಜನೊಡನೆ ಸೇರಿ ಸುಖದಿಂದಿರುವೆ! ಮತ್ತು ಇದಕ್ಕೆ ಮೊದಲೇ ಸ್ವರ್ಗವನ್ನು ಸೇರಿದವರಾಗಿಯೂ, ದೊಡ್ಡ ಧರ್ಮಕಾರ್ಯಗಳನ್ನು ನಡೆಸಿ ದ ಯಾ ಸತ್ಕರ್ಮಗಳಿಗೆ ತಕ್ಕ ಪದವಿಯಲ್ಲಿರುವವರಾಗಿಯೂ, ಪುಣ್ಯಶಾಲಿ ಗಳಾಗಿಯೂ ಇರುವ ನಿನ್ನ ವಂಶದ ಪುರಾತನರಾಜರನ್ನು ನೀನು ವಿಮಾನಸ್ಥ ನಾಗಿ ನೋಡುತ್ತಿರುವೆ? ಎಲೆ ರಾಜನೆ! ನೀನೇಕೆ ನನ್ನನ್ನು ಕಣ್ಣೆತ್ತಿಯೂ ನೋಡುವುದಿಲ್ಲ! ನೀನೇಕೆ ನನ್ನೊಡನೆ ಮಾತಾಡುವುದಿಲ್ಲ! ನಾನು ಇನ್ನೂ ಏನೂತಿಳಿಯದ ಬಾಲೆಯಲ್ಲವೆ? ಬಾಲ್ಯದಲ್ಲಿಯೇ ನಿನ್ನನ್ನು ಕೈಹಿಡಿದವಳೆಂ

ಬುವನ್ನು ಕಾಣೆಯಾ? ನಾನು ನಿನ್ನನ್ನೇ ನಂಬಿ ಬಂದವಳಲ್ಲವೆ? ಕ್ಷಣಮಾತ್ರ ವೂ ನಿನ್ನನ್ನಗಲದೆ ಅನುಸರಿಸುತ್ತಿದ್ದವಳಲ್ಲವೆ? ಇಂತಹ ನಾನು ಇಷ್ಟುದು ರವಸ್ಥೆಯಲ್ಲಿರುವಾಗಲೂ ಉಪೇಕ್ಷಿಸಬಹುದೆ? ಎಲೆ ಕಾಕುತ್ಥ್ಸನೆ! ನೀನು ವಿನಾಹದಲ್ಲಿ ನನ್ನ ಕೈಯನ್ನು ಹಿಡಿದಾಗ, ನನ್ನೊಡನೆ ಸೇರಿಯೇ ಎಲ್ಲವ ನ್ನೂ ನಡೆಸುವುದಾಗಿ ಪ್ರತಿಜ್ಞೆಮಾಡಲಿಲ್ಲವೆ? ಅದನ್ನಾದರೂ ಸ್ಮರಿಸಿ ಕೊಂಡು ಈಗ ದುಃಖಿತಳಾದ ನನ್ನನ್ನು ನಿನ್ನೊಡನೆ ಕರೆದುಕೊಂಡು ಹೋ ಗು! ರಾಮಾ! ನೀನು ಲೋಕೋತ್ತರವಾದ ನಡತೆಯುಳ್ಳವನು! ನಿನ್ನ ವಿ ಯೋಗದಿಂದ ಕಂದಿಕುಂದಿ ಕೃಶಳಾಗಿರುವ ಪ್ರಿಯಪತ್ನಿಯಾದ ನನ್ನನ್ನು ಪೇಕ್ಷಿಸಿ, ಹೀಗೆ ಈ ಲೋಕವನ್ನೇ ಬಿಟ್ಟು ನೀನು ಪರಲೋಕಕ್ಕೆ ಹೋಗ ಬಹುದೆ? ಹಾ ಕಷ್ಟವೆ? ಮೊದಲು ಮಂಗಳದ್ರವ್ಯಗಳಿಂದಲಂಕರಿಸುವುದಕ್ಕೆ ಯೋಗ್ಯವಾಗಿ, [1] ನನ್ನೊಬ್ಬಳಿಂದಲೇ ಆಲಿಂಗಿಸಲ್ಪಡುತಿದ್ದ ಈ ನನ್ನ ಪ್ರಿಯ ನ ದೇಹವನ್ನು, ಅಯ್ಯೋ! ಈಗ ಹದ್ದು ಮೊದಲಾದ ಮಾಂಸಭಕ್ಷಕಗಳೆಲ್ಲ ವೂ ಇಲ್ಲಿಂದಲ್ಲಿಗೆ ಎಳೆದಾಡುವಂತಾಯಿತಲ್ಲಾ! [2] ವನವಾಸವು ಮುಗಿದ ಮೇಲೆ ಭೂರಿದಕ್ಷಿಣೆಗಳುಳ್ಳ ಅಗ್ನಿಷ್ಟೋಮಾದಿಯಾಗಗಳ ಮೂಲಕವಾಗಿ ದೇವತೆಗಳ ಪೂಜೆಯನ್ನು ನಡೆಸಿ, ಯಜ್ಞಸಂಬಂಧವಾದ ಅಗ್ನಿಹೋತ್ರದಿಂ ದ ತಕ್ಕ ಸಂಸ್ಕಾರವನ್ನೂ ಹೊಂದುವುದಕ್ಕಿಲ್ಲದೆ ಹೋಯಿತಲ್ಲಾ! ಹಿಂದೆ ಅಯೋಧ್ಯೆಯನ್ನುಬಿಟ್ಟು ಕಾಡಿಗೆ ಹೊರಟುಬಂದ ನಾವು ಮೂವರಲ್ಲಿ, ಈಗ ಲಕ್ಷ್ಮಣನೊಬ್ಬನೇ ನಮ್ಮ ಪಟ್ಟಣಕ್ಕೆ ಹಿಂತಿರುಗಿ ಹೋದರೆ, ಅವನನ್ನು

---

1 ಇದರಿಂದ ರಾಮನಿಗೆ ಭಾರ್ಯಾಂತರವಿಲ್ಲವೆಂದು ಸೂಚಿತವಾಗುವುದು.

2 ವನವಾಸಕ್ಕೆ ಮೊದಲು ರಾಮನಿಗೆ ಅಗ್ನ್ಯಾಧಾನವಿರಲಿಲ್ಲ. ಈ ವನವಾಸಕಾಲ ವು ಕಳೆದಮೇಲೆ ಅಯೋಧ್ಯೆಗೆ ಬಂದು ಅಗ್ನ್ಯಾಧಾನಾಗ್ನಿಷ್ಟೋಮಾದಿಗಳನ್ನು ನಡೆಸಿ, ಆ ಮೇಲೆ ಕ್ರಮವಾಗಿ ಆಯುಸ್ಸುತೀರಿದಾಗ ಆಸಂಸ್ಕೃತಾಗ್ನಿಯಿಂದಲೇ ದೇಹಸಂಸ್ಕಾರವ ನ್ನು ಹೊಂದಬೇಕಾಗಿತ್ತೆಂದೂ, ಹಾಗಿಲ್ಲದೆ ಮಧ್ಯಕಾಲದಲ್ಲಿ ಆಕಸ್ಮಿಕಮರಣವುಂಟಾಯಿ ತೆಂದೂ ಹೇಳಿ ಸೀತೆಯು ದುಃಖಿಸಿದುದಾಗಿ ಇಲ್ಲಿನ ಭಾವವು. ಇದರಿಂದ ರಾಮನು ವನ ವಾಸಕ್ಕೆ ಮೊದಲು ಯಾಗಾದಿಗಳನ್ನನುಷ್ಠಿಸಲಿಲ್ಲವೆಂದು ವ್ಯಕ್ತವಾಗುವುದು. ಈ ವಿಚಾ ರವು ಅಯೋಧ್ಯಾಕಾಂಡದಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ.

ನೋಡಿ ಕೌಸಲ್ಯೆಯು ಆತುರದಿಂದ ಬಂದು, “ಸೀತೆಯೂ ರಾಮನೂ ಎ
ಲ್ಲಿರುವರು!” ಎಂದು ಕೇಳುವುದರಲ್ಲಿ ಸಂದೇಹವಿಲ್ಲ. ಆಗ ಲಕ್ಷ್ಮಣನು ಕೌ
ಸಲ್ಯೆಯ ಮಾತಿಗೆ ಏನೆಂದು ಉತ್ತರವನ್ನು ಕೊಡುವನು?ಮೊದಲೇ ಭಯಾ
ತುರದಿಂದ ಬಂದ ಆ ಕೌಸಲ್ಯೆಯೊಡನೆ ಲಕ್ಷ್ಮಣನು “ ಅರ್ಧರಾತ್ರಿಯಲ್ಲಿ
ರಾಕ್ಷಸರು ಬಂದು ರಾಮನನ್ನೂ, ಅವನ ಮಿತ್ರಬಲವನ್ನೂ ಕೊಂದರೆಂದು
ಹೇಳಬೇಕಾಗುವುದಲ್ಲವೆ?ಈ ಮಾತನ್ನು ಕೇಳಿದರೆ ಕೌಸಲ್ಯೆಯಗತಿಯೇನು?
ನಿದ್ರಿಸುತಿದ್ದಾಗ ನಿನಗೆ ರಾಕ್ಷಸರಿಂದುಂಟಾದ ವಧವನ್ನೂ, ನಾನು ರಾಕ್ಷ
ಸರ ಕೈಗೆ ಬಿದ್ದಿರುವುದನ್ನೂ ಕೌಸಲ್ಯೆಯು ಕೇಳಿದಕ್ಷಣವೇ ಎದೆಯೊಡೆ
ದು ಪ್ರಾಣವನ್ನು ಬಿಡುವಳು. ಹೀಗೆ ದುರ್ಮರಣಕ್ಕೆ ಯೋಗ್ಯನಲ್ಲದ ಮ
ಹಾರಾಜಕುಮಾರನಾದ ಆ ರಾಮನು, ಸಮುದ್ರದಂತೆ ಅತಿಪ್ರಚಂಡರಾದ
ಖರಾದಿರಾಕ್ಷಸರನ್ನೆಲ್ಲಾ ಲೀಲಾಮಾತ್ರದಿಂದಲೇ ಕೊಂದು, ಆ ಮಹಾಸ
ಮುದ್ರವನ್ನೂ ದಾಟಿ ಬಂದು, ಕೊನೆಗೆ ನಿರ್ಭಾಗ್ಯಳಾದ ನನ್ನನಿಮಿತ್ತವಾಗಿ
ಹಸುವಿನ ಹಜ್ಜೆಯಂತೆ ಅತ್ಯಲ್ಪನಾದ ಆ ಪ್ರಹಸ್ತನಿಂದ ಹತನಾಗುವು
ದೆಂದರೇನು? (ಅಗಾಧವಾದ ಮಹಾಸಮುದ್ರವನ್ನು ದಾಟಿ ಬಂದವನು ಹ
ಸುವಿನ ಹಜ್ಜೆಯಿಂದುಂಟಾದ ಹಳ್ಳದಲ್ಲಿ ಮುಳುಗಿ ಸತ್ತಂತಾಯಿತಲ್ಲವೆ?)ಅ
ಯ್ಯೋ! ನಾನು ಕುಲಘಾತುಕಿಯೆಂಬುದನ್ನು ತಿಳಿಯದೆ, ರಾಮನು ಅಜ್ಞಾ
ನದಿಂದ ನನ್ನನ್ನು ಕೈಹಿಡಿದನು. ಕೈಹಿಡಿದ ಹೆಂಡತಿಯಾದ ನಾನೇ ಅವನಿ
ಗೆ ಮೃತ್ಯುವಾದೆನು! ನಾನು ಪೂರ್ವಜನ್ಮದಲ್ಲಿ ಯಾರೋ ಕನ್ಯಾದಾನವ
ನ್ನು ಮಾಡುತಿದ್ದಾಗ ಅವರ ಕೈಯನ್ನು ಹಿಡಿದು ತಡೆದಿರಬೇಕು! ಆ ಪಾಪ
ದಿಂದಲೇ ಈಗ ನಾನು ಸರ್ವರಕ್ಷಕನಾಗಿಯೂ, ಸರ್ವಾತಿಥಿಪೂಜಕನಾಗಿ
ಯೂ ಇರುವ ಅಂತಹ ರಾಮನಿಗೆ ಕೈಹಿಡಿದ ಹೆಂಡತಿಯಾಗಿದ್ದರೂ, ಅವ
ನೊಡನೆ ಭೋಗವನ್ನನುಭವಿಸುವ ಕಾಲದಲ್ಲಿ ಇಂತಹ ದುಃಖಕ್ಕೆ ಗುರಿಯಾ
ದೆನು. ರಾವಣಾ!ಇನ್ನು ನೀನಾದರೂ ಶೀಘ್ರದಲ್ಲಿಯೇ ನನ್ನನ್ನು ಕೊಂದು,
ಈರಾಮನ ದೇಹದೊಡನೆ ಸೇರಿಸಿ ಬಿಡು! ಈ ರೀತಿಯಿಂದಲಾದರೂ ಪತಿಪತ್ನಿ
ಯರನ್ನು ಸೇರಿಸಿದ ಪುಣ್ಯಕ್ಕೆ ಭಾಗಿಯಾಗು! ಇದರಿಂದ ನಿನಗೆ ಸರ್ವೋತ್ತ
ಮವಾದ ಶ್ರೇಯಸ್ಸುಂಟು! ಈ ಸಮಯದಲ್ಲಿ ಇದೇ ಸರ್ವೋತ್ತಮವಾದ
ಕಲ್ಯಾಣವು ! ಈಗಲೇ ಈ ಕಾರ್ಯವನ್ನು ತಪ್ಪದೆ ನಡೆಸಿಬಿಡು! ರಾವ

ಣಾ! ಈ ರಾಮನ ತಲೆಯೊಡನೆ ನನ್ನ ತಲೆಯನ್ನೂ, ಅವನ ದೇಹದೊ ಡನೆ ಈ ನನ್ನ ದೇಹವನ್ನೂ ಬೇರೆಬೇರೆಯಾಗಿ ಸೇರಿಸಿಡು! ನಾನೂ ಮ ಹಾತ್ಮನಾದ ಆ ಪತಿಯನ್ನೇ ಹಿಂಬಾಲಿಸಿ ಹೋಗುವೆನು. (ನಾನು ಪತಿ ಯನ್ನಗಲಿಸಮೇಲೆ ದಿಕ್ಕಿಲ್ಲದ ಈ ಹಾಳುಬದುಕನ್ನು ಒಂದು ಮುಹೂ ರ್ತಮಾತ್ರವೂ ಸಹಿಸಲಾರೆನು. ನಾನು ತಂದೆಯ ಮನೆಯಲ್ಲಿದ್ದಾಗ, ವೇದ ವಿತ್ತುಗಳಾದ ಅನೇಕಬ್ರಾಹ್ಮಣರು ಆಗಾಗ ಬಂದು "ಯಾವಸ್ತ್ರೀಯರು ತನ್ನ ಪತಿಯನ್ನು ಪ್ರೇಮಿಸುವರೋ ಅವರಿಗೆ ಬಹಳ ಶ್ರೇಯಸ್ಕರಗಳಾದ ಪುಣ್ಯಲೋಕಗಳುಂಟು" ಎಂದು ಹೇಳುತಿದ್ದುದನ್ನು ಕೇಳಿರುವೆನು? ತಾಳ್ಮೆ ಯೂ, ಇಂದ್ರಿಯನಿಗ್ರಹವೂ, ದಾನವೂ, ಧರ್ಮವೂ, ಸತ್ಯವೂ, ಕೃತಜ್ಞ ತೆಯೂ ಅಹಿಂಸೆ ಮೊದಲಾದ ಇನ್ನೂ ಅನೇಕಸದ್ಗುಣಗಳೂ ಯಾವನ ಲ್ಲಿ ಪೂರ್ಣವಾಗಿ ತುಂಬಿದ್ದುವೋ,ಅಂತಹ ಪತಿಯನ್ನೇ ಕಳೆದುಕೊಂಡಮೇ ಲೆ ಇನ್ನು ನನಗೆ ಬೇರೆ ಗತಿಯೇನು?) ಎಂದು ನಾನಾವಿಧವಾಗಿ ವಿಲಪಿಸುತಿ ದ್ದಳು.ಮತ್ತು ಆಕೆಯು ಅಗಲವಾಗಿ ಬಿಚ್ಚಿದ ಕಣ್ಣುಗಳಿಂದ,ಆಶಿರಸ್ಸನ್ನೂ ಧನುಸ್ಸನ್ನೂ, ಬಾರಿಬಾರಿಗೂ ನೋಡಿ ಸಂಕಟದಿಂದ ತತ್ತಳಿಸುತಿದ್ದಳು, ಹೀಗೆ ಸೀತೆಯು ಬಹಳವಾಗಿ ವಿಲಪಿಸುತ್ತಿರುವಾಗಲೇ,ದ್ವಾರಪಾಲಕನಾದ ರಾಕ್ಷಸನೊಬ್ಬನು ಪ್ರಭುವಾದ ರಾವಣನಬಳಿಗೆ ಬಂದು "ಮಹಾರಾಜನಿಗೆ ಜಯವಾಗಲಿ" ಎಂದು ಹೇಳಿ ಕೈಮುಗಿದು ನಮಸ್ಕರಿಸಿ, "ಮಹಾಪ್ರಭೂ! ನಮ್ಮ ಸೇನಾಪತಿಯಾದ ಪ್ರಹಸ್ತನು ಸಮಸ್ತಮಂತ್ರಿಗಳೊಡನೆ ಕೂಡಿ ತಮ್ಮನ್ನು ನೋಡುವುದಕ್ಕಾಗಿ ನಿರೀಕ್ಷಿಸುತ್ತಿರುವನು. ಈ ವಿಷಯವನ್ನು ತ ಮಗೆ ತಿಳಿಸುವುದಕ್ಕಾಗಿ ನನ್ನನ್ನು ಕಳುಹಿಸಿದನು. ಎಲೆ ಮಹಾರಾಜನೆ! ನಿಜವಾಗಿ ಯಾವುದೋ ದೊಡ್ಡಕಾರ್ಯವಿರಬೇಕು? ಅದನ್ನು ಈಗಲೇ ನಡೆಸಿ ರಬೇಕಾಗಿದ್ದರೂ, ನೀನು ರಾಜನಾದುದರಿಂದ ನಿನ್ನಾಜ್ಞೆಯನ್ನು ನಿರೀ ಕ್ಷಿಸಬೇಕಾಯಿತು. ಅದು ಬಹಳಕಷ್ಟಸಾಧ್ಯವಾಗಿರುವುದು. ಆದುದರಿಂದ ನೀನು ಎಷ್ಟೇ ಆವಶ್ಯಕಾರ್ಯವಿದ್ದರೂ ಬಿಟ್ಟು, ಈಗಲೇ ಹೋಗಿ ಅವರಿಗೆ ದ ರ್ಶನವನ್ನು ಕೊಡುವುದು ಮೇಲು" ಎಂದನು. ದ್ವಾರಪಾಲಕನ ಮಾತ ನ್ನು ಕೇಳಿ ರಾವಣನು,ಆಗಲೇ ಅಶೋಕವನವನ್ನು ಬಿಟ್ಟು, ಮಂತ್ರಿಗಳನ್ನು ನೋಡುವುದಕ್ಕಾಗಿ ಹೊರಟನು.ರಾವಣನು ರಾಮನ ಪರಾಕ್ರಮವನ್ನೇ ಮ

ನಸ್ಸಿನಲ್ಲಿ ಗುಣಿಸುತ್ತ, ಆ ಮಂತ್ರಿಗಳಿದ್ದ ಸಭೆಗೆ ಪ್ರವೇಶಿಸಿ, ತಾನು ಮುಂ ದೆ ನಡೆಸಬೇಕಾದ ಕಾರ್ಯವನ್ನು ಮಂತ್ರಿಗಳೊಡನೆ ಆಲೋಚಿಸಿ, ಯುದ್ಧ ಕಾರ್ಯಗಳಿಗೆ ತಕ್ಕ ಸನ್ನಾಹಗಳನ್ನು ನಿಶ್ಚಯಿಸಿಕೊಂಡನು. ಅತ್ತಲಾಗಿ ರಾವ ಣನು ಅಶೋಕವನವನ್ನು ಬಿಟ್ಟು ಹೊರಟ ಉತ್ತರಕ್ಷಣದಲ್ಲಿಯೇ, ಅಲ್ಲಿದ್ದ ಮಾಯಾನಿರ್ಮಿತವಾದ ರಾಮನ ತಲೆಯೂ,ಆ ಧನುಸ್ಸೂ ಅಗೋಚರಗಳಾ ದುವು. ಇತ್ತಲಾಗಿ ರಾಕ್ಷಸೇಶ್ವರನಾದ ರಾವಣನು, ಭಯಂಕರಪರಾಕ್ರಮ ವುಳ್ಳ ತನ್ನ ಸಮಸ್ತಮಂತ್ರಿಗಳೊಡನೆ ಕಲೆತು,ಮುಂದೆ ರಾಮನ ವಿಷಯದ ಲ್ಲಿ ತಾನು ಮಾಡಿಕೊಳ್ಳಬೇಕಾದ ಸನ್ನಾಹಗಳೇನೆಂಬುದನ್ನು ಮಂತ್ರಾ ಲೋಚನೆಯಿಂದ ನಿಶ್ಚಯಿಸಿಕೊಂಡು, ಆಗ ತನ್ನ ಸಮೀಪದಲ್ಲಿ ತನಗೆ ಶ್ರೇಯಃಕಾಂಕ್ಷಿಗಳಾದ ಸೇನಾಪತಿಗಳನ್ನು ನೋಡಿ “ಎಲೆ ಬಲಾಧ್ಯಕ್ಷರೆ! ಈಗಲೇ ನೀವು ನಮ್ಮ ರಣಭೇರಿಗಳನ್ನು ಸ್ಪಷ್ಟವಾಗಿ ಮೊಳಗಿಸಿ, ಶೀಘ್ರ ದಲ್ಲಿಯೇ ನಮ್ಮ ಸೇನೆಗಳೆಲ್ಲವನ್ನೂ ಕರೆಸಬೇಕು. [1]ಕಾರಣವೇನೆಂದು ಯಾ ರಿಗೂ ತಿಳಿಸಕೂಡದು!” ಎಂದನು. ಆಗ ಅಲ್ಲಿದ್ದ ಸೇನಾಪತಿಗಳೆಲ್ಲರೂ ವಿನ ಯದಿಂದ. “ಮಹಾರಾಜನೆ ! ಅಪ್ಪಣೆ!” ಎಂದು ಹೇಳಿ, ರಾಜಾಜ್ಞೆಯಂತೆ ತಮ್ಮ ತಮ್ಮ ಸೇನೆಗಳೆಲ್ಲವನ್ನೂ ಕರೆಸಿ,ಆ ಸೇನೆಯೆಲ್ಲವೂ ಸಿದ್ಧವಾಗಿ ಬಂದು ನಿಂತಿರುವ ಸಂಗತಿಯನ್ನೂ ತಮ್ಮ ಪ್ರಭುವಾದ ರಾವಣನಿಗೆ ತಿಳಿಸಿದರು. ಇಲ್ಲಿಗೆ ಮೂವತ್ತೆರಡನೆಯ ಸರ್ಗವು.

---

## ವಿಭೀಷಣನ ಭಾರ್ಯೆಯಾದ ಸರಮೆಯು ಸೀತೆಯನ್ನು ಸಮಾಧಾನಪಡಿಸಿದುದು.

ಹೀಗೆ ಸೀತೆಯು ಕೃತ್ರಿಮವಾದ ರಾಮಶಿರಸ್ಸನ್ನು ನೋಡಿ ಭ್ರಾಂತಿ ಪಟ್ಟು ಬಹಳವಾಗಿ ದುಃಖಿಸುವುದನ್ನು ನೋಡಿ, ಆಕೆಯಲ್ಲಿ ನಿಜವಾದ ಪ್ರೇ

---

1 ಇಲ್ಲಿ ರಾವಣನು ತನ್ನ ಮನಸ್ಸಿನಲ್ಲಿರುವ ಯುದ್ಧದ ಕಾರಣವನ್ನು ಪ್ರಕಟವಾ ಗಿ ಪಟ್ಟಣದಲ್ಲಿ ಸಾರಿಸಿದಪಕ್ಷದಲ್ಲಿ, ಈ ವೃತ್ತಾಂತವು ಸೀತೆಯ ಕಿವಿಗೂ ಬೀಳುವುದಲ್ಲ ವೆ? ಆಗ ತಾನು ಇದುವರೆಗೂ ಸೀತೆಯನ್ನು ಮೋಸಗೊಳಿಸುವುದಕ್ಕಾಗಿ ಅವಳೊಡನೆ ಹೇಳಿಬಂದಿರುವ ರಾಮವಧವೃತ್ತಾಂತವೆಲ್ಲವೂ ಅವಳಿಗೆ ಸುಳ್ಳೆಂದು ತೋರಿ ಹೋಗುವು ದರಿಂದ, ಇಲ್ಲಿ ಕಾರಣವನ್ನು ಮರೆಸಿಟ್ಟನೆಂದು ತಿಳಿಯಬೇಕು.

ಮವುಳ್ಳವಳಾಗಿಯೂ, ಪ್ರಿಯಸಖಿಯಾಗಿಯೂ, ಇದ್ದ ವಿಭೀಷಣಭಾರ್ಯೆ ಯಾದ ಸರಮೆಯೆಂಬ ರಾಕ್ಷಸಿಯು, ಆ ಸೀತೆಯ ಸಮೀಪಕ್ಕೆ ಬಂದಳು. ಸೀತೆಯು ರಾಕ್ಷಸೇಶ್ವರನಾದ ರಾವಣನವಶಕ್ಕೆ ಸಿಕ್ಕಿ,ತನ್ನ ಪತಿಯಾದರಾ ಮನು ಮೃತನಾದನೆಂದು ದುಃಖಿಸುತ್ತಿರುವಾಗ, ಸರಮೆಯು ಎಷ್ಟೋಷ್ಟೋ ಮೃದುವಾಕ್ಯಗಳನ್ನು ಹೇಳಿ ಅವಳನ್ನು ನಾನಾವಿಧದಿಂದ ಸಮಾಧಾನಪ ಡಿಸಿದಳು. [1]ಆ ಸರಮೆಯೆಂಬವಳು ರಾವಣಾಜ್ಞೆಯಿಂದಲೇ ಅಲ್ಲಿ ಸೀತೆಯ ಮೇಲೆ ಕಾವಲಾಗಿರುತಿದ್ದರೂ, ಆಕೆಯು ಬಹಳದಯಾಸ್ವಭಾವವುಳ್ಳವಳಾ ದುದರಿಂದ, ಅವಳಿಗೆ ಸೀತೆಯಲ್ಲಿ ಒಂದುವಿಧವಾದ ಸ್ನೇಹಭಾವವು ಹುಟ್ಟಿ ಹೋಯಿತು. ಮತ್ತು ಆಕೆಯು ಬಹಳ ಸ್ಥಿರಬುದ್ಧಿಯುಳ್ಳವಳಾಗಿಯೂ ಇದ್ದುದರಿಂದ ಆಕೆಗೆ ಸೀತೆಯಲ್ಲಿ ಮೊದಲುಹುಟ್ಟಿದ ಪ್ರೇಮವೇ ಸ್ಥಿರವಾಗಿ ಯೂ ನೆಲೆಗೊಂಡಿತು.ಅಲ್ಲಿ ಸೀತೆಯು ರಾಮನವಿಷಯವಾಗಿ ಭ್ರಾಂತಿಪಟ್ಟು ದುಃಖದಿಂದ ಆಗಾಗ ನೆಲದಮೇಲೆ ಬಿದ್ದುಹೊರಳುತ್ತ,ಬೂದಿಯಲ್ಲಿ ಬಿದ್ದು ಹೊರಳಿದ ಹೆಣ್ಣುಕುದುರೆಯಂತೆ ಕೊಳೆಮುಚ್ಚಿದ ಮೈಯುಳ್ಳವಳಾಗಿ ಕುಳಿತು ಸಂಕಟಪಡುತ್ತಿರಲು, ಸರಮೆಯು ಸಮೀಪಕ್ಕೆ ಬಂದು ಅವಳನ್ನು ಕೈಯಿಂದ ಸವರಿ ಸಮಾಧಾನಪಡಿಸಿ, ಕೊನೆಗೆ ಅವಳಲ್ಲಿ ಎಣೆಯಿಲ್ಲದ

---

1 ಇಲ್ಲಿ ರಾವಣನೇ ಈ ಸರಮೆಯೆಂಬವಳನ್ನು ಸೀತೆಯಮೇಲೆ ಕಾವಲಿರಿಸಿದ್ದು ದಾಗಿ ಕಾಣಿಸಲ್ಪಟ್ಟಿದೆ. ಮುಂದೆ ಈ ಸರಮೆಯು ಸೀತೆಯನ್ನು ಸಮಾಧಾನಪಡಿಸುವಾಗ "ಸಖೀ ಸ್ನೇಹೇನ ತದ್ಭೀರು ಮಯಾ ಸರ್ವಂ ಪ್ರತಿಶ್ರುತಂ । ಲೀನಯಾ ಗಹನೇ ಶೂನ್ಯೇ ಭಯಮುತ್ಸೃಜ್ಯ ರಾವಣಾತ್" ಎಂಬುದಾಗಿ ರಾವಣಭಯಕ್ಕಾಗಿ ಮರೆಯಲ್ಲಿದ್ದು ತಾನು ಅವನ ಮಾತುಗಳನ್ನೆಲ್ಲಾ ಕೇಳಿ ಬಂದುದಾಗಿ ಹೇಳುವಳು.ರಾವಣ ನಿಯುಕ್ತಳಾಗಿದ್ದ ಈಕೆಗೆ ಭಯಕ್ಕೆ ಕಾರಣವೇನು? ಎಂದರೆ, ರಾವಣವಿಭೀಷಣರಿಗೆ ಮನಸ್ತಾಪವು ಹುಟ್ಟುವವರೆಗೂ ಈಕೆಯು ಅಂತರಂಗಭೂತಳಂತೆ ನಟಿಸುತ್ತ ನಿರ್ಭಯಳಾಗಿದ್ದರೂ, ವಿಭೀಷಣನು ತೊರೆದುಹೋದಮೇಲೆ ರಾವಣನ ಅಂತರಂಗವಾರ್ತೆಗಳನ್ನು ಕೇಳುವುದಕ್ಕೆ ಭಯಪಟ್ಟು ಗೂಢವಾಗಿ ಕೇಳಿದಳೆಂದು ಗ್ರಹಿಸಬಹುದು.ಅಥವಾ ರಾವಣನಿಗೆ ಸೂಸೆಯಾಗಿರುವ ತಾನು ಅವನಮುಂದೆ ನಿಲ್ಲುವುದಕ್ಕೆ ನಾಚಿಕೆಗೊಂಡು ಕ ಣ್ಮರೆಯಾಗಿ ನಿಂತುದಾಗಿಯೂ ಊಹಿಸಬಹುದು. ಈ ಸರಮೆಯು ಬೇರೊಬ್ಬಳಾಗಿರ ಬಹುದೆಂದೂ ಕೆಲವರ ಅಭಿಪ್ರಾಯವು.

ಸ್ನೇಹವಾತ್ಸಲ್ಯಗಳಿಂದ ಅವಳಿಗೆ ರಾವಣನ ರಹಸ್ಯವೃತ್ತಾಂತವನ್ನು ತಿಳಿಸುವವಳಾಗಿ ''ಎಲಮ್ಮ ಸೀತೆ! ಸಾಕು ಬಿಡು! ದುಃಖಿಸಬೇಡ! ಸಮಾಧಾನದಿಂದಿರು! ನೀನು ಕೇವಲಭಯಸ್ವಭಾವವುಳ್ಳವಳಾದುದರಿಂದ ಹೀಗೆ ನಿಷ್ಕಾರಣವಾಗಿ ಭಯಪಡುವಂತಿದೆ! ಈಗ ರಾವಣನು ನಿನಗೆ ಹೇಳಿದ ಮಾತುಗಳನ್ನೂ, ಅದಕ್ಕೆ ನೀನು ಹೇಳಿದ ಪ್ರತ್ಯುತ್ತರಗಳನ್ನೂ ನಾನು ನಿನ್ನಲ್ಲಿರುವ ಪ್ರೇಮದಿಂದ ಆಗಲೇ ಕಿವಿಗೊಟ್ಟು ಕೇಳಿದೆನು. ನಾನು ಆಕಾಶದಲ್ಲಿ ಯಾರೂ ಕಾಣದಂತೆ ಒಂದಾನೊಂದು ವೃಕ್ಷರಂಧ್ರದಲ್ಲಿ ಮರೆಯಾಗಿದ್ದು, ನಿಮ್ಮಿಬ್ಬರ ವಿವಾದವನ್ನೂ ಕೇಳಿದೆನು. ಎಲೆಸೀತೆ! ನಿನ್ನನಿಮಿತ್ತವಾಗಿ ನಾನು ಪ್ರಾಣಗಳಲ್ಲಿಯೂ ಪ್ರೀತಿಯಿಡುವವಳಲ್ಲ! ಆದುದರಿಂದ ರಾವಣನಿಂದುಂಟಾಗಬಹುದಾದ ಭಯವನ್ನೂ ಯೋಚಿಸದೆ ನಿಮ್ಮ ಮಾತುಗಳನ್ನು ನಾನು ಕೇಳುತಿದ್ದೆನು. ನಿನ್ನ ದುಃಖವನ್ನು ನೋಡಿ ನಾನು ಕ್ಷಣಮಾತ್ರವೂ ಸಹಿಸಲಾರೆನು. ಮತ್ತು ಎಲೆ ದೇವಿ! ರಾಕ್ಷಸರಾಜನಾದ ರಾವಣನು ಈಗ ಯಾವ ಉದ್ದೇಶದಿಂದ ಆತುರಪಟ್ಟು ಇಲ್ಲಿಂದ ಓಡಿಹೋದನೋ ಅದನ್ನೂ ನಾನು ಹೊರಗೆ ಹೋಗಿ ತಿಳಿದುಬಂದೆನು. ಎಲೆ ಸೀತೆ ! ನಿನ್ನ ಮನಸ್ಸಿನಲ್ಲಿರುವ ಭ್ರಾಂತಿಯನ್ನು ಬಿಡು! ರಾಮನನ್ನು ವಧಿಸುವುದು ಯಾರಿಗೂ ಸಾಧ್ಯವಲ್ಲ! ಮಹಾತ್ಮನಾದ ಆತನನ್ನು ಮಲಗಿರುವಾಗ ಮೋಸದಿಂದ ಕೊಲ್ಲುವುದೆಂದರೇನು? ಪುರುಷೋತ್ತಮನಾದ ಆತನಿಗೆ ಬೇರೆಯವರಿಂದ ಕೊಲೆಯೆಂದರೇನು? ಪುರುಷೋತ್ತಮನಾದ ಆತನು ಯಾವ ದಶೆಯಲ್ಲಿದ್ದರೂ ಅವನನ್ನು ಕೊಲ್ಲುವುದೇ ಅಸಂಭವವು. ಮತ್ತು ಅವನಕಡೆಯ ವಾನರರನ್ನಾದರೂ ಕೊಲ್ಲುವುದಕ್ಕೆ ಬೇರೊಬ್ಬರಿಂದ ಸಾಧ್ಯವಲ್ಲ. ಕೈಗೆ ಸಿಕ್ಕಿದ ಮರಗಿಡಗಳಿಂದಲೇ ಅವರು ಎಂತಹ ಶತ್ರುಗಳೊಡನೆಯಾದರೂ ಹೋರಾಡಬಲ್ಲರು. ಇದರಮೇಲೆ ದೇವತೆಗಳಿಗೆ ದೇವೇಂದ್ರನು ಹೇಗೋಹಾಗೆ ರಾಮನೇ ಅವರಿಗೆ ರಕ್ಷಕನಾಗಿ ನಿಂತಿರುವನು. ಅಂತವರಿಗೆ ಬೇರೊಬ್ಬರಿಂದ ವಧವೆಂದರೇನು ? ಎಲೆ ದೇವಿ ! ನಿನ್ನ ಪತಿಯಾದ ರಾಮನೇನು ಸಾಮಾನ್ಯನೆ ? ದುಂಡಗೆ ಉದ್ದವಾದ ಮಹಾಭುಜವುಳ್ಳವನು. ಶ್ರೀಮಂತನು. ಎಣೆಯಿಲ್ಲದ ವೀರ್ಯವುಳ್ಳವನು. ಉತ್ತಮಧನುಸ್ಸನ್ನು ಧರಿಸಿದವನು! ಅಂದವಾದ ಅವಯವಸನ್ನಿವೇಶವುಳ್ಳವನು. ಧರ್ಮಾತ್ಮನು. ಸ

ಮಸ್ತಭೂಮಂಡಲದಲ್ಲಿಯೂ ಪ್ರಸಿದ್ಧಿ ಹೊಂದಿದವನು. ಎಣೆಯಿಲ್ಲದ ಪರಾ ಕ್ರಮವುಳ್ಳವನು. ಅಂತಹ ರಾಮನು ತನ್ನ ತಮ್ಮನಾದ ಲಕ್ಷ್ಮಣನೊಡನೆ ಕೂಡಿರುವಾಗ, ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ, ತನ್ನನ್ನು ಮಾತ್ರವೇ ಅಲ್ಲದೆ, ತನಗೆ ಸೇರಿದವರೆಲ್ಲವನ್ನೂ ನಿರಪಾಯವಾಗಿ ರಕ್ಷಿಸಬ ಲ್ಲನು. ಅವನ ಕ್ಷೇಮಕ್ಕೆ ಎಂದಿಗೂ ಲೋಪವಿಲ್ಲ. ಅವನಿಗೆ ತಿಳಿಯದ ನೀತಿ ಶಾಸ್ತ್ರಗಳಿಲ್ಲ! ಎಷ್ಟೋ ಶತ್ರುಸೈನ್ಯಗಳು ಗುಂಪುಗುಂಪಾಗಿ ಬಂದರೂ ಲಕ್ಷ್ಯ ಮಾಡದೆ ಲೀಲಾಮಾತ್ರದಿಂದ ಧ್ವಂಸಮಾಡಬಲ್ಲನು. ಅವನಲ್ಲಿರುವ ಬಲ ಪೌರುಷಗಳನ್ನು ಅಷ್ಟಿಷ್ಟೆಂದು ಹೇಳುವುದಕ್ಕಿಲ್ಲ. ಜಯಲಕ್ಷ್ಮಿಗೆ ನಿತ್ಯನಿವಾ ಸವಾಗಿರುವನು. ಯಾವ ಶತ್ರುಗಳನ್ನಾದರೂ ಹುಟ್ಟಡಗಿಸಬಲ್ಲನು. ಮತ್ತು ಕೇವಲ ಬಲಪೌರುಷಾದಿಗಳಿಂದಮಾತ್ರವೇಅಲ್ಲದೆ,ಸಮಸ್ತಸೌಭಾಗ್ಯಲಕ್ಷಣ ಗಳಿಂದಲೂ ಕೂಡಿರುವ ಆರಾಮನನ್ನು ಈಪ್ರಪಂಚದಲ್ಲಿ ಬೇರೊಬ್ಬನು ಕೊ ಲ್ಲುವುದೆಂದರೇನು?ಆ ರಾಮನು ಎಷ್ಟುಮಾತ್ರವೂರಾಕ್ಷಸರಿಂದ ಹತನಾಗಿಲ್ಲ. ಇದು ನಿಜವು. "ಹಾಗಿದ್ದರೆ ಇಲ್ಲಿ ರಾಮನತಲೆಯೂ, ಬಿಲ್ಲೂ ಬಿದ್ದಿರುವುದ ಕ್ಕೆ ಕಾರಣವೇ"ನೆಂದು ಕೇಳುವೆಯಾ? ಎಲೆ ಸೀತೆ! ಇದು ರಾವಣನ ಮೋ ಸವೇ ಹೊರತು ಬೇರೆಯಲ್ಲ! ಆವನ ಬುದ್ಧಿಯೂ, ಅವನ ಕಾರ್ಯವೂ ಬಹಳ ಆಯೋಗ್ಯವಾದುದು. ಸಮಸ್ತಪ್ರಾಣಿಗಳಿಗೂ ಅವನು ವಿರೋಧಿಯು! ಬಹಳ ಕ್ರೂರಸ್ವಭಾವವುಳ್ಳವನು!ಮಾಯೆಗಳೆಲ್ಲವನ್ನೂ ಬಲ್ಲವನು !ನಿನ್ನನ್ನು ಮೋಸಪಡಿಸುವುದಕ್ಕಾಗಿಯೇ ಈ ಮಾಯೆಯನ್ನು ಪ್ರಯೋಗಿಸಿರುವನು. ಎಲೆ ಸೀತೆ! ಇನ್ನು ನಿನ್ನ ಸಮಸ್ತಶೋಕವೂ ನೀಗಿತು. ಶುಭವೂ ನಿನ್ನನ್ನು ಸಮೀಪಿಸುತ್ತಿರುವುದು. ನಿಶ್ಚಯವಾಗಿ ಇನ್ನು ಮೇಲೆ ಲಕ್ಷ್ಮಿಯು ನಿನ್ನ ನ್ನು ಸೇರುವಳು. ಇದು ನಿಜವು.ನನ್ನ ಪ್ರಿಯವಾಕ್ಯವನ್ನು ಗಮನಿಸಿ ಕೇಳು ! ರಾಮನು ವಾನರಸೇನೆಯೊಡನೆ ಸಮುದ್ರವನ್ನುದಾಟಿ ಅದರ ದಕ್ಷಿಣತೀರ ದಲ್ಲಿ ಆ ಸೇನೆಯನ್ನಿಳಿಸಿರುವನು. ಆ ರಾಮನು ಲಕ್ಷ್ಮಣನೊಡನೆ ಕೃತಕೃತ್ಯ ನಾಗಿ ಬಂದು ನಿಂತಿರುವುದನ್ನೂ ನೋಡಿದೆನು.. ಸಮುದ್ರತೀರದಲ್ಲಿ ವಾನರ ಸೈನ್ಯದಿಂದ ಸುರಕ್ಷಿತನಾಗಿರುವನು. ಆಗಲೇ ರಾವಣನು ರಾಮನ ಸಂಗತಿ ಯನ್ನು ತಿಳಿದುಬರುವುದಕ್ಕಾಗಿ ವೇಗಶಾಲಿಗಳಾದ ಕೆಲವುದೂತರನ್ನು ಕಳು ಹಿಸಿದ್ದನು. ಆದರಂತೆಯೇ ಅವರು ಅಲ್ಲಿಗೆ ಹೋಗಿಬಂದು, ಆಗಲೇ ರಾಮನು

ಸಮುದ್ರವನ್ನು ದಾಟಿ ಬಂದುದಾಗಿ ವೃತ್ತಾಂತವನ್ನೂ ತಂದಿರುವರು. ಎಲೆ ವಿಶಾಲಾಕ್ಷಿ! ಈ ವೃತ್ತಾಂತವನ್ನು ಕೇಳಿದುದರಿಂದಲೇ ಈಗ ರಾವಣನುಮಂತ್ರಿಗಳೊಡನೆ ಕಲೆತು ಆಲೋಚಿಸುತ್ತಿರುವನು" ಎಂದಳು. ಹೀಗೆ ಸರಮೆಯು ಮಾತಾಡುತ್ತಿರುವಾಗಲೇ ಅತ್ತಲಾಗಿ ಪಟ್ಟಣದೊಳಗೆ ಸೈನಿಕರ ಯುದ್ಧಸನ್ನಾಹದಿಂದ ಹುಟ್ಟಿದ ಭಯಂಕರವಾದ ಕೋಲಾಹಲಧ್ವನಿಯೂ, ರಣವಾದ್ಯಧ್ವನಿಗಳೂ ಸೀತೆಯ ಕಿವಿಗೆ ಕೇಳಿಸಿದವು. ಆಗ ಸರಮೆಯೂ, ಆ ರಣಭೇರೀಧ್ವನಿಯನ್ನು ಕೇಳಿ ಮೃದುವಾಕ್ಯದಿಂದ ಸೀತೆಯನ್ನು ಕುರಿತು "ಎಲೆ ಭೀರು! ನೀನು ನಿಷ್ಕಾರಣವಾಗಿ ಭಯಪಡುವವಳೆಂದು ಈಗ ನನಗೆ ಚೆನ್ನಾಗಿ ಗೊತ್ತಾಯಿತೆ? ಅದೋ ಅಲ್ಲಿ ಕೇಳಿದೆಯಾ? ಸೈನಿಕರನ್ನು ಯುದ್ಧಕ್ಕಾಗಿ ಪ್ರೋತ್ಸಾಹಿಸುವ ರಣಭೇರಿಯು ಎಷ್ಟು ಭಯಂಕರವಾಗಿ ನುಡಿಸಲ್ಪಡುವುದು ನೋಡು. ಗುಡುಗಿನಂತೆ ಗಂಭೀರವಾದ ಆ ಧ್ವನಿಯನ್ನು ಚೆನ್ನಾಗಿ ಕೇಳು! ಅದೋ! ಸೈನಿಕರ ಕೋಲಾಹಲಗಳನ್ನು ಕೇಳಿದೆಯಾ? ಈಗ ಅಲ್ಲಲ್ಲಿ ಮಾವುತರು ತಮ್ಮ ಮದದಾನೆಗಳನ್ನು ಅಲಂಕರಿಸುತ್ತಿರುವರು! ರಥಿಕರು ರಥಗಳಿಗೆ ಕುದುರೆಗಳನ್ನು ಕಟ್ಟುತ್ತಿರುವರು! ಅಲ್ಲಲ್ಲಿ ರಾವುತರು ಸಾವಿರಾರು ಸಂಖ್ಯೆಯಿಂದ ಸೇರಿ, ಕೈಯಲ್ಲಿ ಪ್ರಾಸಗಳನ್ನು ಹಿಡಿದು ಯುದ್ಧೋತ್ಸಾಹದಿಂದ ಸುತ್ತುತ್ತಿರುವರು! ಅಲ್ಲಲ್ಲಿ ಪದಾತಿಗಳು ಯುದ್ಧಸನ್ನದ್ಧರಾಗಿ ಗುಂಪುಕೂಡುತ್ತಿರುವರು. ಹೀಗೆ ಅದ್ಭುತದರ್ಶನವುಳ್ಳ ರಥಗಜತುರಗಪದಾತಿಗಳೆಂಬ ಚತುರಂಗಸೈನ್ಯಗಳೂ, ಜಲಪ್ರವಾಹದಿಂದ ಮೊಳಗುವ ಸಮುದ್ರದಂತೆ ಉತ್ಸಾಹದಿಂದ ಸಿಂಹನಾದಗಳನ್ನು ಮಾಡುತ್ತ, ಅಲ್ಲಲ್ಲಿನ ರಾಜಮಾರ್ಗಗಳನ್ನು ತುಂಬಿ ಮಹಾವೇಗದಿಂದ ಹೊರಟು ಬರುತ್ತಿರುವುವು. ಎಲೆ ಸೀತೆ! ಈಗಲೇ ಸಾಣೆಹಿಡಿದು ಥಳಥಳಿಸುತ್ತಿರುವ ಶಸ್ತ್ರಗಳಿಂದಲೂ, ಗುರಾಣಿಗಳಿಂದಲೂ, ಯುದ್ಧಕವಚಗಳಿಂದಲೂ, ಆನೆ, ಕುದುರೆ, ಮೊದಲಾದ ಚತುರಂಗಸೈನ್ಯಗಳ ಭೂಷಣಗಳಿಂದಲೂ ಮೇಲೆ ಹೊರಟು ಪ್ರಸರಿಸುತ್ತಿರುವ ಕಾಂತಿಯು, ನಾನಾವರ್ಣಗಳಿಂದ ಆಕಾಶದಲ್ಲಿ ವ್ಯಾಪಿಸಿ, ದೊಡ್ಡ ಕಾಡಿನಲ್ಲಿ ಹಬ್ಬಿಬೆಳೆದ ಕಾಡುಗಿಚ್ಚು ಅಲ್ಲಿನ ಬಗೆಬಗೆಯ ಮೂಲಿಕೆಗಳ ಸಂಬಂಧದಿಂದ ನಾನಾವರ್ಣದ ಕಾಂತಿಯನ್ನು ಹರಡುವಂತೆ ವಿಚಿತ್ರವರ್ಣದಿಂದ ಕಾಣುವುದು ನೋಡು! ಆನೆಗಳಿಗೆ ಕಟ್ಟಿದ ಗಂಟೆಗಳ ಧ್ವನಿಯನ್ನೂ,

ರಥಚಕ್ರಧ್ವನಿಯನ್ನೂ, ಕುದುರೆಗಳ ಹೇಷಾಧ್ವನಿಯನ್ನೂ, ರಣವಾದ್ಯ ಧ್ವನಿಗಳನ್ನೂ ಚೆನ್ನಾಗಿ ಕೇಳು. ರಾವಣನ ಭಟರಾದ ರಾಕ್ಷಸರೆಲ್ಲರೂ, ತಮ್ಮ ತಮ್ಮ ಆಯುಧಗಳನ್ನೆತ್ತಿ ಹಿಡಿದು, ನೋಡುವವರಿಗೆ ಭಯವನ್ನು ಹುಟ್ಟಿ ಸುವಂತೆ ಪ್ರಬಲವಾದ ಸನ್ನಾಹವನ್ನು ನಡೆಸುತ್ತಿರುವರು. ಎಲೆ ಸೀತೆ! ಇನ್ನು ನಿನ್ನ ದುಃಖವೆಲ್ಲವೂ ನೀಗಿತು. ಇನ್ನು ನಿನಗೆ ವಿಜಯಲಕ್ಷ್ಮಿಯು ಕೈ ಸೇರುವಳು. ರಾಕ್ಷಸರಿಗೂ ಮಹಾಭಯವು ಬಂದೊದಗಿತು! ರಾಮನು ಕಮ ಲದಳದಂತೆ ಕಣ್ಣುಳ್ಳವನಾದುದರಿಂದ, ಅಂತಹ ಸರ್ವೋತ್ತಮವಾದ ನಯ ನಸೌಭಾಗ್ಯಲಕ್ಷಣವುಳ್ಳ ಆತನನ್ನು ಜಯಲಕ್ಷ್ಮಿಯು ಅವಶ್ಯವಾಗಿ ವರಿಸ ದೆ ಬಿಡಳು. ಮತ್ತು ದೇವತೆಗಳಲ್ಲಿ ದೇವೇಂದ್ರನು ಹೇಗೋ ಹಾಗೆ, ಪುರುಷರ ಲ್ಲಿ ಮೇಲಾಗಿ ಮೆರೆವ ಮಹಾಪ್ರಭಾವವುಳ್ಳ ಆತನನ್ನು ಭಾಗ್ಯಲಕ್ಷ್ಮಿಯು ಎಂದಿಗೂ ಕೈಬಿಡುವವಳಲ್ಲ. ಅವನ ಪರಾಕ್ರಮವನ್ನು ಅಷ್ಟಿಷ್ಟೆಂದು ನಿರ್ಣ ಯಿಸುವುದಕ್ಕಿಲ್ಲ! ರಾವಣನು ತನಗಿದಿರಾಗಿ ಬರುವುದೊಂದನ್ನೇ ನಿರೀಕ್ಷಿಸು ತ್ತ ರಾಮನು ತನ್ನ ಕೋಪವನ್ನು ಇದುವರೆಗೂ ತಡೆದಿಟ್ಟುಕೊಂಡಿರುವನು. ರಾವಣನು ಯುದ್ಧಕ್ಕೆ ಬಂದು ನಿಲ್ಲುವುದೊಂದೇ ತಡೆ! ಆಗಲೇ ಯುದ್ಧದಲ್ಲಿ ಅವನನ್ನು ಕೊಂದು ನಿನ್ನೊಡನೆ ಸೇರುವನು. ಇಂದ್ರನು ಉಪೇಂದ್ರನೊ ಡಗೂಡಿ ತನ್ನ ಶತ್ರುಗಳನ್ನಡಗಿಸಿದಂತೆ, ರಾಮನು ಲಕ್ಷ್ಮಣಸಹಿತನಾಗಿ ಇ ಲ್ಲಿನ ರಾಕ್ಷಸರಲ್ಲಿ ತನ್ನ ಪರಾಕ್ರಮವನ್ನು ಶೀಘ್ರದಲ್ಲಿಯೇ ತೋರಿಸುವನು. ಎಲೆ ದೇವಿ! ಇನ್ನು ಹೆಚ್ಚಾಗಿ ಹೇಳಿದುದೇನು? ಶೀಘ್ರದಲ್ಲಿಯೇ ರಾಮನು ಇಲ್ಲಿಗೆ ಬಂದು ನಿನ್ನನ್ನು ಪ್ರೀತಿಯಿಂದಾಲಿಂಗಿಸಿ, ತನ್ನ ತೊ ಡೆಯಲ್ಲಿ ಕುಳ್ಳಿರಿಸಿಕೊಂಡಾಗ, ಕೃತಾರ್ಥಳಾಗಿ ಸಂತೋಷದಿಂದಿರುವ ನಿನ್ನನ್ನು ನಾನು ನೋಡುವೆನು. ಎಲೆ ಸೀತೆ! ಆಗ ನಿನ್ನ ಮುಖದಲ್ಲಿ ಕಾಣು ವ ಉಲ್ಲಾಸವನ್ನು ನೋಡಬೇಕೆಂಬುದೇ ನನ್ನ ಮುಖ್ಯವಾದ ಕೋರಿಕೆ ಯು. ಎಲೆ ಭದ್ರೆ! ಇಲ್ಲಿಗೆ ಬಂದು ನಿನ್ನೊಡನೆ ಸೇರಿ ನಿನ್ನನ್ನಾಲಿಂಗಿಸುತ್ತಿರು ವ ವಿಶಾಲವಕ್ಷನಾದ ಆ ರಾಮನ ವಕ್ಷಸ್ಥಲದಲ್ಲಿ ನೀನು ಶೀಘ್ರದಲ್ಲಿ ಯೇ ನಿನ್ನ ಆನಂದಬಾಷ್ಪವನ್ನು ತುಳುಕಿಸುವೆ! ನೀನು ನಿನ್ನ ಪ್ರಿ ಯಪತಿಯನ್ನಗಲಿದುದು ಮೊದಲು, ಇದುವರೆಗೆ ಹಲವು ತಿಂಗಳುಗಳಿಂದ ಯಾವ ಸಂಸ್ಕಾರವೂ ಇಲ್ಲದೆ ಒಂದೇ ಜಡೆಯಾಗಿ ಬೆಳೆದು ನಿನ್ನ ಜಘನಗಳ

ಮೇಲೆ ತೂಗಾಡುತ್ತಿರುವ ಈ ನಿನ್ನ ತುರುಬನ್ನು, ಮಹಾಬಲಾಢ್ಯನಾದ ರಾಮನು ಇನ್ನು ಶೀಘ್ರದಲ್ಲಿಯೇ ತನ್ನ ಬೆರಳುಗಳಿಂದ ಬಿಡಿಸಿ ಸಂಸ್ಕರಿಸುವನು. ಉದಿಸಿದ ಪೂರ್ಣಚಂದ್ರನಂತಿರುವ ಆ ರಾಮನ ಮುದ್ದುಮುಖವನ್ನು ನೋಡಿದೊಡನೆ, ಹಾವು ತನ್ನ ಪೊರೆಯನ್ನು ಸುಲಿದುಬಿಸುಡುವಂತೆ, ನೀನೂ ದುಃಖಸೂಚಕಗಳಾದ ಈ ಬಾಷ್ಪಗಳನ್ನು ಬಿಟ್ಟೊಗೆವುವೆ! ಎಲೆ ದೇವಿ! ಸುಖಾರ್ಹನಾದ ಆ ನಿನ್ನ ಪ್ರಿಯನು ಇನ್ನು ಶೀಘ್ರದಲ್ಲಿಯೇ ಯುದ್ಧದಲ್ಲಿ ರಾವಣನನ್ನುಕೊಂದು ಕೃತಾರ್ಥನಾಗಿ ಪ್ರಿಯಭಾರ್ಯೆಯಾದ ನಿನ್ನೊಡಗೂಡಿ ಸುಖಿಸುವನು. ಸಸಿಗಳಿಂದ ಕೂಡಿದ ಭೂಮಿಯು ಸುವೃಷ್ಟಿಯಿಂದ ಉಲ್ಲಾಸಹೊಂದುವಂತೆ, ನೀನೂ ಮಹಾತ್ಮನಾದ ಆ ರಾಮನೊಡಗೂಡಿ ಆವನ ಪರಾಕ್ರಮದಿಂದ ಉಲ್ಲಾಸಹೊಂದುವೆ. ಯಾವನು ಪರ್ವತೋತ್ತಮವಾದ ಮೇರುವಿನ ಸುತ್ತಲೂ, ಕುದುರೆಯಂತೆ ಶೀಘ್ರವಾದ ಮಂಡಲಗತಿಯಿಂದ ಪ್ರದಕ್ಷಿಣವಾಗಿ ಸುತ್ತಿಸುತ್ತಿಬರುವನೋ, ಅಂತಹ ಸೂರ್ಯದೇವನನ್ನು ಈಗ ನೀನು ಮರೆಹೊಕ್ಕು ಪ್ರಾರ್ಥಿಸು! ಈ ಸೂರ್ಯದೇವನೇ ಸಮಸ್ತಪ್ರಜೆಗಳಿಗೂ ಕಾರಣಭೂತನು! ಆದುದರಿಂದ ನಿನ್ನ ಇಷ್ಟಸಿದ್ಧಿಗಾಗಿ ಈಗಲೇ ನೀನು ಈ ಸೂರ್ಯದೇವನನ್ನು ಶರಣುಹೊಂದು" ಎಂದಳು. ಇಲ್ಲಿಗೆ ಮೂವತ್ತುಮೂರನೆಯ ಸರ್ಗವು.

{ ಸರಮೆಯು ರಾವಣನ ಅಭಿಪ್ರಾಯವನ್ನು ತಿಳಿದುಬಂದು ಸೀತೆಗೆ ಹೇಳಿದುದು. }

ಹೀಗೆ ಸೀತೆಯು ರಾವಣನ ಮೋಸದ ಮಾತಿಗೆ ಮರುಳಾಗಿ ಸಂಕಟಪಡುತ್ತಿರುವುದನ್ನು ನೋಡಿ ಸರಮೆಯು, ಆಕಾಶವು ಜಲವರ್ಷದಿಂದ ಭೂಮಿಯನ್ನು ತಂಪೇರಿಸುವಂತೆ, ತನ್ನ ವಾಕ್ಯಗಳಿಂದ ಆವಳನ್ನು ಸಮಾಧಾನಪಡಿಸಿದಳು. ಸರಮೆಯು ಕಾಲೋಚಿತವಾದ ಕಾರ್ಯವನ್ನು ಬಲ್ಲವಳಾದುದರಿಂದ, ಸೀತೆಗೆ ತನ್ನಿಂದಾದಷ್ಟು ಪ್ರಿಯವನ್ನುಂಟುಮಾಡಬೇಕೆಂದೆಣಿಸಿ, ಮಂದಹಾಸಪೂರ್ವಕವಾಗಿ ಆಕೆಯನ್ನು ಕುರಿತು "ಎಲೆ ನೀಲಾಕ್ಷಿ! ಈಗ ನಾನು ಯಾರಿಗೂ ತಿಳಿಯದಂತೆ ನಿನ್ನಪತಿಯಾದ ರಾಮನಬಳಿಗೆ ಹೋಗಿ, ನಿನ್ನ ಕ್ಷೇಮವನ್ನು ಆವನಿಗೆ ತಿಳಿಸಿಬರಬೇಕೆಂದಿರುವೆನು. ಈ ವಿಷಯದಲ್ಲಿ ಅಷ್ಟುದೂ

ರಕ್ಕೆ ಹೋಗಿ ಬರಲು ನನಗೆ ಶಕ್ತಿಯಿಲ್ಲವೆಂದೆಣಿಸಬೇಡ! ನಿರಾಧಾರವಾದ ಆಕಾಶದಲ್ಲಿಯೂ ಸಂಚರಿಸಬಲ್ಲೆನು! ನಾನುಮಾತ್ರ ಆಕಾಶದಲ್ಲಿ ಹೊರಟರೆ, ವಾಯುವಾಗಲಿ, ಗರುಡನಾಗಲಿ, ನನಗೆ ಸಮಾನರಾಗಿ ನಡೆದು ನನ್ನನ್ನು ಹಿಂಬಾಲಿಸಲಾರರು. ನಾನು ಅಲ್ಲಿಗೆ ಹೋಗಿ ಬರುವುದು ನಿನಗೆ ಸಮ್ಮತವೇ?" ಎಂದಳು. ಸರಮೆಯು ಹೀಗೆಂದು ಹೇಳಿದ ಮಾತನ್ನು ಕೇಳಿ ಸೀತೆಯು ಕಿವಿಗಿಂಪಾಗಿಯೂ, ಮೃದುವಾಗಿಯೂ ಇರುವ ಮಾತಿನಿಂದ, "ಅಮ್ಮ ಸರಮೆ! ನಿನ್ನ ಶಕ್ತಿಯನ್ನು ನಾನು ಬಲ್ಲೆನು. ಆಕಾಶಕ್ಕಾಗಲಿ, ಕೆಳಗೆ ಪಾತಾಳಕ್ಕಾಗಲಿ ಹೋಗಿ ಬರುವುದಕ್ಕೂ ನಿನಗೆ ಶಕ್ತಿಯುಂಟು. ನನ್ನ ವಿಷಯವಾಗಿ ಎಷ್ಟೋ ದುಷ್ಕರಕಾರ್ಯವನ್ನಾದರೂ ನೀನು ನಡೆಸಬಲ್ಲೆಯೆಂಬುದನ್ನೂ ಬಲ್ಲೆನು. ಅದು ಹಾಗಿರಲಿ! ನನಗೆ ಹಿತವನ್ನು ಮಾಡಿಯೇತೀರಬೇಕೆಂಬ ಕೋರಿಕೆಯು ನಿನಗೆ ಸ್ಥಿರವಾಗಿದ್ದಪಕ್ಷದಲ್ಲಿ, ನೀನು ಈಗಲೇ ರಾವಣನಬಳಿಗೆ ಹೋಗಿ, ಅವನ ಸನ್ನಾಹಗಳೇನೆಂದು ತಿಳಿದು ಬರಬೇಕು! ಇದರಿಂದ ಫಲವೇನೆಂದು ಕೇಳುವೆಯಾ? ಆ ರಾವಣನು ಬಹಳ ಮಾಯಾವಿಯು! ಅತಿಕ್ರೂರಸ್ವಭಾವವುಳ್ಳವನು! ದುಷ್ಟಾತ್ಮನು! ಯಾವಾಗಲೂ ಶತ್ರುಗಳನ್ನು ಗೋಳಾಡಿಸತಕ್ಕವನು. ಆಗಾಗ ಮದ್ಯವನ್ನು ಕುಡಿಸಿದಂತೆ, ಅವನು ಮಾತುಮಾತಿಗೂ ನನ್ನನ್ನು ಮೋಸಪಡಿಸುತ್ತಿರುವನು. ಮುಖವಿಕಾರಗಳಿಂದಲೂ, ಮಾತಿನಿಂದಲೂ ಆಗಾಗ ಹೆದರಿಸುತ್ತಿರುವನು. ನನ್ನಮೇಲೆ ಕಾವಲಿರುವ ಈ ಘೋರರಾಕ್ಷಸಿಯರಿಂದಲೂ ಭಯಗೊಳಿಸುತ್ತಿರುವನು. ನನ್ನ ಭಯವೋ ಮಿತಿಮೀರಿ ಹೋಗಿರುವುದು! ನನ್ನ ಜೀವದಲ್ಲಿಯೇ ನನಗೆ ಸಂದೇಹವು ಹುಟ್ಟಿರುವುದು. ನನ್ನ ಮನಸ್ಸಿಗೆ ಕ್ಷಣಮಾತ್ರವೂ ನೆಮ್ಮದಿಯಿಲ್ಲ. ಯಾವಾಗಲೂ ನಾನು ಅವನ ಭಯದಿಂದಲೇ ಈ ಅಶೋಕವನದಲ್ಲಿ ತತ್ತಳಿಸುತ್ತಿರುವೆನು. ಆದುದರಿಂದ ಆ ರಾವಣನ ಪೂರ್ವೋತ್ತರಗಳೇನೆಂಬುದನ್ನೂ, ಅವನು ಮುಂದೆ ನಡೆಸಬೇಕೆಂದಿರುವ ಕಾರ್ಯವೇನೆಂಬುದನ್ನೂ ನೀನು ತಿಳಿದುಬಂದುಹೇಳಿದರೆ, ನನಗೆ ಎಷ್ಟೋ ಉಪಕಾರಮಾಡಿದಂತಾಗುವುದು. ಇದೇ ನೀನು ನನ್ನಲ್ಲಿ ತೋರಿಸತಕ್ಕ ಪರಮಾನುಗ್ರಹವು" ಎಂದಳು. ಮಧುರಭಾಷಿಣಿಯಾದ ಸೀತೆಯು ಕಣ್ಣೀರುಬಿಟ್ಟು ಹೀಗೆಂದು ಹೇಳಲು, ಸರಮೆಯು ಅವಳ ಕಣ್ಣೀರನ್ನು ಕೈಯಿಂದೊರಸುತ್ತ, "ಎಲೆ ಸೀತೆ! ಈ ಉದ್ದೇಶವು ನಿನಗಿದ್ದಪಕ್ಷದಲ್ಲಿ

ಈಗಲೇ ನಾನು ಹೋಗಿ ನಿನ್ನ ಶತ್ರುವಾದ ಆ ರಾವಣನ ಅಭಿಪ್ರಾಯವ
ನ್ನು ತಿಳಿದು ಬರುವೆನು! ಸಂದೇಹಪಡಬೇಡ! ಕ್ಷಣಮಾತ್ರದಲ್ಲಿ ಬರುವೆನು
ನೋಡು!" ಎಂದಳು. ಸರಮೆಯು ಹೀಗೆಂದು ಹೇಳಿ, ಆಗಲೇ ರಾವಣನ ಅರ
ಮನೆಗೆ ಬಂದು, ಅಲ್ಲಿ ಅವನು ತನ್ನ ಮಂತ್ರಿಗಳೊಡನೆ ಮಾತಾಡುತಿದ್ದ ವಿಷ
ಯಗಳೆಲ್ಲವನ್ನೂ ರಹಸ್ಯವಾಗಿ ನಿಂತು ಕೇಳಿದಳು. ಇತರರ ಮನೋನಿಶ್ಚಯ
ವನ್ನು ತಿಳಿಯುವುದರಲ್ಲಿ ನಿಪುಣೆಯಾದ ಆ ಸರಮೆಯು, ದುರಾತ್ಮನಾದ ಆ
ರಾವಣನ ನಿಶ್ಚಯವೆಲ್ಲವನ್ನೂ ಕಿವಿಯಾರೆ ಕೇಳಿ ತಿಳಿದುಕೊಂಡು, ಅಲ್ಲಿಂದ
ಹಿಂತಿರುಗಿ ಅಶೋಕವನಕ್ಕೆ ಬಂದಳು. ಅಲ್ಲಿ ಪದ್ಮಪೀಠವನ್ನು ಬಿಟ್ಟುಬಂದಿ
ರುವ ಮಹಾಲಕ್ಷ್ಮಿಯಂತೆ ದೈನ್ಯದಿಂದ ನೆಲದಲ್ಲಿ ಕುಳಿತು ತನ್ನ ಪ್ರತ್ಯಾಗ
ಮನವನ್ನೇ ನಿರೀಕ್ಷಿಸುತ್ತಿರುವ ಸೀತಾದೇವಿಯನ್ನು ಕಂಡಳು. ಸರಮೆಯು
ಹಿಂತಿರುಗಿ ಬಂದುದನ್ನು ನೋಡಿದೊಡನೆ ಸೀತೆಯು ಪರಮಾನಂದಭರಿತ
ಳಾಗಿ, ಸಂಭ್ರಮದಿಂದ ಮುಂದೆ ಬಂದು, ಆಕೆಯನ್ನಪ್ಪಿಕೊಂಡು, ತನ್ನ ಕೈ
ಯಿಂದಲೇ ಆಕೆಗೆ ಆಸನವನ್ನು ಕೊಟ್ಟು, "ಸಖಿ ಸರಮೆ? ಇದೋ ಈ ಆಸ
ನದಲ್ಲಿ ಸುಖವಾಗಿ ಕುಳಿತು ನೀನು ತಿಳಿದು ಬಂದ ವಿಷಯವೆಲ್ಲವನ್ನೂ ಯ
ಥಾಸ್ಥಿತವಾಗಿ ತಿಳಿಸು! ಕ್ರೂರನಾಗಿಯೂ, ದುರಾತ್ಮನಾಗಿಯೂ, ಇರುವ
ಆ ರಾವಣನ ನಿಶ್ಚಯವೇನೆಂಬುದನ್ನು ಹೇಳು!" ಎಂದಳು. ಸೀತೆಯು ಭಯಾ
ತುರದಿಂದ ನಡುಗುತ್ತ ಹೀಗೆ ಪ್ರಶ್ನೆಮಾಡಿದೊಡನೆ ಸರಮೆಯು ಆಕೆಗೆ
ರಾವಣನ ಉದ್ದೇಶಗಳನ್ನು ತಿಳಿಸುವುದಕ್ಕೆ ತೊಡಗಿ, "ಎಲೆ ಸೀತೆ!
ನಡೆದ ಸಂಗತಿಗಳನ್ನು ತಿಳಿಸುವೆನು ಕೇಳು? ಅಲ್ಲಿ ರಾವಣನ ತಾಯಿಯಾದ
ಕೈಕಸಿಯೂ, ಅವನ ವೃದ್ಧಮಂತ್ರಿಯಾದ ಅವಿದ್ಧನೆಂಬವನೂ, ನಿನ್ನನ್ನು
ಬಿಟ್ಟುಬಿಡುವುದಕ್ಕಾಗಿ ರಾವಣನಿಗೆ ಎಷ್ಟೋವಿಧದಿಂದ ನೀತಿಯನ್ನು ಹೇಳಿ
ಬೋಧಿಸಿದರು. ಅವರಿಬ್ಬರೂ ಆ ರಾವಣನನ್ನು ಕುರಿತು "ವತ್ಸ ರಾವಣಾ!
ಈಗಲೇ ನೀನು ಹೋಗಿ ಬಹುಮಾನಪೂರ್ವಕವಾಗಿ ರಾಮನಿಗೆ ಸೀತೆಯ
ನ್ನೊಪ್ಪಿಸಿಬಿಡು! ಹಾಗೆ ಮಾಡದಪಕ್ಷದಲ್ಲಿ ರಾಮನ ಕೈಯಿಂದ ನಿನಗೆ ಮ
ಹಾನರ್ಥವು ಸಂಭವಿಸುವುದು. ಆತನು ಜನಸ್ಥಾನದಲ್ಲಿ ನಡೆಸಿದ ಮಹಾದ್ಭು
ತವಾದ ಸಾಹಸವೆಂಬ ನಿದರ್ಶನವೊಂದೇ ಸಾಕಲ್ಲವೆ? ಆ ರಾಮನೂ ಹಾಗಿ
ರಲಿ! ಅವನ ಭೃತ್ಯನಾದ ಹನುಮಂತನೆಂಬ ಸಾಮಾನ್ಯಕಪಿಯೊಂದು ಈ

ಮಹಾಸಮುದ್ರವನ್ನು ಹಾರಿಬಂದಿತು. ಇಲ್ಲಿ ನೀತೆಯನ್ನೂ ನೋಡಿತು. ಯುದ್ಧದಲ್ಲಿ ತಾನು ಏಕಾಕಿಯಾಗಿ ನಿಂತು, ನಮ್ಮ ಕಡೆಯ ರಾಕ್ಷಸರೆಲ್ಲರ ನ್ನೂ ಧ್ವಂಸಮಾಡಿತು. ಇದಕ್ಕಿಂತಲೂ ನಿನಗೆ ಬೇರೆ ನಿದರ್ಶನವೇಕೆ? ಕೇವ ಲಮನುಷ್ಯಮಾತ್ರನಾದ ಬೇರೆ ಯಾವನು ತಾನೇ ಇಷ್ಟು ಕೆಲಸಗಳನ್ನು ಮಾಡಬಲ್ಲನು? ಆದುದರಿಂದ, ರಾಮನನ್ನೂ, ಅವನ ಕಡೆಯವರನ್ನೂ ನೀ ನು ಸಾಮಾನ್ಯರೆಂದೆಣಿಸಬೇಡ" ಎಂದು ಅನೇಕವಿಧದಿಂದ ಬೋಧಿಸಿದರು. ಹಾಗೆಯೇ ಇನ್ನೂ ಅನೇಕಮಂತ್ರಿವೃದ್ಧರೂ ಅವನಿಗೆ ಬುದ್ಧಿವಾದಗಳ ನ್ನು ಹೇಳಿದರು. ಎಲೆ ದೇವಿ! ಏನಾದರೇನು? ಹಣದಾಸೆಯುಳ್ಳವನು ತನ್ನ ಪ್ರಾಣವನ್ನಾದರೂ ಬಿಡುವನೇಹೊರತು ಹಣವನ್ನು ಬಿಡಲಾರನಲ್ಲವೆ ? ಹಾಗೆಯೇ ರಾವಣನು ನಿನ್ನನ್ನು ಬಿಡ ವುದಕ್ಕೊಪ್ಪಲಿಲ್ಲ. ಘಾತುಕನಾದ ಆ ರಾವಣನು ಯುದ್ಧದಲ್ಲಿ ತಾನು ಸತ್ತಲ್ಲದೆ ನಿನ್ನನ್ನು ಬಿಡುವುದಿಲ್ಲವೆಂದು ತನ್ನ ಮಂತ್ರಿಗಳೊಡನೆ ಸೇರಿ ನಿಶ್ಚಯಮಾಡಿಕೊಂಡಿರುವನು. ಅವನಿಗೆ ಮರಣಕ್ಕಾಗಿಯೇ ಈ ವಿಧವಾದ ದುರ್ಬುದ್ಧಿಯು ಹುಟ್ಟಿರುವುದೇ ಹೊ ರತು ಬೇರೆಯಲ್ಲ! ಅವನನ್ನೂ ಅವನ ಕಡೆಯ ರಾಕ್ಷಸರನ್ನೂ ಯುದ್ಧದಲ್ಲಿ ಕೊಂದಲ್ಲದೆ ಕೇವಲಭಯಕ್ಕಾಗಿ ನಿನ್ನನ್ನು ಬಿಟ್ಟುಬಿಡುವವನಲ್ಲ. ಎಲೆ ಸೀತೆ! ನೀನು ಚಿಂತಿಸಬೇಡ! ನಿನ್ನ ಪತಿಯಾದ ರಾಮನು ಮುಂದಿನ ಯುದ್ಧದಲ್ಲಿ ತನ್ನ ತೀಕ್ಷ್ಣಬಾಣಗಳಿಂದ ತಪ್ಪದೆ ರಾವಣನನ್ನು ಕೊಂದು ನಿನ್ನನ್ನು ತ ನ್ನೊಡನೆ ಅಯೋಧ್ಯೆಗೆ ಕರೆದುಕೊಂಡು ಹೋಗುವನು. ಈ ಶುಭೋದಯವ ನ್ನು ಈ ನಿನ್ನ ನೇತ್ರಸೌಭಾಗ್ಯವೇ ಸೂಚಿಸುತ್ತಿರುವುದು'' ಎಂದಳು. ಸರ ಮೆಯು ಈ ಮಾತನ್ನು ಹೇಳಿ ಮುಗಿಸುವಷ್ಟರಲ್ಲಿಯೇ, ಈ ಶುಭವಾಕ್ಯಕ್ಕೆ ಉಪಶ್ರುತಿಯಂತೆ ಅತ್ತಲಾಗಿ ವಾನರಸೈನ್ಯಗಳ ಸಿಂಹನಾದವೂ, ಅಲ್ಲಿನ ಭೇರೀ ಶಂಖಾದಿವಾದ್ಯಧ್ವನಿಗಳೂ, ಭೂಮಿಯನ್ನೇ ನಡುಗಿಸುವಂತೆ ಕೇಳಿ ಸಿತು. ಲಂಕೆಯಲ್ಲಿದ್ದ ರಾವಣನ ಸೈನಿಕರೆಲ್ಲರೂ ಆ ವಾನರಸೈನ್ಯಗಳ ಸಿಂ ಹನಾದವನ್ನು ಕೇಳಿ ಭಯದಿಂದ ಬೆಜ್ಜರಬಿದ್ದವರಾಗಿ, ರಾವಣನ ದೋಷ ದಿಂದ, ತಮಗೂ ಇನ್ನು ಉಳಿಗಾಲವಿಲ್ಲವೆಂದು ತಿಳಿದು, ಕಾಂತಿಗುಂದಿ ದೈ ನ್ಯದಿಂದ ತತ್ತಳಿಸುತಿದ್ದರು. ಇಲ್ಲಿಗೆ ಮೂವತ್ತು ನಾಲ್ಕನೆಯ ಸರ್ಗವು.

---

{ರಾಮನಿಗೆ ಸೀತೆಯನ್ನೊಪ್ಪಿಸುವುದೇ ಅವಶ್ಯಕಾರ್ಯವೆಂದು ಮಾಲ್ಯವಂತನು ರಾವಣನಿಗೆ ಬೋಧಿಸಿದುದು.}

ಹೀಗೆ ವಾನರಸೈನ್ಯದಲ್ಲಿ ಶಂಖಧ್ವನಿಗಳೂ, ಭೇರೀ ಝಾಂಕಾರಗಳೂ, ತುಮುಲವಾಗಿ ಹೊರಡುತ್ತಿರುವಾಗಲೇ, ಮಹಾಬಾಹುವಾದ ರಾಮನು ಲಂಕೆಯನ್ನು ಮುತ್ತುವುದಕ್ಕಾಗಿ ಮುಂದೆಮುಂದೆ ಸಾಗಿ ಬರುತಿದ್ದನು. ಆ ತ್ತಲಾಗಿ ರಾಕ್ಷಸೇಶ್ವರನಾದ ರಾವಣನೂಕೂಡ ಈ ಕಪಿಗಳ ಕೋಲಾಹಲವನ್ನು ಕೇಳಿ ಚಿಂತಾಕ್ರಾಂತನಾಗಿ, ಮುಹೂರ್ತಕಾಲದವರೆಗೆ ತನ್ನಲ್ಲಿ ತಾನೇ ಆಲೋಚಿಸಿ, ತನ್ನ ಮುಂದಿದ್ದ ಮಂತ್ರಿಗಳನ್ನು ಕಣ್ಣಿಟ್ಟುನೋಡಿದನು. ಹೀಗೆ ಮಹಾಬಲಾಢ್ಯನಾದ ರಾವಣನು ತನ್ನ ದೃಷ್ಟಿಸಂಜ್ಞೆಯಿಂದಲೇ ಮಂತ್ರಿಗಳನ್ನು ಸಮೀಪಕ್ಕೆ ಕರೆದು,ಸಭಾಸ್ಥಾನವೆಲ್ಲವೂ ಪ್ರತಿಧ್ವನಿಸುವಂತೆ ಅವರನ್ನು ಹೀಗಳೆಯುವ ಕ್ರೂರವಾಕ್ಯದಿಂದ "ಎಲೆ ಮಂತ್ರಿಗಳೆ! ಬಹಳ ಚೆನ್ನಾಯಿತು!ರಾಮನು ಸಮುದ್ರವನ್ನು ದಾಟಿಬಂದ ಸಾಹಸವನ್ನೂ, ಅವನ ಪರಾಕ್ರಮವನ್ನೂ, ಅವನ ಸೈನ್ಯದ ಪ್ರಾಬಲ್ಯವನ್ನೂ ನೀವು ನಿಮ್ಮ ಬಾಯಿಂದಲೇ ನನ್ನ ಮುಂದೆ ಹೇಳಿಹೇಳಿ ಕೊಂಡಾಡುತ್ತಿರುವಿರಿ! ನನಗೂ ಅವೆಲ್ಲವನ್ನೂ ಕೇಳಿಕೇಳಿ ಸಾಕಾಯಿತು! ನೀವೆಲ್ಲರೂ ಯುದ್ಧದಲ್ಲಿ ಅಮೋಘಪರಾಕ್ರಮವುಳ್ಳವರೆಂಬುದನನ್ನು ನಾನು ಚೆನ್ನಾಗಿ ಬಲ್ಲೆನು. ಹೀಗಿರುವಾಗಲೂ ನೀವು ಆ ರಾಮನ ಪರಾಕ್ರಮವನ್ನು ಕೇಳಿದಂದಿನಿಂದ ಎದೆಗುಂದಿ, ಒಬ್ಬರಿಗೊಬ್ಬರು ಮುಖವನ್ನು ನೋಡಿಕೊಳ್ಳುತ್ತ ನಿರುತ್ಸಾಹರಾಗಿ ಸುಮ್ಮನಿರುವುದನ್ನೂ ನಾನು ಬಲ್ಲೆನು. ಹೀಗೆ ಭಯಪಡುವುದು ರಾಕ್ಷಸರಾದ ನಿಮಗೆ ಕೇವಲ ಸ್ವರೂಪವಿರುದ್ಧವು." ಎಂದನು. ಆಗ ರಾವಣನ ತಾಯಿಗೆ [1]ಚಿಕ್ಕ ತಂದೆಯಾಗಿಯೂ, ಬಹಳಪ್ರಾಜ್ಞನಾಗಿಯೂ ಇದ್ದ ಮಾಲ್ಯವಂತನೆಂಬ ರಾಕ್ಷಸನು ರಾವಣನು ಹೇಳಿದ ಆ ಕಠಿನವಾಕ್ಯವನ್ನು ಕೇಳಿ ಅವನನ್ನು ಕುರಿತು, "ಎಲೆ ರಾಜನೆ ! ಯಾವ ರಾಜ್ಯಾಧಿಪತಿಯು

---

1 ಇಲ್ಲಿ "ಮಾತುಃ ಪೈತಾಮಹೋಽಬ್ರವೀತ್" ಎಂದು ಮೂಲವು. ರಾವಣನ ತಾಯಿಯಾದ ಕೈಕಸಿಯು ಸುಮಾಲಿಯೆಂಬವನ ಮಗಳು. ಈ ವಿಷಯವು ಉತ್ತರರಾಮಾಯಣದಲ್ಲಿ ಹೇಳಲ್ಪಡುವುದು. ಈ ಮಾಲ್ಯವಂತನೆಂಬವನು ಸುಮಾಲಿಯ ತಮ್ಮನು. ಆದುದರಿಂದ ಇಲ್ಲಿ ರಾವಣನ ತಾಯಿಯಾದ ಕೈಕಸಿಗೆ ಮಾಲ್ಯವಂತನು ಚಿಕ್ಕ

[1]ಆನ್ವೀಕ್ಷಕಿ,ತ್ರಯಿ, ವಾರ್ತೆ,ದಂಡನೀತಿಗಳೆಂಬ ನಾಲ್ಕು ವಿದ್ಯೆಗಳಲ್ಲಿಯೂ ಚೆನ್ನಾಗಿ ಶಿಕ್ಷಿತನಾಗಿ, ನೀತಿಶಾಸ್ತ್ರವನ್ನನುಸರಿಸಿ ನಡೆದುಕೊಳ್ಳುವನೋ, ಅಂತಹ ರಾಜನೇ ಚಿರಕಾಲದವರೆಗೆ ರಾಜ್ಯವನ್ನಾಳುವನು. ಅಂತಹ ರಾಜನೇ ಶತ್ರುಗಳನ್ನೂ ಅಡಗಿಸಬಲ್ಲನು. ಯಾವರಾಜನು, ತನ್ನ ಬಲವು ಕ್ಷೀಣಿಸಿದ ಕಾಲದಲ್ಲಿ ಶತ್ರುಗಳೊಡನೆ ಸಂಧಿಯನ್ನು ಮಾಡಿಕೊಳ್ಳುತ್ತ, ತನ್ನ ಬಲವು ಹೆಚ್ಚಿರುವಕಾಲದಲ್ಲಿ ಅವರೊಡನೆ ವಿರೋಧವನ್ನು ಬೆಳೆಸಿ, ಕ್ರಮವಾಗಿಅವರನ್ನು ನಿಗ್ರಹಿಸಿಯೂಬಿಡುವನೋ,ಅಂತಹ ರಾಜನು ದೊಡ್ಡಐಶ್ವರ್ಯವನ್ನನುಭವಿಸುವನು. ತನ್ನ ಬಲವು ಶತ್ರುಬಲಕ್ಕಿಂತಲೂ ಹೀನವಾಗಿದ್ದರಾಗಲಿ,ಶತ್ರುವು ಸಮಾನಬಲವುಳ್ಳವನಾಗಿದ್ದರಾಗಲಿ,ಅಂತಹ ಶತ್ರುವೊಡನೆ ಅವಶ್ಯವಾಗಿ ಸಂಧಿಯನ್ನೇ ಮಾಡಿಕೊಳ್ಳಬೇಕು. ಶತ್ರುವಿನ ಬಲಕ್ಕಿಂತಲೂ ತನ್ನಬಲವು ಹೆಚ್ಚಿದ್ದಪಕ್ಷದಲ್ಲಿ,ಅಂತಹ ಶತ್ರುವನ್ನುಪೇಕ್ಷಿಸಿ ಸುಮ್ಮನಿರದೆ ಅವನೊಡನೆ ವೈರವನ್ನಿಟ್ಟುಕೊಳ್ಳಬೇಕು ಆದುದರಿಂದ ವತ್ಸ ರಾವಣಾ! ಈಗ ರಾಮನೊಡನೆ ನೀನು ಸಂಧಿಯನ್ನು ಮಾಡಿಕೊಳ್ಳುವುದೇ ಮೇಲು. ಹೇಗಿದ್ದರೂ ರಾಮನು ನಿನಗಿಂತಲೂ ಪ್ರಬಲನು. ಈಗ ನಮಗೂ ರಾಮನಿಗೂ, ಯಾವಕಾರಣಕ್ಕಾಗಿ ವೈರವು ಬೆಳೆದು ಹೋಗಿರುವುದೋ ಆ ಕಾರಣವನ್ನು ಮೊದಲು ಪರಿಹರಿಸಬೇಕು. ಆದುದರಿಂದ ಸೀತೆಯನ್ನು ಆತನಿಗೆ ಹಿಂತಿರುಗಿ ಕೊಟ್ಟುಬಿಡು.ದಾನೋಪಾಯದಿಂದಲ್ಲದೆ ಬಲಶಾಲಿಗಳೊಡನೆ ಸಂಧಿಯು ನಡೆಯದು.ಆದುದರಿಂದ ಸೀತೆಯನ್ನು ಕೊಟ್ಟುಬಿಡುವುದೇ ಈಗ ಕಾಲೋಚಿ

---

ತಂದೆಯೆಂದು ತಿಳಿಯಬೇಕು. ಕೆಲವರು ಪೈತಾಮಹಶಬ್ದಕ್ಕೆ ತಂದೆಯೆಂದೇ ಅರ್ಥಮಾಡುವರು "ವೃದ್ಧೋ ಮಾತಾಮಹೋಽಬ್ರವೀತ್" ಎಂದು ಕೆಲವು ಕಡೆಗಳಲ್ಲಿ ಪಾಠಾಂತರವೂ ಉಂಟು.

1 ಇಲ್ಲಿ "ಆನ್ವೀಕ್ಷಕೀಂ ತ್ರಯೀಂ ವಾರ್ತಾಂ ದಂಡನೀತಿಂಚ ಪಾರ್ಥಿವಃ । ತದ್ವಿದ್ಭಿಸ್ತತ್ಕ್ರಿಯೋಪೇತೈಶ್ಚಿಂತಯೇದ್ವಿನಯಾನ್ವಿತಃ ॥ ಆನ್ವೀಕ್ಷಕ್ಯಾತ್ಮವಿಜ್ಞಾನಂ ಧರ್ಮಾಧರ್ಮೌ ತ್ರಯೀಸ್ಥಿತೌ।ಅರ್ಥಾನರ್ಥೌತುವಾರ್ತಾಯಾಂ ದಂಡನೀತ್ಯಾಂ ನಯಾನಯೌ॥ ವಿದ್ಯಾಶ್ಚತಸ್ರ ಏವೈತಾ ಯೋಗಕ್ಷೇಮಾಯ ದೇಹಿನಾಂ । ವಿದ್ಯಾವಿನೀತೋ ನೃಪತಿರ್ನಕೃಚ್ಛ್ರೇಷ್ವವಸೀದತಿ॥"ಎಂಬ ಕಾಮಂದಕನೀತಿವಚನಗಳನ್ನು ಅನುಸಂಧಿಸಿಕೊಳ್ಳಬೇಕು.

ತವಾದ ದಾನೋಪಾಯವೆಂದು ತಿಳಿ? ರಾಮನು ಅಷ್ಟುಬಲಾಢ್ಯನೆಂಬುದು ಹೇಗೆಂದು ಕೇಳುವೆಯಾ? ದೇವರ್ಷಿಗಂಧರ್ವಾದಿಗಳೆಲ್ಲರೂ ಅವನಿಗೆ ಜಯವನ್ನೇ ಹಾರೈಸುತ್ತಿರುವರು. ಹೀಗೆ ದೇವಬಲವುಳ್ಳ ಆ ರಾಮನು ಬಲವಂತನೆಂಬುದರಲ್ಲಿ ಸಂದೇಹವೇನಿದೆ? ಅವನೊಡನೆ ವಿರೋಧಿಸಬೇಡ! ಸಂಧಿಗೆ ಪ್ರಯತ್ನಿಸು! ದೇವಾದಿಗಳೆಲ್ಲರೂ ಆ ರಾಮನಿಗೇ ಜಯವನ್ನು ಕೋರುತ್ತಿರುವುದಕ್ಕೆ ಕಾರಣವೇನೆಂದು ಕೇಳುವೆಯಾ? ಸರ್ವಜ್ಞನಾದ ಬ್ರಹ್ಮದೇವನು ದೇವತೆಗಳಿಗೂ, ದಾನವರಿಗೂ ಅವಲಂಬನವಾಗಿ ಧರ್ಮಾಧರ್ಮಗಳೆರಡನ್ನೂ ಸೃಷ್ಟಿಸಿದನು. ಆದುದರಿಂದ ಈ ಧರ್ಮಾಧರ್ಮಗಳೆರಡೂ ದೇವಾಸುರರನ್ನು ನಂಬಿ ನಿಂತಿರುವುವು. ಅವುಗಳಲ್ಲಿ ಧರ್ಮವೆಂಬುದು ಮಹಾತ್ಮರಾದ ದೇವತೆಗಳ ಪಕ್ಷವೆಂಬುದನ್ನು ನಾವೆಲ್ಲರೂ ಕೇಳಬಲ್ಲೆವಷ್ಟೆ? ಅಧರ್ಮವು ಅಸುರರನ್ನೂ ರಾಕ್ಷಸರನ್ನೂ ಸೇರಿರುವುದು. ಹೀಗೆ ದೇವಾದಿಗಳು ಧರ್ಮಪಕ್ಷವನ್ನು ಹಿಡಿದಿರುವುದರಿಂದಲೂ, ರಾಮನೂ ಹಾಗೆಯೇ ಧರ್ಮವನ್ನಾಶ್ರಯಿಸಿರುವುದರಿಂದಲೂ, ದೇವತೆಗಳು ಆ ರಾಮನಲ್ಲಿ ಪಕ್ಷಪಾತವನ್ನು ತೋರಿಸುತ್ತಿರುವರು. ಅವನಿಗೆ ಅವರ ಬಲವು ಪೂರ್ಣವಾಗಿರುವುದು. ಆ ರಾಮನು ಬಲವಂತನೆಂಬುದಕ್ಕೆ ಬೇರೊಂದು ಕಾರಣವೂ ಉಂಟು! ಯಾವಾಗ ಧರ್ಮವು ಪ್ರಬಲವಾಗಿ ಅಧರ್ಮವನ್ನು ಮೆಟ್ಟುವುದೋ, ಆ ಕಾಲವು ಕೃತಯುಗವೆನಿಸುವುದು. ಧರ್ಮವನ್ನು ಮೆಟ್ಟಿ ಅಧರ್ಮವೇ ಹೆಚ್ಚಿದಾಗ ಕಲಿಯು ಪ್ರವರ್ತಿಸುವುದು. "ಅದರಿಂದೇನು?" ಎಂದು ಕೇಳುವೆಯಾ? ರಾವಣಾ! ಹಿಂದೆ ನೀನು ದಿಗ್ವಿಜಯಾರ್ಥವಾಗಿ ಆಯಾಲೋಕಗಳೆಲ್ಲವನ್ನೂ ಸುತ್ತುತ್ತಿರುವಾಗ, ಪರದಾರಪರಿಗ್ರಹಾದಿಗಳಿಂದ ಅಧರ್ಮವನ್ನೇ ಹಿಡಿದು, ಮೇಲಾದ ಧರ್ಮವನ್ನು ತ್ಯಜಿಸಿರುವೆ. ಅಧರ್ಮಪ್ರವರ್ತಕವಾದ ಕಲಿಗಿಂತಲೂ, ಧರ್ಮಪ್ರವರ್ತಕವಾದ ಕೃತವೇ ಬಲೀಯವಾದುದು. ಅಧರ್ಮದಿಂದ ಕಲಿಪ್ರವೇಶವುಳ್ಳ ನಿನಗಿಂತಲೂ ಧರ್ಮದಿಂದ ಕೃತವನ್ನು ವರ್ತಿಸುವ ರಾಮನೇ ಬಲವಂತನು. ಶುಭಹೇತುವಾದ ಧರ್ಮವನ್ನು ಪ್ರಬಲವಾಗಿ ಹಿಡಿದಿರುವ ರಾಮನೇ ಮೊದಲಾದ ನಮ್ಮ ಶತ್ರುಗಳು, ಅಶುಭಹೇತುವಾದ ಅಧರ್ಮದಲ್ಲಿ ಹೆಚ್ಚಾಗಿ ಪ್ರವರ್ತಿಸಿರುವ ನಮಗಿಂತಲೂ ಹೆಚ್ಚುಬಲಾಢ್ಯರು. ಆದರೆ ನೀನು "ಧರ್ಮವನ್ನು ಮೆಟ್ಟಿ ಅಧರ್ಮವೇ ವೃದ್ಧಿಹೊಂದಿರುವಾಗ ಧರ್ಮಾವಲಂಬಿಗ

ಳಾದ ದೇವತೆಗಳಲ್ಲಿಯೂ ಆ ಧರ್ಮದ ಬಲವು ವ್ಯರ್ಥವಾಗಿ ಹೋಗಿರಬೇಕ ಲ್ಲವೆ?" ಎಂದೆಣಿಸಬಹುದು. ಹಾಗಲ್ಲ! ಅಧರ್ಮದ ಕಾರ್ಯವು ಅತಿವಿಚಿತ್ರವಾ ದುದು! ಅಧರ್ಮವೆಂಬುದು ತನಗೆ ಪ್ರಾಬಲ್ಯವು ಹೆಚ್ಚಿಬಂದಹಾಗೆಲ್ಲಾ ಸ್ವ ಪಕ್ಷದವರನ್ನಡಗಿಸಿ ಪರಪಕ್ಷವನ್ನು ಹೆಚ್ಚಿಸುತ್ತಿರುವುದು. ನೀನು ಹಿಂದು ಮುಂದು ನೋಡದೆ ಆ ಅಧರ್ಮವನ್ನು ನಡೆಸಿ ಹೆಚ್ಚಿಸಿಕೊಂಡಿರುವೆ. ನಮ್ಮ ಅಧರ್ಮವೇ ನಮ್ಮನ್ನು ನುಂಗುತ್ತಿರುವುದಲ್ಲದೆ, ದೇವತೆಗಳಿಗೆ ಅನುಕೂಲವಾಗಿ ಅವರಪಕ್ಷವನ್ನು ವೃದ್ಧಿಹೊಂದಿಸುತ್ತಲೂಇರುವುದು. ಹೀಗೆ ನಮ್ಮ ಅಧರ್ಮ ವು ನಮ್ಮನ್ನು ನಾಶಮಾಡುವುದುಮಾತ್ರವೇ ಅಲ್ಲ. ದೇವತೆಗಳ ಬಲಕ್ಕೂ ಉತ್ತೇಜನಕೊಡುವುದು. ನೀನು ವಿಷಯಲೋಲನಾಗಿ ದೇವಾದಿಗಳ ತನ್ವಿಯ ರನ್ನೂ, ಪತ್ನಿಯರನ್ನೂ ಹಿಡಿದು, ಮನಸ್ಸಿಗೆ ತೋರಿದಂತೆ ಎಷ್ಟೋ ಅಕೃತ್ಯಗ ಳನ್ನು ನಡೆಸಿಬಿಟ್ಟಿರುವೆ. ಇದರಿಂದ ಅಗ್ನಿಸಮಾನರಾದ ಮಹರ್ಷಿಗಳೆಲ್ಲರಿಗೂ ನಿನ್ನಲ್ಲಿ ಮನಸ್ತಾಪವು ಹುಟ್ಟಿರುವುದು. ಅವರ ಮಹಿಮೆಯಾದರೋ ಅಗ್ನಿಜ್ವಾ ಲೆಯಂತೆ ಅತಿತೀಕ್ಷ್ಣವಾದುದು. ಎಂತವರಿಗೂ ಅವರನ್ನಡಗಿಸುವುದು ಸಾಧ್ಯ ವಲ್ಲ. ಹೀಗೆ ನಿನ್ನಿಂದ ಮನಸ್ತಾಪಹೊಂದಿದ ಪರಿಶುದ್ಧಾತ್ಮರಾದ ಆ ಮಹರ್ಷಿ ಗಳು, ಧರ್ಮಾಭಿವೃದ್ಧಿಯಲ್ಲಿಯೇ ಆಸಕ್ತರಾದುದರಿಂದ, ತಪಸ್ಸುಗಳಿಂದಲೂ, ಅಗ್ನಿಷ್ಟೋಮವೇ ಮೊದಲಾದ ಉತ್ತಮಯಜ್ಞಗಳಿಂದಲೂ, ವೇದಾಧ್ಯ ಯನಗಳಿಂದಲೂ ಧರ್ಮವನ್ನು ಗಳಿಸುತ್ತಿರುವರು. ನಮ್ಮಂತಹ ರಾಕ್ಷಸರ ನ್ನು ಪರಾಭವಿಸಿ ಅಧೋಗತಿಗಿಳಿಸಬೇಕೆಂದೇ ವೇದಘೋಷಗಳನ್ನು ಚ್ಚರಿಸುವರು. ಈ ಮಹರ್ಷಿಗಳ ಧರ್ಮಾಚರಣೆಗಳಿಂದ ಗ್ರೀಷ್ಮಕಾಲ ದ ಮೇಘಗಳಂತೆ ರಾಕ್ಷಸರೆಲ್ಲರೂ ದಿಕ್ಕುಗೆಟ್ಟು ಭಯದಿಂದ ಪಲಾ ಯನಮಾಡುತ್ತಿರುವರು. ಅಗ್ನಿಕಲ್ಪರಾದ ಆ ಮಹರ್ಷಿಗಳು ಹೋಮ ಮಾಡುವಾಗ, ಅವರ ಅಗ್ನಿಹೋತ್ರದಿಂದ ಹೊರಟ ಹೊಗೆಯೇ ಹತ್ತುದಿ ಕ್ಕುಗಳನ್ನೂ ವ್ಯಾಪಿಸಿ ರಾಕ್ಷಸರ ತೇಜಸ್ಸನ್ನು ನಂದಿಸುತ್ತಿರುವುದು. ಆ ಯಾಪುಣ್ಯದೇಶಗಳಲ್ಲಿ ಮಹರ್ಷಿಗಳು ದೃಢನಿಯಮವನ್ನು ಹಿಡಿದು ನಡೆ ಸುವ ತೀವ್ರತಪಸ್ಸುಗಳಿಂದ ಇತ್ತಲಾಗಿ ನಮ್ಮ ರಾಕ್ಷಸರೆಲ್ಲರೂ ಬಹಳವಾ ಗಿ ತಪಿಸುತ್ತಿರುವರು. ಹೀಗೆ ನಮ್ಮಲ್ಲಿರುವ ಅಧರ್ಮದಿಂದ ಋಷಿಗಳಿಗುಂಟಾ ದ ಮನಸ್ಸಂಕಟವೇ ನಮಗೆ ಹಾನಿಯನ್ನೂ, ದೇವಾದಿಗಳಿಗೆ ಬಲವನ್ನೂ ಹೆ

ರ್ಜಿಸುತ್ತಿರುವುದು. ವತ್ಸ ರಾವಣಾ! ದೇವತೆಗಳು, ದಾನವರು, ಯಕ್ಷರು ಮುಂತಾಗಿ ಯಾವ ದೇವಜಾತಿಯವರಿಂದಲೂ ಮರಣವಿಲ್ಲದ ಹಾಗೆ ನೀನು ವರವನ್ನು ಪಡೆದು ಬಂದಿರುವುದೇನೋ ನಿಜವು. ಆದರೇನು ! ಈಗ ಬಂದಿ ರುವವರೊಬ್ಬರೂ ಆ ಜಾತಿಗೆ ಸೇರಿದವರಲ್ಲ! ಬಲಾಢ್ಯರಾದ ಮತ್ತು ಪರಾ ಕ್ರಮಶಾಲಿಗಳಾದ ಮನುಷ್ಯರೂ, ಕಪಿಗಳೂ, ಕರಡಿಗಳೂ, ಸಿಂಗಳೀಕಗ ಳೂ ಸೇರಿ ದೊಡ್ಡ ಸೈನ್ಯಗಳೊಡನೆ ನಮ್ಮ ಲಂಕಾದ್ವಾರದಲ್ಲಿ ನಿಂತು ಗ ರ್ಜಿಸುತ್ತಿರುವುವು. ನೀನು ಇವರಿಂದ ಸಾವಿಲ್ಲದಂತೆ ವರವನ್ನು ಕೇಳಿದವನಲ್ಲ ವಷ್ಟೆ? ಆದುದರಿಂದ ಇವರೇ ನಿನಗೆ ಮೃತ್ಯುಗಳಾಗಬಹುದಲ್ಲವೆ? ಈ ಶತ್ರು ಗಳಸಂಗತಿಯೂ ಹಾಗಿರಲಿ! ಅದೋ ಇಲ್ಲಲ್ಲಿ ಕಾಣುವ ಮಹೋತ್ಪಾತಗಳನ್ನು ನೋಡಿದೆಯಾ? ಅವು ದಿವ್ಯಾಂತರಿಕ್ಷ ಭೌಮಗಳೆಂಬ ನಾನಾಭೇದವುಳ್ಳವುಗ ಳಾಗಿ, ಅವುಗಳಲ್ಲಿಯೂ ಇನ್ನೂ ಅನೇಕವಾದ ಅಂತರಾಳಿಕಪ್ರಭೇದಗಳನ್ನು ಹೊಂದಿ, ಮಹಾಭಯಂಕರವಾಗಿ ಕಾಣುತ್ತಿರುವುವು ನೋಡು! ಇದು ನಮ್ಮ ಕಡೆಯ ಸಮಸ್ತರಾಕ್ಷಸರಿಗೂ ನಾಶಸೂಚಕವೆಂದೇ ನನಗೆ ತೋರಿರುವು ದು. ಭಯಂಕರಸ್ವರೂಪವುಳ್ಳ ಮೇಘಗಳು ಆಕಾಶದಲ್ಲಿ ಸೇರಿ ಪರುಷಧ್ವನಿ ಯಿಂದ ಗರ್ಜಿಸುತ್ತ, ನಮ್ಮ ಲಂಕೆಯ ನಾನಾಭಾಗಗಳಲ್ಲಿಯೂ ಬಿಸಬಿಸಿ ಯಾದ ರಕ್ತದ ಮಳೆಯನ್ನು ಕರೆಯುತ್ತಿರುವುವು ನೋಡು! ನಮ್ಮಲ್ಲಿರುವ ಆ ನೆ, ಕುದುರೆ, ಮೊದಲಾದ ವಾಹನಗಳೆಲ್ಲವೂ ಕಣ್ಣೀರುಬಿಟ್ಟು ಗೋಳಿಡುತ್ತಿ ರುವುವು. ಧ್ವಜಗಳೆಲ್ಲವೂ ಮೊದಲಿನಂತೆ ಪ್ರಕಾಶವಿಶಿಷ್ಟಗಳಾಗಿಲ್ಲದೆ, ಕೊಳೆ ಮುಚ್ಚಿ ಬಣ್ಣಗೆಟ್ಟಿರುವುವು. ನರಿಗಳು, ಹದ್ದು ಮೊದಲಾದ ಅನೇಕಕ್ರೂರ ಮೃಗಗಳು ಲಂಕೆಯ ಸುತ್ತಲೂ ಸೇರಿ ಭಯಂಕರವಾಗಿ ಅರಚುತ್ತಿರುವು ವಲ್ಲದೆ, ಆಗಾಗ ಗುಂಪುಗುಂಪಾಗಿ ನಮ್ಮ ಲಂಕೆಯೊಳಗೂ ಪ್ರವೇಶಿಸುತ್ತಿ ರುವುವು. ಆಗಾಗ ನಮಗೆ ಸ್ವಪ್ನದಲ್ಲಿ ಕರೀವರ್ಣದ ಕೆಲವು ಹೆಂಗಸ ರು ಮುಂದೆ ನಿಂತು, ಬಿಳುಪಾದ ಹಲ್ಲುಗಳನ್ನು ತೆರೆದು, ಪಕಪಕನೆ ನಗುವಂ ತೆಯೂ, ದುರ್ಭಾಷೆಗಳಿಂದ ನಮ್ಮನ್ನು ಹೀಗಳೆಯುವಂತೆಯೂ, ನಮ್ಮ ಮನೆಯ ಧನಧಾನ್ಯಾದಿಗಳನ್ನೆಲ್ಲಾ ಕದ್ದೊಯ್ದೋಡಿಹೋಗುವಂತೆಯೂ ಕಾ ಣಿಸಿಕೊಳ್ಳುವರು. ಇಲ್ಲಿನ ಮನೆಮನೆಗಳಲ್ಲಿ ಬಲಿಕರ್ಮಕ್ಕಾಗಿ ಸಿದ್ಧಪಡಿಸಲ್ಪ ಟ್ಟ ಹವಿಸ್ಸುಗಳನ್ನು ನಾಯಿಗಳು ತಿಂದು ಹೋಗುತ್ತಿರುವುವು. ಹಸುಗಳ

ಗರ್ಭದಿಂದ ಕತ್ತೆಯ ಮರಿಗಳು ಹುಟ್ಟುತ್ತಿರುವುವು.ಹೆಗ್ಗಣಗಳು ಮುಂಗಿಸಿ ಗಳೊಡನೆ ಓಲಾಡುತ್ತಿರುವುವು. ಬೆಕ್ಕುಗಳು ಹುಲಿಗಳೊಡನೆಯೂ, ಹಂದಿ ಗಳು ನಾಯಿಗಳೊಡನೆಯೂ ಸೇರಿ ಕ್ರೀಡಿಸುತ್ತಿರುವುವು. ಅಲ್ಲಲ್ಲಿ ಕಿನ್ನರರು ರಾಕ್ಷಸರೊಡನೆಯೂ, ರಾಕ್ಷಸರು ಅಲ್ಲಲ್ಲಿ ಉತ್ಪಾತಸೂಚಕವಾಗಿ ಜನಿಸಿದ ಮನುಷ್ಯರೊಡನೆಯೂ ಕಲೆತಿರುವರು. ಬಿಳುಪು ಮತ್ತು ಕೆಂಪುಬಣ್ಣಗಳಿಂದ ಕಲೆತ ಪಾದವುಳ್ಳ ಪಾರಿವಾಳಗಳು,ಕಾಲಪ್ರೇರಿತಗಳಾಗಿ ರಾಕ್ಷಸರ ವಿನಾ ಶವನ್ನು ಸೂಚಿಸುತ್ತ ಅಲ್ಲಲ್ಲಿ ತಿರುಗುತ್ತಿರುವುವು. ಮನೆಗಳಲ್ಲಿ ಮುದ್ದು ಮಾತುಗಳನ್ನು ಕಲಿಸಿ ಸಾಕಿದ ಶುಕಶಾರಿಕಾದಿಪಕ್ಷಿಗಳೆಲ್ಲವೂ ಈಗ "ವೀ ಚೀ, ಕೂಚೀ" ಎಂದು ಕ್ರೂರವಾಗಿ ಕೂಗುತ್ತಿರುವುವು. ಅಲ್ಲಲ್ಲಿ ಮೃಗಪಕ್ಷಿ ಗಳು ಮೊದಲಾದ ಜಂತುಗಳು ಒಂದಕ್ಕೊಂದು ಜಗಳವಾಡಿ ಸೋತು ಪಲಾಯನಮಾಡಿದರೂ ತಿರುಗಿ ಗುಂಪುಗೂಡಿ ಬಂದು, ಕಲಹಕ್ಕಾಗಿ ಶ ತ್ರುಗಳಮೇಲೆ ನುಗ್ಗುತ್ತಿರುವುವು. ಮತ್ತು ಆಗಾಗ ಸೂರ್ಯನಿಗಿದಿರಾಗಿ ನಿಂ ತು ಆರ್ತಸ್ವರದಿಂದ ಗೋಳಿಡುತ್ತಿರುವುವು. ಭಯಂಕರಸ್ವರೂಪನಾಗಿ ಯೂ, ಅಂಗಹೀನನಾಗಿಯೂ, ಬೋಳುತಲೆಯುಳ್ಳವನಾಗಿಯೂ, ಪರುಷ ವರ್ಣವುಳ್ಳವನಾಗಿಯೂ ಇರುವ ಕೃಷ್ಣಪಿಂಗಳನೆಂಬ ಮೃತ್ಯುವು, ಇಲ್ಲಿನ ಸಮಸ್ತರಾಕ್ಷಸರ ಮನೆಗಳಿಗೂ ಆಗಾಗ ನುಗ್ಗಿ ನೋಡಿ ಬರುತ್ತಿರುವನು. ಇವೇ ಮೊದಲಾದ ಇನ್ನೂ ಅನೇಕ ದುರ್ನಿಮಿತ್ತಗಳು ಅಲ್ಲಲ್ಲಿ ಕಾಣಿಸುತ್ತಿ ರುವುವು.(ರಾವಣಾ!ಇದರಿಂದ ಈಗ ಬಂದಿರುವ ಆ ರಾಮನು ಮನುಷ್ಯರೂ ಪವನ್ನು ಧರಿಸಿದ ವಿಷ್ಣುದೇವನೆಂದೇ ನನಗೆ ತೋರಿರುವುದು. ಅಂತಹ ಮ ಹಾಸಮುದ್ರದಲ್ಲಿಯೇ ಹಾಗೆ ಸೇತುವನ್ನು ಕಟ್ಟಿದ ದೃಢಪರಾಕ್ರಮಿಯಾದ ಆ ರಾಮನು, ಎಷ್ಟುಮಾತ್ರಕ್ಕೂ ಮನುಷ್ಯನಾಗಿರಲಾರನು. ಆದುದರಿಂದ ವತ್ಸ ರಾವಣಾ!ನರೇಂದ್ರನಾದ ಆ ರಾಮನೊಡನೆ ಸಂಧಿಯನ್ನು ಮಾಡು.) ಇವೆಲ್ಲವನ್ನೂ ಯೋಚಿಸಿ, ಮುಂದಿನ ಕಾರ್ಯಗಳನ್ನೂ ಚೆನ್ನಾಗಿ ನಿಶ್ಚಯಿಸಿ ಕೊಂಡು, ಹೇಗೆ ಯುಕ್ತವೋ ಹಾಗೆ ನಡೆಸು!" ಎಂದನು. ಉತ್ತಮೋತ್ತ ಮವಾದ ಪೌರುಷವುಳ್ಳ ಆ ಮಾಲ್ಯವಂತನು, ಸಭೆಯಲ್ಲಿ ಎಲ್ಲರೂ ಕೇಳು ವಂತೆ ಈ ಮಾತುಗಳನ್ನಾಡಿ, ರಾವಣನ ಇಂಗಿತಾಕಾರಗಳನ್ನೂ ಚೆನ್ನಾಗಿ

ನೋಡಿ, ಹೇಗೂ ಅವನು ತನ್ನ ದಾರಿಗೆ ಬಾರದುದನ್ನು ತಿಳಿದು ಸುಮ್ಮನಾದನು. ಇಲ್ಲಿಗೆ ಮೂವತ್ತೈದನೆಯ ಸರ್ಗವು.

---

{ ರಾವಣನು ಮಾಲ್ಯವಂತನನ್ನು ನಿಂದಿಸಿ, ತನ್ನ ಪಟ್ಟಣದ ರಕ್ಷಣೆಗಾಗಿ ಸೇನೆಗಳನ್ನು ನಿಲ್ಲಿಸಿದುದು. }

ದುಷ್ಟಾತ್ಮನಾದ ರಾವಣನು ಮೃತ್ಯುವಶನಾಗಿದ್ದುದರಿಂದ, ಮಾಲ್ಯವಂತನು ಹೇಳಿದ ಹಿತವಾಕ್ಯಗಳನ್ನು ಕೇಳಿ ಸಹಿಸಲಾರದೆ ಹೋದನು. ಅವನಿಗೆ ಮಿತಿಮೀರಿದ ಕೋಪಾವೇಶವೂ ಹುಟ್ಟಿತು. ಹೀಗೆ ಕೋಪಪರವಶನಾಗಿ ಆತನು ಹಣೆಯಲ್ಲಿ ಹುಬ್ಬನ್ನು ಗಂಟಿಕ್ಕಿ ಕಣ್ಣಾಲೆಗಳನ್ನು ತಿರುಗಿಸುತ್ತ ಮಾಲ್ಯವಂತನನ್ನು ಕುರಿತು "ತಾತಾ! ಸಾಕು ಸುಮ್ಮನಿರು! ನೀನು ಶತ್ರುಪಕ್ಷದವನೆಂದೇ ತೋರುವುದು. ಆದರಿಂದಲೇ ಅವರಿಗನುಕೂಲನಾಗಿ ಮಾತಾಡುತ್ತಿರುವೆ. ಹಿತವನ್ನು ಹೇಳುವೆನೆಂಬ ನೆವದಿಂದ ನನಗೆ ಅಹಿತವಾದ ಪರುಷವಾಕ್ಯವನ್ನೇ ಹೇಳುತ್ತಿರುವೆಯಲ್ಲಾ! ಈ ನಿನ್ನ ಮಾತೊಂದೂ ನನ್ನ ಕಿವಿಗೇರಲಾರದು. ಆ ರಾಮನೆಂಬವನು ಕೇವಲಮನುಷ್ಯಮಾತ್ರನಾದುದರಿಂದ ಜಾತಿಯಿಂದಲೂ ದುರ್ಬಲನು. ಇದರಮೇಲೆ ಈಗ ಬಹಳವಾದ ಕಷ್ಟಕ್ಕೂ ಸಿಕ್ಕಿಬಿದ್ದು ನರಳುತ್ತಿರುವುದರಿಂದ, ಸ್ವಭಾವದಿಂದಲೂ ಬಲಹೀನನು. ಬೇರೆ ಮನುಷ್ಯರ ಸಹಾಯವೂ ಇಲ್ಲದೆ ಒಂಟಿಯಾಗಿರುವನು. ಕೇವಲ ಚಪಲಸ್ವಭಾವವುಳ್ಳ ಕೆಲವು ಕಪಿಗಳನ್ನು ತನ್ನ ಸಹಾಯಕ್ಕಾಗಿ ಆಶ್ರಯಿಸಿಕೊಂಡಿರುವನು. ತಂದೆಯಿಂದ ಕಾಡಿಗಟ್ಟಲ್ಪಟ್ಟು, ರಾಜ್ಯಭ್ರಷ್ಟನಾಗಿ ಕಾಡುಕಾಡಾಗಿ ಸುತ್ತುತ್ತಿರುವನು. ಯಾವಭಾಗದಲ್ಲಿನೋಡಿದರೂ ಅವನು ದುರ್ಬಲನಾಗಿರುವನು. ಇಂತಹ ರಾಮನನ್ನು ಸಮರ್ಥನೆಂದು ಹೇಳುವೆಯಲ್ಲಾ! ಇದಕ್ಕೆ ನಿಜವಾದ ಕಾರಣವೇನು? ನನ್ನ ಮಹಾವೈಭವಗಳನ್ನು ಕಣ್ಣಿದಿರಿಗೆನೋಡುತ್ತಿರುವಾಗಲೂ, ನನ್ನ ಸಾಮರ್ಥ್ಯದಲ್ಲಿ ನಿನಗೆ ನಂಬಿಕೆಯಿಲ್ಲದೆ ಹೋಯಿತೆ? ರಾಕ್ಷಸರಿಗೆಲ್ಲಾ ನಾನು ರಾಜಾಧಿರಾಜನೆನಿಸಿಕೊಂಡಿರುವೆನು! ನನ್ನನ್ನು ನೋಡಿದಮಾತ್ರಕ್ಕೆ ಸಮಸ್ತದೇವತೆಗಳೂ ಭಯಪಟ್ಟು ನಡುಗುವರು! ಹೇಗೆ ನೋಡಿದರೂ ಸಮಸ್ತಭಾಗಗಳಲ್ಲಿಯೂ

ನನ್ನ ಪರಾಕ್ರಮವು ಮೇಲೆನಿಸಿರುವುದು! ಇಂತಹ ನನ್ನನ್ನು ಆ ರಾಮನಿಗಿಂತಲೂ ಹೀನನೆಂದೆಣಿಸುವೆಯಾ? ನಿನಗೆ ಈ ದುರಭಿಪ್ರಾಯವು ಹುಟ್ಟುವುದಕ್ಕೆ ನಿಜವಾದ ಕಾರಣವೇನಿರಬಹುದು? ನಿನ್ನ ಸಜಾತೀಯರಲ್ಲಿ ನನ್ನಂತಹ ವೀರನೊಬ್ಬನಿರುವನೆಂದು ನಿನಗೆ ಮನಸ್ಸಿನಲ್ಲಿ ಪೂರ್ಣವಾದ ಅಸೂಯೆಯಿರಬಹುದು. ಇಲ್ಲವೇ ಶತ್ರುಗಳಲ್ಲಿ ನಿನಗೆ ಪಕ್ಷಪಾತವು ಹುಟ್ಟಿರಬೇಕು! ಅದೂ ಇಲ್ಲದಿದ್ದರೆ, ಆ ನನ್ನ ಶತ್ರುಗಳೇ ಬಂದು ನಿನ್ನನ್ನು ಪ್ರೋತ್ಸಾಹಿಸಿ, ನಿನ್ನ ಬುದ್ಧಿಯನ್ನು ಕೆಡಿಸಿರಬೇಕು! ಆದರಿಂದಲೇ ನೀನು ನನ್ನನ್ನು ಕುರಿತು ಹೀಗೆ ಪರುಷವಾಕ್ಯಗಳನ್ನಾಡಿರಬಹುದೆಂದು ನನಗೆ ಸಂದೇಹವು ತೋರಿರುವುದು. ಶತ್ರುಗಳ ಪ್ರೋತ್ಸಾಹವಿಲ್ಲದಿದ್ದಪಕ್ಷದಲ್ಲಿ, ಪಂಡಿತನಾಗಿಯೂ, ಶಾಸ್ತ್ರತತ್ವಗಳನ್ನು ತಿಳಿದವನಾಗಿಯೂ ಇರುವ ಯಾವನು ತಾನೇ ಹೀಗೆ ಮಹಾಪ್ರಭಾವವುಳ್ಳವನಾಗಿ, ಮಹೋನ್ನತಪದವಿಯಲ್ಲಿರುವ ನನ್ನಂತಹ ಪ್ರಭುವಿನಮುಂದೆ ಈ ಪರುಷವಾಕ್ಯಗಳನ್ನಾಡುವನು? ನೀನು ಹೇಳಿದುದು ಯಥಾರ್ಥವಾಗಿಯೇ ಇರಲಿ! ಹಾಗಿದ್ದರೂ ನಾನು ಕಮಲಪೀಠದಿಂದೆಳೆದುತಂದ ಲಕ್ಷ್ಮಿಯಂತೆ ಕಾಡಿನಿಂದ ಕದ್ದು ತಂದಿರುವ ಆ ಸೀತೆಯನ್ನು ರಾಮನಭಯಕ್ಕಾಗಿ ಈಗ ಹಿಂತಿರುಗಿ ಕೊಡುವೆನೆಂದೆಣಿಸುವೆಯಾ ? ಎಂದಿಗೂ ಕೊಡುವವನಲ್ಲ! ದುರ್ಲಭವಾದ ವಸ್ತುವು ಕೈಗೆ ಸಿಕ್ಕಿರುವಾಗ ಅದನ್ನು ಬಿಟ್ಟುಬಿಡುವನೆ? ಇನ್ನು ಹೆಚ್ಚು ಮಾತಿನಿಂದೇನು? ಕೆಲವು ದಿನಗಳಲ್ಲಿಯೇ ಆ ರಾಮನು ಲಕ್ಷ್ಮಣಸುಗ್ರೀವರೊಡನೆಯೂ, ಅನೇಕ ವಾನರಸಮೂಹಗಳೊಡನೆಯೂ ಇಲ್ಲಿಗೆ ಬಂದು, ನನ್ನಿಂದ ಹತನಾಗಿ ಬೀಳುವುದನ್ನು ನಿನ್ನ ಕಣ್ಣಾರೆ ನೀನೇ ನೋಡುವೆ! ಯಾವನೊಡನೆ, ದೇವಜಾತಿಯವರೂಕೂಡ ದ್ವಂದ್ವಯುದ್ಧಕ್ಕೆ ನಿಲ್ಲಲಾರರೋ ಅಂತಹ ರಾವಣನು ಈ ಸಾಮಾನ್ಯವಾದ ಮನುಷ್ಯಯುದ್ಧಕ್ಕೆ ಭಯಪಡುವನೆ? ತಾತಾ! ನಾನು ಹೀಗೆ ಹೇಳುವೆನೆಂದು ಕೋಪಿಸಬೇಡ! ಮನ್ನಿಸು! ಯಾರ ಪರಾಕ್ರಮವು ಹೇಗಾದರೂ ಇರಲಿ! ನನ್ನಸ್ವಭಾವವನ್ನು ತಿಳಿಸುವೆನು ಕೇಳು. ಇತರರಿಗೆ ನಾನು ಹೆದರುವೆನೆಂಬ ಮಾತುಸುಳ್ಳು! ಶತ್ರುಗಳ ಕೈಯಿಂದ ಹತನಾಗಿ ಎರಡುತುಂಡಾಗಿ ಸೀಳಿಬಿದ್ದರೂ ಬೀಳುವೆನೇ ಹೊರತು ಆಗಲೂ ಮತ್ತೊಬ್ಬರಿಗೆ ನಾನು ಬಗ್ಗುವವನಲ್ಲ. "ಇದು ನೀತಿವಿರುದ್ಧವಲ್ಲವೆ" ಎಂದು ನೀನು ಕೇಳಬಹುದು. ಇದು ನನಗೆ ಸ್ವಭಾ

ವಸಿದ್ಧವಾದ ದೋಷವು. ಆ ಸ್ವಭಾವವನ್ನು ಮೀರಿಹೋಗುವುದಕ್ಕೆ ನ್ನಿನಿಂ ದಲೂ ಸಾಧ್ಯವಲ್ಲ. ತಾತಾ! ಅದುಹಾಗಿರಲಿ! ರಾಮನು ಸಮುದ್ರದಲ್ಲಿ ಸೇತುವನ್ನು ಕಟ್ಟಿದನೆಂಬುದಕ್ಕಾಗಿಯೇ ಅಲ್ಲವೇ ನೀವೆಲ್ಲರೂ ಹೀಗೆ ಭಯಪಡುತ್ತಿರುವಿರಿ! ಅತ್ಯಲ್ಪವಾದ ಆ ಸಮುದ್ರದಲ್ಲಿ ಅಪ್ಪುಮಂಪಿಯೂ ಸೇರಿ ಮಹಾಪ್ರಯತ್ನದಿಂದ ಒಂದು ಸೇತುವನ್ನು ಕಟ್ಟಿದಮಾತ್ರಕ್ಕೆ ಅದೊಂದಾಶ್ಚರ್ಯವೆ? ಇದಕ್ಕಾಗಿ ಭಯಪಡಬಾರದು! ತಾತಾ! ಮುಖ್ಯವಾಗಿ ಒಂದೇ ಮಾತನ್ನು ಹೇಳುವೆನು ಕೇಳು. ಆ ರಾಮನು ವಾನರಸೈನ್ಯಗಳೊಡನೆ ಸಮುದ್ರವನ್ನು ದಾಟಿ ಈ ಕಡೆಗೆ ಬಂದಿರುವನಲ್ಲವೆ? ಇನ್ನು ಮೇಲೆ ಅವನು ಪ್ರಾಣದೊಡನೆ ಹಿಂತಿರುಗಿ ಬದುಕಿಹೋಗಲಾರನು! ಇದು ಸತ್ಯವು! ಬೇಕಾದರೆ ಈ ವಿಷಯದಲ್ಲಿ ಶಪಥಮಾಡಿಕೊಡುವೆನು" ಎಂದನು. ಹೀಗೆ ಪರುಷವಾಕ್ಯವನ್ನಾಡುತಿದ್ದ ರಾವಣನನ್ನು ನೋಡಿ, ಮಾಲ್ಯವಂತನು ಆ ರಾವಣನಿಗೆ ಕೋಪವು ಮಿತಿಮೀರಿಹೋಯಿತೆಂದು ತಿಳಿದು, ತನ್ನ ಹಿತವಾಕ್ಯವೆಲ್ಲವೂ ವಿಫಲವಾದುದಕ್ಕಾಗಿ ನಾಚಿಕೆಗೊಂಡು ಪ್ರತಿವಾಕ್ಯವನ್ನಾಡದೆ, ಆ ರಾವಣನಿಗೆ ಯಥೋಚಿತವಾಗಿ ತಾನು ಹೇಳಬೇಕಾದ ಜಯಶಬ್ದವನ್ನು ಹೇಳಿ, ಆಶೀರ್ವಾದವನ್ನೂ ಮಾಡಿ ರಾಜಾಜ್ಞೆಯನ್ನು ಪಡೆದು ತನ್ನ ಮನೆಗೆ ಹಿಂತಿರುಗಿಬಿಟ್ಟನು. ಆಮೇಲೆ ರಾವಣನು ಇತ್ತಲಾಗಿ ಇತರ ಮಂತ್ರಿಗಳೊಡನೆ ಕಲೆತು, ಮುಂದಿನ ಕಾರ್ಯಗಳನ್ನಾಲೋಚಿಸಿ ನಿಶ್ಚಯಿಸಿಕೊಂಡು, ತನ್ನ ಲಂಕಾನಗರಿಗೆ ಪ್ರಬಲವಾದ ರಕ್ಷಣಕಾರ್ಯಗಳನ್ನು ನಡೆಸಿದನು. ಆ ಲಂಕೆಯ ಪೂರ್ವದ್ವಾರದಲ್ಲಿ ಕಾವಲಿರುವುದಕ್ಕಾಗಿ ಪ್ರಹಸ್ತನನ್ನು ನಿಯಮಿಸಿದನು. ವೀರ್ಯಶಾಲಿಗಳಾದ ಮಹೋದರ, ಮಹಾಪಾರ್ಶ್ವರೆಂಬ ರಾಕ್ಷಸರಿಬ್ಬರನ್ನೂ ದಕ್ಷಿಣದ್ವಾರದಲ್ಲಿ ಕಾವಲಿರಿಸಿದನು. ಬಾಗಿಲಲ್ಲಿ ಕಾವಲಿರುವುದಕ್ಕಾಗಿ, ಬಹಳ ಮಾಯಾವಿಯಾದ ತನ್ನ ಮಗನಾದ ಇಂದ್ರಜಿತ್ತನ್ನೇ ಕರೆದು ಅನೇಕ ರಾಕ್ಷಸಸೈನಿಕರೊಡನೆ ಅಲ್ಲಿರುವಂತೆ ಅವನಿಗೆ ನಿಯಮಿಸಿದನು. ಉತ್ತರದ್ವಾರದಲ್ಲಿ ಕಾವಲಿರುವುದಕ್ಕಾಗಿ, ಶುಕಸಾರಣರಿಬ್ಬರನ್ನೂ ನಿಯಮಿಸಿ, ತಾನೂ ಅಲ್ಲಿಯೇ ಇರುವುದಾಗಿ ಮಂತ್ರಿಗಳಿಗೆ ತಿಳಿಸಿದನು. ಪಟ್ಟಣದ ನಡುವೆ ಗುಲ್ಮಸ್ಥಾನದಲ್ಲಿ ಮಹಾಪರಾಕ್ರಮಶಾಲಿಯಾದ ವಿರೂಪಾಕ್ಷನೆಂಬ ರಾಕ್ಷಸನನ್ನು ಅನೇಕರಾಕ್ಷಸರೊಡನೆ ಕಾವಲಿರಿಸಿದನು. ಹೀಗೆ ರಾವಣನು

ಲಂಕಾಪಟ್ಟಣಕ್ಕೆ ರಕ್ಷಣಕಾರ್ಯಗಳನ್ನು ಮಾಡಿಸಿ, ಕಾಲಚೋದಿತನಾದುದ ರಿಂದ, ಇಷ್ಟರಲ್ಲಿಯೇ ತಾನು ಕೃತಾರ್ಥನೆಂದು ಭಾವಿಸಿ,ತನ್ನೊಳಗೆ ತಾನೇ ಸಂತೋಷದಿಂದುಬ್ಬುತ್ತಿದ್ದನು. ಆಮೇಲೆ ರಾವಣನು ಲಂಕಾನಗರಿಗೆ ಇನ್ನೂ ಅಲ್ಲಲ್ಲಿ ಸಂಪೂರ್ಣವಾದ ರಕ್ಷಣವಿಧಾನಗಳನ್ನು ನಡೆಸುವುದಕ್ಕಾಗಿ ಮಂತ್ರಿ ಗಳನ್ನು ನಿಯಮಿಸಿ ಅವರೆಲ್ಲರನ್ನೂ ಕಳುಹಿಸಿಕೊಟ್ಟನು. ಆ ಮಂತ್ರಿಗಳೆಲ್ಲ ರೂ ಜಯಾಶೀರ್ವಾದಗಳಿಂದ ರಾಜನನ್ನು ಪೂಜಿಸಿ, ತಮ್ಮತಮ್ಮ ನಿವಾಸಗ ಳಿಗೆ ಹೊರಟುಹೋದರು. ಇತ್ತಲಾಗಿ ರಾವಣನೂ ಸರ್ವಸೌಭಾಗ್ಯಸಮೃ ದ್ಧವಾದ ತನ್ನ ಅಂತಃಪುರವನ್ನು ಪ್ರವೇಶಿಸಿದನು. ಇಲ್ಲಿಗೆ ಮೂವತ್ತಾರನೆ ಯ ಸರ್ಗವು.

---

{ಇತ್ತಲಾಗಿ ರಾಮನು ವಾನರಸೈನ್ಯಕ್ಕೆ ಗುಪ್ತಿವಿಧಾನವನ್ನು ಮಾಡಿಸಿದುದು.}

ಇಷ್ಟರಲ್ಲಿ ಇತ್ತಲಾಗಿ ರಾಮಲಕ್ಷ್ಮಣರೂ, ವಾನರರಾಜನಾದ ಸು ಗ್ರೀವನೂ, ವಾಯುಪುತ್ರನಾದ ಹನುಮಂತನೂ, ಭಲ್ಲೂಕರಾಜನಾದ ಜಾಂಬವಂತನೂ, ವಿಭೀಷಣನೂ, ವಾಲಿಪುತ್ರನಾದ ಅಂಗದನೂ, ಶರಭ ನೂ, ಸುಷೇಣನೂ, ಅವನ ಬಂಧುಜನವೂ, ಮೈಂದದ್ವಿವಿದರೂ, ಗಜ ಗ ವಾಕ್ಷರೂ, ಕುಮುದನೂ, ನಳನೂ, ಪನಸನೇ ಮೊದಲಾದವರೂ ತಮ್ಮ ತಮ್ಮ ಪರಿವಾರಗಳೊಡನೆ ಶತ್ರುದೇಶವಾದ ಲಂಕಾದ್ವೀಪವನ್ನು ಸಮೀಪಿ ಸಿದರು. ಅಲ್ಲಿ ಅವರೆಲ್ಲರೂ ಒಂದಾಗಿ ಗುಂಪುಗೂಡಿ ಒಬ್ಬರಿಗೊಬ್ಬರು "ಮೊ ದಲು ನಮಗೆ ಹನುಮಂತನು ಹೇಳಿದ ರಾವಣರಕ್ಷಿತವಾದ ಲಂಕಾನಗರಿಯು ಅದೋ! ಅಲ್ಲಿ ಕಾಣುತ್ತಿರುವುದು. ಈ ಪಟ್ಟಣವು ದೇವಾಸುರರಿಗಾಗಲಿ, ಪನ್ನಗರಿಗಾಗಲಿ, ಗಂಧರ್ವರಿಗಾಗಲಿ, ಯಾರಿಗೂ ಜಯಿಸುವುದಕ್ಕೆ ಸಾಧ್ಯ ವಲ್ಲವೆಂಬುದು ನಿಜವು. ರಾಕ್ಷಸೇಶ್ವರನಾದ ರಾವಣನು ಯಾವಾಗಲೂ ಇದರಲ್ಲಿ ಎಡೆಬಿಡದೆ ಸನ್ನಿಹಿತನಾಗಿ ಇದನ್ನು ರಕ್ಷಿಸುತ್ತಿರುವನು. ಹೇಗಾದ ರೂ ನಮಗೆ ತಪ್ಪದೆ ಜಯಸಿದ್ಧಿಯಾಗುವಂತೆ ಈಗಲೇ ಅದಕ್ಕೆ ತಕ್ಕ ಕಾ ರ್ಯಗಳನ್ನು ನಡೆಸುವುದಕ್ಕಾಗಿ ನಾವೆಲ್ಲರೂ ಚೆನ್ನಾಗಿ ಆಲೋಚಿಸಬೇಕು."

ಎಂದು ಮಾತಾಡಿಕೊಳ್ಳುತಿದ್ದರು. ಇವರು ಹೀಗೆ ಮಾತಾಡುತ್ತಿರುವಾಗ ಲೇ ವಿಭೀಷಣನು ಅವರನ್ನು ಕುರಿತು ಎಲ್ಲರಿಗೂ ಸ್ಫುಟವಾಗಿ ತಿಳಿಯುವುದ ಕ್ಕಾಗಿ, ಸ್ವದೇಶಭಾಷೆಯ ಪದಗಳಾಗಲೀ, ಗ್ರಾಮ್ಯಶಬ್ದಗಳಾಗಲಿ ಇಲ್ಲದೆ, ಶುದ್ಧವಾದ ಸಂಸ್ಕೃತಪದಗಳಿಂದ ತುಂಬಿದ ಸಾರಯುಕ್ತವಾದ ಮಾತಿ ನಿಂದ "ಎಲೆ ವಾನರರೆ! ನನ್ನ ಮಂತ್ರಿಗಳಾದ, ಅನಲ, ಶರಭ, ಸಂಪಾತಿ, ಪ್ರಘಸರೆಂಬ ಈ ನಾಲ್ವರು ರಾಕ್ಷಸರೂ ಈಗಲೇ ಲಂಕಾಪುರಿಗೆ ಹೋಗಿ ಅಲ್ಲಿನ ರಹಸ್ಯಗಳನ್ನು ತಿಳಿದುಬಂದಿರುವರು. ಈ ನಾಲ್ವರೂ ಪಕ್ಷಿರೂಪ ವನ್ನು ಧರಿಸಿ, ಶತ್ರುಸೈನ್ಯವನ್ನು ಪ್ರವೇಶಿಸಿ, ಅಲ್ಲಿ ರಾಕ್ಷಸರು ನಗರರಕ್ಷಣ ಕ್ಕಾಗಿ ಮಾಡಿರುವ ಏರ್ಪಾಡುಗಳೆಲ್ಲವನ್ನೂ ನೋಡಿಬಂದಿರುವರು. ರಾಮಾ! ಲಂಕೆಯಲ್ಲಿ ದುರಾತ್ಮನಾದ ರಾವಣನು ತನ್ನ ಪುರರಕ್ಷಣೆಗಾಗಿ ನಡೆಸಿದ ಸನ್ನಾಹಗಳೆಲ್ಲವನ್ನೂ ಇವರು ನನಗೆ ಹೇಳಿರುವರು. ಅವೆಲ್ಲವನ್ನೂ ಯಥಾ ಸ್ಥಿತವಾಗಿ ನಿನಗೂ ಹೇಳುವೆನು ಕೇಳು. ಪ್ರಹಸ್ತನು ಲಂಕೆಯ ಪೂರ್ವದ್ವಾ ರದಲ್ಲಿರುವನು. ಮಹಾವೀರ್ಯಶಾಲಿಗಳಾದ ಮಹೋದರ ಮಹಾಪಾರ್ಶ್ವರಿ ಬ್ಬರೂ ದಕ್ಷಿಣದ್ವಾರವನ್ನು ಕಾಯುತ್ತಿರುವರು. ರಾವಣನ ಪುತ್ರನಾದ ಇಂದ್ರಜಿತ್ತು, ಖಡ್ಗ, ಶೂಲ, ಮುದ್ಗರಾದ್ಯಾಯುಧಗಳನ್ನು ಧರಿಸಿದ ಅನೇ ಕಪ್ರಧಾನರಾಕ್ಷಸರೊಡನೆಯೂ, ಆಯುಧಪಾಣಿಗಳಾದ ಬೇರೆ ಕೆಲವು ರಾಕ್ಷಸವೀರರೊಡನೆಯೂ ಸೇರಿ ಪಶ್ಚಿಮದ ಬಾಗಿಲಲ್ಲಿ ಕಾವಲಿರುವನು. ರಾ ವಣನು ಮನಸ್ಸಿನಲ್ಲಿ ಸ್ವಲ್ಪಮಾತ್ರವೂ ತನ್ನ ಧೈರ್ಯವನ್ನು ಬಿಡದೆ, ಆಯುಧ ಪಾಣಿಗಳಾದ ಅನೇಕಸಹಸ್ರರಾಕ್ಷಸಸೈನಿಕರನ್ನೂ, ಬಹಳ ಮಂದಿ ಪ್ರ ಧಾನ ರಾಕ್ಷಸರನ್ನೂ ತನಗೆ ಸಹಾಯವಾಗಿಟ್ಟುಕೊಂಡು, ತಾನೇ ಆ ಲಂಕೆ ಯ ಉತ್ತರದ್ವಾರವನ್ನು ರಕ್ಷಿಸುತ್ತಿರುವನು. ವಿರೂಪಾಕ್ಷನೆಂಬವನು ಖ ಡ್ಗಶೂಲಾದ್ಯಾಯುಧಗಳನ್ನೂ, ಮೇಲಾದ ಧನುಸ್ಸುಗಳನ್ನೂ ಹಿಡಿದಿರುವ ದೊಡ್ಡಸೈನ್ಯದೊಡಗೂಡಿ. ಕೆಲವು ಪ್ರಧಾನರಾಕ್ಷಸರಿಂದಲೂ ಸೇವಿತನಾ ಗಿ, ಮಧ್ಯಮಗುಲ್ಮದಲ್ಲಿ ಕಾವಲಾಗಿರುವನು. ಹೀಗೆ ಲಂಕೆಯಲ್ಲಿ ವಿಭಾಗಿಸಿ ಡಲ್ಪಟ್ಟ ಸೈನ್ಯಗಳೆಲ್ಲವನ್ನೂ ಕೂಡ, ಈ ನನ್ನ ನಾಲ್ವರು ಮಂತ್ರಿಗಳೂ ತಮ್ಮ ಕಣ್ಣಾರೆ ನೋಡಿಬಂದಿರುವರು. ಈಗ ಆ ಲಂಕೆಯಲ್ಲಿ ಸಾವಿರಮಂದಿ ಗಜಯೋಧರು, ಹತ್ತುಸಾವಿರಮಂದಿ ರಥಿಕರು, ಇಪ್ಪತ್ತುಸಾವಿರಮಂದಿ

ಅಶ್ವಯೋಧರು, ಪೂರ್ಣವಾಗಿ ಒಂದುಕೋಟಿ ರಾಕ್ಷಸಪದಾತಿಗಳು, ಹೀಗೆ ಮಹಾಪರಾಕ್ರಮಿಗಳಾಗಿಯೂ, ಬಲಾಢ್ಯರಾಗಿಯೂ, ಯುದ್ಧದಲ್ಲಿ ಕ್ರೂರರಾಗಿಯೂ ಇರುವ ರಾಕ್ಷಸಯೋಧರು ಎಡೆಬಿಡದೆ ರಾವಣನನ್ನು ಸೇವಿಸುತ್ತ ಆತನಿಗೆ ಅಂತರಂಗಭೂತರಾಗಿರುವರು. ಎಲೆ ರಾಜನೆ! ಈ ರಾಕ್ಷಸರಲ್ಲಿಯೂ ಕೂಡ ಒಬ್ಬೊಬ್ಬನಿಗೆ ಹತ್ತುಲಕ್ಷದಂತೆ ಪರಿಜನರಿರುವರು. ಇವರೆಲ್ಲರೂ ಈಗ ನಮ್ಮೊಡನೆ ಯುದ್ಧಕ್ಕಾಗಿ ಸರ್ವಸನ್ನಾಹಗಳಿಂದ ಬಂದಿರುವರು." ಎಂದನು. ಹೀಗೆ ವಿಭೀಷಣನು ತನಗೆ ತನ್ನ ಮಂತ್ರಿಗಳು ಹೇಳಿದ ಲಂಕಾವೃತ್ತಾಂತವೆಲ್ಲವನ್ನೂ ರಾಮನಿಗೆ ತಿಳಿಸಿ, ಆ ಮಂತ್ರಿಗಳನ್ನು ಕರೆದು ರಾಮನಿಗೂ ತೋರಿಸಿ, ಆ ಮಂತ್ರಿಗಳ ಬಾಯಿಂದಲೂ ಮತ್ತೊಮ್ಮೆ ರಾಮನಮುಂದೆ ಆ ವೃತ್ತಾಂತಗಳನ್ನು ಕ್ರಮವಾಗಿ ಹೇಳಿಸಿದನು. ಹೀಗೆ ಶ್ರೀಮಂತನಾದ ವಿಭೀಷಣನು ರಾಮನಿಗೆ ಮನಃಪೂರ್ವಕವಾಗಿ ಪ್ರಿಯವನ್ನು ಕೋರುವವನಾಗಿ, ಆತನನ್ನು ಕುರಿತು. "ರಾಮಾ! ಪೂರ್ವದಲ್ಲಿ ರಾವಣನು ಕುಬೇರನೊಡನೆ ಯುದ್ಧಕ್ಕಾಗಿ ಹೊರಟಾಗ, ಶತ್ರುಗಳನ್ನಡಗಿಸತಕ್ಕ ಪರಾಕ್ರಮದಿಂದಲೂ, ಯುದ್ಧದಲ್ಲಿ ನಿಶ್ಚಲವಾದ ವೀರ್ಯದಿಂದಲೂ, ಎಣೆಯಿಲ್ಲದ ಪ್ರತಾಪದಿಂದಲೂ,ಧೈರ್ಯದಿಂದಲೂ, ದರ್ಪದಿಂದಲೂ, ತನಗೆ ಸಾಟಿಯಿಸಿಸಿಕೊಂಡ, ಇಂತಹ ಅರುವತ್ತುಲಕ್ಷರಾಕ್ಷಸರನ್ನುಮಾತ್ರವೇ ತನಗೆ ಬೆಂಬಲವಾಗಿ ಕರೆದುಕೊಂಡುಹೋಗಿ ಜಯಿಸಿಬಂದನು. ಈಗ ಹೇಳಬೇಕಾದುವೇನು? ಎಲೆ ಮಹಾರಾಜನೆ! ಹೀಗೆ ನಾನು ಶತ್ರುಬಲವನ್ನು ವರ್ಣಿಸುವುದಕ್ಕಾಗಿ ನನ್ನ ಮೇಲೆ ಕೋಪಿಸಬೇಡ! ಆ ಶತ್ರುಗಳನ್ನಡಗಿಸುವುದಕ್ಕಾಗಿ ನಿನಗೆ ರೋಷವನ್ನು ಹುಟ್ಟಿಸಬೇಕೆಂದು ಹೀಗೆ ಹೇಳುತ್ತಿರುವೆನೇ ಹೊರತು, ನಿನ್ನನ್ನು ಭಯಪಡಿಸುವುದಕ್ಕಾಗಿ ಹೇಳುವೆನೆಂದೆಣಿಸಬೇಡ! ರಾಮಾ! ನೀನು ನಿನ್ನ ವೀರ್ಯದಿಂದ ದೇವತೆಗಳನ್ನಾದರೂ ನಿಗ್ರಹಿಸುವುದಕ್ಕೆ ಸಮರ್ಥವಾದ ವೀರ್ಯವುಳ್ಳವನು. ನಿನ್ನಲ್ಲಿಯೂ ಅಪರಿಮಿತವಾದ ಸೇನೆಯಿರುವುದು. ಆದುದರಿಂದ ನೀನೂ ಈಗ ಆ ರಾವಣನನ್ನು ಜಯಿಸುವುದಕ್ಕೆ ತಕ್ಕಂತೆ ನಿನ್ನಲ್ಲಿರುವ ಈ ದೊಡ್ಡ ಚತುರಂಗಸೈನ್ಯವನ್ನು(ವಾನರಭಲ್ಲೂಕಾದಿ ಚತುರವಯವಗಳುಳ್ಳ ಈ ನಮ್ಮ ಸೇನೆಯನ್ನು) ನಾಲ್ಕಾಗಿ ಬೇರ್ಪಡಿಸಿ, ವ್ಯೂಹವನ್ನು ಕಟ್ಟಿ, ಆ ರಾವಣನನ್ನು ನಿಗ್ರಹಿಸಬೇಕು!" ಎಂದನು.

ವಿಭೀಷಣನು ಹೇಳಿದ ಈ ಮಾತನ್ನು ಕೇಳಿ ರಾಮನು, ಶತ್ರುನಿಗ್ರಹವಿಷಯ ವಾಗಿ ಆ ವಿಭೀಷಣನನ್ನು ಕುರಿತು "ವಿಭೀಷಣಾ!" ಹಾಗೆಯೇ ಸರಿ! ವಾನರಶ್ರೇಷ್ಠನಾದ ನೀಲನು ಅನೇಕ ವಾನರವೀರರೊಡನೆ ಸೇರಿ ಲಂಕೆ ಯ ಪೂರ್ವದ್ವಾರಕ್ಕೆ ಹೋಗಿ ಅಲ್ಲಿ ಪ್ರಹಸ್ತನನ್ನಿದಿರಿಸಲಿ! ವಾಲಿಪುತ್ರ ನಾದ ಈ ಅಂಗದನು ದೊಡ್ಡ ವಾನರಸೈನ್ಯವನ್ನು ಸೇರಿಸಿಕೊಂಡು ದ ಕ್ಷಿಣದ್ವಾರದಲ್ಲಿರುವ ಮಹೋದರ ಮಹಾಪಾರ್ಶ್ವರೆಂಬ ರಾಕ್ಷಸರಿಬ್ಬರ ನ್ನೂ ನಿಗ್ರಹಿಸುವುದಕ್ಕೆ ಹೋಗಲಿ! ವಾಯುಪುತ್ರನಾದ ಹನುಮಂತನು ಇನ್ನೂ ಕೆಲವು ಕಪಿಗಳನ್ನು ಸಹಾಯಕ್ಕೆ ಕರೆದುಕೊಂಡು, ಲಂಕೆಯ ಪಶ್ಚಿಮದ ಬಾಗಿಲಿಗೆ ಹೋಗಿ, ಅಲ್ಲಿ ಕಾವಲಿರುವ ಇಂದ್ರಜಿತ್ತಿನೊಡನೆ ಯುದ್ಧಮಾಡಲಿ! ದೈತ್ಯದಾನವರನ್ನೂ, ಮಹಾತ್ಮರಾದ ಋಷಿಗಳನ್ನೂ ಗೋಳಾಡಿಸುವುದರಲ್ಲಿಯೇ ನಿತ್ಯಾಸಕ್ತನಾಗಿಯೂ, ಕ್ಷುದ್ರಸ್ವಭಾವವುಳ್ಳ ವನಾಗಿಯೂ,ಬ್ರಹ್ಮನ ವರದ ಬಲದಿಂದ ಕೊಬ್ಬಿದವನಾಗಿಯೂ, ಪ್ರಜೆಗ ಳನ್ನು ಗೋಳಾಡಿಸುವುದಕ್ಕಾಗಿಯೇ ಸಮಸ್ತಲೋಕಗಳನ್ನೂ ತಿರುಗುವ ವನಾಗಿಯೂ ಇರುವ ಯಾವ ರಾಕ್ಷಸರಾಜನುಂಟೋ, ಅವನನ್ನು ನಾನೇ ನನ್ನ ಕೈಯಾರೆ ಕೊಲ್ಲಬೇಕೆಂದು ಸಂಕಲ್ಪಿಸಿರುವೆನು. ಆದುದರಿಂದ ನಾನು ನನ್ನ ತಮ್ಮನಾದ ಲಕ್ಷ್ಮಣನೊಡಗೂಡಿ, ರಾವಣನು ಸೇನಾಸಮೇತನಾಗಿ ಕಾವಲಿರುವ ಉತ್ತರದ್ವಾರಕ್ಕೆ ಹೋಗಿ ಅಲ್ಲಿ ಯುದ್ಧಮಾಡುವೆನು. ಬಲಾ ಢ್ಯನೆನಿಸಿಕೊಂಡ ವಾನರರಾಜನಾದ ಈ ಸುಗ್ರೀವನೂ, ವೀರ್ಯಶಾಲಿಯಾದ ಜಾಂಬವಂತನೂ, ರಾವಣಾನುಜನಾದ ನೀನೂ, ಈ ಮೂವರೂ ಸೇರಿ, ರಾವಣನೂ, ಇಂದ್ರಜಿತ್ತೂ ಕಾವಲಿರುವ ಉತ್ತರಪಶ್ಚಿಮದ್ವಾರಗಳಿಗೆ ಮಧ್ಯಮ ಗುಲ್ಮವಾಗಿ ನಿಲ್ಲಿರಿ! ಈ ವಾನರರು ಈಗಿನಂತೆ ಮುಂದಿನ ಯುದ್ಧ ಕಾಲದಲ್ಲಿ ಮನುಷ್ಯರೂಪದಿಂದಿರಕೂಡದು. ಯುದ್ಧಕಾಲದಲ್ಲಿ ನಮ್ಮ ವಾ ನರಸೈನ್ಯವನ್ನು ಗುರುತು ಹಿಡಿಯುವುದಕ್ಕಾಗಿ ಕೆಲವು ಪರಸ್ಪರಸಂಕೇತಗಳಿ ರಬೇಕು.ಆ ದೊಡ್ಡ ಗುಂಪಿನಲ್ಲಿ ಇವರು ನಮ್ಮವರೆಂದು ತಿಳಿದುಕೊಳ್ಳುವುದ ಕ್ಕೆ ತಕ್ಕಂತೆ ಇವರು [1] ವಾನರರಾಗಿಯೇ ಇರಲಿ! ಹಾಗಿದ್ದರೆ ನಾವು ಸುಲ

---

1 ವಾನರರು ಕಾಮರೂಪಿಗಳಾದುದರಿಂದ ತಮಗಿಷ್ಟಬಂದ ರೂಪವನ್ನು ತಾಳಿ ಯುದ್ಧಮಾಡುವುದಕ್ಕೆ ತೊಡಗಿದರೆ, ರಾಕ್ಷಸರೂ ಹಾಗೆಯೇ ಕಾಮರೂಪಿಗಳಾಗಿ ಯು

ಭವಾಗಿ ಕಂಡುಹಿಡಿಯಬಹುದು. ಇದೋ! ನಾನೊಬ್ಬನು, ಮಹಾತೇಜಸ್ವಿಯಾದ ಈ ನನ್ನ ತಮ್ಮನು ಲಕ್ಷ್ಮಣನೊಬ್ಬನು, ನನ್ನ ಮಿತ್ರನಾದ ವಿಭೀಷಣನೆಂಬ ನೀನೊಬ್ಬನು. ನಿನ್ನಕಡೆಯ ನಾಲ್ವರುಮಂತ್ರಿಗಳು. ಈ ಏಳುಮಂದಿಮಾತ್ರವೇ ಮನುಷ್ಯಾಕೃತಿಯಿಂದ ಯುದ್ಧವನ್ನು ನಡೆಸುವೆವು." ಎಂದನು. ರಾಮನು ಮಹಾಧೀಮಂತನಾದುದರಿಂದ, ಕಾರ್ಯ್ಯಸಿದ್ಧಿಗಾಗಿ ವಿಭೀಷಣನೊಡನೆ ಈ ಮಾತನ್ನು ಹೇಳಿ, ಮುಂದೆ ಸುವೇಲಪರ್ವತದ ತಪ್ಪಲು ಬಹಳ ಮನೋಹರವಾಗಿದ್ದುದನ್ನು ಕಂಡನು. ಅದನ್ನೇರಿ ಲಂಕೆಯನ್ನು ನೋಡಬೇಕೆಂದು ಅವನ ಮನಸ್ಸಿಗೆ ನಿಶ್ಚಯವು ಹುಟ್ಟಿತು. ರಾಮನು ಅದನ್ನುನೋಡಿ ಸಂತೋಷಗೊಂಡು, ಆಪರ್ವತವನ್ನೇ ಮುಚ್ಚುವಂತಿರುವ ದೊಡ್ಡ ವಾನರಸೇನೆಯಿಂದ ಪರಿವೃತನಾಗಿ, ಶತ್ರುವಧೋದ್ದೇಶದಿಂದ ಲಂಕೆಗೆ ಸೇರಿದ ಆ ಸುವೇಲಪ್ರಾಂತಕ್ಕೆ ಬಂದನು. ಇಲ್ಲಿಗೆ ಮೂವತ್ತೇಳನೆಯ ಸರ್ಗವು.

---

{ರಾಮನು ಲಂಕೆಯನ್ನು ನೋಡುವುದಕ್ಕಾಗಿ ಸುವೇಲಾದ್ರಿಯನ್ನೇರಿದುದು.}

ಲಕ್ಷ್ಮಣನಿಂದನುಸೃತನಾದ ರಾಮನು, ಹೀಗೆ ಸುವೇಲಪರ್ವತವನ್ನೇರುವುದಕ್ಕಾಗಿ ನಿಶ್ಚಯಿಸಿ, ಧರ್ಮಜ್ಞರಾಗಿಯೂ, ತನ್ನಲ್ಲಿ ವಿಶೇಷಭಕ್ತಿಯುಳ್ಳವರಾಗಿಯೂ, ಮಂತ್ರಾಲೋಚನೆಗಳನ್ನು ಹೇಳುವುದರಲ್ಲಿ ನಿಪುಣರಾಗಿಯೂ, ಕಾಲೋಚಿತಕಾರ್ಯ್ಯಗಳನ್ನು ಬಲ್ಲವರಾಗಿಯೂ ಇದ್ದ ವಿಭೀಷಣಸುಗ್ರೀವರಿಬ್ಬರನ್ನೂ ನೋಡಿ, ಉತ್ತಮವಾದ ಮಧುರವಾಕ್ಯದಿಂದ "ಎಲೆ ಮಿತ್ರರೆ! ನಾವೆಲ್ಲರೂ ಈಗ ಅನೇಕಧಾತುಗಳಿಂದ ತುಂಬಿರುವ ಈ

---

ದ್ಧಮಾಡುವವರು. ಆಗ ಯಾರು ನಮ್ಮವರು, ಯಾರು ಶತ್ರುಗಳೆಂದು ತಿಳಿಯುವುದಕ್ಕೆ ಸಾಧ್ಯವಿಲ್ಲದೆ ಹೋಗುವುದು. ರಾಕ್ಷಸರು ಕಪಿರೂಪವನ್ನು ಕೇವಲಹೀನವೆಂದು ತಿಳಿದಿರುವುದರಿಂದ, ಅವರು ಕಪಿರೂಪವನ್ನು ಕೈಕೊಳ್ಳಲಾರರು. ಇದಕ್ಕಾಗಿ ವಾನರರು ವಾನರರಾಗಿಯೇ ಇರಬೇಕೆಂದು ರಾಮನ ಭಾವವು. ಇದರಿಂದ ಇದಕ್ಕೆ ಮೊದಲು ವಾನರರು ಮನುಷ್ಯರೂಪದಿಂದಲೇ ಇದ್ದುದಾಗಿಯೂ ಸೂಚಿತವು. ವಿಭೀಷಣಾದಿಗಳು ಜಾತಿಯಲ್ಲಿ ರಾಕ್ಷಸರಾದರೂ ಮನುಷ್ಯರಂತೆಯೇ ಅವಯವಸಂಸ್ಥಾನವುಳ್ಳವರಾದುದರಿಂದ ಅವರು ಮನುಷ್ಯವರ್ಗದಲ್ಲಿ ಗಣಿಸಲ್ಪಟ್ಟುದಾಗಿ ಗ್ರಾಹ್ಯವು.

ಸುವೇಲವೆಂಬ ಪರ್ವತೋತ್ತಮವನ್ನೇರಿ, ಇಲ್ಲಿಯೇ ಈ ರಾತ್ರಿಯನ್ನು ಕಳೆಯುವುದು ಮೇಲು ! ಇಲ್ಲಿಂದ ನಾವು ದುರಾತ್ಮನಾದ ಆ ರಾಕ್ಷಸನಿಗೆ ವಾಸಸ್ಥಾನವಾದ ಲಂಕೆಯನ್ನೂ ನೋಡಬಹುದು. ನೀಚನಾದ ಆರಾವಣನು ಧರ್ಮದಲ್ಲಿಯೂ ದೃಷ್ಟಿಯಿಡದೆ, ತನ್ನ ಕುಲಶೀಲಾದಿಗಳನ್ನೂ ಭಾವಿಸದೆ, ರಾಕ್ಷಸಯೋಗ್ಯವಾಗ ಕೇವಲನೀಚಬುದ್ಧಿಯನ್ನೇ ಅವಲಂಬಿಸಿ, ತನ್ನ ಸಾವಿಗಾಗಿಯೇ ನನ್ನ ಭಾರ್ಯೆಯನ್ನಪಹರಿಸಿ, ಪರಭಾರ್ಯಾಪಹರಣವೆಂಬ ಈ ನಿಂದಿತಕಾರ್ಯವನ್ನು ನಡೆಸಿಬಿಟ್ಟಿರುವನು. ರಾಕ್ಷಸಾಧಮನಾದ ಆ ದುರಾತ್ಮನ ಹೆಸರನ್ನು ಹೇಳಿದಮಾತ್ರಕ್ಕೆ ನನಗೆ ಮಹತ್ತಾದ ರೋಷವು ಉಕ್ಕಿಬರುತ್ತಿರುವುದು. ಆ ನೀಚನೊಬ್ಬನ ಅಪರಾಧಕ್ಕಾಗಿ ಇಲ್ಲಿನ ರಾಕ್ಷಸರೆಲ್ಲರನ್ನೂ ಕೊಲ್ಲಬೇಕಾಗಿ ಬರುವಂತೆ ತೋರುವುದು. ಕಾಲಪಾಶಕ್ಕೆ ಸಿಕ್ಕಿ ಬಿದ್ದವನು, ತನ್ನ ವಿನಾಶಕಾಲಕ್ಕೆ ತಕ್ಕಂತೆ ವಿಪರೀತಬುದ್ಧಿಯನ್ನು ಹೊಂದಿ ತಾನೊಬ್ಬನೇ ಪಾಪಕಾರ್ಯವನ್ನು ನಡೆಸಿದರೂ,ಆ ನೀಚನ ದೋಷದಿಂದ ಅವನಿಗೆ ಸಂಬಂಧಪಟ್ಟವರೆಲ್ಲರೂ ನಾಶಕ್ಕೆ ಗುರಿಯಾಗಬೇಕಾಗುವುದಲ್ಲವೆ?" ಎಂದನು.ರಾಮನು ರಾವಣನಮೇಲೆ ಕೋಪದಿಂದ ಈಮಾತುಗಳನ್ನಾಡುತ್ತ, ಆ ರಾತ್ರಿಯನ್ನು ಕಳೆಯುವುದಕ್ಕಾಗಿ ಮನೋಹರವಾದ ತಪ್ಪಲುಗಳುಳ್ಳ ಆ ಸುವೇಲಪರ್ವತವನ್ನಾರೋಹಿಸಿದನು. ಲಕ್ಷ್ಮಣನೂಕೂಡ ಮುಂದಿನ ಯುದ್ಧದಲ್ಲಿ ತನ್ನ ಪರಾಕ್ರಮವನ್ನು ತೋರಿಸುವುದರಲ್ಲಿ ಅತ್ಯುತ್ಸಾಹವುಳ್ಳವನಾಗಿ, ಉತ್ತಮಗಳಾದ ಧನುರ್ಬಾಣಗಳನ್ನು ಧರಿಸಿ, ಎಚ್ಚರಿಕೆಯಿಂದ ರಾಮನನ್ನು ಹಿಂಬಾಲಿಸಿಹೋದನು. ಹಾಗೆಯೇ ಸುಗ್ರೀವನೂ. ವಿಭೀಷಣನೂ ತಮ್ಮತಮ್ಮ ಮಂತ್ರಿಗಳೊಡನೆ ಲಕ್ಷ್ಮಣನನ್ನು ಹಿಂಬಾಲಿಸಿ ಆ ಪರ್ವತವನ್ನೇರಿದರು. ಇವರ ಹಿಂದೆ ಹನುಮಂತನೂ, ಅಂಗದನೂ, ನೀಲನೂ, ಮೈಂದದ್ವಿವಿದರೂ, ಗಜ ಗವಾಕ್ಷ ಗವಯರೂ. ಶರಭನೂ, ಗಂಧಮಾದನನೂ, ಪನಸನೂ, ಕುಮುದನೂ, ಹರನೂ,ರಂಭನೆಂಬ ಯೂಥಪತಿಯೂ, ಜಾಂಬವಂತನೂ, ಸುಷೇಣನೂ,ಮಹಾಧೀಮಂತನಾದ ಋಷಭನೂ, ತೇಜಸ್ವಿಯಾದ ದುರ್ಮುಖನೂ, ಶತವಲಿ ಮೊದಲಾದ ವೀರರೂ, ಇನ್ನೂ ಪರ್ವತಸಂಚಾರದಲ್ಲಿ ಬಳಿಕೆಯುಳ್ಳ ಇತರವಾನರರೆಲ್ಲರೂ ಕ್ರಮವಾಗಿ ವಾಯುವೇಗಕ್ಕೆ ಸಮಾನವಾದ ಗತಿಯಿಂದ ರಾಮನ ಹಿಂದೆಆಪರ್ವತ

ವನ್ನೇರಿದರು. ಹೀಗೆ ರಾಮಾದಿಗಳೆಲ್ಲರೂ ನಾನಾಕಡೆಗಳಿಂದಲೂ ಸಾವಿರಾರು ಸಂಖ್ಯೆಯಿಂದ ಗುಂಪುಗುಂಪಾಗಿ ಸುವೇಲಪರ್ವತವನ್ನು ಬಹಳ ವೇಗದಿಂದ ಹತ್ತಿಹೋಗಿ, [1]ಅಲ್ಲಿ ತಮಗಿದಿರಾಗಿ ತ್ರಿಕೂಟಪರ್ವತದ ಶಿಖರದಮೇಲೆ ಆಕಾಶದಲ್ಲಿ ತೂಗಾಡುವಂತೆ ತೋರುತಿದ್ದ ಲಂಕಾಪುರವನ್ನು ಕಂಡರು. ಆ ವಾನರವೀರರೆಲ್ಲರೂ ಸ್ವಲ್ಪಕಾಲದವರೆಗೆ ಅಲ್ಲಿನಿಂತು, ಮುಂದೆ ರಮಣೀಯಗಳಾದ ಪುರದ್ವಾರಗಳಿಂದಲೂ, ಮಹೋನ್ನತಗಳಾದ ಪ್ರಾಕಾರಗಳಿಂದಲೂ ಶೋಭಿತವಾಗಿ ರಾಕ್ಷಸರಿಂದ ನಿಬಿಡವಾದ ಲಂಕಾನಗರಿಯನ್ನು ಚೆನ್ನಾಗಿ ಕಣ್ಣಿಟ್ಟುನೋಡುತಿದ್ದರು. ಆ ಲಂಕೆಯ ಕೋಟೆಯಸುತ್ತಲೂ ಕರೀಮೈಯುಳ್ಳ ರಾಕ್ಷಸಸೈನಿಕರು, ಕರೀಕಲ್ಲುಗಳಿಂದ ಕಟ್ಟಿದ ಬೇರೊಂದು ಪ್ರಾಕಾರವೋ ಎಂಬಂತೆ ಕಾಣುತಿದ್ದರು. ಈ ರಾಕ್ಷಸರನ್ನು ಕಂಡೊಡನೆ ವಾನರರೆಲ್ಲರೂ ಯುದ್ಧದಲ್ಲಿ ಮಹೋತ್ಸಾಹಗೊಂಡವರಾಗಿ, ರಾಮನು ನೋಡುತ್ತಿರುವಹಾಗೆಯೇ ನಾನಾವಿಧಗಳಾದ ಸಿಂಹನಾದಗಳನ್ನು ಮಾಡಿದರು. ಇಷ್ಟರಲ್ಲಿ ಸೂರ್ಯನು ಸಂಧ್ಯಾರಾಗದಿಂದ ಕೆಂಪಾದ ಕಿರಣಗಳುಳ್ಳವನಾಗಿ ಅಸ್ತಮಿಸಿದನು. [2]ಪೂರ್ಣಚಂದ್ರಪ್ರಕಾಶದೊಡನೆ ರಾತ್ರಿಯು ಪ್ರಾರಂಭಿಸಿತು. ಸಮಸ್ತ ವಾನರಸೈನ್ಯಕ್ಕೂ ಮುಖ್ಯನಿಯಾಮಕನಾದ ರಾಮನು, ವಿಭೀಷಣನು ತನ್ನನ್ನು ನಾನಾವಿಧದಿಂದ ಅಭಿನಂದಿಸಿ ಪೂಜಿಸುತ್ತಿರಲು, ಲಕ್ಷ್ಮಣಸಹಿತನಾಗಿ, ಅನೇಕ ವಾನರಯೂಥಪತಿಗಳಿಂದಲೂ ಪರಿವೃತನಾಗಿ, ಆ ರಾತ್ರಿಯಲ್ಲಿ ಆ ಸುವೇಲಪರ್ವತಾಗ್ರದಲ್ಲಿಯೇ ಸುಖವಾಗಿ ವಸಿಸುತಿದ್ದನು. ಇಲ್ಲಿಗೆ ಮೂವತ್ತೆಂಟನೆಯ ಸರ್ಗವು.

---

1 ಸುವೇಲ ಪರ್ವತವು ಲಂಕೆಯಷ್ಟೇ ಉನ್ನತವಾಗಿ ಅದಕ್ಕಿದಿರಾದ ಒಂದು ಬೆಟ್ಟವು. ಲಂಕೆಯನ್ನು ನೋಡುವುದಕ್ಕಾಗಿ ರಾಮನು ಇದನ್ನೇರಿ ಪುನಃ ಕೆಳಕ್ಕಿಳಿದುದಾಗಿ ಗ್ರಾಹ್ಯವು.

2 ಇಲ್ಲಿ ಪೂರ್ಣಚಂದ್ರಪ್ರಕಾಶವನ್ನು ವರ್ಣಿಸಿರುವುದರಿಂದ ಹುಣ್ಣಿಮೆಯಲ್ಲಿ ಸುವೇಲಾರೋಹಣವೆಂದೂ, ಮರುದಿನದ ಪ್ರಥಮೆಯಲ್ಲಿ ಯುದ್ಧಾರಂಭವೆಂದೂ ಹೇಳುವರು. ಗೋವಿಂದರಾಜೀಯದಲ್ಲಿ "ಪೂರ್ಣಚಂದ್ರಪ್ರದೀಪಾ" ಎಂಬ ಪಾಠಾಂತರವನ್ನು ಗ್ರಹಿಸಿ, ಪೂರ್ಣಚಂದ್ರನಂತಿರುವ ದೀಪಗಳುಳ್ಳದೆಂದು ಅರ್ಥಾಂತರವು ಹೇಳಲ್ಪಟ್ಟಿದೆ.

## ರಾಮನು ಲಂಕಾನಗರವನ್ನು ನೋಡಿದುದು.

ಹೀಗೆ ವಾನರಶ್ರೇಷ್ಠರೆಲ್ಲರೂ ಆ ರಾತ್ರಿಯೆಲ್ಲವೂ ಸುವೇಲಪರ್ವತದಲ್ಲಿದ್ದು, ಅಲ್ಲಿಂದಲೇ ಲಂಕೆಯಲ್ಲಿರುವ ಕಾಡುಗಳನ್ನೂ, ಉದ್ಯಾನವನಗಳನ್ನೂ ನೋಡಿದರು. ಹಳ್ಳತಿಟ್ಟಿಲ್ಲದೆ ಸಮವಾಗಿಯೂ, ಶಾಂತವಾಗಿಯೂ, ರಮ್ಯವಾಗಿಯೂ, ವಿಸ್ತಾರವಾಗಿಯೂ, ಉದ್ದವಾಗಿಯೂ, ನೋಡುವುದಕ್ಕೆ ಅಂದವಾಗಿಯೂ ಇದ್ದ ಅಲ್ಲಿನ ತೋಟಗಳ ಸಾಲನ್ನು ನೋಡಿ ಇವರೆಲ್ಲರಿಗೂ ಆತ್ಯಾಶ್ಚರ್ಯವುಂಟಾಯಿತು. ಆ ಲಂಕೆಯ ಯಾವಯಾವಕಡೆಗಳನ್ನು ನೋಡಿದರೂ, ಸಂಪಗೆ, ಚೆನ್ನಸುಗೆ, ಗಂಡುಸುರಗಿ, ಹೊನ್ನೆ, ಸಾಲೆ,ತಾಳೆ, ಮುಂತಾದ ಗಿಡಗಳು ಕಿಕ್ಕಿರಿಸಿ ಬೆಳೆದಿರುವುವು. ಎಲ್ಲಿ ನೋಡಿದರೂ ಹೊಂಗೆಯಕಾಡುಗಳು. ಎಲ್ಲಿನೋಡಿದರೂ ನಾಗಕೇಸರಿಗಿಡಗಳ ಸಾಲುಗಳು. ಇವಲ್ಲದೆ, ಹಿಂತಾಳೆ, ಅರ್ಜುನ,ಕಡವು, ಏಳೆಲೆಬಾಳೆ, ತಿಲಕ, ಕರ್ಣಿಕಾರ, ಪಾದರಿ, ಮುಂತಾದ ಹೂಗಿಡಗಳೆಲ್ಲವೂ ಪುಷ್ಪಭರಿತಗಳಾಗಿ, ಪುಷ್ಪಿತಗಳಾದ ಬಗೆಬಗೆಯ ಹೂಬಳ್ಳಿಗಳಿಂದಲೂ ಸುತ್ತಲ್ಪಟ್ಟಿರುವುವು. ಹೀಗೆ ದೇವಯೋಗ್ಯಗಳಾದ ನಾನಾಜಾತಿಯ ಮರಗಳಿಂದ ಆ ಲಂಕೆಯು ಇಂದ್ರನ ಅಮರಾವತಿಯೋ ಎಂಬಂತೆಕಾಣುತ್ತಿರುವುದು. ಅಲ್ಲಲ್ಲಿ ಚಿತ್ರವಿಚಿತ್ರಗಳಾದ ಪುಷ್ಪಗಳಿಂದಲೂ,ಕೆಂಪಗೆ ಕೋಮಲಗಳಾದ ಚಿಗುರುಗಳಿಂದಲೂ, ಅಲ್ಲಲ್ಲಿ ಹಸುರಾದ ಹುಲ್ಲುನೆಲಗಳಿಂದಲೂ, ಅಲ್ಲಲ್ಲಿ ಪುಷ್ಪಿಸಿದ ಕದಂಬವೃಕ್ಷಗಳಿಂದಲೂ, ಅಲ್ಲಿನತೋಪುಗಳೆಲ್ಲವೂ ವಿಚಿತ್ರಗಳಾಗಿ ಶೋಭಿಸುತ್ತಿರುವುವು.ಆ ವನದಲ್ಲಿರುವ ವೃಕ್ಷಗಳೆಲ್ಲವೂ ಗಂಧಮಾಲ್ಯಾಭರಣಗಳನ್ನು ಧರಿಸಿದ ಮನುಷ್ಯರಂತೆ ಸುಗಂಧ ವಿಶಿಷ್ಟಗಳಾಗಿ, ನಾನಾಬಣ್ಣದ ಪುಷ್ಪಫಲಗಳಿಂದ ಶೋಭಿಸುವುವು. ಮತ್ತು ಸಮಸ್ತಋತುಧರ್ಮಗಳನ್ನೂ ಸರ್ವಕಾಲಗಳಲ್ಲಿಯೂ ಹೊಂದಿ, ಅನೇಕಭ್ರಮರಗಳ ಝೇಂಕಾರದಿಂದ ಮನೋಹರವಾದ ಅಲ್ಲಿನ ವನರಾಜಿಯು ಕುಬೇರನ ಚೈತ್ರರಥವೆಂಬ ಉದ್ಯಾನದಂತೆಯೂ, ಇಂದ್ರನ ನಂದನವನದಂತೆಯೂ ಶೋಭಿಸುವುದು. ಆ ವನಗಳ ನಡುವೆ ಪ್ರವಹಿಸಿ ಬರುವ ಗಿರಿನದಿಗಳ ತೀರದಲ್ಲಿ ಸಂತೋಷದಿಂದ ನರ್ತಿಸುವ ನವಿಲುಗಳೂ,ನೀರುಕೋಳಿಗಳೂ, ಕೊಕ್ಕರೆಗಳೂ, ಕೋಗಿಲೆಗಳೂ ವಾನರರ ಕಿವಿ

ಗಿಂಪಾಗುವಂತೆ ಕೂಗುತ್ತಿರುವುವು. ಅಲ್ಲಿನ ವನೋಪವನಗಳಲ್ಲಿ ಯಾವಾಗ ಲೂ ಬಗೆಬಗೆಯ ಹಕ್ಕಿಗಳು ಮದವೇರಿ ಶಬ್ದಿಸುತ್ತಿರುವುವು. ಎಲ್ಲಿ ನೋಡಿದ ರೂ ಭ್ರಮರಗಳ ಝೇಂಕಾರಗಳೂ, ಯಾವ ಮರಗಳನ್ನು ನೋಡಿದ ರೂ ಕೋಗಿಲೆಗಳ ಕಿವಿಗಿಂಪಾದ ಕೂಗುಗಳೂ, ಇತರ ಪಕ್ಷಿಗಳ ಕಿಲಕಿಲಧ್ವನಿಗಳೂ, ಭ್ರಮರಗಳ ಮಧುರಗೀತಗಳೂ, ಅಲ್ಲಿ ಎಡೆಬಿಡದೆ ಕೇಳಿಬರುತ್ತಿರುವುವು. ಅಲ್ಲಿನ ತೋಟಗಳು ದುಂಬಿಗಳಿಗೆ ನಿತ್ಯನಿವಾಸವಾಗಿರು ವುವು. ಖಂಜನಪಕ್ಷಿಗಳೂ, ಸಾರಸಪಕ್ಷಿಗಳೂ, ಅಲ್ಲಿನ ಸರೋವರತೀರಗಳಲ್ಲಿ ಸಂತೋಷದಿಂದ ಕೂಗುತ್ತಿರುವುವು. ಈ ವಾನರರು ಆ ತೋಟಗಳ ಸೊಬ ಗನ್ನು ನೋಡಿ, ಪರಮಸಂತೋಷದಿಂದ ಪುಳಕಿತಗಾತ್ರರಾಗಿದ್ದರು. ಇವರೆ ಲ್ಲರೂ ಬಹಳ ಧೈರ್ಯಶಾಲಿಗಳಾಗಿಯೂ, ಕಾಮರೂಪಿಗಳಾಗಿಯೂ ಇದ್ದು ದರಿಂದ, ಆ ತೋಟಗಳನ್ನು ಪ್ರವೇಶಿಸುವುದಕ್ಕೆ ತಕ್ಕಂತೆ, ಸ್ಥೂಲಸೂಕ್ಷ್ಮದೇ ಹಗಳನ್ನು ಧರಿಸಿ, ನಿರ್ಭಯರಾಗಿ, ಆ ವನಗಳನ್ನೂ ಉಪವನಗಳನ್ನೂ ಪ್ರವೇಶಿ ಸಿದರು. ಮಹಾತೇಜಸ್ವಿಗಳಾದ ಈ ಕಪಿಗಳು ಅಲ್ಲಿ ಪ್ರವೇಶಿಸುವಾಗಲೇ, ಪು ಷ್ಪಸಂಬಂಧದಿಂದ ಸುವಾಸನೆಯುಳ್ಳದಾಗಿಯೂ, ಘ್ರಾಣೇಂದ್ರಿಯಕ್ಕೆ ಸುಖಕರವಾಗಿಯೂ ಇರುವ ತಂಗಾಳಿಯು ಬೀಸಲಾರಂಭಿಸಿತು. ಕೆಲ ವು ವಾನರಯೂಥಪತಿಗಳು ಸುಗ್ರೀವಾಜ್ಞೆಯನ್ನು ಪಡೆದು ತಮ್ಮ ಗುಂ ಪಿನಿಂದ ಹೊರಟು, ಉತ್ಸಾಹದಿಂದ ಸಿಂಹನಾದಮಾಡುತ್ತ, ತಮ್ಮ ಸಿಂಹ ನಾದಧ್ವನಿಗಳಿಂದಲೇ ಅಲ್ಲಲ್ಲಿ ಪಕ್ಷಿಗಳನ್ನೂ, ಮೃಗಗಳನ್ನೂ, ಆನೆಗಳನ್ನೂ ಹೆದರಿಸಿ ಓಡಿಸುತ್ತ, ಲಂಕೆಯನ್ನೇ ನಡುಗಿಸುವಂತೆ ಮಹಾವೇಗದಿಂದ ಆ ಪ ಟ್ಟಣವನ್ನು ಪ್ರವೇಶಿಸಿದರು. ಅವರ ಕಾಲಿನ ತುಳಿತಕ್ಕೆ ಭೂಮಿಯು ನಡು ಗುವಂತಾಯಿತು. ಅವರ ಪದಘಾತದಿಂದ ಮೇಲೆಹೊರಟ ದೊಡ್ಡ ಧೂ ಳಿಯು ನಿಮಿಷಮಾತ್ರದಲ್ಲಿ ಆಕಾಶವೆಲ್ಲವನ್ನೂ ತುಂಬಿತು. ಇವರು ನಡೆಯು ವಾಗ ಅಲ್ಲಲ್ಲಿದ್ದ, ಕರಡಿ, ಸಿಂಹ, ಹಂದಿ, ಎಮ್ಮೆ, ಆನೆ, ಜಿಂಕೆ, ಮೊದಲಾದ ಮೃಗಗಳೆಲ್ಲವೂ ಇವರ ಸಿಂಹನಾದಕ್ಕೆ ಬೆದರಿ ದಿಕ್ಕುದಿಕ್ಕಿಗೆ ಓಡುತಿದ್ದುವು. ಇವರು ಮುಂದೆಮುಂದೆ ಸಾಗಿಬರುತ್ತ, ತ್ರಿಕೂಟಪರ್ವತದಲ್ಲಿ ಪ್ರಸಿದ್ಧವಾ ಗಿದ್ದ ಮಧ್ಯಮಶಿಖರವನ್ನು ನೋಡಿದರು. ಆ ಶಿಖರವು ಪಕ್ಕಗಳಲ್ಲಿರುವ ಎರಡು ಶಿಖರಗಳಿಗಿಂತಲೂ ಅತ್ಯುನ್ನತವಾಗಿ, ಎಣೆಯಿಲ್ಲದುದಾಗಿ, ಆಕಾಶ

ಕ್ಕೆ ನಾಟಿದಂತೆ ಕಾಣುತಿತ್ತು. ಸುತ್ತಲೂ ಹೂಗಳಿಂದ ತುಂಬಿ ಬಂಗಾರದ ಬಣ್ಣವನ್ನು ಹೊಂದಿ, ನೂರುಯೋಜನದಷ್ಟು ವಿಶಾಲವಾಗಿಯೂ, ನಿರ್ಮಲ ವಾಗಿಯೂ, ನೇತ್ರಾನಂದಕರವಾಗಿಯೂ ಶೋಭಿಸುತಿತ್ತು. ಮತ್ತು ಅದು ಅತಿರಮಣೀಯವಾಗಿಯೂ ಕಾಂತಿವಿಶಿಷ್ಟವಾಗಿಯೂ ಇದ್ದುದಲ್ಲದೆ, ಪಕ್ಷಿಗಳಿಗೂ ಮೇಲೆ ಹಾರಿಹೋಗುವುದಕ್ಕೆ ಸಾಧ್ಯವಿಲ್ಲದಷ್ಟು ಮಹೋನ್ನತವಾಗಿ ಕಾಣಿಸುತಿತ್ತು. ಕೊನೆಗೆ ಅದನ್ನು ಮನಸ್ಸಿನಿಂದಲೂ ಏರುವುದಕ್ಕೆ ಸಾಧ್ಯವಿಲ್ಲದಿರುವಾಗ ಕಾಲುನಡೆಯಿಂದ ನಡೆದು ಹೋಗುವುದೆಂದರೇನು? ಆ ಶಿಖರದಲ್ಲಿಯೇ ರಾವಣರಕ್ಷಿತವಾದ ಲಂಕೆಯು ನಿರ್ಮಿಸಲ್ಪಟ್ಟಿರುವುದು. ಆ ಲಂಕೆಯಾದರೋ, ನೂರುಯೋಜನಗಳ ವಿಸ್ತಾರದಿಂದಲೂ, ಮೂವತ್ತುಯೋಜನಗಳ ಅಗಲದಿಂದಲೂ ಕೂಡಿ, ಬಿಳೀಮೇಘಗಳಂತಿರುವ ಉನ್ನತಗಳಾದ ಗೋಪುರಗಳಿಂದ ಕಂಗೊಳಿಸುತ್ತಿರುವುದು. ಅದರ ಸುತ್ತಲೂ ಒಂದು ಸುವರ್ಣಪ್ರಾಕಾರವೂ, ಒಂದು ಬೆಳ್ಳಿಯಪ್ರಾಕಾರವೂ ಶೋಭಿಸುತ್ತಿರುವುದು. ಅಲ್ಲಿನ ಉಪ್ಪರಿಗೆಗಳೂ, ರಾಜಗೃಹಗಳೂ, ವರ್ಷಾರಂಭಸಮಯದಲ್ಲಿ ತ್ರಿವಿಕ್ರಮ ಮೂರ್ತಿಗೆ ಮಧ್ಯಮಪದವಾದ ಆಕಾಶವನ್ನು ಮೇಘಗಳು ಹೇಗೋ ಹಾಗೆ ಆ ಲಂಕಾನಗರಿಯನ್ನು ತಮ್ಮ ಕಾಂತಿಯಿಂದ ವಿಶೇಷವಾಗಿ ಅಲಂಕರಿಸುತ್ತಿರುವುವು. ಆ ಪಟ್ಟಣದ ನಟ್ಟನಡುವಿನ ಚೌಕದಲ್ಲಿ ಸರ್ವೋತ್ತಮನಾದ ಒಂದು ಪ್ರಾಸಾದವುಂಟು. ಆ ಪ್ರಾಸಾದವಾದರೋ, ಸಾವಿರ ಕಂಬಗಳಿಂದಲಂಕೃತವಾಗಿ, ಕೈಲಾಸಶಿಖರದಂತೆ ಮಹೋನ್ನತವಾಗಿ, ಆಕಾಶವನ್ನು ಭೇದಿಸಿಕೊಂಡು ಹೋಗುವಂತೆ ಕಾಣುತ್ತಿರುವುದು. ಆಪ್ರಾಸಾದವೇ ರಾಕ್ಷಸೇಂದ್ರನಾದ ರಾವಣನಿಗೆ ಮುಖ್ಯನಿವಾಸವಾಗಿಯೂ, ಆ ಲಂಕಾನಗರಿಗೆಲ್ಲಾ ಒಂದು ಭೂಷಣವಾಗಿಯೂ ಪ್ರಕಾಶಿಸುತ್ತಿರುವುದು. ಪೂರ್ಣವಾಗಿ ಒಂದು ಸಹಸ್ರರಾಕ್ಷಸಸೈನ್ಯವು ಅದರಲ್ಲಿ ಯಾವಾಗಲೂ ಕಾವಲುಕಾಯುತ್ತಿರುವುದು. ಅದರ ಸುತ್ತಲೂ ಅಂದವಾದ ಉದ್ಯಾನಗಳೂ, ಬಗೆಬಗೆಯ ಧಾತುಗಳಿಂದ ಚಿತ್ರಗಳಾದ ಕ್ರೀಡಾಪರ್ವತಗಳೂ ಶೋಭಿಸುತ್ತಿರುವುವು. ಅಲ್ಲಲ್ಲಿ ಕೃತ್ರಿಮವನಗಳೂ, ಆ ವನಗಳಲ್ಲಿ ಕಿವಿಗಿಂಪಾಗಿ ಕೂಗುವ ಪಕ್ಷಿಗಳೂ ತುಂಬಿರುವುವು. ಅಲ್ಲಲ್ಲಿ ಬಗೆಬಗೆಯ

ಮೃಗಗಳು ಸಂತೋಷದಿಂದ ವಿಹರಿಸುತ್ತಿರುವುವು. ಹೀಗೆ ನಾನಾವಿಧ ವನಸಮೂಹಗಳಿಂದ ಶೋಭಿತವಾಗಿ, ಅನೇಕರಾಕ್ಷಸರಿಗೆ ನೆಲೆಯಾಗಿ, ಸಮಸ್ತಪದಾರ್ಥಸಮೃದ್ಧಿಯುಳ್ಳುದಾಗಿ, ಮಹೋನ್ನತವಾಗಿದ್ದ ಆರಾವಣನಗರಿಯನ್ನು, ಇತ್ತಲಾಗಿ ಲಕ್ಷ್ಮಣಾಗ್ರಜನಾದ ರಾಮನೂ, ಅವನ ಕಡೆಯ ವಾನರರೂ ಕಣ್ಣಿಟ್ಟು ನೋಡಿದರು. ವೀರ್ಯವಂತನಾಗಿಯೂ, ದೇವಸಮಾನನಾಗಿಯೂ ಇರುವ ಆ ರಾಮನಿಗೂ ಕೂಡ ಅನೇಕಗೃಹಸಮೂಹಗಳಿಂದ ನಿಬಿಡವಾದ ಆ ಲಂಕೆಯನ್ನು ನೋಡಿ ಅತ್ಯಾಶ್ಚರ್ಯವುಂಟಾಯಿತು. ಶ್ರೀರಾಮನು ತನ್ನ ದೊಡ್ಡ ಸೇನೆಯೊಡನೆ ಸುವೇಲ ಪರ್ವತದಮೇಲೆ ನಿಂತು, ಉತ್ತಮವಸ್ತುಗಳಿಂದ ಪೂರ್ಣವಾಗಿಯೂ, ನಾನಾವಿಧವಾದ ರಕ್ಷಣಕಾರ್ಯಗಳಿಂದ ಕೂಡಿದುದಾಗಿಯೂ, ಉಪ್ಪರಿಗೆಗಳ ಸಾಲಿನಿಂದ ಶೋಭಿತವಾಗಿಯೂ, ದೊಡ್ಡದೊಡ್ಡ ಯಂತ್ರಗಳಿಂದಲೂ, ದೃಢವಾದ ಕವಾಟಗಳಿಂದಲೂ ಸುರಕ್ಷಿತವಾಗಿಯೂ ಇದ್ದ ಆ ಲಂಕೆಯನ್ನು ನೋಡುತಿದ್ದನು. ಇಲ್ಲಿಗೆ ಮೂವತ್ತೊಂಬತ್ತನೆಯ ಸರ್ಗವು.

---

## ಸುಗ್ರೀವರಾವಣರ ದ್ವಂದ್ವಯುದ್ಧವು.

ಹೀಗೆ ರಾಮನು ಸುಗ್ರೀವನೊಡಗೂಡಿ, ಇತರ ವಾನರಯೂಥಪರಿಂದಲೂ ಪರಿವೇಷ್ಟಿತನಾಗಿ, ಎರಡುಯೋಜನಗಳ ಸುತ್ತಳತೆಯುಳ್ಳ ಆ ಸುವೇಲಪರ್ವತದ ಶಿಖರವನ್ನೇರಿ, ಆ ಶಿಖರದ ತುದಿಯಲ್ಲಿಯೇ ಸ್ವಲ್ಪಹೊತ್ತಿನವರೆಗೆ ನಿಂತು ಹತ್ತುದಿಕ್ಕುಗಳನ್ನೂ ತಿರುಗಿ ನೋಡುತ್ತಿದ್ದನು ಕೊನೆಗೆ ಅತ್ತಲಾಗಿ ರಮಣೀಯವಾದ ತ್ರಿಕೂಟಪರ್ವತಶಿಖರದಲ್ಲಿ, ವಿಶ್ವಕರ್ಮನಿಂದ ನಿರ್ಮಿಸಿಡಲ್ಪಟ್ಟ, ಅಂದವಾದ ಕೋಟೆಗಳಿಂದ ಕೂಡಿದ ಲಂಕಾಪುರವನ್ನು ನೋಡಿದನು. ಹೀಗೆ ನೋಡುತ್ತಿರುವಾಗಲೇ ಆ ಲಂಕೆಯ ಒಂದಾನೊಂದು ಗೋಪುರದ ಶಿಖರದಲ್ಲಿ ರಾಕ್ಷಸೇಶ್ವರನಾದ ರಾವಣನು, ದೊಡ್ಡರಾಜವೈಭವದೊಡನೆ ಕುಳಿತಿದ್ದುದನ್ನೂ ಕಂಡನು. ಆಗ ಆ ರಾವಣನ ಮಹಾವೈಭವವನ್ನು ಕೇಳಬೇಕೆ? ಅವನ ಉಭಯಪಾರ್ಶ್ವಗಳಲ್ಲಿಯೂ ಆಡುತ್ತಿರುವ ಎರಡು ಬಿಳೀಚಾಮರಗಳು! ಅವನ ನೆತ್ತಿಯಮೇಲೆ ವಿಜಯಸೂಚಕವಾದ

ಶ್ವೇತಚ್ಛತ್ರವು! ಕಾಳಮೇಘದಂತೆ ಕಪ್ಪಾದ ಆತನ ದೇಹದಲ್ಲಿ ರಕ್ತಚಂದ ನದ ಮತ್ತು ರತ್ನಾಭರಣಗಳ ಹೊಳಪು! ಅವನ ನಡುವಿನಲ್ಲಿ ಚಿನ್ನದ ಸರಿಗೆ ಯಪಟ್ಟೆಮಡಿ ! ಅವನ ಎದೆಯಲ್ಲಿ ಐರಾವತದ ಕೊಂಬಿನ ತಿವಿತದಿಂದುಂ ಟಾದ ಗಾಯದ ಗುರುತುಗಳು ! ಮತ್ತು ಅವನು ಮೊಲದ ರಕ್ತದಂತೆ ಕೆಂಪಾದ ರಕ್ತವಸ್ತ್ರವನ್ನುಂಟು, ಸಂಜೆಗೆಂಪಿನಿಂದ ಕೂಡಿದ ಮೇಘ ಸಮೂಹದಂತೆ ಕಾಣುತಿದ್ದನು. ಹೀಗೆ ರಾಕ್ಷಸೇಶ್ವರನಾದ ರಾ ವಣನು ಅತ್ತಲಾಗಿ ಪ್ರಾಸಾದದಮೇಲೆ ರಾಜವೈಭವದಿಂದ ಕುಳಿ ತಿದ್ದುದನ್ನು ಕಂಡಮಾತ್ರದಲ್ಲಿಯೇ, ಇತ್ತಲಾಗಿ ಸುಗ್ರೀವನಿಗೆ ತಡೆಯಲಾ ರದ ಕೋಪವು ಹುಟ್ಟಿತು.ಹೀಗೆ ಕೋಪಗೊಂಡ ಸುಗ್ರೀವನು "ಎಲೆಲಾ! ನಮ್ಮ ಸ್ವಾಮಿಯಾದ ರಾಮನ ಮುಂದೆ ಈ ದುರಾತ್ಮನಿಗೆ ಇಷ್ಟೊಂದು ರಾಜೋಪಚಾರವೆ ? ಇರಲಿ ! ಇವನ ಕೆಚ್ಚನ್ನು ಮುರಿಯುವೆನು" ಎಂದು ನಿಶ್ಚಯಿಸಿ, ತನ್ನ ಮನೋಬಲವನ್ನೂ ಮೀರುವ ವೇಗದಿಂದ, ಸಮಸ್ತರೂ ನೋಡುತ್ತಿರುವಹಾಗೆಯೇ, ತಟ್ಟನೆ ಮೇಲೆದ್ದು,ತಾನಿದ್ದ ಪರ್ವತಶಿಖರದಿಂ ದ ರಾವಣನಿದ್ದ ಗೋಪುರಕ್ಕೆ ಒಂದೇ ನೆಗೆತಕ್ಕೆ ಹಾರಿಬಿಟ್ಟನು. ಅಲ್ಲಿ ಸುಗ್ರೀ ವನು ಮನಸ್ಸಿನಲ್ಲಿ ಸ್ವಲ್ಪಮಾತ್ರವೂ ಭಯವಿಲ್ಲದೆ,ಆ ರಾವಣನಮುಂದೆ ನಿಂ ತು,ಒಂದು ಮುಹೂರ್ತಕಾಲದವರೆಗೆ ಆ ರಾವಣನನನ್ನೇ ನೋಡುತಿದ್ದು,ಆ ರಾಕ್ಷಸನನ್ನು ಹುಲ್ಲಿಗಿಂತಲೂ ಕಡೆಯಾಗಿ ಭಾವಿಸಿ, ಕ್ರೂರವಾಕ್ಯದಿಂದ ಅವನನ್ನು ಕುರಿತು "ಎಲೆ ರಾಕ್ಷಸಾ ! ನಾನು ಯಾರೆಂದು ಬಲ್ಲೆಯಾ ? ರಾಮನಿಗೆ ಸ್ನೇಹಿತನು! ಮತ್ತು ಆ ಲೋಕನಾಥನಿಗೆ ದಾಸನು! ಆ ರಾಜೇಂ ಧ್ರನ ತೇಜೋಬಲದಿಂದಲೇ ಈಗ ನಾನು ನಿನ್ನನ್ನು ನಿಗ್ರಹಿಸುವೆನು! ಇನ್ನು ನೀನು ನನ್ನ ಕೈಯಿಂದ ತಪ್ಪಿಸಿಕೊಂಡು ಹೋಗಲಾರೆ" ಎಂದನು. ಹೀಗೆ ಮಾತಾಡಿ ಮುಗಿಸುವಷ್ಟರಲ್ಲಿಯೇ ಆತನು ತಟ್ಟನೆ ಮೇಲೆ ಹಾರಿ, ಆ ರಾವಣನ ತಲೆಯಮೇಲಿದ್ದ ವಿಚಿತ್ರವಾದ ಕಿರೀಟವನ್ನು ಕಿತ್ತೆಸೆದು, ತಾನು ಕೆಳಗಿಳಿದು ನಿಂತನು. ತಿರುಗಿ ಮತ್ತೊಮ್ಮೆ ಮಹಾವೇಗದಿಂದ ಮೇಲೆ ಬೀಳುವುದಕ್ಕಾಗಿ ಬರುತಿದ್ದ ಆಸುಗ್ರೀವನನ್ನು ನೋಡಿ ರಾವಣನು,ಅವನನ್ನು ಕುರಿತು, "ಓಹೋ! ಎಲ ಸುಗ್ರೀವಾ! ಇದುವರೆಗೂ ನೀನು ನನಗೆ ಕಣ್ಮ



೨೩. ೨೪. ರಾವಣನು ಕೋಟೆಯಮೇಲೇರಿ ವಾನರಸೈನ್ಯವನ್ನು ನೋಡುತ್ತಿರುವಾಗ
ಸುಗ್ರೀವನು ಮೇಲೆಹಾರಿ ಅವನ ಕಿರೀಟವನ್ನು ತನ್ನ
ಕಾಲಿನಿಂದೊಡೆದು ಕೆಡಹಿದುದು.

ಡೆಯಾಗಿದ್ದುದರಿಂದ ನೀನು ಸುಗ್ರೀವನೆನಿಸಿ (ಅಂದವಾದ ಕಂಠವುಳ್ಳವ ನೆನಿಸಿ) ಕೊಂಡಿರಬಹುದು ! ಇನ್ನು ನನ್ನ ಕಣ್ಣಿಗೆ ಗೋಚರಿಸಿದೆಯಲ್ಲ ವೆ! ಈಗಲೇ ನಿನ್ನ ಕೊರಲನ್ನು ಮುರಿದು, ನಿನ್ನ ಹೆಸರನ್ನೇ ಅಳಿಸಿಬಿಡು ವೆನು ನೋಡು" ಎಂದು ಹೇಳಿ,ಆಕ್ಷಣವೇ ತಟ್ಟನೆ ಮೇಲೆದ್ದು ಬಂದು, ಎರ ಡುಕೈಗಳಿಂದ ಸುಗ್ರೀವನನ್ನು ಹಿಡಿದೆತ್ತಿ ನೆಲಕ್ಕೆ ಬಡಿದನು. ಸುಗ್ರೀವ ನಾದರೋ ಚಂಡಿನಂತೆ ಪುಟಹಾರಿ ಮೇಲಕ್ಕೆ ನೆಗೆದು,ತನ್ನ ಕೈಗಳಿಂದ ರಾವ ಣನನ್ನು ಹಿಡಿದು ನೆಲಕ್ಕೆ ತಳ್ಳಿದನು. ಹೀಗೆ ಅವರಿಬ್ಬರೂ ಒಬ್ಬರಿಗೊಬ್ಬರು ಬಲವಾಗಿ ಹಿಡಿದು ತಳ್ಳುತಿದ್ದುದರಿಂದ, ಇಬ್ಬರ ದೇಹದಲ್ಲಿಯೂ ಬೆವರು ಕಿತ್ತು ಕೊಂಡಿತು. ಇಬ್ಬರ ದೇಹವೂ ರಕ್ತಮಯವಾಯಿತು. ಪುಷ್ಪಿತಗಳಾದ ಬೂರುಗದ ಮತ್ತು ಮುಳ್ಳುಮುತ್ತುಕದ ಮ ರಗಳು ಒಂದಕ್ಕೊಂದು ಸೇರಿಬೆಳೆದಂತೆ ಒಬ್ಬರಿಗೊಬ್ಬರು ತಬ್ಬಿ ಹಿಡಿದು ನಿಶ್ಚೇಷ್ಟರಾಗಿ ನಿಂತಿದ್ದರು. ಮಹಾಬಲಾಢ್ಯರಾದ ಆ ವಾನರರಾಕ್ಷಸರಾ ಜರಿಬ್ಬರೂ, ಹೀಗೆ ಮುಹೂರ್ತಕಾಲದವರೆಗೆ ನಿಶ್ಚೇಷ್ಟಿತರಾಗಿದ್ದು, ಕೊನೆಗೆ ಒಬ್ಬರಿಗೊಬ್ಬರು ಪಟ್ಟುಬಿಡಿಸಿಕೊಂಡು, ಮುಷ್ಟಿಗಳಿಂದಲೂ, ಅಂಗೈಗ ಳಿಂದಲೂ, ಮೊಳಕೈಗಳಿಂದಲೂ, ಉಗುರುಗಳಿಂದಲೂ ಹೊಡೆದಾಡುವು ಡಕ್ಕೆ ತೊಡಗಿ, ನೋಡುವವರಿಗೆ ಭಯಂಕರವಾಗುವಂತೆ ದೊಡ್ಡ ಯು ದ್ಧವನ್ನಾರಂಭಿಸಿಬಿಟ್ಟರು. ಅವರಿಬ್ಬರೂ ಮಹೋಗ್ರವೇಗದಿಂದ ಬಹಳ ಹೊತ್ತಿನವರೆಗೆ ಆ ಗೋಪುರದ ವೇದಿಕೆಯ ನಡುವೆ ಮಲ್ಲಯುದ್ಧವನ್ನು ನ ಡೆಸುತಿದ್ದರು. ಅವರಿಬ್ಬರೂ ಆಗಾಗ ಒಬ್ಬರನ್ನೊಬ್ಬರು ಹಿಡಿದು ಮೇಲ ಕ್ಕೆಸೆಯುವರು. ಒಬ್ಬರಮೇಲೊಬ್ಬರು ಹಾರಿಬೀಳುವರು. ಒಬ್ಬರನ್ನೊಬ್ಬ ರು ಹಿಡಿದೆಳೆಯುವರು. ಒಬ್ಬರನ್ನೊಬ್ಬರು ತಲೆಹಿಡಿದು ಬಗ್ಗಿಸುವರು. ಆ ಗಾಗ ದೂರನಿಂತು ಮೈಯನ್ನು ಬಗ್ಗಿಸಿ ಮೆಲ್ಲಮೆಲ್ಲಗೆ ಹಿಂದುಮುಂ ದಾಗಿ ಕಾಲಿಡುತ್ತ, ಸಂಚುನೋಡಿ, ಮುಂದೆ ನುಗ್ಗಿ, ಕೈಕಲೆಸುವರು. ಆಗಾಗ ಸಮಯನಿರೀಕ್ಷಣೆಗಾಗಿ ಗೋಪುರವೇದಿಕೆಯಲ್ಲಿ ಅಳ್ಳಾಡದೆ ನಿಂತು ನೋಡುತ್ತಿರುವರು. ಒಬ್ಬರಮೇಲೊಬ್ಬರು ಕೈಹಾಕಿ ಮುಷ್ಟಿಗಳಿಂದ ಬಿ ಗಿಹಿಡಿದು ತಬ್ಬುವರು. ಹೀಗೆ ಒಬ್ಬರಿಗೊಬ್ಬರು ಜಟ್ಟಿಗಾಳಗದಿಂದ ಹೋ ರಾಡುತಿದ್ದು,ಕೊನೆಗೆ ಒಬ್ಬರಿಗೊಬ್ಬರು ತಬ್ಬಿಹಿಡಿದಂತೆಯೇ ಕೋಟೆಗೂ,ಕಂ

ಬಕಕ್ಕೂ ನಡುವೆ ನೆಲಕ್ಕೆ ಬಿದ್ದರು. ಹೀಗೆ ಇಬ್ಬರೂ ಕೆಳಗೆ ಬಿದ್ದರೂ ತಮ್ಮ ಲಾಘವಾತಿಶಯದಿಂದ ನೆಲವನ್ನು ಮುಟ್ಟದಂತೆಯೇ ಮೇ ಲೆಹಾರಿ, ಮುಹೂರ್ತಕಾಲದವರೆಗೆ ಶ್ರಮದಿಂದ ನಿಟ್ಟುಸಿರನ್ನು ಬಿಡುತ್ತ ಸುಮ್ಮನಿದ್ದು, ಆಮೇಲೆ ಕೈಕಟ್ಟಿಕೊಂಡು ಮೇಲೆ ಹಾರಿ, ತಿರುಗಿ ಕೈಕಲೆತು ಮಲ್ಲಯುದ್ಧಕ್ಕೆ ತೊಡಗಿದರು. ಆ ಸುಗ್ರೀವರಾವಣ ರಿಬ್ಬರೂ ಸಮವಾದ ಯುದ್ಧೋತ್ಸಾಹವುಳ್ಳವರು! ಸಮವಾದ ಯುದ್ಧಾ ಭ್ಯಾಸವುಳ್ಳವರು! ಸಮವಾದ ದೇಹಬಲವುಳ್ಳವರು. ಹೀಗಿದ್ದುದರಿಂದ ಆ ವರಿಬ್ಬರೂ, ಕೊಬ್ಬಿದ ಹೆಬ್ಬುಲಿಗಳಂತೆಯೂ, ಆನೆಯ ಮರಿಗಳಂತೆಯೂ ಕಾಣುತ್ತ, ಚಾತುರ್ಯದಿಂದ ಒಬ್ಬರನ್ನೊಬ್ಬರು ಹಿಡಿದು ಮೆಟ್ಟುವುದಕ್ಕೆ ತಕ್ಕ ಸಂಜನ್ನು ಹುಡುಕಿ ಸುತ್ತಿಸುತ್ತಿ ತಿರುಗುತಿದ್ದರು. ಅವರಿಬ್ಬರೂ ಒಂದಾಗಿ ಕಲೆತು, ಒಬ್ಬರನ್ನೊಬ್ಬರು ಎದೆಯಿಂದ ತಬ್ಬಿ ಹಿಡಿದು ಹೆಣಗಾ ಡುತ್ತ, ಇಬ್ಬರೂ ಏಕಕಾಲದಲ್ಲಿ ನೆಲಕ್ಕುರುಳಿದರು. ತಿರುಗಿ ಒಬ್ಬರನ್ನೊ ಬ್ಬರು ಹಿಡಿದೆತ್ತಿ ನೆಲಕ್ಕೆ ಬಡಿಯುತ್ತ,ಬಗೆಬಗೆಯ ಯುದ್ಧಪ್ರಕಾರಗಳಿಂದ ಹೋರಾಡಿದರು. ಮದದಾನೆಗಳಂತಿದ್ದ ಆ ವೀರರಿಬ್ಬರೂ, ಗರುಡಿಗಳಲ್ಲಿ ಚೆನ್ನಾಗಿ ಶಿಕ್ಷಿತರಾದುದರಿಂದ ಆ ಅಂಗಸಾಧನೆಯ ಬಲದಿಂದ ಆನೆಯಸೊಂ ಡಿಲುಗಳಂತಿರುವ ತಮ್ಮ ತೋಳುಗಳಿಂದ ಒಬ್ಬರನ್ನೊಬ್ಬರು ಉಸಿರಾಡು ವುದಕ್ಕೂ ಅವಕಾಶವಿಲ್ಲದಂತೆ ತಬ್ಬಿ ಹಿಡಿದರು. ಹೀಗಿದ್ದರೂ ಅವರಿಗೆ ಸ್ವ ಲ್ಪವಾದರೂ ಬಳಲಿಕೆಯು ತೋರಲಿಲ್ಲ. ಹೀಗೆ ಅವರಿಬ್ಬರೂ ಬಹಳಹೊತ್ತಿ ನವರೆಗೆ ಹೋರಾಡುತ್ತ, ತಮ್ಮತಮ್ಮ ವೇಗಾತಿಶಯವನ್ನು ತೋರಿಸಿ, ಮಂ ಡಲಾದಿ ನಾನಾಗತಿಗಳಿಂದ ಸುತ್ತಿಸುತ್ತಿ ಮಲ್ಲಯುದ್ಧವನ್ನು ನಡೆಸಿದರು. ಅವರಿಬ್ಬರೂ ಆಹಾರಕ್ಕಾಗಿ ಎಚ್ಚರಿಕೆಯಿಂದ ಹೊಂಚುಹಾಕುತ್ತಿರುವ, ಬೆ ಕ್ಕುಗಳಂತೆ ಒಬ್ಬರನ್ನೊಬ್ಬರು ಹಿಡಿದು ನೆಲಕ್ಕೆ ತಿಕ್ಕಿಬಿಡಬೇಕೆಂಬ ನಿರೀಕ್ಷಣೆ ಯಿಂದ ಬಾರಿಬಾರಿಗೂ ಸ್ತಬ್ಧರಾಗಿ ನಿಂತು ಸಂಚುನೋಡುತ್ತಿರುವರು. ನ ಡುನಡುವೆ ಮಂಡಲಾದಿಗತಿಗಳಿಂದ ಸಂಚರಿಸುವರು. ಅವರಿಬ್ಬರೂ ಯುದ್ಧ ಮಾರ್ಗದಲ್ಲಿ ನಿಪುಣರಾದುದರಿಂದ,ಸವ್ಯಾಪಸವ್ಯಗಳೇ ಮೊದಲಾದ, ಬಗೆಬ ಗೆಯ ಮಂಡಲಗಳಿಂದಲೂ, ವ್ಯಾಘ್ರಸಿಂಹಾದಿಗಳಂತೆ ನಿಲ್ಲುವ ವೈಷ್ಣವಸ ಮಪಾದಾದಿ ಸ್ಥಾನಗಳಿಂದಲೂ,ಗೋಮೂತ್ರಿಕಾದಿ ನಾನಾವಿಧಗತಿಗಳಿಂದ,

ಲೂ, ಮುಂದೆ ಹೋಗುವುದು, ಹಿಂದೆ ಸರಿಯುವುದು, ಅಡ್ಡಲಾಗಿ ತಿರುಗು
ವುದು, ಇವೇ ಮೊದಲಾದ ಗಮನ ಕ್ರಮಗಳಿಂದಲೂ, ಸವ್ಯಾಪಸವ್ಯವ
ಕ್ರಗಳೆಂಬ ನಡೆಗಳಿಂದಲೂ, ಪೆಟ್ಟನ್ನು ತಪ್ಪಿಸಿಕೊಳ್ಳುವುದಕ್ಕೆ ಬೇಕಾದ
[1]ಪರಿಮೋಕ್ಷ, ವರ್ಜನ, ಪರಿಧಾವನ, ಅಭಿದ್ರವಣ, ಅಪ್ಲಾವ, ವಿಗ್ರಹಸಹಿ
ತವಾದ ಆಸ್ಥಾನ, ಪರಾವೃತ್ತಿ, ಅಪಾವೃತ್ತಿ, ಅವದ್ರುತಿ, ಅವಪ್ಲುತಿ, ಉಪ
ನ್ಯಾಸ, ಅಪನ್ಯಾಸ, ಮುಂತಾದ ಮಲ್ಲಯುದ್ಧ ಕ್ರಮಗಳಿಂದಲೂ ಒಬ್ಬ
ರಿಗೊಬ್ಬರು ಸಮಬಲವಾಗಿ ಹೋರಾಡಿದರು. ಹೀಗೆ ಸುಗ್ರೀವ ರಾವಣ
ರಿಬ್ಬರೂ, ಸಮಚಾತುರ್ಯದಿಂದ ಹೋರಾಡುತಿದ್ದಾಗ, ರಾವಣನು ಮೋಸ
ದಿಂದಲ್ಲದೆ ಹೀಗೆ ಧರ್ಮಯುದ್ಧದಿಂದ ಸುಗ್ರೀವನನ್ನು ಗೆಲ್ಲುವುದು ಸಾಧ್ಯ
ವಲ್ಲವೆಂದೆಣಿಸಿ, ತನ್ನಂತೆ ಅನೇಕರಾವಣರು ಸುಗ್ರೀವನನ್ನು ಸುತ್ತಿದಂತೆ
ತನ್ನಮಾಯೆಯನ್ನು ತೋರಿಸುವುದಕ್ಕಾರಂಭಿಸಿದನು. ಇಷ್ಟರಲ್ಲಿ ಸುಗ್ರೀವ
ನಿಗೆ ಈ ಸಂಗತಿಯು ತಿಳಿದುಹೋಯಿತು. ಆತನು ಜಯಶೀಲನಾಗಿಯೂ
ಎಷ್ಟೇ ಶ್ರಮವನ್ನಾದರೂ ಸಹಿಸಬಲ್ಲವನಾಗಿಯೂ ಇದ್ದುದರಿಂದ, ಈ
ಮೋಸದ ಸಂಚನ್ನು ತಿಳಿದೊಡನೆ ಮೇಲೆನೆಗೆದು, ರಾವಣನ ತಲೆಯನ್ನು
ಮೆಟ್ಟಿ ಆಕಾಶಕ್ಕೂ ಹಾರಿಬಿಟ್ಟನು. ರಾವಣನಾದರೋ ಈ ತಂತ್ರವನ್ನು ತಿ
ಳಿಯದೆ, ಮೋಸಹೋಗಿ, ಸುಗ್ರೀವನು ಹಿಂತಿರುಗಿ ಬರಬಹುದೆಂಬ ಆಶೋತ್ತರ

---

1 ತಾನಿದ್ದ ಸ್ಥಳದಿಂದ ಕದಲಿ ವೈರಿಯ ಪ್ರಹಾರವನ್ನು ವ್ಯರ್ಥಮಾಡುವುದು ಪರಿ
ಮೋಕ್ಷವು. ಇದಿರುಪೆಟ್ಟಿನಿಂದ ವೈರಿಯ ಪೆಟ್ಟನ್ನು ತಪ್ಪಿಸುವುದು ವರ್ಜನವು. ವೈರಿಯು
ನಿಂತಿರುವಾಗ ಅವನ ಸುತ್ತಲೂ ತಿರುಗುವುದು ಪರಿಧಾವನವು. ಅವನಿಗಿದಿರಾಗಿ ಓಡುವು
ದು ಅಭಿದ್ರವಣವು. ಮೈಯನ್ನು ಬಗ್ಗಿಸಿಕೊಂಡು ಕಪ್ಪೆಯಂತೆ ಮೇಲೆ ಹೋಗುವುದು
ಅಪ್ಲಾವವು. ಧೈರ್ಯದಿಂದಿರಿಸಿ ನಿರ್ಭಯವಾಗಿ ನಿಲ್ಲುವುದು ಆಸ್ಥಾನವು. ಹಿಮ್ಮೊಗವಾಗಿ ಸರಿ
ಯುವುದು ಪರಾವೃತ್ತವು. ನಿಂತಿದ್ದ ಹಾಗೆಯೇ ಹಿಂದಕ್ಕೆ ಬಾಗುವುದು ಅಪಾವೃತ್ತವು.
ವೈರಿಯನ್ನು ಹಿಡಿಯುವುದಕ್ಕಾಗಿ ಮೈಬಗ್ಗಿಸಿಕೊಂಡು ನುಗ್ಗುವುದು ಅವದ್ರುತವು. ವೈ
ರಿಯನ್ನು ಕಾಲಿನಿಂದ ಮೆಟ್ಟುವುದಕ್ಕಾಗಿ ಮುಖವನ್ನು ತಗ್ಗಿಸಿಮೇಲೆ ಹಾರುವುದು ಅವ
ಪ್ಲುತವು. ಇದಿರಾಳಿನ ಕೈಯನ್ನು ಹಿಡಿಯುವುದಕ್ಕಾಗಿ ತನ್ನ ಕೈಯನ್ನು ಚಾಚುವುದು
ಉಪನ್ಯಸ್ತವು. ವೈರಿಯ ಕೈಹಿಡಿತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ತನ್ನ ಕೈಯನ್ನು
ಎಳೆದುಕೊಳ್ಳುವುದು ಅಪನ್ಯಸ್ತವು,

ದಿಂದ ಅಲ್ಲಿಯೇ ನಿರೀಕ್ಷಿಸುತ್ತನಿಂತಿದ್ದನು.ಇಷ್ಟರಲ್ಲಿ ವಾನರನಾಥ ನಾದ ಸು
ಗ್ರೀವನು,ರಾವಣನೊಡನೆ ತಾನೊಬ್ಬನೇನಿಂತು,ಸಮಬಲದಿಂದಯುದ್ಧಮಾ
ಡಿದವನೆಂಬ ಕೀರ್ತಿಗೆ ಭಾಗಿಯಾಗಿ,ತಾನೇ ಧರ್ಮಯುದ್ಧದಿಂದ ರಾವಣನನ್ನು
ನಿಗ್ರಹಿಸಬಲ್ಲವನಾಗಿದ್ದರೂ, ರಾಮನು ಕೈಕೊಂಡಿರುವ ಕಾರ್ಯದಲ್ಲಿ ತಾನು
ಸ್ವತಂತ್ರಿಸಬಾರದೆಂದೆಣಿಸಿ, ಅವನನ್ನು ಕೇವಲವ್ಯರ್ಥವಾದ ಶ್ರಮದಲ್ಲಿ ಮಾ
ತ್ರ ನಿಯೋಗಿಸಿ, ತಾನು ಸೂರ್ಯಪುತ್ರನೆನಿಸಿದುದಕ್ಕೆ ತಕ್ಕಂತೆ ಅಷ್ಟುವಿಶಾಲ
ವಾದ ಆಕಾಶವನ್ನೂ ಕೂಡ ಸೂರ್ಯನಂತೆ ಲೀಲಾಮಾತ್ರದಲ್ಲಿಯೇ ದಾಟಿ
ಬಂದು, ವಾನರರ ಗುಂಪಿನಲ್ಲಿ ಸೇರಿಬಿಟ್ಟನು. ಸುಗ್ರೀವನು ಇಷ್ಟುಸಾಹಸವ
ನ್ನು ನಡೆಸಿಬಂದರೂ ಸ್ವಲ್ಪಮಾತ್ರವೂ ಹೆಮ್ಮೆಯನ್ನು ತೋರಿಸಿಕೊಳ್ಳದೆ,
ಏನೂ ತಿಳಿಯದ ಯಾವುದೋ ಒಂದು ಸಾಮಾನ್ಯಕಪಿಯಂತೆ ಆ ವಾನರರ
ಗುಂಪಿನ ನಡುವೆ ಕಲೆತು, ಮೆಲ್ಲಗೆ ರಾಮನ ಬಳಿಯಲ್ಲಿ ಬಂದು ನಿಂತನು. ರ
ಘುಕುಲನಂದನನಾದ ರಾಮನಿಗೆ ಯುದ್ಧೋತ್ಸಾಹವನ್ನು ಹೆಚ್ಚಿಸತಕ್ಕವ
ನಾಗಿಯೂ, ವಾನರಯೂಥದಿಂದ ಪೂಜಿತನಾಗಿಯೂ ಇರುವ ಸೂರ್ಯಪು
ತ್ರನಾದ ಸುಗ್ರೀವನು, ಹೀಗೆ ಮಹಾಸಾಹಸವನ್ನು ತೋರಿಸಿ ಸಂತುಷ್ಟ
ಚಿತ್ತನಾಗಿ, ವಾಯುವೇಗದಿಂದ ಹಿಂತಿರುಗಿ ಬಂದು ವಾನರಸೇನೆಯ ನಡುವೆ
ನಿಂತಿದ್ದನು. ಇಲ್ಲಿಗೆ ನಾಲ್ವತ್ತನೆಯ ಸರ್ಗವು.

---

ರಾಮನು ಭಯಂಕರನಿಮಿತ್ತಗಳನ್ನು ಕಂಡುದು.
ಅಂಗದನು ರಾವಣನಬಳಿಗೆ ರಾಯಭಾರಿಯಾಗಿ ಹೋ
ದುದು. ರಾಮನು ವಾನರಸೈನ್ಯಗಳೊಡನೆ ಲಂಕೆಯ
ನ್ನು ಮುತ್ತಿದುದು.

ಆಮೇಲೆ ಲಕ್ಷ್ಮಣಾಗ್ರಜನಾದ ರಾಮನು,ಪಕ್ಕದಲ್ಲಿಬಂದುನಿಂತ ಸು
ಗ್ರೀವನನ್ನುನೋಡಿ,ಅವನಲ್ಲಿ ಯುದ್ಧದ ಗುರುತುಗಳನ್ನೂ ಕಂಡು ಸಂಭ್ರಮ
ದಿಂದ ಅವನನ್ನು ಬಿಗಿಯಾಗಿ ಆಲಿಂಗಿಸಿಕೊಂಡು''ಎಲೆ ಮಿತ್ರನೆ!ಆಹಾ! ಏನು
ಕೆಲಸವನ್ನುಮಾಡಿದೆ?ನನ್ನೊಡನೆ ಆಲೋಚಿಸದೆಯೇ ಇಷ್ಟು ದೊಡ್ಡಕೆಲಸ
ವನ್ನು ನಡೆಸಿದೆಯಲ್ಲಾ! ನನ್ನಹಾಗೆ ಸಹಾಯಕರು ಸಮೀಪದಲ್ಲಿರುವಾ

ಗಲೂ ನಿನ್ನಂತಹ ರಾಜರು ಹೀಗೆ ಸ್ವತಂತ್ರಿಸಿಸಾಹಸಕಾರ್ಯಗಳನ್ನು ನಡೆಸುವುದೆಂದರೇನು ? ಎಲೆ ವೀರನೆ ! ನೀನು ಸಾಹಸಪ್ರಿಯನೆಂಬುದು ನಿಜವು. ಅದರಿಂದಲೇ ಈಗ ನನ್ನನ್ನಾಗಲಿ, ಈ ವಿಭೀಷಣನನ್ನಾಗಲಿ, ಈ ವಾನರ ಸೈನ್ಯವನ್ನಾಗಲಿ,ಯಾರನ್ನೂ ಕೇಳದೆ,ಯಾರಿಗೂ ತಿಳಿಸದೆ,ನಮ್ಮೆಲ್ಲರನ್ನೂ ದೊಡ್ಡಸಂದೇಹಕ್ಕೆ ಗುರಿಮಾಡಿ ಬಹಳ ಅಪಾಯಕರವಾದ ಈ ಸಾಹಸಕಾರ್ಯವನ್ನುನಡೆಸಿಬಿಟ್ಟೆ!ಸುಗ್ರೀವಾ!ಇನ್ನುಮೇಲೆ ನೀನುಹೀಗೆಹಿಂದುಮುಂದನ್ನು ವಿಚಾರಿಸದೆ ಸ್ವತಂತ್ರಿಸಿ ಇಂತಹಸಾಹಸಕ್ಕೆ ಪ್ರಯತ್ನಿಸಬೇಡ! ಒಂದುವೇಳೆ ಏನಾದರೂ ಅಪಾಯವುಂಟಾಗಿದ್ದರೆ ಮುಂದೆ ಗತಿಯೇನು ? ನೀನು ಎಣೆಯಿಲ್ಲದ ನಿನ್ನಬಾಹುಬಲದಿಂದ ಎಂತಹ ಶತ್ರುಗಳನ್ನಾದರೂ ನಿಗ್ರಹಿಸಬಲ್ಲವನಾದರೂ,ನಿನಗೆ ದೈವಿಕವಾಗಿಯಾವುದಾದರೂ ಹಾನಿಯುಂಟಾದ ಪಕ್ಷದಲ್ಲಿನನ್ನಗತಿಯೇನು?¹ನಿನ್ನನ್ನುಬಿಟ್ಟಮೇಲೆನನಗೆ ಸೀತೆಯಿಂದಾಗಲಿ,ಭರತನಿಂದಾಗಲಿ,ಪ್ರಿಯಸಹೋದರನಾದ ಲಕ್ಷ್ಮಣನಿಂದಾಲಿ,ಶತ್ರುಘ್ನನಿಂದಾಗಲಿ,ಕೊನೆಗೆಈ ನನ್ನ ದೇಹದಿಂದಲೇ ಆಗಲಿ ಆಗಬೇಕಾದುದೇನು ? ನೀನೋ ದೇವೇಂದ್ರವರುಣರಿಗೆ ಸಮನಾದವನು!ಎಲೆ ಬಲಾಢ್ಯನೆ!ನನಗೆ ನಿನ್ನ ಪರಾಕ್ರಮವು ಚೆನ್ನಾಗಿ ತಿಳಿದಿದ್ದರೂ, ಇದಕ್ಕೆ ಮೊದಲು ಕ್ಷಣಕಾಲದವ

---

1 ಇಲ್ಲಿ "ತ್ವಯಿಕಿಂಚಿತ್ಸಮಾಪನ್ನೇಕಿಂಕಾರ್ಯಂ ಸೀತಯಾಮಮ! ಭರತೇನಮಹಾಬಾಹೋ ಲಕ್ಷ್ಮಣೇನಯವೀಯಸಾ॥ಶತ್ರುಘ್ನೇನಚ ಶತ್ರುಘ್ನಸ್ವಶರೀರೇಣವಾಪುನಃ।" ಎಂದು ಮೂಲವು. ಇದರಿಂದ ರಾಮನಿಗೆ ಆಶ್ರಿತರಲ್ಲಿರುವ ವಾತ್ಸಲ್ಯಾತಿಶಯವು ಸೂಚಿತವಾಗುವುದು. ಹಸುಗಳಿಗೆ ಹೊಸದಾಗಿ ಪ್ರಸವಿಸಿದ್ದ ಕರುಗಳಲ್ಲಿರುವ ವಾತ್ಸಲ್ಯವು ಹಿಂದಿನಕರುಗಳಲ್ಲಿ ಹೇಗಿರುವುದಿಲ್ಲವೋ ಹಾಗೆಯೇ ಇಲ್ಲಿ ರಾಮನಿಗೂ ಸೀತಾ ಲಕ್ಷ್ಮಣಾದಿಗಳಲ್ಲಿರುವ ಪ್ರೇಮಕ್ಕಿಂತಲೂ ಹೊಸದಾಗಿ ತನ್ನಲ್ಲಿ ಶರಣಾಗತನಾದ ಕಪಿಯಲ್ಲಿರುವ ಪ್ರೇಮವು ಹೆಚ್ಚೆಂದು ಸೂಚಿತವಾಗುವುದು. ಇದರಿಂದ ರಾಮನಿಗೆ "ಅರ್ಧೋವಾ ಏಷ ಆತ್ಮನೋಯತ್ಪತ್ನೀ" ಎಂಬಂತೆ ಅರ್ಧಶರೀರ ಭೂತೆಯಾದ ಸೀತೆಗಿಂತಲೂ "ಭ್ರಾತಾಸ್ವಮೂರ್ತಿರಾತ್ಮನಃ" ಎಂಬಂತೆ ತನ್ನ ಮೂರ್ತಿ ಭೂತರಂತೆಯೇ ಇರುವ ಲಕ್ಷ್ಮಣ ಭರತ ಶತ್ರುಘ್ನಾದಿಗಳಿಗಿಂತಲೂ "ಆತ್ಮಾನಂ ಸರ್ವಥಾ ರಕ್ಷೇದ್ದಾರೈರಪಿಧನೈರಪಿ" ಎಂಬಂತೆ ಎಲ್ಲಕ್ಕಿಂತಲೂ ಹೆಚ್ಚು ಪ್ರಿಯದಿಂದ ಪೋಷಿಸಬೇಕಾದ ತನ್ನಶರೀರಕ್ಕಿಂತಲೂ, ಆಶ್ರಿತನಾದ ವಾನರನೇ ಪ್ರಿಯತಮನೆಂದು ತಿಳಿಯಬೇಕು.

ರಿಗೆ ನೀನು ಬಾರದಿದ್ದುದನ್ನು ನೋಡಿ, ನಿನ್ನಲ್ಲಿರುವ ಎಣೆಯಿಲ್ಲದ ವಾತ್ಸಲ್ಯ ದಿಂದ,ನಿನಗೆ ಯಾವ ಅಪಾಯವುಂಟಾಯಿತೋ ಎಂದು ಶಂಕಿಸಿದೆನು.ಆಗಲೇ ನನಗೊಂದು ಚಿಂತೆಯೂ ಹುಟ್ಟಿತು. ನನ್ನ ಪ್ರಾಣದಮೇಲೆಯೇ ನಿರಾಶೆ ಯುಂಟಾಯಿತು. ಹಾಗಿದ್ದರೂ ಮಾಡಿದ ಪ್ರತಿಜ್ಞೆಯನ್ನು ತೀರಿಸದೆ ಹೋ ಗಬಾರದಾದುದರಿಂದ, ಆ ರಾವಣನನ್ನು ಅವನ ಮನೆಮಂದಿಮಕ್ಕಳೊಡನೆ ಕೊಂದು, ಶರಣಾಗತನಾದ ವಿಭೀಷಣನಿಗೆ ಕೊಟ್ಟ ಭಾಷೆಯಂತೆ ಅವನಿಗೆ ಲಂಕೆಯಲ್ಲಿ ಪಟ್ಟವನ್ನೂ ಕಟ್ಟಿ,ಕುಲಧರ್ಮವು ತಪ್ಪಿಹೋಗದಂತೆ ಅಯೋಧ್ಯೆ ಗೆಹೋಗಿ ಭರತನನ್ನೂ ರಾಜ್ಯದಲ್ಲಿ ಸ್ಥಿರವಾಗಿ ನಿಲ್ಲಿಸಿ. ಉತ್ತರಕ್ಷಣದಲ್ಲಿಯೇ ಈ ದೇಹವನ್ನು ಬಿಟ್ಟುಬಿಡಬೇಕೆಂದೂ ಮನಸ್ಸಿನಲ್ಲಿ ನಿಶ್ಚಯಿಸಿಬಿಟ್ಟಿದ್ದೆನು." ಎಂದನು. ಈ ಮಾತನ್ನು ಕೇಳಿ ಸುಗ್ರೀವನು, ಕಣ್ಣುಗಳಲ್ಲಿ ಆನಂದಬಾಷ್ಪವ ನ್ನು ಬಿಡುತ್ತ ರಾಮನನ್ನು ಕುರಿತು. "ಎಲೆ ರಘುಕುಲೋತ್ತಮನೆ! ನಿನ್ನ ಡಿಗಳಲ್ಲಿ ದಾಸ್ಯವನ್ನು ಮಾಡಬೇಕಾದುದೇ ನನಗೆ ಪುರುಷಧರ್ಮವೆಂದು ಚೆ ನ್ನಾಗಿ ತಿಳಿದಿರುವಾಗಲೂ, ನಿನ್ನ ಭಾರ್ಯೆಯನ್ನಪಹರಿಸಿದ ದುರಾತ್ಮನಾದ ಆ ರಾವಣನನ್ನು ನೋಡಿ ನಾನು ಹೇಗೆ ಸಹಿಸಬಲ್ಲೆನು? ನಾನು ಈಗ ನಡೆ ಸಿದುದು ದಾಸಕರ್ಮವೇ ಹೊರತು ಸಾಹಸವಲ್ಲ." ಎಂದನು. ಸುಗ್ರೀವನು ಹೇಳಿದ ಈ ಮಾತನ್ನು ಕೇಳಿ ರಾಮನು ಅವನ ಭಕ್ತಿಯನ್ನಭಿನಂದಿಸಿ, ಆ ಮೇಲೆ ಶ್ರೀಮಂತನಾದ ಲಕ್ಷ್ಮಣನಕಡೆಗೆ ತಿರುಗಿ, "ಲಕ್ಷ್ಮಣಾ! ನಾವು ಶೀತಲಜಲದಿಂದಲೂ, ಫಲಸಮೃದ್ಧಿಯುಳ್ಳ ತೋಟಗಳಿಂದಲೂ ಕೂಡಿದ ಪ್ರದೇಶದಲ್ಲಿ, ಈ ನಮ್ಮ ಸೈನ್ಯವನ್ನು ನಿಲ್ಲಿಸಿ, ಆಯಾಯೂಥಪತಿಗಳಿ ಗೆ ಬೇರೆಬೇರೆಯಾಗಿ ಸೈನ್ಯವನ್ನೂ ವಿಭಾಗಿಸಿಕೊಟ್ಟು,ಗರುಡಾದಿರೂಪಗಳಿಂ ದ ವ್ಯೂಹವನ್ನು ಕಟ್ಟಿಸಬೇಕು. ಭಯಂಕರವಾದ ಯಾವುದೋ ಒಂದು ಭಯನಿಮಿತ್ತವು ಇದೋ ಇನ್ನು ಕೆಲವು ಕಾಲದಲ್ಲಿಯೇ ಸಂಭವಿಸಬಹುದೆಂ ದು ನನಗೆ ತೋರಿರುವುದು.ಅದು ಲೋಕಕ್ಷಯವನ್ನೇ ಸೂಚಿಸುತ್ತಿರುವುದು. ನಮ್ಮ ವಾನರಸೈನ್ಯದಲ್ಲಿಯೂ, ಅತ್ತಲಾಗಿ ರಾಕ್ಷಸಸೈನ್ಯದಲ್ಲಿಯೂ, ಅನೇಕ ವೀರರಿಗೆ ನಾಶವುಂಟಾಗುವ ಸೂಚನೆಗಳೂ ಕಾಣುವುವು. ಇದೋ! ಗಾಳಿ ಯು ಬಿರುಸಾಗಿ ಬೀಸುತ್ತಿರುವುದು. ಭೂಮಿಯು ನಡುಗುತ್ತಿರುವುದು. ಪರ್ವತಶಿಖರಗಳು ಅದಿರುತ್ತಿರುವುವು. ಇದ್ದಕ್ಕಿದ್ದ ಹಾಗೆ ಮರಗಳು ಮುರಿ

ಡು ಬೀಳುತ್ತಿರುವುವು. ಅದೋ! ಆಕಾಶದಲ್ಲಿ ಮೇಘಗಳು, ರಣಹದ್ದು ಮೊದ
ಲಾದ ಮಾಂಸಾಹಾರಿಪಕ್ಷಿಗಳ ಆಕಾರವನ್ನು ಹೊಂದಿ, ಕ್ರೂರಸ್ವರೂಪವು
ಳ್ಳವುಗಳಾಗಿ ಕ್ರೂರಧ್ವನಿಯಿಂದ ಮೊಳಗುತ್ತಿರುವುವಲ್ಲದೆ, ಲೋಕಕ್ಷಯ
ಸೂಚಕವಾಗಿ ರಕ್ತಬಿಂದುಗಳೊಡಗೂಡಿದ ಜಲವನ್ನೂ ವರ್ಷಿಸುವುವು
ನೋಡು! ಅದೋ! ಸಂಧ್ಯಾಕಾಲವು ರಕ್ತಚಂದನದಂತೆ ಬಹಳ ಕೆಂಪಾಗಿ
ಭಯಂಕರವಾಗಿ ಕಾಣುವುದು! ಸೂರ್ಯಬಿಂಬದಿಂದ ಉರಿಯುವ ಅಗ್ನಿಪಿಂಡ
ಗಳು ಬೀಳುತ್ತಿರುವುವು. ತುಚ್ಛಮೃಗಗಳಾದ ನರಿ ಮೊದಲಾದುವೆಲ್ಲವೂ ಬ
ಹಳದುಃಖಗೊಂಡಂತೆ ಭಯಂಕರವಾದ ದೀನಧ್ವನಿಯಿಂದ ಸಮಸ್ತಲೋ
ಕಗಳಿಗೂ ಹಾನಿಯನ್ನು ಸೂಚಿಸುತ್ತ, ಸೂರ್ಯನಿಗಿದಿರಾಗಿ ಊಳಿಡುತ್ತಿರುವು
ವು. ಈ ರಾತ್ರಿಯಲ್ಲಿಯೂ ಕೂಡ ಚಂದ್ರನು ಪ್ರಕಾಶರಹಿತನಾಗಿ ತನ್ನ
ಕಿರಣಗಳಿಂದ ಲೋಕವನ್ನು ಸಂತಾಪಪಡಿಸುತ್ತಿರುವನು. ಮತ್ತು ಪ್ರಳ
ಯಕಾಲದಲ್ಲಿ ಹೇಗೋ ಹಾಗೆ ಆ ಚಂದ್ರಬಿಂಬದ ಸುತ್ತಲೂ ಕಪ್ಪು ಮ
ತ್ತು ಕೆಂಪುಬಣ್ಣಗಳಿಂದ ಕೂಡಿದ ಪರಿವೇಷವು ಕಾಣುತ್ತಿರುವುದು ನೋ
ಡು! ಈ ಚಂದ್ರನ ಪರಿವೇಷವು ಎಷ್ಟುಭಯಂಕರವಾಗಿಯೂ, ಹ್ರಸ್ವವಾಗಿ
ಯೂ, ಅಮಂಗಳಸೂಚಕವಾಗಿಯೂ, ನಡುವೆ ಬಹಳ ರಕ್ತವರ್ಣವಾಗಿ
ಯೂ ಕಾಣುವುದು ನೋಡಿದೆಯಾ! ಅದೋ! ಸೂರ್ಯಬಿಂಬದಲ್ಲಿಯೂಕೂಡ,
ಚಂದ್ರಬಿಂಬದಲ್ಲಿರುವಂತೆ ಕಪ್ಪಾದ ಕಳಂಕವೊಂದು ಕಾಣುವುದುನೋಡು!
ಲಕ್ಷ್ಮಣಾ! ನಕ್ಷತ್ರಗಳೆಲ್ಲವೂ ಎಂದಿನಂತಿಲ್ಲದೆ ಬಹಳಮಲಿನವಾಗಿ ಕಾಂತಿಗುಂ
ದಿರುವುದನ್ನು ನೋಡಿದೆಯಾ! ನಿಜವಾಗಿಯೂ ಈಗ ಈ ದುರ್ನಿಮಿತ್ತಗಳೆಲ್ಲ
ವೂ ಪ್ರಳಯಕಾಲವೇ ಸನ್ನಿಹಿತವಾದಂತೆ ಸೂಚಿಸುತ್ತಿರುವುವು. ಅದೋ!
ಅಲ್ಲಲ್ಲಿ, ಕಾಗೆ, ಡೇಗೆ, ಹದ್ದು, ರಣಹದ್ದು ಮೊದಲಾದ ಪ್ರಬಲಪಕ್ಷಿಗಳೆಲ್ಲ
ವೂಕೂಡ, ಸಣ್ಣಸಣ್ಣಹಕ್ಕಿಗಳಿಂದ ಪ್ರತಿಹತಗಳಾಗಿ ಕೆಳಕ್ಕೆ ಬೀಳುತ್ತಿರು
ವುವು. ಅಲ್ಲಲ್ಲಿ ನರಿಗಳು ಮಹಾಧ್ವನಿಯಿಂದ ಅಮಂಗಳವಾಗಿ ಊಳಿಡುತ್ತಿ
ರುವುವು. ವತ್ಸ ಲಕ್ಷ್ಮಣಾ! ಇನ್ನು ನಾವು ತಡಮಾಡಬಾರದು. ಈಗಲೇ
ನಾವು ನಮ್ಮ ವಾನರಸೈನ್ಯಗಳೆಲ್ಲವನ್ನೂ ಸೇರಿಸಿಕೊಂಡು ಇಲ್ಲಿಂದ ಹೊರ
ಟು, ರಾವಣನಿಂದ ರಕ್ಷಿತವಾಗಿ ದುರ್ಗಮವೆನಿಸಿಕೊಂಡ ಆ ಲಂಕೆಗೆ ಶೀ
ಘ್ರದಲ್ಲಿಯೇ ಹೋಗಿ ಸೇರಬೇಕು." ಎಂದನು. ಹೀಗೆ ವೀರನಾಗಿಯೂ, ಮ

ಹಾಬಲಾಢ್ಯನಾಗಿಯೂ ಇರುವ ರಾಮನು ಲಕ್ಷ್ಮಣನೊಡನೆ ಹೇಳಿ, ಆಗಲೇ ಸುವೇಲಪರ್ವತದ ಶಿಖರದಿಂದ ಕೆಳಕ್ಕಿಳಿದನು. ಧರ್ಮಾತ್ಮನಾದ ರಾಮನು ಹೀಗೆ ಆಪರ್ವತಶಿಖರದಿಂದಿಳಿದು,[1] ಅಲ್ಲಿದ್ದ ಶತ್ರುದುರ್ಜಯನಾದ ತನ್ನ ಸಮಸ್ತವಾನರಸೈನ್ಯವನ್ನೂ ಒಮ್ಮೆ ಕಣ್ಣಿಟ್ಟು ನೋಡಿದನು. ರಾಮನು ಕಾಲೋಚಿತವಾದ ಕಾರ್ಯವನ್ನು ಚೆನ್ನಾಗಿ ಬಲ್ಲವನಾದುದರಿಂದ, ಸುಗ್ರೀವನೊಡನೆ ಸೇರಿ, ಆ ಸಮಸ್ತ ವಾನರಸೈನ್ಯವನ್ನೂ ಪ್ರೋತ್ಸಾಹಪಡಿಸಿ, ಅವರಿಗೆ ಇದೇ ಯುದ್ಧಕಾಲವೆಂಬುದನ್ನೂ ತಿಳಿಸಿ, ಯುದ್ಧಕ್ಕೆ ಸಿದ್ಧವಾಗಿರುವಂತೆ ಆಜ್ಞೆಮಾಡಿದನು. ಬೆಳಗಾದಮೇಲೆ ಮಹಾಬಾಹುವಾದ ರಾಮನು, ಕೈಯಲ್ಲಿ ಬಿಲ್ಲನ್ನು ಸಿದ್ಧವಾಗಿ ಹಿಡಿದು, ದೊಡ್ಡಸೇನೆಯಿಂದ ಪರಿವೃತನಾಗಿ, ಲಂಕಾಪುರವನ್ನು ಕುರಿತು ಮುಂದೆ ಹೊರಟನು. ವಿಭೀಷಣನೂ, ಸುಗ್ರೀವನೂ, ಹನುಮಂತನೂ, ಜಾಂಬವಂತನೂ, ನಲನೂ, ಸುಷೇಣನೂ, (ಧೂಮ್ರನೂ), ನೀಲನೂ, ಲಕ್ಷ್ಮಣನೂ ಅವನನ್ನು ಹಿಂಬಾಲಿಸಿ ಹೊರಟರು. ಹೀಗೆ ಮಹತ್ತಾದ ವಾನರಭಲ್ಲೂಕಸೈನ್ಯಗಳೆಲ್ಲವೂ ಗುಂಪಾಗಿ, ಅತಿವಿಸ್ತಾರವಾದ ಅಲ್ಲಿನ ಭೂಮಿಯೆಲ್ಲವನ್ನೂ ವ್ಯಾಪಿಸುವಂತೆ ರಾಮನನ್ನು ಹಿಂಬಾಲಿಸಿ ಹೋಯಿತು. ಆನೆಯಂತೆ ದೊಡ್ಡ ದೇಹವುಳ್ಳವರಾಗಿಯೂ, ಶತ್ರುಗಳನ್ನಿದಿರಿಸುವುದರಲ್ಲಿ ಸಮರ್ಥರಾಗಿಯೂ ಇದ್ದ ಸಾವಿರಾರುಮಂದಿ ವಾನರವೀರರು, ದೊಡ್ಡದೊಡ್ಡ ಬೆಟ್ಟದ ಶಿಖರಗಳನ್ನೂ, ದೊಡ್ಡದೊಡ್ಡ ಮರಗಳನ್ನೂ ಹಿಡಿದು ಹೊರಟರು. ಪರಂತಪರಾದ ರಾಮಲಕ್ಷ್ಮಣರಿಬ್ಬರೂ ಹೀಗೆ ದೊಡ್ಡಸೇನೆಯೊಡನೆ ಪ್ರಯಾಣಮಾಡಿ ಬಹಳಹೊತ್ತಿನಮೇಲೆ ರಾವಣನಗರಿಯನ್ನು ಸೇರಿದರು. ಅನೇಕ ಧ್ವಜಪಟಗಳ ಸಾಲಿನಿಂದ ಮನೋಹರವಾಗಿಯೂ, ವನೋಪವನಗಳಿಂದ ಶೋಭಿತವಾಗಿಯೂ, ವಿಚಿತ್ರವಾದ ಕೋಟೆಯುಳ್ಳದಾಗಿಯೂ, ಇತರರಿಗೆ ದುರ್ಗಮವಾಗಿಯೂ, ಎತ್ತರವಾದ ತೋರಣಪ್ರಾಕಾರಗಳಿಂದ ಕೂಡಿದುದಾಗಿಯೂ, ದೇವತೆಗಳಿಗೂ ದು

---

1 ಇದರಿಂದ ಅಲ್ಲಿದ್ದ ಸಮಸ್ತವಾನರಬಲವೂ ರಾಮನ ಹಿಂದೆ ಸುವೇಲಪರ್ವತವನ್ನೇರಲಿಲ್ಲವೆಂದು ಗ್ರಾಹ್ಯವು.

ಘರ್ಷಣವಾಗಿಯೂ ಇದ್ದ ಆ ಲಂಕಾಪುರವನ್ನು [1]ಸಮೀಪಿಸಿ, ವಾನರ ರೆಲ್ಲರೂ ರಾಮಾಜ್ಞೆಯನ್ನನುಸರಿಸಿ ಸೇನೆಯಲ್ಲಿ ತಮತಮಗೆ ನಿಯತವಾದ ಸ್ಥಾನವನ್ನು ಬಿಡದೆ ಸಿದ್ಧರಾಗಿದ್ದರು.ರಾಮನು ಲಕ್ಷ್ಮಣಸಹಿತನಾಗಿ ಹೊ ರಟು ಪರ್ವತಶಿಖರದಂತೆ ಮಹೋನ್ನತವಾದ ಲಂಕೆಯ ಉತ್ತರದ್ವಾರವ ನ್ನು ಸೇರಿ,ಅಲ್ಲಿ ಧನುರ್ಧಾರಿಯಾಗಿ ತನ್ನ ಸೇನೆಯನ್ನು ರಕ್ಷಿಸುತ್ತ ಆ ಬಾಗಿಲ ನ್ನು ಮುತ್ತಿದನು. ಹೀಗೆ ದಶರಥಪುತ್ರನಾದ ಆ ರಾಮನು ಲಕ್ಷ್ಮಣನಿಂ ದನುಸೃತನಾಗಿ ಹೊರಟು, ಲಂಕೆಯಲ್ಲಿ ರಾವಣನು ತಾನಾಗಿಯೇ ನಿಂತು ಎಚ್ಚರಿಕೆಯಿಂದ ರಕ್ಷಿಸುತಿದ್ದ ಉತ್ತರದ ಬಾಗಿಲನ್ನು ತಡೆದನು. ಆ ದ್ವಾರ ಪ್ರದೇಶವಾದರೋ ವರುಣನಿಂದ ರಕ್ಷಿತವಾದ ಸಮುದ್ರದಂತೆ, ಸಾಕ್ಷಾ ತ್ತಾಗಿ ರಾವಣನಿಂದಲೇ ರಕ್ಷಿತವಾಗಿರುವುದು. ನೋಡುವಾಗಲೇ ಭಯವ ನ್ನುಹುಟ್ಟಿಸುವುದು. ಸುತ್ತಲೂ ಅನೇಕಘೋರರಾಕ್ಷಸರು ಆಯುಧಧಾರಿ ಗಳಾಗಿ ಎಚ್ಚರಿಕೆಯಿಂದ ಕಾವಲಿರುವುದರಿಂದ, ದಾನವರಿಂದ ರಕ್ಷಿತವಾದ ಪಾತಾಳವೋ ಎಂಬಂತೆ ನೋಡುವವರಿಗೆ ಮಹಾಭಯವನ್ನು ಹುಟ್ಟಿಸುತ್ತಿ ರುವುದು. ಹೀಗಿರುವಾಗ ಧೈರ್ಯದಿಂದ ಮುಂದೆ ನುಗ್ಗಿ ಅದನ್ನು ತಡೆಯಬೇ ಕೆಂದರೆ ಲೋಕೈಕವೀರನಾದ ರಾಮನಿಗೆ ಹೊರತು ಬೇರೆಯಾವನಿಗೆ ಸಾಧ್ಯವು ? ರಾಮನು ಆ ದ್ವಾರವನ್ನು ಸಮೀಪಿಸಿದಾಗಲೇ ಆ ಬಾಗಿಲಿ ನ ಜಗುಲಿಯಮೇಲೆ ರಾಕ್ಷಸಯೋಧರು ನಿಲ್ಲಿಸಿಟ್ಟಿದ್ದ ವಿವಿಧಾಯುಧಸಮೂ ಹಗಳನ್ನೂ, ಅನೇಕಯುದ್ಧಕವಚಗಳನ್ನೂ ನೋಡಿದನು. ವೀರ್ಯವಂತನಾ ಗಿಯೂ, ವಾನರ ಸೇನಾಪತಿಯಾಗಿಯೂ ಇದ್ದ ನೀಲನು ಮೈಂದದ್ವಿವಿದ ರೊಡಗೂಡಿ ಉತ್ತರದ್ವಾರದಲ್ಲಿ ನಿಂತನು. ಬಹಳ ಬಲಾಢ್ಯನಾದ ಅಂಗದ ನು ಋಷಭ ಗವಾಕ್ಷ ಗಜ ಗವಯರೆಂಬ ನಾಲ್ವರೊಡಗೂಡಿ ದಕ್ಷಿಣದ್ವಾರ ವನ್ನು ತಡೆದುನಿಂತನು. ಬಲವಂತನಾದ ಹನುಮಂತನು ಪ್ರಮಾಥಿ ಪ್ರಘ ಸರೆಂಬವರನ್ನೂ, ವೀರರಾದ ಮತ್ತೆ ಕೆಲವು ವಾನರರನ್ನೂ, ಸಂಗಡಕರೆದು ಕೊಂಡು ಪಶ್ಚಿಮದ್ವಾರದಲ್ಲಿ ನಿಂತನು.ಸುಗ್ರೀವನು ಗರುಡನಂತೆಯೂ,ವಾ

---

1 ಇಲ್ಲಿ ಸಮೀಪಿಸಿದನೆಂಬುದರಿಂದ ಸುವೇಲ ಪರ್ವತವನ್ನಿಳಿದಮೇಲೆ ತ್ರಿಕೂಟ ಶಿಖ ರವನ್ನೇರಿದುದಾಗಿ ಅರ್ಥಸಿದ್ಧವು.

ಯುವಂತೆಯೂ ಮಹಾವೇಗವುಳ್ಳ ಅನೇಕ ವಾನರಶ್ರೇಷ್ಠರೊಡಗೂಡಿ ಹೊ ರಟು,ಅತ್ತಲಾಗಿಬಲಾಢ್ಯರಾದ ರಾವಣೇಂದ್ರಜಿತ್ತುಗಳೊಡನೆ ಹೋರಾಡು ವುದಕ್ಕೆ ಸಿದ್ಧರಾಗಿ ಹೋಗಿರುವ ರಾಮ ಹನುಮಂತರಿಬ್ಬರಲ್ಲಿ ಯಾರಿಗೆ ಸಮಯಬಂದಾಗಲೂ ತಪ್ಪನೆಹೋಗಿ ಸಹಾಯಮಾಡುವುದಕ್ಕೆ ತಕ್ಕಂತೆ, ಉತ್ತರ ಪಶ್ಚಿಮದ್ವಾರಗಳ ನಡುವೆ ಗುಲ್ಮಸ್ಥಾನದಲ್ಲಿ ನಿಂತನು.ಬಹಳ ಪ್ರ ಖ್ಯಾತಿಹೊಂದಿದ ಯೂಥಪತಿಗಳಕೆಳಗೆ ಮೂವತ್ತಾರುಕೋಟಿ ವಾನರರು ಹೀಗೆ ಲಂಕಾಪುರಿಯನ್ನು ಮುತ್ತಿನಿಂತು ಸುಗ್ರೀವನಿಗೆ ಬೆಂಬಲವಾಗಿದ್ದರು. ರಾಮಾಜ್ಞೆಯಿಂದ ಲಕ್ಷ್ಮಣವಿಭೀಷಣರಿಬ್ಬರೂ ಒಂದೊಂದು ದ್ವಾರದಲ್ಲಿ ಯೂ, ಒಂದೊಂದು ಕೋಟಿವಾನರರನ್ನಿರಿಸಿದರು. ರಾಮನಿದ್ದ ಕಡೆಗೆ ಪ ಶ್ಚಿಮದಿಕ್ಕಿನಲ್ಲಿ, ಅವನಿಗೆ ಸಮೀಪವಾಗಿ ಸುಗ್ರೀವನು ಜಾಂಬವಂತನನ್ನೂ ತನ್ನ ಸಹಾಯಕ್ಕಿಟ್ಟುಕೊಂಡು,ಬಹುಸೈನ್ಯಪರಿವೃತನಾಗಿ ಮಧ್ಯಗುಲ್ಮದಲ್ಲಿ ದ್ದನು. ಅಲ್ಲಿದ್ದ ವಾನರರೆಲ್ಲರೂ ಕ್ರೂರವಾದ ಕೋರೆಯುಳ್ಳ ಹೆಬ್ಬುಲಿಗ ಳಂತೆ, ಗಿಡಗಳನ್ನೂ,ಪರ್ವತಶಿಖರಗಳನ್ನೂ ಹಿಡಿದು ಕೋಪದಿಂದ ಯುದ್ಧ ಕ್ಕೆ ಕಾದಿದ್ದರು. ಅವರಲ್ಲಿ ಒಬ್ಬೊಬ್ಬರೂ ಬಾಲಗಳನ್ನೆತ್ತಿಯೇ ನಿಂತಿರು ವರು.ಒಬ್ಬೊಬ್ಬರೂ ತಮ್ಮ ಕೋರೆಗಳನ್ನೂ, ಉಗುರುಗಳನ್ನೂ,ಶಸ್ತ್ರಾಸ್ತ್ರ ಗಳಂತೆ ಯುದ್ಧಸಾಧನಗಳನ್ನಾಗಿ ಮಾಡಿಟ್ಟಿರುವರು.ಒಬ್ಬೊಬ್ಬರ ಮುಖದ ಲ್ಲಿಯೂ ಕೋಪವಿಕಾರಗಳು ತೋರುತ್ತಿರುವುವು. ಒಬ್ಬೊಬ್ಬರ ಅವಯವಗ ಳೂ ವಿಚಿತ್ರವರ್ಣದಿಂದ ಘೋರರೂಪವಾಗಿ ಕಾಣುವುದು. ಒಬ್ಬೊಬ್ಬ ರೂ ಕೋಪದಿಂದ ಮುಖವನ್ನು ವಕ್ರವಾಗಿ ತಿರುಗಿಸಿ ರಾಕ್ಷಸರನ್ನು ಹೆದ ರಿಸುತ್ತಿರುವರು.ಮತ್ತು ಅವರಲ್ಲಿ,ಕೆಲವರು ಹತ್ತಾನೆಯ ಬಲವುಳ್ಳವರು. ಕೆ ಲವರು ನೂರಾನೆಯಬಲವುಳ್ಳವರು.ಕೆಲವರು ಸಾವಿರಾನೆಯಬಲವುಳ್ಳವರು. ಇನ್ನು ಕೆಲವರು ಓಘಸಂಖ್ಯಾಕಗಳಾದ ಆನೆಯಷ್ಟುಬಲವುಳ್ಳವರು. ಅದ ಕ್ಕಿಂತಲೂ ನೂರುಪಾಲು ಹೆಚ್ಚುಬಲವುಳ್ಳವರು ಕೆಲವರು. ಇಷ್ಟೆಂದು ನಿ ರ್ಣಯಿಸುವುದಕ್ಕೆ ಅಸಾಧ್ಯವಾದ ಬಲವುಳ್ಳವರು ಕೆಲವರು.ಹೀಗೆ ಅನೇಕಾ ನೇಕವಾನರವೀರರು ಲಂಕೆಯನ್ನಾಕ್ರಮಿಸಿನಿಂತಿದ್ದರು. ಆ ದೊಡ್ಡ ವಾನರ ಸೈನ್ಯವು ಲಂಕೆಯಲ್ಲಿ ಗುಂಪುಕೂಡಿರುವಾಗ ಮಿಡಿತೆಗಳು ಗುಂಪುಕೂಡಿದಂತೆ ಭಯಂಕರವಾಗಿ ಮೇಲೆಮೇಲೆ ಹೆಚ್ಚಿಬರುತ್ತ, ಆಶ್ಚರ್ಯಕರವಾಗಿಯೂ

ಕಾಣಿಸಿತು. ಕಪಿಗಳು, ಕರಡಿಗಳು, ಸಿಂಗಳೀಕಗಳೆಂಬ ಜಾತಿಭೇದದಿಂದ ವಿಚಿತ್ರವರ್ಣವುಳ್ಳದಾಗಿತ್ತು. ಮತ್ತು ಆಗ ಕೇವಲಕಪಿಗಳಿಂದಲೇ ಆಕಾಶವೆಲ್ಲವೂ ತುಂಬಿದಂತೆಯೂ, ಭೂಮಿಯು ಮುಚ್ಚಿಹೋದಂತೆಯೂ ಕಾಣಿಸಿತು. ಮೊದಲಿದ್ದ ಸೈನ್ಯವಲ್ಲದೆ ಪ್ರತಿಲಂಕಾದ್ವಾರದಲ್ಲಿಯೂ ಒಂದೊಂದು ಕೋಟಿ ಭಲ್ಲೂಕಸೈನ್ಯವೂ, ಕಪಿಸೈನ್ಯವೂ ಪ್ರತ್ಯೇಕವಾಗಿ ನಿಲ್ಲಿಸಲ್ಪಟ್ಟುವು. ಇನ್ನೂ ಬೇರೆ ಅನೇಕವಾನರರು ಅಲ್ಲಲ್ಲಿ ಕಾದಿದ್ದು, ಬೇಕಾದಾಗ ಮುಂದೆ ಸಹಾಯಕ್ಕೆ ಬರುವುದಕ್ಕಾಗಿ ಸಿದ್ಧವಾಗಿ ನಿಂತಿದ್ದರು. ತ್ರಿಕೂಟಪರ್ವತದ ಸಮಸ್ತಪ್ರದೇಶಗಳೂ ವಾನರರಿಂದಲೇ ವ್ಯಾಪ್ತವಾಯಿತು. ಹೀಗೆ ಲಂಕೆಯ ನಾಲ್ಕುಬಾಗಿಲುಗಳನ್ನೂ ಆವರಿಸಿದಮೇಲೆ, ಬೇರೆ ಇನ್ನೊಂದು ಕೋಟಿವಾನರರು ಆ ಪಟ್ಟಣದಸುತ್ತಲೂ ಮುತ್ತಿನಿಂತರು. ಹೀಗೆ ಬಲಾಢ್ಯರಾದ ಅನೇಕವಾನರರು ಕೈಯಲ್ಲಿ ಕಲ್ಲುಮರಗಳನ್ನು ಹಿಡಿದು ಲಂಕೆಯ ಸುಲೂ ಆವರಿಸಿ ನಿಂತಿದ್ದುದರಿಂದ, ಆ ಪಟ್ಟಣವು ಗಾಳಿಯ ಪ್ರವೇಶಕ್ಕೂ ಅವಕಾಶವಿಲ್ಲದಂತಾಯಿತು. ಹೀಗೆ ಮೇಘದಂತೆ ದೇಹವುಳ್ಳವರಾಗಿಯೂ, ದೇವೇಂದ್ರನಂತೆ ಪರಾಕ್ರಮವುಳ್ಳವರಾಗಿಯೂ ಇದ್ದ ಅನೇಕವಾನರರು ಆಕಸ್ಮಾತ್ತಾಗಿ ಬಂದು ಇಷ್ಟು ಶೀಘ್ರದಲ್ಲಿ ಲಂಕೆಯನ್ನು ಎಡೆಬಿಡದೆ ಮುತ್ತಿರುವುದನ್ನು ನೋಡಿ, ಅಲ್ಲಿನ ರಾಕ್ಷಸರಿಗೆ ಅತ್ಯಾಶ್ಚರ್ಯವು ಹುಟ್ಟಿತು. ಈ ವಾನರಸೈನ್ಯವು ನಾನಾಕಡೆಗಳಿಂದ ಬಂದು ಅಲ್ಲಲ್ಲಿ ಸೇರುತ್ತಿರುವಾಗ, ಅದರಿಂದುಂಟಾದ ಗದ್ದಲವು, ಮಹಾಸಮುದ್ರವು ತನ್ನ ದಡವನ್ನು ಮುರಿದು ಕೊಚ್ಚಿ ಬರುವಾಗ ಅದರಿಂದ ಹೊರಟು ಬರುವ ಜಲಪ್ರವಾಹದ ಮೊರೆತದಂತೆ ಭಯಂಕರವಾಗಿ ಕೇಳಿಸುತಿತ್ತು. ಈ ಮಹಾಧ್ವನಿಗೆ ಲಂಕಾನಗರಿಯೆಲ್ಲವೂ ತನ್ನ ತೋರಣಪ್ರಾಕಾರಗಳೊಡನೆಯೂ, ಪರ್ವತಾರಣ್ಯಗಳೊಡನೆಯೂ, ಪುರೋಪವನಗಳೊಡನೆಯೂ ಬಹಳವಾಗಿ ನಡುಗಿಹೋದಂತಾಯಿತು. ರಾಮಲಕ್ಷ್ಮಣರಿಂದಲೂ, ಸುಗ್ರೀವನಿಂದಲೂ ರಕ್ಷಿತವಾಗಿ ಬಂದ ಆ ದೊಡ್ಡ ವಾನರಸೇನೆಯು, ಸಮಸ್ತ ದೇವಾಸುರರಿಗಾದರೂ ಇದಿರಿಸಲಸಾಧ್ಯವಾಗಿರುವಂತೆ ತೋರುತಿತ್ತು. ಹೀಗೆ ರಾಮನು ತನ್ನ ಕಡೆಯ ಸಮಸ್ತಸೈನ್ಯವನ್ನೂ ಲಂಕೆಯಲ್ಲಿ ತಂದಿಳಿಸಿ, ಮುಂದೆ ರಾಕ್ಷಸರನ್ನು ಕೊಲ್ಲುವ ವಿಷಯದಲ್ಲಿ ಮಾಡಬೇಕಾದ ಕಾರ್ಯಗಳೇನೆಂದು ಮಂತ್ರಿಗಳನ್ನು ಕರೆದು ಅವರೊಡನೆ

ಆಲೋಚಿಸಿದನು. ಸಾಮಾದ್ಯುಪಾಯಗಳಿಂದುಂಟಾಗುವ ಫಲವನ್ನು ಚೆನ್ನಾಗಿ ಬಲ್ಲವನಾದ ರಾಮನು, ಯುದ್ಧಕ್ಕೆ ಮೊದಲು ರಾಜರು ನಡೆಸಬೇಕಾದ ಕಾರ್ಯವೇನೆಂಬುದನ್ನು ಯೋಚಿಸಿ,ಆ ರಾಜಧರ್ಮವನ್ನು ಮನಸ್ಸಿನಲ್ಲಿ ಸ್ಮರಿಸಿ, ಮುಂದೆ ರಾವಣನಬಳಿಗೆ ದೂತನೊಬ್ಬನನ್ನು ಕಳುಹಿಸಬೇಕಾದು ದೇ ಪ್ರಕೃತಕಾರ್ಯವೆಂದೂ, ಅಂಗದನೇ ಆ ದೂತಕಾರ್ಯಕ್ಕೆ ತಕ್ಕವನೆಂದೂ ನಿಶ್ಚಯಿಸಿಕೊಂಡು,ಈ ವಿಷಯದಲ್ಲಿ ವಿಭೀಷಣನ ಅನುಮತಿಯನ್ನೂ ಕೇಳಿ, ಅಂಗದನನ್ನು ಕರೆದು ಹೇಳುವನು. “ಎಲೆ ಸೌಮ್ಯನೆ! ನೀನು ಈಗಲೇ ಲಂಕಾಪುರಿಯನ್ನು ಹಾರಿ, ರಾವಣನಬಳಿಗೆ ಹೋಗಿ, ಅವನಮುಂದೆ ಈಗ ನಾನು ಹೇಳುವ ಮಾತನ್ನು ಹೀಗೆಯೇ ನಿರ್ಭಯವಾಗಿ ಹೇಳು?” “ಎಲೆ ರಾಕ್ಷಸಾ! ಈಗಲೇ ನಿನ್ನ ಸಂಪತ್ತೆಲ್ಲವೂ, ಹೆಚ್ಚುಕಡಿಮೆಯಾಗಿ, ನಾಶಹೊಂದಿದಂತೆಯೇ ಆಗಿರುವುದು.ನಿನ್ನ ಪ್ರಭುತ್ವದ ಬಲವೂ,ತಗ್ಗಿಹೋದಂತೆಯೇ ಎಣಿಸಬೇಕು?ಇನ್ನು ಮೇಲೆ ನಿನಗೆ ಬದುಕುವ ಆಸೆಯೂ ತಪ್ಪಿಹೋಯಿತು.ನಿನಗೆ ಸಾವು ಸಿದ್ಧವಾಗಿರುವುದು. ವಿನಾಶಕಾಲಕ್ಕೆ ತಕ್ಕಂತೆ ನಿನ್ನ ಬುದ್ಧಿಯೂ ಕೆಟ್ಟುಹೋಯಿತು. ಎಲೆ ಮೂಢನೆ! ಇದುವರೆಗೂ ನೀನು ಭಾಗ್ಯಮದದಿಂದ ಬೀಗಿ, ದೇವ ಗಂಧರ್ವಮಹರ್ಷಿಗಳಿಗೂ ಅಪ್ಸರಸ್ಸುಗಳಿಗೂ, ಯಕ್ಷಪನ್ನಗಾದಿಗಳಿಗೂ, ಇತರ ಕ್ಷತ್ರಿಯರಿಗೂ, ಎಷ್ಟೋದ್ರೋಹಗಳನ್ನು ಮಾಡಿ ಅವರನ್ನು ಗೋಳಾಡಿಸಿರುವೆ? ನೀನು ಯಾವ ಬ್ರಹ್ಮವರದ ಬಲದಿಂದ ಹೀಗೆ ಬುದ್ಧಿಗೆಟ್ಟು ಘೋರಕೃತ್ಯಗಳನ್ನು ನಡೆಸಿದೆಯೋ, ಇವಕ್ಕೆಲ್ಲಾ ಮೂಲವಾದ, ಆ ವರಬಲದಿಂದುಂಟಾದ ನಿನ್ನ ಕೆಚ್ಚೂ ಕೂಡ ಇನ್ನುಮೇಲೆ ಅಡಗಿದಂತೆಯೇ ಹೊರತು ಬೇರೆಯಲ್ಲ. ಇದು ನಿಜವು. ಇದೋ! ನಾನು ನನ್ನ ಭಾರ್ಯಾಪಹರಣವನ್ನೇ ವ್ಯಾಜವಾಗಿಟ್ಟುಕೊಂಡು, ಆ ನೆಪದಿಂದಲೇ ನಿನ್ನನ್ನು ದಂಡಿಸುವುದಕ್ಕಾಗಿ, ಲಂಕಾದ್ವಾರಕ್ಕೆ ಬಂದು ನಿಂತಿರುವೆನು. ನಿನಗೆ ನಾನೇ ಈಗ ಕಾಲಯಮನೆಂದು ತಿಳಿ? “ ಹೀಗೆ ನನ್ನನ್ನು ದಂಡಿಸುವುದರಿಂದ ನಿನಗೆ ಬಂದ ಫಲವೇನು ? ” ಎಂದು ಕೇಳುವೆಯಾ? ಇದರಿಂದ ನಮ್ಮಿಬ್ಬರಿಗೂ ದೊಡ್ಡಲಾಭವುಂಟು. ನೀನು ನನ್ನಿಂದ

ಹತನಾದರೆ, [1]ಆದರಿಂದ ನಿನ್ನ ಪಾಪವೆಲ್ಲವೂ ನಿವೃತ್ತವಾಗಿ, ದೇವತೆಗಳೂ, ಮಹರ್ಷಿಗಳೂ,ರಾಜರ್ಷಿಗಳೂ ಹೊಂದತಕ್ಕ ಲೋಕವನ್ನೇ ನೀನೂ ಹೊಂದಬಹುದು. ದುಷ್ಟರನ್ನುಶಿಕ್ಷಿಸುವುದೇ ರಾಜಧರ್ಮವಾದುದರಿಂದ, ನಾನೂ ನಿನ್ನ ಅಕೃತ್ಯಕ್ಕೆ ತಕ್ಕಂತೆ ದಂಡನವನ್ನು ಮಾಡಿ ಪಾಪನಿವೃತ್ತಿಯನ್ನು ಹೊಂದಬಹುದು. ಆದರಿಂದ ಇದು ನಮ್ಮಿಬ್ಬರಿಗೂ ಶ್ರೇಯಸ್ಸಿಗೆ ಕಾರಣವು. ಶೀಘ್ರದಲ್ಲಿ ಹೊರಗೆ ಬಂದು ನಿಲ್ಲು! ಎಲೆ ರಾಕ್ಷಸಾಧಮಾ! ಮಾರೀಚನ ಮಾಯೆಯಿಂದ ನನ್ನನ್ನು ಹೊರಕ್ಕೆ ಹೊರಡಿಸಿ ಯಾವಭುಜಬಲವನ್ನು ನಂಬಿ ಆಗ ನೀನು ಸೀತೆಯನ್ನು ಕದ್ದುಯ್ದೆಯೋ, ಆ ನಿನ್ನ ಭುಜಬಲವೆಲ್ಲವನ್ನೂ ಈಗ ನೀನು ತೋರಿಸಬಹುದು. ರಾವಣಾ! [2]ಈಗಲೂ ನೀನು ನನ್ನ ಪತ್ನಿಯಾದ ಸೀತೆಯನ್ನು ತಂದೊಪ್ಪಿಸಿ ಶರಣಾಗತನಾದರೆ ಸರಿ! ಹಾಗಿಲ್ಲದಿದ್ದರೆ ಇದೋ! ಈ ನನ್ನ ತೀಕ್ಷ್ಣಬಾಣಗಳಿಂದ ಲೋಕದಲ್ಲಿ ರಾಕ್ಷಸರ ಹುಟ್ಟೇ ಇಲ್ಲದಂತೆ ಮಾಡಿಬಿಡುವುದೇ ನಿಜವು! ಧರ್ಮಾತ್ಮನಾಗಿಯೂ ರಾಕ್ಷಸೋತ್ತಮನಾಗಿಯೂ ಇರುವ ವಿಭೀಷಣನು ಆಗಲೇ ಬಂದು ನನ್ನಲ್ಲಿ ಶರಣಾಗತನಾಗಿರುವನು. ಆನುಕೂಲ್ಯಸಂಪತ್ತಿಯುಳ್ಳ ಈತನಿಗೆ ಆ ಲಂಕಾರಾಜ್ಯವನ್ನು ನಿಷ್ಕಂಟಕವಾಗಿಮಾಡಿ ಒಪ್ಪಿಸಿಬಿಡುವೆನು! ಇದಕ್ಕೆ ಸಂದೇಹ

---

1 ಇಲ್ಲಿ "ರಾಜಭಿರ್ಧೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾ:। ನಿರ್ಮಲಾಸ್ಸ್ವರ್ಗಮಾಯಾಂತಿ ಸಂತಸ್ಸುಕೃತಿನೋಯಥಾ ॥ ರಾಜಾತ್ವಶಾಸತ್ಪಾಪಸ್ಯತದವಾಪ್ನೋತಿ ಕಿಲ್ಬಿಷಂ।" ಎಂಬಂತೆ ರಾಜದಂಡದಿಂದ ಅಪರಾಧಿಯೂ ರಾಜನೂ ಪಾಪನಿವೃತ್ತಿಯನ್ನು ಹೊಂದುವುದಾಗಿ ಶಾಸ್ತ್ರವಿಧಿಯು.

2 ಚಿನ್ನವನ್ನು ಕದ್ದವನಿಗೆ ಅದನ್ನುಹಿಂತಿರುಗಿಕೊಟ್ಟ ಹೊರತು ಪ್ರಾಯಶ್ಚಿತ್ತಕ್ಕೆ ಅಧಿಕಾರವಿಲ್ಲವು. ಹಾಗೆಯೇ ಸೀತೆಯನ್ನು ಕದ್ದ ರಾವಣನಿಗೂ ಆ ಸೀತೆಯನ್ನು ಹಿಂತಿರುಗಿ ಸಮರ್ಪಿಸಿದಹೊರತು ತನ್ನಲ್ಲಿ ಶರಣಾಗತಿಗೆ ಅಧಿಕಾರವಿಲ್ಲವೆಂದು ರಾಮನ ಭಾವವು. ಮತ್ತು ಈಗಲೂ ರಾವಣನು ಶರಣಾಗತನಾದಪಕ್ಷದಲ್ಲಿ ವಿಭೀಷಣನಿಗೆ ಕೊಟ್ಟ ಮಾತನ್ನು ತಪ್ಪದಂತೆ ತನ್ನ ಕೋಸಲರಾಜ್ಯವನ್ನಾದರೂ ಅವನಿಗೆ ಕೊಟ್ಟುಬಿಡುವುದಕ್ಕೆ ತಾನು ಸಿದ್ಧನಾಗಿರುವನೆಂದೂ ಭಾವವು. ಅಥವಾ ರಾವಣನು ಶರಣಾಗತನಾದಪಕ್ಷದಲ್ಲಿ ಅವನಿಗೆ ಪ್ರಾಣದಾನವನ್ನು ಮಾತ್ರಮಾಡಬಹುದೇಹೊರತು ವಿಭೀಷಣನಿಗೆ ಲಂಕಾರಾಜ್ಯವು ಸ್ಥಿರವೆಂದೂ ಗ್ರಹಿಸಬಹುದು.

ವೇ ಇಲ್ಲ. ನೀನೋ ಧರ್ಮಶೂನ್ಯನು! ನಿನ್ನಂತೆಕೆಲವು ಮೂರ್ಖರನ್ನೇ ಸಹಾಯಕ್ಕಾಗಿ ಇಟ್ಟುಕೊಂಡಿರುವವನು. ಪಾಪಾತ್ಮನು! ಚಪಲಚಿತ್ತನು! ಇಂತಹ ನಿನಗೆ ಇನ್ನು ಮುಂದೆ ಕ್ಷಣಮಾತ್ರವಾದರೂ ಈ ಲಂಕಾರಾಜ್ಯವನ್ನನು ಭವಿಸುವುದು ಶಕ್ಯವಲ್ಲ. ಎಲೆ ರಾಕ್ಷಸಾ ! ಈಗಲೂ ನೀನು ಸೀತೆಯನ್ನು ತಂದೊಪ್ಪಿಸಿ ಶರಣಾಗತನಾಗುವಪಕ್ಷದಲ್ಲಿ ನಿನ್ನ ಪ್ರಾಣಗಳನ್ನಾದರೂ ಉಳಿಸಿಕೊಳ್ಳಬಹುದು. ಈ ಲಂಕಾರಾಜ್ಯವೇನೋ ವಿಭೀಷಣನ ಕೈಗೆ ಆಗಲೇ ಸೇರಿ ಹೋಯಿತು. ರಾವಣಾ! ಈಗ ನೀನು ಧೈರ್ಯದಿಂದ ಯುದ್ಧವನ್ನೇ ನಡೆಸಿದರೂ ನಡೆಸು! ಆ ಯುದ್ಧದಲ್ಲಿ ನಿನ್ನ ಶೌರ್ಯವೆಲ್ಲವನ್ನೂ ತೋರಿಸು! ಹೇಗಿದ್ದರೂ, ಮುಂದಿನ ಯುದ್ಧದಲ್ಲಿ ನೀನು ನನ್ನ ಬಾಣಗಳಿಂದ ಸತ್ತುಬೀಳುವುದೇನೋ ನಿಜವು. ಹಾಗಿದ್ದರೂ ಅದರಿಂದ ನಿನಗೆ ಮೇಲ್ಮೆಯೇ ಹೊರತು ಹಾನಿಯಿಲ್ಲ. [1]ನನ್ನಬಾಣಗಳಿಂದ ನೀನು ಹತನಾದಪಕ್ಷದಲ್ಲಿ ನಿನ್ನ ಪಾಪಗಳೆಲ್ಲವೂ ನೀಗಿ ಪರಿಶುದ್ಧನಾಗುವೆ? ಹಾಗಿಲ್ಲದೆ ನೀನು ನನಗೆ ಹೆದರಿ ಪಕ್ಷಿಯಂತೆ ಮನೋವೇಗದಿಂದ ಮೂರುಲೋಕಗಳನ್ನು ಸುತ್ತಿದರೂ, ನನ್ನ ಕಣ್ಣಿಗೆ ಬಿದ್ದ ಮೇಲೆ, ನೀನು ಬದುಕಿ ಹೋಗುವಮಾತು ಸುಳ್ಳು! ಎಲೆ ರಾವಣಾ ! ಈಗಲೂ ನಾನು ನಿನಗೆ ಒಂದು ಹಿತವನ್ನು ಹೇಳುವೆನು ಕೇಳು! ಇನ್ನುಮೇಲೆ ಈ ಲೋಕದಲ್ಲಿ ಒಬ್ಬ ರಾಕ್ಷಸನನ್ನಾದರೂ ನಾನು ಉಳಿಸುವವನಲ್ಲ. ಆದುದರಿಂದ ನೀನು ಸತ್ತಮೇಲೆ ನಿನಗೆ ಅಪರಕ್ರಿಯೆಗಳನ್ನು ನಡೆಸುವವನೂ ಇಲ್ಲದಂತಾಗುವುದು. ಆದುದರಿಂದ ಈಗ ನೀನೇ ನಿನಗಾಗಿ ಮುಂದೆ ನಡೆಯಬೇಕಾದ ಅಪರಕ್ರಿಯೆಗಳನ್ನೂ ನಡೆಸಿಕೊಂಡುಬಿಡು! ಈಗಲೇ ಹೋಗಿ ನಿನ್ನ ಲಂಕೆಯನ್ನು ಮನಸ್ತೃಪ್ತಿಯಾಗುವಂತೆ ಒಂದಾವರ್ತಿ ಚೆನ್ನಾಗಿ ನೋಡಿಯೂ ಬಂದುಬಿಡು. ಇನ್ನುಮೇಲೆ ನೀನು ಅದನ್ನು ನೋಡಲಾರೆ ? ನಿನ್ನ ಪ್ರಾಣಗಳು ನನ್ನ ಕೈಯಲ್ಲಿ ಸೇರಿಹೋಗಿರುವುವು " ಎಂದು ನಾನು ಹೇಳಿದುದಾಗಿ ರಾವಣನಿಗೆ ತಿಳಿಸು" ಎಂದನು. ರಾಮನ ಬಾಯಿಂದ ಈ ಮಾತುಬಂದೊಡನೆಯೇ ಅಂಗದನು ಆಕಾಶಕ್ಕೆ ಹಾರಿ, ಮೂರ್ತಿಮಂ

---

1 ಯುದ್ಧದಲ್ಲಿ ಹಿಂಜರಿಯದೆ ಮೃತಿಹೊಂದುವುದು ಸರ್ವಪಾಪಗಳಿಗೂ ಪ್ರಾಯಶ್ಚಿತ್ತವಾದುದರಿಂದ ಹೀಗೆ ಹೇಳಿದುದಾಗಿ ತಿಳಿಯಬೇಕು:



೨೩೩೮. ಅಂಗದನ ರಾಯಭಾರತ್ವ. ಅಂಗದನನ್ನು ಹಿಡಿದುಕಟ್ಟುವಂತೆ ರಾವಣನು ನಿಯೋಗಿಸಿದನು. ಅಂಗದನು ತಪ್ಪಿಸಿಕೊಂಡು ಹೋದನು.

ತನಾದ ಅಗ್ನಿಹೋತ್ರನೋ ಎಂಬಂತೆ ತೇಜಸ್ಸಿನಿಂದ ಜ್ವಲಿಸುತ್ತ, ಲಂಕೆಯ ಕಡೆಗೆ ಹೋದನು. ಸಂತೋಷದಿಂದ ವಿಕಸಿತಕಾಂತಿಯುಳ್ಳ ಆ ಅಂಗದನು ಮುಹೂರ್ತಕಾಲದಲ್ಲಿಯೇ ರಾವಣನ ಅರಮನೆಯನ್ನು ಸೇರಿ, ಅಲ್ಲಿ ಮಂತ್ರಿಗಳೊಡನೆ ಕುಳಿತಿದ್ದ ರಾವಣನನ್ನು ಕಂಡನು. ಬಂಗಾರದ ತೋಳ್ಬಳೆಗಳಿಂದ ಶೋಭಿತನಾದ ಆ ವಾಲಿಪುತ್ರನು, ರಾವಣನ ಸಮೀಪಕ್ಕೆ ಬಂದು, ಉರಿಯುವ ಬೆಂಕಿಯಂತೆ ತೇಜಸ್ಸಿನಿಂದ ಜ್ವಲಿಸುತ್ತ, ಆ ರಾವಣನ ಮುಂದೆ ನಿಂತನು. ಆ ವಾನರೋತ್ತಮನು ಮೊದಲು ರಾವಣನಿಗೆ ತಾನು ಯಾರೆಂಬುದನ್ನು ನಾಮನಿರ್ವಚನಪೂರ್ವಕವಾಗಿ ತಿಳಿಸಿ, ಆಮೇಲೆ ಆ ಸಭೆಯಲ್ಲಿದ್ದ ಮಂತ್ರಿಗಳೆಲ್ಲರೂ ಕೇಳುವಂತೆ, ರಾಮನು ಹೇಳಿದ ಹಿತವಾಕ್ಯಗಳೆಲ್ಲವನ್ನೂ, ಕ್ರಮವಾಗಿ ಅವನು ಹೇಳಿದಂತೆಯೇ ರಾವಣನಿಗೆ ಹೇಳಲಾರಂಭಿಸಿ, ‘‘ಎಲೆ ರಾಕ್ಷಸಾ! ನಾನು ಕೋಸಲಾಧಿಪತಿಯಾದ ರಾಮನಿಗೆ ದೂತನು. ವಾಲಿಯ ಮಗನು. ಅಂಗದನೆಂಬುದು ನನಗೆ ಹೆಸರು. ನೀನೂ ನನ್ನ ಹೆಸರನ್ನು ಕೇಳಿದ್ದರೂ ಇರಬಹುದು. ಕೌಸಲ್ಯೆಗೆ ಆನಂದವರ್ಧಕನಾಗಿ, ರಘುಕುಲದಲ್ಲಿ ಹುಟ್ಟಿದ ನಮ್ಮ ಪ್ರಭುವಾದ ರಾಮನು, ನಿನಗೆ ನನ್ನ ಮೂಲಕವಾಗಿ ಈ ಮಾತುಗಳನ್ನು ಹೇಳಿ ಕಳುಹಿಸಿರುವನು. ‘‘ಎಲೆ ಕ್ರೂರರಾಕ್ಷಸನೆ! ಪಟ್ಟಣದಿಂದ ಹೊರಗೆ ಬಂದು ನನಗಿದಿರಾಗಿ ನಿಂತು ಯುದ್ಧಮಾಡು! ಹಾಗೆ ಮಾಡದಿದ್ದರೆ ನೀನು ಗಂಡುಸಲ್ಲ! ಎಲೆ ಘಾತುಕಾ! ಇನ್ನು ಸ್ವಲ್ಪಕಾಲದಲ್ಲಿಯೇ ನಾನು ನಿನ್ನನ್ನೂ, ನಿನ್ನ ಮಂತ್ರಿಗಳನ್ನೂ, ನಿನ್ನ ಪುತ್ರಮಿತ್ರಬಾಂಧವಾದಿಗಳನ್ನೂ ಕೊಲ್ಲುವುದಾಗಿರುವೆನು. ನೀನು ಸತ್ತಮೇಲೆಯೇ ಮೂರುಲೋಕವೂ ನಿರ್ಭಯವಾಗಿ ಸುಖದಿಂದಿರಬೇಕು. ದೇವ ದಾನವ ಯಕ್ಷ ಗಂಧರ್ವ ಪನ್ನಗ ರಾಕ್ಷಸರೆಂಬ ಸಮಸ್ತದೇವಜಾತಿಗೂ ಶತ್ರುವಾಗಿ, ಋಷಿಗಳಿಗೆ ಕಂಟಕಪ್ರಾಯನಾದ ನಿನ್ನನ್ನು ಎಂದಿಗೂ ನಾನು ಕೊಲ್ಲದೆ ಬಿಡುವವನಲ್ಲ. ಈಗಲೂ ನೀನು ನನ್ನನ್ನು ಸತ್ಕರಿಸಿ, ಸೀತೆಯನ್ನು ತಂದೊಪ್ಪಿಸಿ, ನನ್ನ ಕಾಲುಗಳಲ್ಲಿ ಬಿಳದಿದ್ದರೆ, ನಿನ್ನನ್ನು ಕೊಂದು ವಿಭೀಷಣನಿಗೆ ಲಂಕಾಧಿಪತ್ಯವನ್ನು ಕೊಡಿಸುವೆನು." ಎಂದು ನಿನಗೆ ಹೇಳುವಂತೆ ರಾಮನು ಹೇಳಿರುವನು" ಎಂದನು. ವಾನರೋತ್ತಮನಾದ ಅಂಗದನು ಹೀಗೆ ಪರುಷವಾಕ್ಯವನ್ನಾಡುತ್ತಿರುವಾಗಲೇ, ರಾವಣನು ಕೋಪದಿಂದ ಮೈಮರೆತು ಹೋ

ದನು. ಅವನ ಕಣ್ಣುಗಳು ಕೆಂಡದಂತೆ ಕೆಂಪಾದುವು. ಹೀಗೆ ಕೋಪವಶನಾ
ದ ರಾವಣನು ತನ್ನ ಮಂತ್ರಿಗಳನ್ನು ನೋಡಿ, “ಎಲೆ ಅಮಾತ್ಯರೆ! ಈ ದು
ರಾತ್ಮನನ್ನು ಹಿಡಿದು ಕೊಲ್ಲಿಸಿರಿ! ಬಿಡಬೇಡಿರಿ ! ಚಿತ್ರವಧಮಾಡಿ ಕೊಲ್ಲಿಸಿ
ರಿ!” ಎಂದು ಕೂಗಿದನು? ಈ ರಾಜಾಜ್ಞೆಯನ್ನು ಕೇಳಿದೊಡನೆ, ಉರಿಯು
ವ ಬೆಂಕಿಯಂತೆ ಮಹಾತೇಜಸ್ವಿಗಳಾದ ನಾಲ್ಕುಮಂದಿ ಘೋರರಾಕ್ಷಸರು
ಬಂದು ಆ ಅಂಗದನನ್ನು ಹಿಡಿದರು. ಅಂಗದನು ಬಹಳ ಧೈರ್ಯಶಾಲಿಯಾದು
ದರಿಂದ, ಆ ರಾಕ್ಷಸರಿಗೆ ತನ್ನ ಶಕ್ತಿಯನ್ನು ಚೆನ್ನಾಗಿ ತೋರಿಸಬೇಕೆಂಬುದ
ಕ್ಕಾಗಿ, ಆಗಲೇ ಅವರನ್ನು ತಡೆಯದೆ, ಅವರ ಕೈಗೆ ಸುಲಭವಾಗಿ ಸಿಕ್ಕಿದಂತೆ
ನಟಿಸಿ, ಆ ನಾಲ್ವರೂ ತನ್ನ ತೋಳುಗಳನ್ನು ಬಿಗಿಯಾಗಿ ಅಪ್ಪಿ ಹಿಡಿದು
ನಿಂತಮೇಲೆ,ಆ ರಾಕ್ಷಸರೆಲ್ಲರನ್ನೂ ಹಕ್ಕಿಯಂತೆ ತನ್ನ ಎರಡು ಕೈಗಳಿಂದಲೂ,
ಬಿಗಿಯಾಗಿ ಹಿಡಿದುಕೊಂಡು ಪರ್ವತದಂತೆ ಮಹೋನ್ನತವಾದ ಒಂದು
ಪ್ರಾಸಾದಕ್ಕೆ ಎಗರಿದನು, ಅಂಗದನು ಆ ಪ್ರಾಸಾದದಮೇಲೆ ಕುಳಿತು
ಅಲ್ಲಿಂದ ತಾನು ಹಿಡಿದಿದ್ದ ಆ ರಾಕ್ಷಸರನ್ನೊದರಿಬಿಟ್ಟನು. ರಾವಣನು
ನೋಡುತ್ತಿರುವಾಗಲೇ ಆ ನಾಲ್ಕುಮಂದಿ ರಾಕ್ಷಸರೂ, ಅಂಗದನ ಬಾಹು
ವೇಗದಿಂದೊದರಲ್ಪಟ್ಟು ಥೊಪ್ಪನೆ ನೆಲಕ್ಕೆ ಬಿದ್ದರು. ಆ ಮೇಲೆ ಮಹಾ
ವೀರ್ಯವಂತನಾದ ಆ ಅಂಗದನು, ತನ್ನ ಮುಂದೆ ಪರ್ವತಶಿಖರದಂತೆ ಮ
ಹೋನ್ನತವಾಗಿ ಕಾಣುತಿದ್ದ ರಾವಣನ ಪ್ರಾಸಾದಶಿಖರವನ್ನು ನೋಡಿದನು.
ಆ ಶಿಖರವನ್ನು ಕಂಡೊಡನೆ ಥಟ್ಟನೆ ಅದರಮೇಲೆ ಹಾರಿ ಅದನ್ನು ತನ್ನ
ಕಾಲಿನಿಂದ ಮೆಟ್ಟಲು, ಮೊದಲು ಇಂದ್ರನಿಂದ ಭೇದಿಸಲ್ಪಟ್ಟ ಹಿಮವ
ತ್ಪರ್ವತದ ಶಿಖರದಂತೆ ರಾವಣನು ನೋಡುತ್ತಿರುವಾಗಲೇ ಆತನ ಪದ
ಘಾತಕ್ಕೆ ಆ ಪ್ರಾಸಾದವು ಪುಡಿಪುಡಿಯಾಗಿ ಒಡೆದುಬಿಟ್ಟಿತು. ಹೀಗೆ ಅಂ
ಗದನು ರಾವಣನ ಉಪ್ಪರಿಗೆಯ ಶಿಖರವನ್ನು ಮುರಿದಮೇಲೆ, ರಾಕ್ಷಸರೆಲ್ಲ
ರೂ ಕೇಳುವಂತೆ ತನ್ನ ಹೆಸರನ್ನು ಮತ್ತೊಂದಾವರ್ತಿ ಕೂಗಿ ಹೇಳಿ,ಮಹಾ
ಧ್ವನಿಯಿಂದ ಸಿಂಹನಾದವನ್ನು ಮಾಡುತ್ತ ಆಕಾಶಕ್ಕೆ ಹಾರಿದನು. ಹೀಗೆ
ಸಮಸ್ತರಾಕ್ಷಸರಿಗೂ ದುಃಖವನ್ನುಂಟುಮಾಡಿ, ವಾನರರೆಲ್ಲರನ್ನೂ ಸಂ
ತೋಷಪಡಿಸುತ್ತ ಮಹಾವೇಗದಿಂದ ಅಂತರಿಕ್ಷಮಾರ್ಗವಾಗಿ ಬಂದು, ವಾ
ನರಸೇನೆಯ ಮಧ್ಯದಲ್ಲಿಳಿದು, ರಾಮನ ಪಕ್ಕವನ್ನು ಸೇರಿದನು. ಅತ್ತಲಾಗಿ

ರಾವಣನು ತನ್ನ ಪ್ರಾಸಾದವು ಭಗ್ನವಾದುದಕ್ಕಾಗಿ ಬಹಳ ಕೋಪಾವೇಶ ವನ್ನು ಹೊಂದಿ, ಇನ್ನು ಮೇಲೆ ತನಗೆ ಉಳಿಗಾಲವಿಲ್ಲವೆಂದೂ ನಿಶ್ಚಯಿಸಿಕೊಂ ಡು,ಚಿಂತೆಯಿಂದ ನಿಟ್ಟುಸಿರನ್ನು ಬಿಡುತಿದ್ದನು.ಇತ್ತಲಾಗಿ ರಾಮನಾದರೋ ಅಂಗದನು ಜಯಶೀಲನಾಗಿ ಬಂದುದನ್ನು ನೋಡಿ, ಸಂತೋಷದಿಂದ ಸಿಂ ಹನಾದಮಾಡುತಿದ್ದ ಅನೇಕವಾನರರಿಂದ ಪರಿವೃತನಾಗಿ, ಶತ್ರುವಧವ ನ್ನು ಕೋರುತ್ತ, ಮೇಲೆಮೇಲೆ ಯುದ್ಧೋತ್ಸಾಹದಿಂದುಬ್ಬುತಿದ್ದನು. ಆಗ ಈ ವಾನರಸೇನೆಯಲ್ಲಿ ಮಹಾವೀರ್ಯಶಾಲಿಯಾಗಿಯೂ, ಪರ್ವತಶಿಖರಾಕಾರ ನಾಗಿಯೂ ಇದ್ದ ಸುಷೇಣನು, ಕಾಮರೂಪಿಗಳಾದ ಅನೇಕವಾನರರಿಂದ ಪರಿವೇಷ್ಟಿತನಾಗಿ, ಸುಗ್ರೀವಾಜ್ಞೆಯನ್ನನುಸರಿಸಿ,ಚಂದ್ರನು ನಕ್ಷತ್ರರಾಶಿಗ ಳಲ್ಲಿ ಕ್ರಮವಾಗಿ ತಿರುಗುತ್ತಿರುವಂತೆ, ಲಂಕೆಯ ನಾಲ್ಕುಬಾಗಿಲುಗಳನ್ನೂ ಕಾವಲಾಗಿ ಸುತ್ತಿತಿರುಗುತಿದ್ದನು. ಹೀಗೆ ನೂರಾರುಅಕ್ಷೋಹಿಣಿಯಷ್ಟುವಾನ ರಸೈನ್ಯವುಸಮುದ್ರವನ್ನು ದಾಟಿಬಂದುನಿಂತಿರುವುದನ್ನು ನೋಡಿ,ಲಂಕೆಯಲ್ಲಿ ದ್ದಧೀರರಾದ ರಾಕ್ಷಸರಲ್ಲಿಕೆಲವರು ವಿಸ್ಮಯಪಡುತಿದ್ದರು.ಕೆಲವರು ಭಯ ದಿಂದ ನಡುಗುತಿದ್ದರು.ಶೌರ್ಯದ ಕೆಚ್ಚುಳ್ಳ, ಬೇರೆಕೆಲವು ರಾಕ್ಷಸರು,ದೊಡ್ಡ ಯುದ್ಧವು ಬಂದೊದಗಿತೆಂಬ ಸಂತೋಷದಿಂದ ಹಿಗ್ಗುತಿದ್ದರು. ಆ ಲಂಕೆಯ ಕೋಟೆಗೂ,ಕಂದಕಕ್ಕೂನಡುವೆ ಇರುವ ಪ್ರದೇಶವೆಲ್ಲವೂ,ವಾನರರಿಂದಲೇ ವ್ಯಾಪ್ತವಾಗಿ,ಕಪಿಮಯವಾದ ಬೇರೊಂದು ಪ್ರಾಕಾರವೋ ಎಂಬಂತೆ ಕಾ ಣುತಿತ್ತು. ಈ ಕಪಿಗಳಗುಂಪನ್ನು ನೋಡಿಅನೇಕರಾಕ್ಷಸರು ಭಯದಿಂದ ಮೈ ಮರೆತು ಹಾಹಾಕಾರಗಳನ್ನು ಮಾಡುತಿದ್ದರು. ರಾಕ್ಷಸರಾಜಧಾನಿಯಾದ ಆ ಲಂಕೆಯಸುತ್ತಲೂ ಹೀಗೆ ಮಹಾಭಯಂಕರವಾದ ದೊಡ್ಡ ಕೋಲಾಹಲ ವು ಹೊರಡಲು, ಆ ಲಂಕೆಯಲ್ಲಿದ್ದ ಶೂರರಾಕ್ಷಸರೆಲ್ಲರೂ ದೊಡ್ಡದೊ ಡ್ಡ ಆಯುಧಗಳನ್ನು ಧರಿಸಿ, ಪ್ರಳಯಕಾಲದ ಮಹಾವಾತಗಳಂತೆ ನಿಂತಲ್ಲಿ ನಿಲ್ಲದೆ ಸುತ್ತುತಿದ್ದರು. ಇಲ್ಲಿಗೆ ನಾಲ್ವತ್ತೊಂದನೆಯ ಸರ್ಗವು.

---

ವಾನರರಾಕ್ಷಸರ ಯುದ್ಧಾರಂಭವು.

ಆಮೇಲೆ ಅಲ್ಲಿದ್ದರಾಕ್ಷಸರೆಲ್ಲರೂ ರಾವಣನ ಮನೆಗೆಹೋಗಿ,ರಾಮನು ಅನೇಕವಾನರಸೈನ್ಯದೊಡಗೂಡಿ ಲಂಕಾಪುರಿಯನ್ನು ಮುತ್ತಿರುವುದಾಗಿ ತಿಳಿ

ಸಿದರು. ಹೀಗೆ ವಾನರರು ಲಂಕಾನಗರವನ್ನು ಮುತ್ತಿನಿಂತಿರುವರೆಂಬುದನ್ನು ಕೇಳಿ ರಾವಣನು ಬಹಳ ಕ್ರೋಧಾವಿಷ್ಟನಾಗಿ, ನಗರರಕ್ಷಣಕಾರ್ಯವನ್ನು ಮೊದಲಿಗಿಂತಲೂ ಇಮ್ಮಡಿಯಾಗಿ ಹೆಚ್ಚಿಸಿ, ತನ್ನ ಅರಮನೆಯ ಉಪ್ಪರಿಗೆಯನ್ನೇರಿದನು. ಅದರಮೇಲೆ ನಿಂತು,ಇತ್ತಲಾಗಿ ತನ್ನ ಪಟ್ಟಣದಸುತ್ತಲೂ, ಅಲ್ಲಲ್ಲಿನ ಪರ್ವತಪ್ರದೇಶಗಳನ್ನೂ, ಕಾಡುಗಳನ್ನೂ, ತೋಟಗಳನ್ನೂ ಎಡೆಬಿಡದೆ ತುಂಬಿ ನಿಂತಿರುವ ಅಸಂಖ್ಯಾತವಾದ ಕಪಿಸೇನೆಯನ್ನು ಕಂಡನು.ಈ ಸಮಸ್ತ ಭೂಮಿಯನ್ನೂ ಒಂದೇ ತುತ್ತಾಗಿ ಕಬಳಿಸುವಂತೆ ದಟ್ಟವಾಗಿ ನಿಂತಿದ್ದ ಆ ವಾನರಸೇನೆಯನ್ನು ಕಂಡು ರಾವಣನು, ತನ್ನಲ್ಲಿ ತಾನು "ಆಹಾ! ಇಷ್ಟು ದೊಡ್ಡಸೈನ್ಯವನ್ನು ನಾಶಮಾಡುವ ಬಗೆಯೇನು?" ಎಂದು ಚಿಂತಿಸುತಿದ್ದನು. ಹೀಗೆ ಬಹಳಹೊತ್ತಿನವರೆಗೆ ಚಿಂತಾಕ್ರಾಂತನಾಗಿದ್ದು, ಕೊನೆಗೆ ಧೈರ್ಯವನ್ನವಲಂಬಿಸಿ, ಕೋಪದಿಂದ ವಿಸ್ತಾರವಾಗಿ ಕಣ್ಣುಗಳನ್ನು ಬಿಚ್ಚಿ, ಪಟ್ಟಣದ ಸುತ್ತಲೂ ನಿಂತಿದ್ದ ವಾನರಸೈನ್ಯವನ್ನೂ, ತನಗೆ ಮೃತ್ಯುರೂಪನಾಗಿ ನಿಂತಿದ್ದ ರಾಮನನ್ನೂ ನೋಡಿದನು. ಇತ್ತಲಾಗಿ ಶ್ರೀರಾಮನೂಕೂಡ, ರಣೋತ್ಸಾಹದಿಂದ ಸಂತುಷ್ಟನಾಗಿ, ಆ ವಾನರಸೈನ್ಯದೊಡನೆ ಸ್ವಲ್ಪಸ್ವಲ್ಪವಾಗಿ ಮುಂದುವರಿದು,ಪ್ರಾಕಾರದ ಸಮೀಪಕ್ಕೆ ಬಂದು ನಿಂತು, ಆ ಲಂಕಾನಗರಿಯೆಲ್ಲವೂ ಅನೇಕಘೋರರಾಕ್ಷಸರಿಂದ ಪರಿವೃತವಾಗಿ ಸುರಕ್ಷಿತವಾಗಿರುವುದನ್ನು ಕಂಡನು. ಅಲ್ಲಲ್ಲಿ ಚಿತ್ರವಿಚಿತ್ರಗಳಾದ ಧ್ವಜಪತಾಕೆಗಳಿಂದ ಆ ಪಟ್ಟಣವು, ಸುತ್ತಲೂ ಅಲಂಕೃತವಾಗಿರುವುದನ್ನೂ ನೋಡಿದನು. ಹೀಗೆ ಮಹಾವೈಭವದಿಂದ ಅತಿಮನೋಹರವಾಗಿ ಶೋಭಿಸುತಿದ್ದ ಆ ಲಂಕೆಯ ಸೊಬಗನ್ನು ನೋಡಿದೊಡನೆ ಅವನ ಮನಸ್ಸಿಗೆ ಸೀತೆಯ ಸ್ಮರಣವುಂಟಾಯಿತು.ಅವನಿಗೆ ಅಪಾರವಾದ ದುಃಖವೂ ಹುಟ್ಟಿತು. ಹೀಗೆ ಸೀತೆಯನ್ನು ಸ್ಮರಿಸಿ ದುಃಖಿಸುತ್ತ ರಾಮನು."ಆಹಾ! ಜನಕರಾಜನಿಗೆ ಪುತ್ರಿಯಾಗಿ, ಜಿಂಕೆಯ ಮರಿಯ ಕಣ್ಣುಗಳಂತೆ ವಿಶಾಲವಾದ ಕಣ್ಣುಳ್ಳವಳಾಗಿರುವ ಆ ನನ್ನ ಪ್ರಿಯಪತ್ನಿಯಾದ ಸೀತೆಯು, ನನ್ನ ನಿಮಿತ್ತವಾಗಿ, ಇದೋ ! ಇಲ್ಲಿ ಘೋರರಾಕ್ಷಸರಿಂದ ಪೀಡಿತಳಾಗಿ ದುಃಖದಿಂದ ತಪಿಸುವಳಲ್ಲವೆ?ಅನ್ನಪಾನಗಳೂ ಇಲ್ಲದೆ ಕೃಶಳಾಗಿ ಬರೀನೆಲದಮೇಲೆ ಮಲಗಿ ಕಷ್ಟಪಡುತ್ತಿರುವಳಲ್ಲಾ!" ಎಂದು ಕೊರಗುತಿದ್ದನು.ಆದರೆ ರಾಮನು ಕ್ಷತ್ರಿ

ಯಥರ್ಮವನ್ನು ಚೆನ್ನಾಗಿ ಬಲ್ಲವನಾದುದರಿಂದ, ಸೀತೆಯನ್ನು ಕುರಿತು ಹೀಗೆ ದುಃಖಿಸುತಿದ್ದರೂ, ತನ್ನ ರಣೋತ್ಸಾಹವನ್ನು ಬಿಡದೆ,ಮಿತಿಮೀರಿದ ಕೋ ಪಾವೇಶವನ್ನು ತೋರಿಸುತ್ತ,ತನ್ನ ಕಡೆಯ ವಾನರರನ್ನು ಕುರಿತು."ಎಲೆ ವೀ ರರೆ! ಇನ್ನು ತಡಮಾಡಬಾರದು! ಶೀಘ್ರದಲ್ಲಿಯೇ ಶತ್ರುವಧಕ್ಕೆ ಪ್ರಯ ತ್ನಿಸಿರಿ!" ಎಂದು ನಿಯಮಿಸಿದನು. ಯಾವಕಾರ್ಯವನ್ನಾದರೂ ಅತಿಸುಲಭ ವಾಗಿ ಲೀಲಾಮಾತ್ರದಿಂದಲೇ ನಿರ್ವಹಿಸಬಲ್ಲ ಮಹಾವೀರ್ಯವುಳ್ಳ ಆ ರಾ ಮನು, ಹೀಗೆ ಆಜ್ಞಾಪಿಸಿದೊಡನೆಯೇ ಅಲ್ಲಿದ್ದ ಸಮಸ್ತ ವಾನರಸೈನಿಕರೂ ಒಬ್ಬರಿಗೊಬ್ಬರು ಹಟದಿಂದ,ನಾನು ತಾನೆಂದು ಮುಂದೆ ನುಗ್ಗುತ್ತ, ಯು ದ್ಧಾರಂಭಸೂಚಕವಾದ ಸಿಂಹನಾದಗಳನ್ನು ಮಾಡಿದರು. ಆ ಸಮಸ್ತ ವಾನರರೂ ಒಬ್ಬರಿಗೊಬ್ಬರು "ಈ ಕ್ಷಣದಲ್ಲಿಯೇ ನಾವು ಈ ಲಂಕೆಯೆಲ್ಲವ ನ್ನೂ ಪರ್ವತಶಿಖರದಳಿಂದ ಬೀಸಿಬಡಿದಾಗಲಿ, ಮುಷ್ಟಿಗಳಿಂದ ಹೊಡೆದಾ ಗಲಿ ಪುಡಿಪುಡಿಯಾಗಿ ಮಾಡಿ ಧೂಳೆಬ್ಬಿಸಿಬಿಡಬೇಕು."ಎಂದುಹೇಳಿ ಮನಸ್ಸಿ ನಲ್ಲಿ ನಿರ್ಧರಿಸಿಕೊಂಡರು.ಅದರಂತೆಯೇ ಆ ಕಪಿವೀರರೆಲ್ಲರೂ,ಅಲ್ಲಲ್ಲಿ ಸಿಕ್ಕಿದ ದೊಡ್ಡದೊಡ್ಡ ಪರ್ವತಶಿಖರಗಳನ್ನೂ, ಪರ್ವತಖಂಡಗಳನ್ನೂ, ಬಗೆಬಗೆ ಯ ವೃಕ್ಷಸಮೂಹಗಳನ್ನೂ ಕೈಗೆತ್ತಿಕೊಂಡು, ಯುದ್ಧಸನ್ನದ್ಧರಾಗಿ ನಿಂ ತಿದ್ದರು. ರಾಕ್ಷಸೇಶ್ವರನಾದ ರಾವಣನು ಉಪ್ಪರಿಗೆಯಮೇಲೆ ನಿಂತು ನೋಡುತ್ತಿರುವಾಗಲೇ, ಈ ವಾನರಸೇನೆಗಳೆಲ್ಲವೂ ಬೇರೆಬೇರೆ ಭಾಗಗಳಾ ಗಿ ಹೊರಟು, ರಾಮನ ಮನಸ್ಸಿಗೆ ಸಂತೋಷವನ್ನು ಹುಟ್ಟಿಸುತ್ತ, ಆ ಲಂಕೆ ಯ ಗೋಡೆಯನ್ನೇರಿದುವು. ತಾಮ್ರದಂತೆ ಕೆಂಪಾದ ಮುಖವುಳ್ಳವರಾಗಿ ಯೂ, ಬಂಗಾರದಂತೆ ಮೈಬಣ್ಣವುಳ್ಳವರಾಗಿಯೂ ಇದ್ದ ಆ ವಾನರರೆಲ್ಲ ರೂ, ರಾಮನಿಗಾಗಿ ತಮ್ಮತಮ್ಮ ಪ್ರಾಣಗಳನ್ನೊಪ್ಪಿಸುವುದಕ್ಕೂ ಹಿಂಜ ರಿಯದೆ, ದೃಢನಿಶ್ಚಯವನ್ನು ಮಾಡಿಕೊಂಡು, ಸಾಲೆ, ತಾಳೆ, ಮೊದಲಾದ ದೊಡ್ಡದೊಡ್ಡಮರಗಳನ್ನೂ, ದೊಡ್ಡದೊಡ್ಡಶಿಲೆಗಳನ್ನೂ ಆಯುಧಗಳ ನ್ನಾಗಿ ಹಿಡಿದು, ಆ ಲಂಕೆಯ ಕೋಟೆಯನ್ನೇರಿದರು. ಆಗಲೇ ಕೆಲವು ವಾನ ರರು ತಾವುತಾವು ಕೈಯಲ್ಲಿ ಹಿಡಿದಿದ್ದ ಪರ್ವತಶಿಖರಗಳಿಂದಲೂ, ಮುಷ್ಟಿ ಗಳಿಂದಲೂ ಹೊಡೆದು, ಆ ಲಂಕೆಯ ಪ್ರಾಕಾರಶಿಖರಗಳನ್ನೂ, ಅದರ ಸು ತ್ತಲಿನ ಉದ್ಯಾನವನಗಳನ್ನೂ, ಪುರದ್ವಾರಗಳನ್ನೂ ಮುರಿದು ಕೆಡಹುತ್ತ,

ಮುಂದೆಮುಂದೆ ಸಾಗಿಬರುತಿದ್ದರು. ಅಲ್ಲಲ್ಲಿ ಕೆಲವು ವಾನರರು ಲಂಕಾಪಟ್ಟಣದಸುತ್ತಲೂ, ತಿಳಿನೀರಿನಿಂದ ತುಂಬಿ ಮನೋಹರಗಳಾಗಿದ್ದ ಕಂದಕಗಳಿಗೆ ಕಲ್ಲುಮಣ್ಣುಗಳನ್ನೂ, ಹುಲ್ಲುಕಡ್ಡಿಗಳನ್ನೂ ತಂದು ತುಂಬಿಬಿಟ್ಟರು. ಹೀಗೆ ಅಲ್ಲಲ್ಲಿ ವಾನರರು,ಸಾವಿರಸಾವಿರವಾಗಿಯೂ, ಕೋಟಿ ಕೋಟಿಗಳಾಗಿಯೂ ನೂರು ಕೋಟಿಗಳಾಗಿಯೂ ಗುಂಪುಗೂಡಿ,ಲಂಕೆಯ ಕೋಟೆಯನ್ನು ಲಗ್ಗೆ ಹತ್ತಿದರು. ಕೆಲವರು ಸುವರ್ಣಮಯಗಳಾದ ತೋರಣದಬಾಗಿಲುಗಳನ್ನು ಬಡಿದು ಕೆಡಹಿದರು. ಕೆಲವರು ಕೈಲಾಸಶಿಖರಗಳಂತೆ ಶೋಭಿಸುತಿದ್ದ ಗೋಪುರಗಳನ್ನು ಮುರಿದು ಹಾಕಿದರು. ಆಗ ಆ ವಾನರವೀರರಿಗಿದ್ದ ರಣೋತ್ಸಾಹವನ್ನು ಕೇಳಬೇಕೆ! ಒಮ್ಮೊಮ್ಮೆ ಮುಂದೆ ಹಾರುವರು! ಅಲ್ಲಿಂದ ಹಾಗೆಯೇ ಹಿಂಪಕ್ಕೆ ನೆಗೆಯುವರು! ಆಗಾಗ ಸಿಹ್ಮನಾದಗಳಿಂದ ಬೊಬ್ಬಿಡುವರು! ಹೀಗೆ ಆನೆಯ ಸಲಗಗಳಂತಿದ್ದ ಆ ಕಪಿವೀರರೆಲ್ಲರೂ ಲಂಕೆಯಮೇಲೆ ಹಾರಿ,ಅಲ್ಲಲ್ಲಿನ ಗೋಪುರಗಳ ತುದಿಯಲ್ಲಿ ಕುಳಿತು “ಅತಿಬಲಾಢ್ಯನಾದ ರಾಮನಿಗೆ ಜಯವು! ಮಹಾಬಲನಾದ ಲಕ್ಷ್ಮಣನಿಗೆ ಜಯವು! ರಾಮನಿಂದ ರಕ್ಷಿತನಾದ ನಮ್ಮ ರಾಜನಾದ ಸುಗ್ರೀವನಿಗೆ ಜಯವು.” ಎಂದು ದೊಡ್ಡಧ್ವನಿಯಿಂದ ಘೋಷಿಸಿ ಸಿಹ್ಮನಾದವನ್ನು ಮಾಡುತಿದ್ದರು. ಕಾಮರೂಪಿಗಳಾದ ಆವಾನರರೆಲ್ಲರೂ, ಒಬ್ಬೊಬ್ಬರಾಗಿ ಲಂಕೆಯ ಪ್ರಾಕಾರದ ಮೇಲೆ ಹಾರಿಬಿಟ್ಟರು. ಇಷ್ಟರಲ್ಲಿಯೇ ವೀರಬಾಹುವೆಂದೂ, ಸುಬಾಹುವೆಂದೂ,ನಳನೆಂದೂ ಪ್ರಸಿದ್ಧರಾದಮೂವರು ವಾನರಯೂಥಪತಿಗಳು,ಆಪ್ರಾಕಾರದಮೇಲೆ ಹಾರಿನಿಂತು, ಲಂಕೆಯೊಳಗೆ ತಮ್ಮಸೈನ್ಯಗಳನ್ನು ನಿಲ್ಲಿಸುವುದಕ್ಕೆ ತಕ್ಕಂತೆ ಅನುಕೂಲವಾದ ಸ್ಥಳವನ್ನು ನೋಡಿ, ಆ ಸೇನೆಯನ್ನು ಆಯಾವ್ಯೂಹಗಳನ್ನಾಗಿ ನಿಲ್ಲಿಸಿದರು. ಬಲಾಢ್ಯನಾದ ಕುಮುದನು ಜಯಶೀಲರಾದ ಹತ್ತುಕೋಟಿವಾನರರಿಂದ ಪರಿವೃತನಾಗಿ, ಈಶಾನ್ಯದ ಮೂಲೆಯಲ್ಲಿದ್ದು ಪೂರ್ವದ್ವಾರವನ್ನಾಕ್ರಮಿಸಿ ನಿಂತನು. ಪ್ರಘಸನೂ,ಮಹಾಬಾಹುವಾದ ಪನಸನೂ, ಅನೇಕವಾನರರೊಡಗೂಡಿ ಕುಮುದನ ಸಹಾಯಕ್ಕಾಗಿ ಆ ಪೂರ್ವದ್ವಾರದಲ್ಲಿಯೇ ನಿಂತರು. ವೀರನಾಗಿಯೂ, ಬಲಾಢ್ಯನಾಗಿಯೂ ಇದ್ದ ಶತಬಲಿಯು,ಇಪ್ಪತ್ತುಕೋಟಿ ವಾನರರೊಡಗೂಡಿ ಆಗ್ನೇಯದಮೂಲೆಯಲ್ಲಿ ನಿಂತು ದಕ್ಷಿಣದ ಬಾಗಿಲನ್ನಾಕ್ರಮಿಸಿದನು. ಬಲಾಢ್ಯನಾ

ದ, ತಾರೆಯ ತಂದೆಯಾದ ಸುಷೇಣನು, ಅರುವತ್ತುಕೋಟಿ ವಾನರರೊಡ
ಗೂಡಿ, ನೈರುತ್ಯದ ಮೂಲೆಯಲ್ಲಿದ್ದು, ಪಶ್ಚಿಮದಬಾಗಿಲನ್ನಾಕ್ರಮಿಸಿ ನಿಂತ
ನು. ವೀರಾಗ್ರೇಸರನಾದ ರಾಮನು ಲಕ್ಷ್ಮಣಸಹಿತನಾಗಿ ಉತ್ತರದಬಾಗಿ
ಲನ್ನಾಕ್ರಮಿಸಿನಿಂತನು. ವಾನರರಾಜನಾದ ಸುಗ್ರೀವನೂಕೂಡ[1]ವಾಯವ್ಯ
ದಮೂಲೆಯಲ್ಲಿದ್ದು ರಾಮನಿಗೆ ಸಹಾಯಕನಾಗಿ ಆಉತ್ತರದ್ವಾರವನ್ನೇ ಆಕ್ರ
ಮಿಸಿನಿಂತನು. ನೋಡಿದಮಾತ್ರದಲ್ಲಿಯೇ ಭಯವನ್ನು ಹುಟ್ಟಿಸುವಂತೆ, ಮ
ಹಾಕಾಯವುಳ್ಳವನಾಗಿಯೂ, ಮಹಾವೀರ್ಯಶಾಲಿಯಾಗಿಯೂ, ಇದ್ದ ಗವಾ
ಕ್ಷನೆಂಬ ಗೋಲಾಂಗೂಲಯೂಥಪತಿಯು, ಕೋಟಿಗೋಲಾಂಗೂಲ (ಸಿಂ
ಗಳೀಕ)ಗಳಿಂದ ಪರಿವೃತನಾಗಿ, ರಾಮನ ಪಾರ್ಶ್ವಭಾಗದಲ್ಲಿ ನಿಂತನು.ಧೂ
ಮ್ರನೆಂಬ ಭಲ್ಲೂಕವೀರನು, ಕೋಟಿಭಲ್ಲೂಕಗಳೊಡಗೂಡಿ ರಾಮನ ಮ
ತ್ತೊಂದು ಪಾರ್ಶ್ವದಲ್ಲಿನಿಂತನು. ಬಲಾಢ್ಯನಾದ ವಿಭೀಷಣನು ಯುದ್ಧಕವ
ಚವನ್ನು ತೊಟ್ಟು, ಗದೆಯನ್ನು ಕೈಯಲ್ಲಿ ಹಿಡಿದು, ತನ್ನಮಂತ್ರಿಗಳೊಡನೆ
ತಾನೂ ಯುದ್ಧಸನ್ನದ್ಧನಾಗಿ, ಆ ರಾಮನ ಸಮೀಪದಲ್ಲಿಯೇ ಇದ್ದನು. ಗ
ಜನೂ, ಗವಾಕ್ಷನೂ, ಗವಯನೂ,ಶರಭನೂ, ಗಂಧಮಾದನನೂ ಈ ಐದು
ಮಂದಿ ಕಪಿಯೂಥಪತಿಗಳೂ, ಅಲ್ಲಲ್ಲಿ ಸೈನ್ಯದ ನಾಲ್ಕುಕಡೆಗಳನ್ನೂ ಸು
ತ್ತಿ ತಿರುಗುತ್ತ ಆ ಸೇನೆಯನ್ನು ರಕ್ಷಿಸುತಿದ್ದರು. ಅತ್ತಲಾಗಿ ರಾಕ್ಷಸರಾಜ
ನಾದ ರಾವಣನು, ಈ ವಾನರಸೇನೆಗಳ ಸನ್ನಿವೇಶಕ್ರಮಗಳೆಲ್ಲವನ್ನೂ
ಉಪ್ಪರಿಗೆಯಲ್ಲಿಯೇ ನಿಂತುನೋಡಿ, ಮೇಲೆಮೇಲೆ ಕೋಪವುಂಡುಕ್ಕುತ್ತ,
ತನ್ನ ಸಮಸ್ತಸೈನ್ಯಗಳನ್ನೂ ಶೀಘ್ರದಲ್ಲಿಯೇ ಯುದ್ಧಕ್ಕೆ ಹೊರಟು ಬ
ರುವಂತೆ ಆಜ್ಞಾಪಿಸಿದನು. ರಾವಣನ ಮುಖದಿಂದ ಈ ಕ್ರೂರಶಾಸನವು
ಹೊರಟುದನ್ನು ಕೇಳಿದೊಡನೆಯೇ, ರಾಕ್ಷಸಸೈನಿಕರೆಲ್ಲರೂ ಮಹಾಭಯಂಕ

---

1 ಇದಕ್ಕೆ ಮೊದಲು ಹಿಂದೆ ಸುಗ್ರೀವನು, ಉತ್ತರದ ಬಾಗಿಲಲ್ಲಿದ್ದ ರಾಮನಿ
ಗೂ, ಪಶ್ಚಿಮದ್ವಾರದಲ್ಲಿದ್ದ ಹನುಮಂತನಿಗೂ ನಡುವೆ, ವಾಯವ್ಯದ ಮೂಲೆಯಲ್ಲಿ
ನಿಂತನೆಂದಾಗಿ ಕಾಣಿಸಿದೆ. ಇಲ್ಲಿ ಉತ್ತರದಬಾಗಿಲನ್ನುಮಾತ್ರ ಪಾಲಿಸಿದಂತೆ ಹೇಳಲ್ಪಟ್ಟಿದೆ.
ಇದಕ್ಕಾಗಿ ಇಲ್ಲಿ ಸುಗ್ರೀವನು ವಾಯವ್ಯಕೋಣದಲ್ಲಿಯೇ ನಿಂತು ಉತ್ತರದ್ವಾರವನ್ನು
ಕಾಯುತಿದ್ದನೆಂದು ಗ್ರಹಿಸಬೇಕು. ಇದರಿಂದ ಇತರಯೂಥಪತಿಗಳೂ ಹೀಗೆಯೇ
ಆಯಾಕೋಣಗಳಲ್ಲಿ ನಿಂತು, ಆಯಾದ್ವಾರಗಳನ್ನು ರಕ್ಷಿಸುತಿದ್ದಂತೆ ಊಹಿಸಬೇಕು.

ರಗಳಾದ ಸಿಹ್ಮನಾದಧ್ವನಿಗಳಿಂದ ಗರ್ಜಿಸಿ, ತಮ್ಮ ರಣೋತ್ಸಾಹಗಳನ್ನು ತೋರಿಸಿದರು. ಆಗಲೇ ಅಲ್ಲಿನ ರಾಕ್ಷಸರೆಲ್ಲರೂ ಯುದ್ಧಸನ್ನದ್ಧರಾಗಿ, ಚಂದ್ರಬಿಂಬದಂತೆ ಶುಭ್ರವಾದ ಮುಖವುಳ್ಳ ರಣಭೇರಿಗಳನ್ನು ನುಡಿಸಲು, ಆ ಧ್ವನಿಯುಅತಿಭಯಂಕರವಾಗಿ ಪಟ್ಟಣವೆಲ್ಲವನ್ನೂ ವ್ಯಾಪಿಸಿತು.ಭಯಂಕರಾಕಾರವುಳ್ಳಬೇರೆಕೆಲವು ರಾಕ್ಷಸರು ಅಲ್ಲಲ್ಲಿ ಲಕ್ಷಲಕ್ಷವಾಗಿ ಸೇರಿ,ಯುದ್ಧಸೂಚಕಗಳಾದಶಂಖಗಳನ್ನೂದುತಿದ್ದರು. ಚಿತ್ರವಿಚಿತ್ರಗಳಾದ ಆಭರಣಕಾಂತಿಗಳಿಂದ ಕೂಡಿ ಹೊಳೆಯುವ ಕಪ್ಪಾದಮೈಬಣ್ಣವುಳ್ಳಈರಾಕ್ಷಸರು ಬಿಳೀ ಶಂಖಗಳನ್ನು ಕೈಯಲ್ಲಿ ಹಿಡಿದುನಿಂತಾಗ,ಆಕಾಶದಲ್ಲಿ ಮಿಂಚಿನಿಂದಲೂ, ಬೆಳ್ಳಕ್ಕಿಗಳಿಂದಲೂ ಆವೃತವಾದ ಕಾಳಮೇಘದಂತೆ ಕಾಣುತಿದ್ದರು. ಹೀಗೆ ರಾವಣನಿಂದ ಪ್ರೇರಿತರಾದ ಸಮಸ್ತರಾಕ್ಷಸಸೈನಿಕರೂ, ಪ್ರಳಯಕಾಲದಲ್ಲಿ ಉಕ್ಕಿಬರುತ್ತಿರುವ ಮಹಾಸಮುದ್ರದಂತೆ ಮಹೋತ್ಸಾಹದಿಂದ ಯುದ್ಧಕ್ಕೆ ಹೊರಟುಬಿಟ್ಟರು. ಇತ್ತಲಾಗಿ ವಾನರಸೈನಿಕರೂ ಆ ತ್ರಿಕೂಟಪರ್ವತದ ಗುಹೆಗಳು, ತಪ್ಪಲುಗಳು, ಮುಂತಾದುವೆಲ್ಲವನ್ನೂ ವ್ಯಾಪಿಸುವಂತೆ, ಸುತ್ತಲೂ ಭಯಂಕರವಾದ ಸಿಂಹನಾದವನ್ನು ಮಾಡುತಿದ್ದರು. ಆತ್ತಲಾಗಿ ರಾಕ್ಷಸರು ಮಾಡುವ ಸಿಂಹನಾದಗಳು ಇದಕ್ಕಿಂತಲೂ ಮೇಲೆ ಶಂಖದುಂದುಭಿ ಧ್ವನಿಗಳೊಡನೆಯೂ, ಆನೆಗಳ ಘೀಂಕಾರಧ್ವನಿಗಳೊಡನೆಯೂ, ಕುದುರೆಗಳ ಹೇಷಾಧ್ವನಿಗಳೊಡನೆಯೂ, ರಥನೇಮಿಧ್ವನಿಗಳೊಡನೆಯೂ, ಇತರರಾಕ್ಷಸರ ಕೂಗಿನೊಡನೆಯೂ ಸೇರಿ, ಭೂಮ್ಯಾಕಾಶಗಳಲ್ಲಿಯೂ, ಸಮುದ್ರದಲ್ಲಿಯೂ, ಪ್ರತಿಧ್ವನಿಯನ್ನುಂಟುಮಾಡುವಂತೆ ಮಹಾಭರ್ಜನದಿಂದ ಮೊಳಗಿತು. ಇಷ್ಟರಲ್ಲಿಯೇ ವಾನರರಾಕ್ಷಸಸೈನ್ಯಗಳೆರಡೂ ಮುಂದೆಮುಂದೆ ಸಾಗಿ ಒಂದಾಗಿ ಸೇರಿತು. ಪೂರ್ವದಲ್ಲಿ ದೇವಾಸುರರಿಗೆ ನಡೆದ ಮಹಾಯುದ್ಧದಂತೆ ಆ ಎರಡು ಸೈನ್ಯಗಳಿಗೂ ಭಯಂಕರವಾದ ಯುದ್ಧವೂ ಆರಂಭಿಸಿತು. ಭಯಂಕರರಾದ ಆ ರಾಕ್ಷಸರೆಲ್ಲರೂ, ತಮ್ಮ ಬಲಪರಾಕ್ರಮಗಳನ್ನುಗ್ಗಡಿಸುತ್ತ, ಜ್ವಲಿಸುವಂತೆ ಥಳಥಳಿಸುವ ಗದೆಗಳನ್ನೂ, ಶಕ್ತಿಗಳನ್ನೂ, ಶೂಲಗಳನ್ನೂ, ಗಂಡುಗೊಡಲಿಗಳನ್ನೂ ಹಿಡಿದು, ವಾನರರನ್ನು ಪ್ರಹರಿಸುವುದಕ್ಕೆ ತೊಡಗಿದರು. ಹಾಗೆಯೇ ಮಹಾವೀರ್ಯವುಳ್ಳ ವಾನರರೂಕೂಡ, ಕಲ್ಲುಮರಗಳನ್ನು ಕೈಯಿಂದೆತ್ತಿಕೊಂಡು "ಅತಿಬಲನಾದ

ರಾಮನಿಗೆ ಜಯವು! ಮಹಾಬಲನಾದ ಲಕ್ಷ್ಮಣನಿಗೆ ಜಯವು. ರಾಮನಿಂದ ರಕ್ಷಿತನಾದ ನಮ್ಮ ರಾಜನಾದ ಸುಗ್ರೀವನಿಗೆ ಜಯವು" ಎಂದು ತಮ್ಮ ಪ್ರಭುಗಳ ಪರಾಕ್ರಮವನ್ನೇ ಉದ್ಘೋಷಿಸುತ್ತ ಮುಂದೆ ಬಂದು, ರಾಕ್ಷಸರನ್ನು ಬಡಿಯುತಿದ್ದರು. ಇತ್ತಲಾಗಿ ವಾನರಸೈನ್ಯದಲ್ಲಿ ಒಬ್ಬೊಬ್ಬ ವಾನರನೂ, ತಮ್ಮ ರಾಜನಿಗೆ ಜಯಶಬ್ದವನ್ನು ಹೇಳುತ್ತ ತಮ್ಮತಮ್ಮ ಹೆಸರುಗಳನ್ನೂ, ವೃತ್ತಾಂತಗಳನ್ನೂ ಉದ್ಘೋಷಿಸುತ್ತ, ಮುಂದೆಸಾಗಿ, ಗಿಡಗಳಿಂದಲೂ, ಪರ್ವತಶಿಖರಗಳಿಂದಲೂ, ಅಲ್ಲಲ್ಲಿ ಸಿಕ್ಕಿದ ರಾಕ್ಷಸರನ್ನು ಬಡಿದುಕೊಲ್ಲುತಿದ್ದರು. ಅಲ್ಲಲ್ಲಿ ಸಿಕ್ಕಿದವರನ್ನು ಹಲ್ಲುಗಳಿಂದ ಕಡಿದು, ಉಗುರುಗಳಿಂದ ಸೀಳುತಿದ್ದರು. ಭಯಂಕರರಾದ ಕೆಲವುರಾಕ್ಷಸರು, ಲಂಕೆಯ ಪ್ರಾಕಾರದಮೇಲೆ ನಿಂತು, ಕೆಳಗಿದ್ದ ವಾನರರಮೇಲೆ ಭಿಂಡಿವಾಳಗಳನ್ನೂ, ಕತ್ತಿಗಳನ್ನೂ, ಶೂಲಗಳನ್ನೂ ಪ್ರಯೋಗಿಸಿ, ಅವರನ್ನು ಭೇದಿಸಿಕೊಲ್ಲುತಿದ್ದರು. ಕೆಳಗಿದ್ದ ವಾನರರಲ್ಲಿಯೋ, ಮಹಾವೇಗಶಾಲಿಗಳಾದ ಕೆಲವರು, ಕೆಳಗಿನಿಂದ ಒಂದೇನೆಗೆತಕ್ಕೆ ಆಪ್ರಾಕಾರದಮೇಲೆ ಹಾರಿ ಅಲ್ಲಿದ್ದ ರಾಕ್ಷಸರನ್ನು ಕೆಳಕ್ಕೆನೂಕಿದರು. ಆಗ ರಾಕ್ಷಸರಿಗೂ, ವಾನರರಿಗೂ ನಡೆದ ದೊಡ್ಡತುಮುಲಯುದ್ಧವು ಕೇವಲರಕ್ತಮಾಂಸಮಯವಾಗಿ, ಮಹಾದ್ಭುತವಾಗಿ ಕಾಣಿಸಿತು. ಇಲ್ಲಿಗೆ ನಾಲ್ವತ್ತೆರಡನೆಯ ಸರ್ಗವು.

---

## ವಾನರರಾಕ್ಷಸರ ದ್ವಂದ್ವಯುದ್ಧವು.

ಹೀಗೆ ಮಹಾಧೀರರಾದ ಆ ವಾನರರೆಲ್ಲರೂ ಇದಿರಿಲ್ಲದಂತೆ ಯುದ್ಧಮಾಡುತ್ತಿರಲು, ಇದನ್ನು ನೋಡಿ ರಾಕ್ಷಸ ಸೈನಿಕರು ಸಹಿಸಲಾರದೆ, ಭಯಂಕರವಾದ ಕೋಪಾವೇಶವನ್ನು ಹೊಂದಿದರು. ಭಯಂಕರಕರ್ಮಿಗಳಾದ ಆ ರಾಕ್ಷಸಯೋಧರೆಲ್ಲರೂ, ತಮ್ಮ ಪ್ರಭುವಾದ ರಾವಣನಿಗೆ ಹೇಗಾದರೂ ಜಯವನ್ನುಂಟುಮಾಡಬೇಕೆಂಬ ದೃಢಸಂಕಲ್ಪವುಳ್ಳವರಾಗಿ, ಚಿನ್ನದ ಕೇಸರಗಳುಳ್ಳ ಕುದುರೆಗಳೊಡನೆಯೂ, ಅಗ್ನಿಜ್ವಾಲೆಗಳಂತೆ ಥಗಥಗಿಸುವ ಧ್ವಜಗಳೊಡನೆಯೂ, ಸೂರ್ಯಬಿಂಬಗಳಂತೆ ಹೊಳೆಯುವ ರಥಗಳೊಡನೆಯೂ, ಅಂದವಾದ ಕವಚಗಳೊಡನೆಯೂ ಕೂಡಿ, ಹತ್ತುದಿಕ್ಕುಗಳಲ್ಲಿಯೂ

ಪ್ರತಿಧ್ವನಿಕೊಡುವಂತೆ ಸಿಂಹನಾದಗಳನ್ನು ಮಾಡುತ್ತ, ಯುದ್ಧಕ್ಕಾಗಿ ಮುಂದೆ ನುಗ್ಗಿದರು. ಮಹತ್ತಾದ ವಾನರಸೇನೆಯೂ ಕೂಡ ಜಯಾಕಾಂಕ್ಷೆಯಿಂದ, ಕಾಮರೂಪಿಗಳಾದ ಆ ರಾಕ್ಷಸರ ಸೇನೆಗಿದಿರಾಗಿ ನಡೆಯಿತು.ಹೀಗೆ ಇದಿರಿದಿರಾಗಿ ನುಗ್ಗಿಬರುತ್ತಿರುವ ವಾನರರಾಕ್ಷಸಸೇನೆಗಳೆರಡೂ, ಒಂದಾಗಿ ಕಲೆತು, ಎರಡಕ್ಕೂ, ತುಮುಲಯುದ್ಧವಾರಂಭವಾಯಿತು. ಮಹಾತೇಜಸ್ವಿಯಾದ ಇನ್ದ್ರಜಿತ್ತು, ವಾಲಿಪುತ್ರನಾದ ಅಂಗದನೊಡನೆ ಕೈಕಲೆತು ರುದ್ರನೊಡನೆ ಯಮನು ಹೋರಾಡುವಂತೆ ಯುದ್ಧಮಾಡುತಿದ್ದನು. ಯುದ್ಧದಲ್ಲಿ ಶತ್ರುಗಳಿಗೆ ಸಹಿಸಲಸಾಧ್ಯವಾದ ಪರಾಕ್ರಮವುಳ್ಳ, ವಿಭೀಷಣಸಚಿವನಾದ ಸಂಪಾತಿಯು, ಪ್ರಜಂಘನೆಂಬವನೊಡನೆ ಯುದ್ಧಕ್ಕೆ ನಿಂತನು. ವಾನರೋತ್ತಮನಾದ ಹನುಮಂತನು ಜಂಬುಮಾಲಿಯನ್ನಿದಿರಿಸಿ ನಿಂತನು. ರಾವಣನ ತಮ್ಮನಾದ ವಿಭೀಷಣನು ಅತ್ಯಂತಕೋಪಾವೇಶವನ್ನು ಹೊಂದಿ, ತೀವ್ರವೇಗವುಳ್ಳ ಮಿತ್ರಘ್ನನೆಂಬ ರಾಕ್ಷಸನೊಡನೆ ಯುದ್ಧವನ್ನಾರಂಭಿಸಿದನು. ಬಲಾಢ್ಯನಾದ ಗಜನು ತಪನನೆಂಬ ರಾಕ್ಷಸನೊಡನೆ ಯುದ್ಧಕ್ಕೆ ನಿಂತನು ಮಹಾತೇಜಸ್ವಿಯಾದನೀಲನು, ನಿಕುಂಭನೊಡನೆ ಯುದ್ಧಮಾಡಿದನು. ಕಪಿರಾಜನಾದ ಸುಗ್ರೀವನು ಪ್ರಘಸನನ್ನಿದಿರಿಸಿ ನಿಂತನು. ಶ್ರೀಮಂತನಾದ ಲಕ್ಷ್ಮಣನು ವಿರೂಪಾಕ್ಷನೊಡನೆ ಕೈಕಲೆತನು. ಅಗ್ನಿಕೇತು,ರಶ್ಮಿಕೇತು, ಸುಪ್ತಘ್ನ, ಯಜ್ಞಕೋಪರೆಂಬ ನಾಲ್ವರು ರಾಕ್ಷಸರೊಡನೆಯೂ,ಶ್ರೀರಾಮನು ತಾನಾಗಿಯೇ ಯುದ್ಧಕ್ಕೆ ನಿಂತನು. ವಜ್ರಮುಷ್ಟಿಯೆಂಬ ರಾಕ್ಷಸನು ಮೈಂದನೊಡನೆಯೂ, ಅಶನಿಪ್ರಭನೆಂಬವನು ದ್ವಿವಿದನೊಡನೆಯೂ ಸೇರಿ, ಭಯಂಕರ ಯುದ್ಧವನ್ನಾರಂಭಿಸಿದರು. ವೀರನಾಗಿಯೂ, ಶತ್ರುಭಯಂಕರನಾಗಿಯೂ, ಯುದ್ಧದಲ್ಲಿ ದುರ್ಜಯನಾಗಿಯೂ ಇದ್ದ ಪ್ರತಪನನೆಂಬ ರಾಕ್ಷಸನು, ತೀಕ್ಷ್ಣವೇಗವುಳ್ಳ ನಲನೊಡನೆ ಯುದ್ಧಕ್ಕೆ ಬಂದನು. ಧರ್ಮಪುತ್ರನಾದ ಬಲಾಢ್ಯನಾದ ಸುಷೇಣನು, ವಿದ್ಯುನ್ಮಾಲಿಯೊಡನೆ ಯುದ್ಧಕ್ಕೆ ನಿಂತನು. ಹಾಗೆಯೇ ಇನ್ನೂ ಅನೇಕವಾನರರು, ತಮತಮಗೆ ಸಮಾನಬಲವುಳ್ಳ ಬೇರೆಬೇರೆ ರಾಕ್ಷಸರೊಡನೆ, ನಾನಾವಿಧವಾಗಿ ದ್ವಂದ್ವಯುದ್ಧವನ್ನು ಮಾಡಿದರು. ಹೀಗೆ ಪರಸ್ಪರಜಯಾಕಾಂಕ್ಷಿಗಳಾಗಿ ಹೋರಾಡುತ್ತಿರುವ ಆ ವಾನರರಿಗೂ, ರಾಕ್ಷಸರಿಗೂ ನಡೆದ ದೊಡ್ಡದ್ವಂ

ನ್ವಯುದ್ಧವು, ನೋಡುವವರಿಗೆ ಮೈಯಲ್ಲಿ ರೋಮಾಂಚವನ್ನು ಹುಟ್ಟಿಸು ವಂತೆ ಅತಿಭಯಂಕರವಾಯಿತು. ಆ ಯುದ್ಧದಲ್ಲಿ, ವಾನರರಾಕ್ಷಸರ ದೇಹ ಗಳಿಂದ ಹೊರಟ ರಕ್ತಪ್ರವಾಹಗಳು, ಕೂದಲುಗಳೆಂಬ ಗರಿಕೆಗಳನ್ನೂ, ದೇಹಾವಯವಗಳೆಂಬ ಕಾಷ್ಠಸಂಚಯಗಳನ್ನೂ ಕೊಚ್ಚಿಸಿಕೊಂಡು ಬ ರುವ ದೊಡ್ಡನದಿಗಳಂತೆ ಕಾಣುತಿದ್ದುವು. ಇಷ್ಟರಲ್ಲಿ ಇನ್ದ್ರಜಿತ್ತು ಬಹಳ ಕುಪಿತನಾಗಿ, ದೇವೇನ್ದ್ರನು ವಜ್ರವನ್ನು ಹಿಡಿದಂತೆ, ಭಯಂಕರವಾದ ಗದೆಯನ್ನು ಕೈಗೆತ್ತಿಕೊಂಡು, ಅಲ್ಲಲ್ಲಿ ರಾಕ್ಷಸ ಸೈನ್ಯವನ್ನು ಧ್ವಂಸಮಾಡು ತಿದ್ದ ಅಂಗದನಮೇಲೆ ಆ ಗದೆಯನ್ನು ಬೀಸಿದನು. ಮಹಾವೇಗಶಾಲಿಯಾ ದ ಅಂಗದನಾದರೋ, ಇನ್ದ್ರಜಿತ್ತಿನ ಕಾರ್ಯವನ್ನು ನೋಡಿ ಕೋಪಗೊಂ ಡು, ಚಿನ್ನದ ಕುಸುರಿಗಳಿಂದ ಚಿತ್ರಿತವಾದ ಆ ಇನ್ದ್ರಜಿತ್ತಿನ ರಥವನ್ನು ಅದರ ಸಾರಥಿಗಳೊಡನೆಯೂ, ಕುದುರೆಗಳೊಡನೆಯೂ, ಪುಡಿಪುಡಿಯಾಗಿ ಮಾಡಿಬಿಟ್ಟನು. ಪ್ರಜಂಘನೆಂಬ ರಾಕ್ಷಸನು, ಸಂಪಾತಿಯನ್ನು, ಮೂರುಬಾ ಣಗಳಿಂದ ಹೊಡೆಯಲು ಆ ಸಂಪಾತಿಯು ಬಂದು ಬೊಡ್ಡ ಅಶ್ವಕ ರ್ಣವೃಕ್ಷವನ್ನು ಬೀಸಿ ಆ ಪ್ರಜಂಘನನ್ನು ಕೊಂದುಹಾಕಿದನು. ಅತ್ತ ಲಾಗಿ ರಥಸ್ಥನಾದ ಜಂಬುಮಾಲಿಯೆಂಬವನು ತನ್ನ ರಥದಲ್ಲಿ ಯಾವಾ ಗಲೂ ಸ್ಥಿರವಾಗಿಟ್ಟಿದ್ದ ಒಂದು ಶಕ್ತ್ಯಾಯುಧವನ್ನು ತೆಗೆದು, ಅ ದನ್ನು ಹನುಮಂತನ ಎದೆಗೆ ಗುರಿಯಿಟ್ಟುಹೊಡೆದನು. ಇಷ್ಟರಲ್ಲಿಯೇ ಹನುಮಂತನು ಅವನ ರಥದಮೇಲೆ ಹಾರಿ, ತನ್ನ ಅಂಗೈಯಿಂದ ಆ ರಥವನ್ನಪ್ಪಳಿಸಿ ಆ ರಾಕ್ಷಸನ ದೇಹದೊಡನೆ ಆ ರಥವನ್ನುರು ಳಿಸಿಬಿಟ್ಟನು. ಅತ್ತಲಾಗಿ ಪ್ರತಪನನೆಂಬ ಘೋರರಾಕ್ಷಸನು, ಭಯಂಕರವಾ ದ ಗರ್ಜನೆಗಳೊಡನೆ ನಳನಮೇಲೆ ಸುಗ್ಗಿ, ತೀಕ್ಷ್ಣ ಬಾಣಗಳಿಂದ ಅವನನ್ನು ಹೊಡೆಯಲು, ಕ್ಷಣಮಾತ್ರದಲ್ಲಿಯೇ ನಳನು ಆ ರಾಕ್ಷಸನ ಮೋರೆಯಮೇಲೆ ಹೊಡೆದು, ಅವನ ಕಣ್ಣುಗುಡ್ಡೆಗಳೆರಡನ್ನೂ ಉದುರಿಸಿಬಿಟ್ಟನು. ಅತ್ತಲಾಗಿ ವಾನರೇಶ್ವರನಾದ ಸುಗ್ರೀವನು, ತನ್ನ ಕಡೆಯ ಸೈನ್ಯಗಳೆಲ್ಲವನ್ನೂ ಒಂದೇ ತುತ್ತಾಗಿ ನುಂಗಿಬಿಡುವಂತೆ ದೊಡ್ಡದಾಗಿ ಬಾಯನ್ನು ತೆರೆದುಕೊಂಡು ತನ ಗಿದಿರಾಗಿಬರುತಿದ್ದ ಪ್ರಘಸನನ್ನು ನೋಡಿ ಕೋಪಗೊಂಡು, ತಾನು ಹಿಡಿದಿ ದ್ದ ಒಂದು ಸಪ್ತಪರ್ಣವೃಕ್ಷದಿಂದ ಆ ರಾಕ್ಷಸನನ್ನು ಬಡಿದುಕೊಂದನು.

ಮತ್ತೊಂದು ಕಡೆಯಲ್ಲಿ ಅಗ್ನಿಕೇತು, ರಶ್ಮಿಕೇತು, ಸುಪ್ತಘ್ನ, ಯಜ್ಞಕೋಪರೆಂಬ ನಾಲ್ವರು ರಾಕ್ಷಸರೂ ಒಂದಾಗಿ ಸೇರಿ, ರಾಮನಮೇಲೆ ಎಡೆಬಿಡದೆ ಬಾಣವರ್ಷವನ್ನು ಸುರಿಸುತ್ತಿರಲು, ರಾಮನು ಕೋಪಗೊಂಡವನಾಗಿ, ಅಗ್ನಿಜ್ವಾಲೆಗಳಂತಿದ್ದ ನಾಲ್ಕು ತೀಕ್ಷ್ಣಬಾಣಗಳಿಂದ, ಆ ನಾಲ್ವರುರಾಕ್ಷಸರ ತಲೆಗಳನ್ನೂ ಕಡಿದು ಹಾಕಿದನು. ಮೈಂದನು ತನ್ನ ಮುಷ್ಟಿಯಿಂದಲೇ ವಜ್ರಮುಷ್ಟಿಯೆಂಬ ರಾಕ್ಷಸನನ್ನು ಹೊಡೆದುಕೊಂದು,ಅವನ ರಥವನ್ನೂ ಮುರಿದು, ಅವನ ರಥಾಶ್ವಗಳನ್ನೂ ಧ್ವಂಸಮಾಡಿದನು. ಹೀಗೆ ಮೈಂದನ ಮುಷ್ಟಿಪ್ರಹಾರದಿಂದ ಹತನಾದ ವಜ್ರಮುಷ್ಟಿಯು, ಪುರಪ್ರಾಕಾರದ ಅಟ್ಟಲೆಯು ಮುರಿದುಬಿದ್ದಂತೆ, ತನ್ನ ರಥದೊಡನೆಯೂ,ರಥಾಶ್ವಗಳೊಡನೆಯೂ ನೆಲಕ್ಕುರುಳಿದನು. ಸೂರ್ಯನು ತನ್ನ ಕಿರಣಗಳಿಂದ ಅಂಧಕಾರವನ್ನು ಭೇದಿಸುವಂತೆ, ನಿಕುಂಭನು, ಕಾಡಿಗೆಯ ರಾಶಿಯಂತೆ ಕಪ್ಪುಬಣ್ಣವುಳ್ಳ ನೀಲನನ್ನು ತನ್ನ ತೀಕ್ಷ್ಣಬಾಣಗಳಿಂದ ಪ್ರಹರಿಸಿದನು. ಮತ್ತು ಆ ನಿಕುಂಭನು ಬಹಳ ಹಸ್ತಲಾಘವವುಳ್ಳವನಾದುದರಿಂದ,ಇನ್ನೂ ಎಡೆಬಿಡದೆ ಮೇಲೆ ಮೇಲೆ ನೂರುಬಾಣಗಳಿಂದ ಆ ನೀಲನ ದೇಹವನ್ನು ಮುಚ್ಚಿ ಗಟ್ಟಿಯಾಗಿ ಕೇಕೆಹಾಕಿ ನಕ್ಕನು. ಎಣೆಯಿಲ್ಲದ ಪರಾಕ್ರಮವುಳ್ಳ ನೀಲನಾದರೋ ಆ ರಾಕ್ಷಸನ ಬಾಣಪಙ್ತಿಯನ್ನೂ ಲಕ್ಷ್ಯಮಾಡದೆ, ಯುದ್ಧದಲ್ಲಿ ವಿಷ್ಣುದೇವನು ಹೇಗೋಹಾಗೆ, ಆ ನಿಕುಂಭನ ರಥಚಕ್ರವನ್ನೇ ಕೈಗೆ ತೆಗೆದುಕೊಂಡು, ಆ ಚಕ್ರದಿಂದಲೇ ನಿಕುಂಭನನ್ನೂ,ಅವನ ಸಾರಥಿಯನ್ನೂ ಬಡಿದು, ಅವರಿಬ್ಬರ ತಲೆಗಳನ್ನೂ ಏಕಕಾಲದಲ್ಲಿ ಕತ್ತರಿಸಿ ಕೆಡಹಿದನು. ವಜ್ರಾಯುಧಕ್ಕೂ ಸಿಡಿಲಿಗೂ ಸಾಟಿಯಾದ ದೇಹಸ್ಪರ್ಶವುಳ್ಳ ದ್ವಿವಿದನೆಂಬ ಯೂಥಪತಿಯು, ಯುದ್ಧದಲ್ಲಿ ರಾಕ್ಷಸರೆಲ್ಲರೂ ನೋಡುತ್ತಿರುವಾಗಲೇ, ಅಶನಿಪ್ರಭನೆಂಬ ರಾಕ್ಷಸಸೇನಾಪತಿಯಮೇಲೆ ಒಂದು ದೊಡ್ಡ ಪರ್ವತಶಿಖರವನ್ನು ತಂದು ಬೀಸಿಬಡಿದನು. ಹೀಗೆ ಪರ್ವತಶಿಖರಗಳಿಂದ ಯುದ್ಧಮಾಡುತ್ತಿರುವ ವಾನರವೀರನಾದ ದ್ವಿವಿದನನ್ನು ನೋಡಿ, ಅಶನಿಪ್ರಭನು ಅತ್ಯಾಕ್ರೋಶಗೊಂಡವನಾಗಿ, ಸಿಡಿಲಿಗೆ ಸಮಾನಗಳಾದ ತನ್ನ ತೀಕ್ಷ್ಣಬಾಣಗಳನ್ನು ಅವನಮೇಲೆ ಪ್ರಯೋಗಿಸಿದನು. ಆಗ ದ್ವಿವಿದನು, ತನ್ನ ದೇಹವೆಲ್ಲವೂ ರಾಕ್ಷಸರ ಬಾಣಗಳಿಂದ ಭಿನ್ನವಾದುದನ್ನು ನೋಡಿ,ಕೋಪಾವೇಶದಿಂ

ದ ಕೂಡಿದವನಾಗಿ, ಒಂದು ಸಾಲವೃಕ್ಷವನ್ನು ಕೈಗೆತ್ತಿಕೊಂಡು, ಅದರಿಂದ ಆ ರಾಕ್ಷಸನನ್ನೂ, ಅವನ ರಥವನ್ನೂ, ಅವನ ರಥಾಶ್ವಗಳನ್ನೂ ಬಡಿದು ಕೆಡಹಿದನು. ಅತ್ತಲಾಗಿ ವಿದ್ಯುನ್ಮಾಲಿಯು, ರಥದಲ್ಲಿ ಕುಳಿತಹಾಗೆಯೇ ಚಿನ್ನದ ಕಟ್ಟುಳ್ಳ ತನ್ನ ಬಾಣಗಳಿಂದ ಸುಷೇಣನನ್ನು ಪ್ರಹರಿಸಿ, ಬಾರಿಬಾರಿಗೂ ಸಿಂಹನಾದವನ್ನು ಮಾಡುತಿದ್ದನು. ವಾನರೋತ್ತಮನಾದ ಸುಷೇಣನಾದರೋ ಆ ವಿದ್ಯುನ್ಮಾಲಿಯು ರಥದಲ್ಲಿ ಕುಳಿತಿರುವುದನ್ನು ನೋಡಿ, ಒಂದು ದೊಡ್ಡ ಪರ್ವತಶಿಖರವನ್ನು ಆ ರಥದಮೇಲೆ ಬೀಸಿಬಡಿದು ಅದನ್ನು ಪುಡಿಮಾಡಿದನು. ಆ ವಿದ್ಯುನ್ಮಾಲಿಯೆಂಬ ರಾಕ್ಷಸನು ಬಹಳದೇಹಲಾಘವವುಳ್ಳವನಾದುದರಿಂದ, ತನ್ನ ರಥವು ಮುರಿದು ಬೀಳುವಷ್ಟರಲ್ಲಿಯೇ, ಗದೆಯನ್ನು ಕೈಗೆತ್ತಿಕೊಂಡು, ರಥದಿಂದ ಕೆಳಗೆ ಹಾರಿ ನೆಲದಮೇಲೆ ನಿಂತನು. ಇಷ್ಟರಲ್ಲಿ ವಾನರಾಗ್ರಣಿಯಾದ ಸುಷೇಣನು, ಕೋಪೋದ್ರಿಕ್ತನಾಗಿ, ಒಂದು ದೊಡ್ಡಶಿಲೆಯನ್ನೆತ್ತಿಕೊಂಡು, ಆ ವಿದ್ಯುನ್ಮಾಲಿಯನ್ನಿದಿರಿಸಿ ಮುಂದೆ ಹೋದನು. ಹೀಗೆ ಸುಷೇಣನು ದೊಡ್ಡಕಲ್ಲನ್ನೆತ್ತಿಕೊಂಡು ತನಗಿದಿರಾಗಿ ಬರುವುದನ್ನು ನೋಡಿ ವಿದ್ಯುನ್ಮಾಲಿಯು, ತಾನು ಕೈಯಲ್ಲಿ ಹಿಡಿದಿದ್ದ ಗದೆಯಿಂದ, ಆ ಸುಷೇಣನ ಎದೆಯಮೇಲೆ ಪ್ರಹರಿಸಿದನು. ಧೀರನಾದ ಸುಷೇಣನು ಭಯಂಕರವಾದ ಆ ಗದಾಪ್ರಹಾರವನ್ನೂ ಲಕ್ಷ್ಯಮಾಡದೆ, ಧೈರ್ಯದಿಂದ ಮುಂದೆ ನುಗ್ಗಿ, ತಾನು ಹೊತ್ತುತಂದ ಆ ದೊಡ್ಡಶಿಲೆಯನ್ನು ಆ ವಿದ್ಯುನ್ಮಾಲಿಯ ಎದೆಯಮೇಲೆ ಬೀಸಿಬಿಡಿದನು. ಆ ಶಿಲಾಪ್ರಹಾರವು ತಗುಲಿದೊಡನೆಯೇ ವಿದ್ಯುನ್ಮಾಲಿಯು ಎದೆಯೊಡೆದು ಸತ್ತುಬಿದ್ದನು. ಹೀಗೆ ಶೂರರಾದ ಅನೇಕವಾನರರು ಅಲ್ಲಲ್ಲಿ ಶೂರರಾದ ಅನೇಕರಾಕ್ಷಸರನ್ನಿದಿರಿಸಿ, ದೇವತೆಗಳು ದೈತ್ಯರನ್ನು ಹೇಗೋಹಾಗೆ ಕಂಡಕಂಡಕಡೆಯಲ್ಲಿ ಅವರನ್ನು ಕೊಲ್ಲುತ್ತಬಂದರು. ಆಗ ವಾನರರಾಕ್ಷಸರಿಬ್ಬರಿಗೂ ನಡೆದ ದ್ವಂದ್ವಯುದ್ಧವು ಅತ್ಯಂತಭಯಂಕರವಾಗಿ ಕಾಣಿಸಿತು. ಎಲ್ಲಿ ! ನೋಡಿದರೂ ಮುರಿದು ಬಿದ್ದ ಕತ್ತಿಗಳು! ಎಲ್ಲಿ ನೋಡಿದರೂ ಪುಡಿಪುಡಿಯಾದ ಗದೆಗಳು! ಎಲ್ಲಿ ನೋಡಿದರೂ ಕತ್ತರಿಸಿಬಿದ್ದ ಶಕ್ತಿತೋಮರಪಟ್ಟಸಾದ್ಯಾಯುಧಗಳು! ಎಲ್ಲಿ ನೋಡಿದರೂ ಕಳಚಿಬಿದ್ದ ರಥಗಳು! ಎಲ್ಲಿ ನೋಡಿದರೂ ಸತ್ತುಬಿದ್ದ ಯುದ್ಧದ ಕುದುರೆಗಳು! ಎಲ್ಲಿ ನೋಡಿದರೂ ತುಂಡುತುಂಡಾಗಿ ಬಿದ್ದ ಮದದಾನೆಗಳು!

ಎಲ್ಲಿ ನೋಡಿದರೂ ವಾನರರಾಕ್ಷಸರ ಮೃತದೇಹಗಳು! ಇದಲ್ಲದೆ ಅಲ್ಲಲ್ಲಿ ಕಳಚಿಬಿದ್ದ ರಥಚಕ್ರಗಳು! ಮುರಿದುಬಿದ್ದ ನೊಗಗಳು ! ಕತ್ತರಿಸಿದ ತೇರ ಜಪ್ಪುಗಳು ! ಹೀಗೆ ಆ ರಣರಂಗವೆಲ್ಲವೂ ಕೇವಲಮೃತದೇಹಗಳಿಂದಲೂ, ಮುರಿದುಬಿದ್ದ ಯುದ್ಧಸಾಮಗ್ರಿಗಳಿಂದಲೂ ದಟ್ಟವಾಗಿ ತುಂಬಿ ಭಯಂಕರವಾಗಿ ಕಾಣಿಸುತಿತ್ತು. ಆಗಲೇ ಅಲ್ಲಲ್ಲಿ ನರಿಗಳು ಬಂದು ಗುಂಪುಗೂಡುತಿದ್ದುವು. ದೇವಾಸುರಯುದ್ಧಕ್ಕೆ ಸಮಾನವಾದ ಆ ದೊಂಬಿಯುದ್ಧದಲ್ಲಿ, ಯುದ್ಧಭೂಮಿಯ ಯಾವಕಡೆಯನ್ನು ನೋಡಿದರೂ,ವಾನರ ರಾಕ್ಷಸರ ಮುಂಡಗಳೇ ಹಾರಾಡುತಿದ್ದುವು.ಕ್ರಮಕ್ರಮಳಾಗಿ ವಾನರರ ಕೈಮೇಲಾಗಿ, ರಾಕ್ಷಸರಲ್ಲಿ ಪ್ರಾಣಹಾನಿಯು ಹೆಚ್ಚುತ್ತ ಬಂದಿತು. ರಾಕ್ಷಸರೆಲ್ಲರೂ, ಅಲ್ಲಲ್ಲಿ ಕಪಿಗಳಿಂದ ಭೇದಿಸಲ್ಪಟ್ಟು,ರಕ್ತದಿಂದ ತೊಯ್ದಮೈಯುಳ್ಳವರಾಗಿ, ಮುಂದೆ ತಮಗೆ ವೀರ್ಯವರ್ಧಕವಾದ ಸೂರ್ಯಾಸ್ತಮಯವನ್ನೇ ಇದಿರುನೋಡುತ್ತ, ಪ್ರಯತ್ನದಿಂದ ಹಾಗೆಯೇ ಯುದ್ಧವನ್ನು ನಡೆಸುತಿದ್ದರು. ಇಲ್ಲಿಗೆ ನಾಲ್ವತ್ತು ಮೂರನೆಯಸರ್ಗವು.

---

## ರಾತ್ರಿ ಯುದ್ಧವು.

ಹೀಗೆ ವಾನರರೂ ರಾಕ್ಷಸರೂ ಸೇರಿ, ಯುದ್ಧಮಾಡುತ್ತಿರುವಾಗಲೇ ಸೂರ್ಯನು ಅಸ್ತಮಿಸಿದನು. ವಾನರರಿಗೆ ಪ್ರಾಣಭಯವನ್ನುಂಟುಮಾಡತಕ್ಕ ರಾತ್ರಿಯು ಸಮೀಪಿಸಿತು. ಆಗ ಪರಸ್ಪರಬದ್ಧವೈರವುಳ್ಳವರಾಗಿಯೂ,ಭಯಂಕರಾಕಾರರಾಗಿಯೂ,ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಆತ್ಯಾತುರವುಳ್ಳವರಾಗಿಯೂ ಇದ್ದ ವಾನರರಿಗೂ,ರಾಕ್ಷಸರಿಗೂ ರಾತ್ರಿಯುದ್ಧವು ನಡೆಯಲಾರಂಭಿಸಿತು,ಭಯಂಕರವಾದಅಗಾಧಾಂಧಕಾರದಲ್ಲಿ ಕಣ್ಣುಕಾಣದುದರಿಂದ ಒಬ್ಬರನ್ನೊಬ್ಬರು ಚೆನ್ನಾಗಿ ಗುರುತಿಸಲಾರದೆ, ವಾನರರು ತಮ್ಮಕಡೆಯವಾನರರನ್ನೇರಾಕ್ಷಸರೆಂದು ತಿಳಿದು ಕೊಲ್ಲುತಿದ್ದರು.ರಾಕ್ಷಸರು ತಮ್ಮ ಕಡೆಯ ರಾಕ್ಷಸರನ್ನೇ ವೈರಿಗಳಾದ ವಾನರರೆಂದು ತಿಳಿದು ಕೊಲ್ಲುತಿದ್ದರು. ಹೀಗೆ ಆ ರಾತ್ರಿಯುದ್ಧದಲ್ಲಿ, ಕಣ್ಣುಕಾಣದೆ ಒಬ್ಬರಿಗೊಬ್ಬರು ಹೊಡೆದಾಡುತಿದ್ದುದರಿಂದ,ಅಗಾಧಾಂಧಕಾರದಲ್ಲಿ ರಣರಂಗದ ಯಾವ ಕಡೆ

ಯನ್ನು ನೋಡಿದರೂ, ‟ಕೊಲ್ಲಿರಿ ! ಸೀಳಿರಿ ! ಬಡಿಯಿರಿ ! ಇತ್ತಬನ್ನಿರಿ ! ಇದೇಕೆ ಓಡುವಿರಿ!"ಎಂಬ ಒಬ್ಬರಿಗೊಬ್ಬರು ಕೂಗಾಡುವ ದೊಡ್ಡಗದ್ದಲವೇ ಕೇಳಿಸುತಿತ್ತು. ಆ ಕಗ್ಗತ್ತಲೆಯಲ್ಲಿ ಬಂಗಾರದ ಕವಚಗಳನ್ನು ಧರಿಸಿದ ಕರೀಮೈಯುಳ್ಳ ಕೆಲವುರಾಕ್ಷಸರು, ಅಲ್ಲಲ್ಲಿ ಉರಿಯುತ್ತಿರುವ ಜ್ಯೋತಿರ್ಲತೆಯ ಕಾಡುಗಳಿಂದ ತುಂಬಿದ ದೊಡ್ಡದೊಡ್ಡಬೆಟ್ಟಗಳಂತೆ ಕಾಣುತಿದ್ದರು. ಮಿತಿಮೀರಿದ ಆ ಮಹಾಂಧಕಾರದಲ್ಲಿ, ರಾಕ್ಷಸರೆಲ್ಲರೂ ಕೋಪದಿಂದ ಮೈಮರೆತವರಾಗಿ,ವೇಗದಿಂದ ವಾನರಸೈನ್ಯಕ್ಕೆ ನುಗ್ಗಿ,ಕೈಗೆ ಸಿಕ್ಕಿದ ವಾನರರನ್ನು ಹಾಗೆಯೇ ನುಂಗಿಬಿಡುತ್ತ ಯುದ್ಧಭೂಮಿಯಲ್ಲಿ ವಿಹರಿಸುತಿದ್ದರು. ಇತ್ತಲಾಗಿ ವಾನರರೂ ಕೂಡ ತಡೆಯಲಾರದ ಕೋಪವನ್ನು ಹೊಂದಿ, ಆಗಾಗ ಮೇಲೆ ಹಾರಿ, ಬಂಗಾರದ ಶಿರೋಭೂಷಣಗಳುಳ್ಳ ಕುದುರೆಗಳನ್ನೂ, ಅಗ್ನಿಜ್ವಾಲೆಗಳಂತೆ ಪ್ರಕಾಶಿಸುತಿದ್ದ ಧ್ವಜಗಳನ್ನೂ, ಅತಿತೀಕ್ಷ್ಣಗಳಾದ ತಮ್ಮ ಹಲ್ಲುಗಳಿಂದ ಸಿಗಿದುಹಾಕುತಿದ್ದರು. ಬಲಾಢ್ಯರಾದ ಆ ವಾನರರೆಲ್ಲರೂ, ಅತಿಕೋಪೋದ್ರಿಕ್ತರಾಗಿ, ಅಲ್ಲಲ್ಲಿ ಮದದಾನೆಗಳಮೇಲೆ ಹಾರಿ, ಆ ಆನೆಗಳನ್ನೂ, ಅವುಗಳಮೇಲೆ ಕುಳಿತಿದ್ದ ಮಾವುತರನ್ನೂ ಸಾಯಗೊಲ್ಲುತಿದ್ದರು. ಕೆಲವರು ಧ್ವಜಪತಾಕೆಗಳಿಂದಲಂಕೃತವಾದ ರಥದಮೇಲೆ ಹಾರಿ, ಅವುಗಳನ್ನು ಮುರಿದು ಹಾಕುತಿದ್ದರು. ಹೀಗೆ ವಾನರರೆಲ್ಲರೂ ರಾಕ್ಷಸಸೈನ್ಯದಲ್ಲಿ ನುಗ್ಗಿ, ತಮ್ಮ ಹಲ್ಲುಗಳಿಂದಲೂ, ಉಗುರುಗಳಿಂದಲೂ, ಅವರನ್ನು ನಾನಾವಿಧವಾಗಿ ಭೇದಿಸಿಕೊಲ್ಲುತಿದ್ದರು. ಅತ್ತಲಾಗಿ ರಾಮಲಕ್ಷ್ಮಣರೂಕೂಡ ಅಲ್ಲಲ್ಲಿ ನುಗ್ಗಿ, ಕತ್ತಲೆಯಲ್ಲಿ ಕಂಡೂ ಕಾಣದ ರಾಕ್ಷಸಾಕೃತಿಗಳನ್ನು ಗುರುತುಹಿಡಿದು, ಕ್ರೂರಸರ್ಪಗಳಂತಿದ್ದ ತಮ್ಮ ತೀಕ್ಷ್ಣಬಾಣಗಳನ್ನು ಪ್ರಯೋಗಿಸಿ ಅವರನ್ನು ಕೊಲ್ಲುತಿದ್ದರು. ಆಗ ಅಲ್ಲಿ ಗಾಢಾಂಧಕಾರವು ಮಾತ್ರವೇ ಅಲ್ಲದೆ, ಕುದುರೆಗಳ ಖುರಾಗ್ರಹತಿಯಿಂದ ಪುಡಿಪುಡಿಯಾಗಿ,ರಥಚಕ್ರಸಂಚಾರದಿಂದ ಮೇಲಕ್ಕೆದ್ದ ನೆಲದ ಧೂಳಿಯು ಅಲ್ಲಿ ಯುದ್ಧಮಾಡುತಿದ್ದವರ ಕಣ್ಣುಕಿವಿಗಳೆರಡನ್ನೂ ಸಂಪೂರ್ಣವಾಗಿ ಮುಚ್ಚಿಬಿಟ್ಟಿತು. ಹೀಗೆ ನೋಡುವವರಿಗೆ ರೋಮಾಂಚವನ್ನು ಹುಟ್ಟಿಸುವಂತೆ, ಮಹಾಭಯಂಕರವಾದ ಯುದ್ಧವು ನಡೆಯುತ್ತಿರಲು, ಕ್ಷಣಮಾತ್ರದಲ್ಲಿ ಆ ರಣರಂಗವೆಲ್ಲವೂ ರಕ್ತಮಯವಾಗಿ, ಎಲ್ಲೆಲ್ಲಿ ನೋಡಿದರೂ ಭಯಂಕರಗಳಾದ

ರಕ್ತನದಿಗಳೇ ಹರಿಯುತಿದ್ದುವು. ಅಲ್ಲಲ್ಲಿ! ಭೇರಿ, ಮದ್ದಳೆ, ಡೋಲು, ಮುಂತಾದ ಚರ್ಮವಾದ್ಯಧ್ವನಿಗಳೂ, ಶಂಖ ವೇಣು ಮೊದಲಾದ ಮುಖವಾದ್ಯದ ಧ್ವನಿಗಳೂ, ಒಂದಾಗಿ ಕಲೆತು ಭಯಂಕರವಾಗಿ ಕೇಳಿಸುತಿದ್ದುವು. ಹಾಗೆಯೇ ಅಲ್ಲಲ್ಲಿ ಕಪಿಗಳ ಕೈಗೆ ಸಿಕ್ಕಿಕೊಳ್ಳುವ ರಾಕ್ಷಸರ ಧ್ವನಿಯೂ, ರಾಕ್ಷಸರಿಂದ ಹಿಂಸಿತರಾಗಿ ಕೂಗುತಿದ್ದ ಕಪಿಗಳ ಧ್ವನಿಯೂ ಅತಿಭಯಂಕರವಾಗಿ ವ್ಯಾಪಿಸಿತು. ಮತ್ತು ಆಗ ಯುದ್ಧಭೂಮಿಯಲ್ಲಿ, ರಾಕ್ಷಸರ ಶಕ್ತ್ಯಾಯುಧಗಳಿಂದಲೂ, ಶೂಲಗಳಿಂದಲೂ, ಗಂಡುಗೊಡಲಿಗಳಿಂದಲೂ ಹತರಾಗಿ ಬಿದ್ದಿದ್ದ ವಾನರರ ಮೃತದೇಹಗಳೂ, ಅಲ್ಲಲ್ಲಿ ವಾನರರು ಬೀಸಿಒಗೆದ ಮರಗಿಡಗಳಿಂದಲೂ, ಪರ್ವತಶಿಖರಗಳಿಂದಲೂ ಮೈಮುರಿದು ಸತ್ತುಬಿದ್ದಿರುವ ಕಾಮರೂಪಿಗಳಾದ ರಾಕ್ಷಸರ ದೇಹಗಳೂ, ರಾಶಿರಾಶಿಯಾಗಿ ತುಂಬಿದ್ದುವು. ಎಲ್ಲಿ ನೋಡಿದರೂ ಆ ರಣಭೂಮಿಯನ್ನು ಪುಷ್ಪೋಪಹಾರಗಳಿಂದಲಂಕರಿಸಿದಂತೆ, ಮುರಿದುಬಿದ್ದ ಶಸ್ತ್ರಗಳು ಕೊಳೆಯುತ್ತಿದ್ದುವು. ಮತ್ತು ಎಲ್ಲಿ ನೋಡಿದರೂ ರಕ್ತಪ್ರವಾಹವು ಕೆಸರುಗಟ್ಟಿದ್ದುದರಿಂದ ಅಲ್ಲಲ್ಲಿನ ಸನ್ನಿವೇಶಗಳನ್ನು ನೋಡಿ ತಿಳಿಯುವುದಕ್ಕಾಗಲಿ ಮುಂದೆ ಕಾಲಿಡುವುದಕ್ಕಾಗಲಿ ಸಾಧ್ಯವಿಲ್ಲದಂತಾಯಿತು. ಹೀಗೆ ಮಹಾಭಯಂಕರವಾಗಿ ವಾನರರಾಕ್ಷಸರಿಬ್ಬರಿಗೂ ಪ್ರಾಣಹಾರಕವಾದ ಆ ರಾತ್ರಿಯು, [1] ಕಾಳರಾತ್ರಿಯಂತೆ ಸಮಸ್ತ ಪ್ರಾಣಿಗಳಿಗೂ ಮೈಯಲ್ಲಿ ನಡುಕವನ್ನು ಹುಟ್ಟಿಸುತಿತ್ತು. ಹೀಗೆ ಭಯಂಕರವಾದ ಗಾಂಧಾಂಧಕಾರವು ಕವಿದಿರುವುದನ್ನು ನೋಡಿ ರಾಕ್ಷಸರು, ತಮಗೆ ಇದೇ ಸರಿಯಾದ ಸಮಯವೆಂದು ತಿಳಿದು, ಕೆಲವರು ಗುಂಪುಗೂಡಿ ಬಾಣವರ್ಷಗಳನ್ನು ಕರೆಯುತ್ತ ರಾಮನನ್ನಿದಿರಿಸುವುದಕ್ಕೆ ಹೋದರು. ಆ ರಾಕ್ಷಸರೆಲ್ಲರೂ ಕೋಪದಿಂದ ಗರ್ಜಿಸುತ್ತ, ರಾಮನನ್ನಿದಿರಿಸುವುದಕ್ಕೆ ಬರುವಾಗ, ಅವರ ದೊಡ್ಡಗರ್ಜನಧ್ವನಿಯು, ಪ್ರಳಯಕಾಲ

---

1 ಇಲ್ಲಿ ಕಾಳರಾತ್ರಿಯೆಂದರೆ “ರಾತ್ರಿರ್ಭೀಮರಥಿನಾಮ ಸರ್ವಪ್ರಾಣಿಭಯಾವಹಾ” ಎಂದು ಹೇಳಲ್ಪಡುವ ಭೀಮರಥಿ ರಾತ್ರಿಯೆಂದು ಗ್ರಾಹ್ಯವು. ಅಥವಾ “ಸಹಜ ಕಾಳರಾತ್ರಿಶ್ಚ [illegible]” ಎಂಬಂತೆ [illegible] ಶಕ್ತಿಯೆಂದೂ ಗ್ರಹಿಸಬಹುದು.

ಪಲ್ಲಿ ಉಕ್ಕಿಬರುತ್ತಿರುವ ಸಪ್ತಸಮುದ್ರಗಳ ಪ್ರವಾಹಧ್ವನಿಯಂತೆ ಮ
ಹಾಭಯಂಕರವಾಗಿ ಕೇಳಿಸಿತು. ಇಷ್ಟರಲ್ಲಿಯೇ ರಾಮನು ಅವರನ್ನು ನೋ
ಡಿ, ಎವೆ ಹಾರುವಷ್ಟರಲ್ಲಿ ಅಗ್ನಿಜ್ವಾಲೆಗಳಂತೆ ತೀಕ್ಷ್ಣಗಳಾದ ಆರುಬಾಣಗ
ಳನ್ನು ಪ್ರಯೋಗಿಸಿ, ಅವುಗಳಿಂದ ಆ ರಾಕ್ಷಸರಿಗೆ ಪ್ರಧಾನರಾದ ಆರುಮಂ
ದಿ ರಾಕ್ಷಸರನ್ನೂ ತಡೆದನು. ಶತ್ರುದುರ್ಜಯನಾದ ಯಮಶತ್ರುವೆಂಬವ
ನೊಬ್ಬನು, ಮಹೋದರ ಮಹಾಪಾರ್ಶ್ವರೆಂಬವರಿಬ್ಬರು, ದೊಡ್ಡ ದೇಹ
ವುಳ್ಳ ವಜ್ರದಂಷ್ಟ್ರನೊಬ್ಬನು, ರಾವಣನಿಂದ ಲಂಕೆಯ ಉತ್ತರದ್ವಾರ
ದ ಕಾವಲಿಗಾಗಿ ನಿಯಮಿಸಲ್ಪಟ್ಟಿದ್ದ ಶುಕಸಾರಣರಿಬ್ಬರು, ಈ ಆರುಮಂ
ದಿ ರಾಕ್ಷಸರೂ, ಆ ರಾಮಬಾಣಗಳಿಂದ ಮರ್ಮಸ್ಥಾನಗಳಲ್ಲಿ ಹೊಡೆಯ
ಲ್ಪಟ್ಟವರಾಗಿ, ತಾವು ಬದುಕಿದುದೇ ಸಾಕೆಂದು ಯುದ್ಧರಂಗದಿಂದ ಪಲಾ
ಯನ ಮಾಡಿದರು. ಇಷ್ಟರಲ್ಲಿ ಮಹಾಬಲಾಢ್ಯನಾದ ರಾಮನು ರಣರಂಗದ
ಲ್ಲಿ ಗಾಢಾಂಧಕಾರವು ಕವಿದುದನ್ನು ನೋಡಿ, ಸುವರ್ಣದಿಂದ ಚಿತ್ರಿತಗಳಾ
ಗಿ, ಅಗ್ನಿಜ್ವಾಲೆಗಳಂತೆ ಹೊಳೆಯುತಿದ್ದ ತನ್ನ ಬಾಣಗಳನ್ನು ನಾಲ್ಕುಕಡೆಗಳಿ
ಗೂ ಪ್ರಯೋಗಿಸಿ, ಆ ಬಾಣಗಳ ಕಾಂತಿಯಿಂದಲೇ ದಿಕ್ಕುವಿದಿಕ್ಕುಗಳೆಲ್ಲವ
ನ್ನೂ ಬೆಳಗಿಸಿದನು. (ಆಗ ಯುದ್ಧರಂಗವೆಲ್ಲವೂ, ರಾಮನಾಮಾಂಕಿತಗಳಾದ
ಬಾಣಗಳಿಂದಲೇ ವ್ಯಾಪ್ತವಾಯಿತು.) ರಾಮನನ್ನಿದಿರಿಸುವುದಕ್ಕಾಗಿ ಬಂದಿದ್ದ
ಭಯಂಕರಾಕಾರವುಳ್ಳ ಬೇರೆ ಯಾವರಾಕ್ಷಸರಿದ್ದರೋ, ಅವರೆಲ್ಲರೂ, ಬೆಂ
ಕಿಯಲ್ಲಿ ಬಿದ್ದ ಶಲಭಗಳಂತೆ ಕ್ಷಣಮಾತ್ರದಲ್ಲಿ ರಾಮಬಾಣಗಳಿಗೆ ಸಿಕ್ಕಿಬೂ
ದಿಯಾದರು. ರಾಮಧನುಸ್ಸಿನಿಂದತಂಡೋಪತಂಡವಾಗಿ ಹೊರಟ ಚಿನ್ನದಹಿ
ಡಿಗಳುಳ್ಳ ಸಾವಿರಾರುಬಾಣಗಳು, ಗಗನಪ್ರದೇಶವೆಲ್ಲವನ್ನೂ ವ್ಯಾಪಿಸಿರಲು,
ಆ ರಾತ್ರಿಯು, ಮಿಂಚುಹುಳುಗಳಿಂದ ತುಂಬಿದ ಶರತ್ಕಾಲದ ರಾತ್ರಿಯಂ
ತೆ ಕಾಣುತಿತ್ತು. ಮೊದಲೇ ಭಯಂಕರವಾದ ಆ ರಾತ್ರಿಯು, ಅಲ್ಲಲ್ಲಿ ರಾಕ್ಷ
ಸರ ಸಿಂಹನಾದಗಳಿಂದಲೂ, ಕಪಿಗಳ ಕೋಲಾಹಲಗಳಿಂದಲೂ, ಮೇಲೆ
ಮೇಲೆ ಅತಿಭಯಂಕರವಾಗಿ ತೋರುತಿತ್ತು. ಈ ರಣರಂಗದಿಂದ ಮೇಲೆ
ಮೇಲೆ ಹೆಚ್ಚಿಬರುತ್ತಿದ್ದ ಮಹಾಧ್ವನಿಯು, ತ್ರಿಕೂಟಪರ್ವತದ ಗುಹೆ
ಗಳೆಲ್ಲವನ್ನೂ ವ್ಯಾಪಿಸಿ, ಅಲ್ಲಿಂದ ಪ್ರತಿಧ್ವನಿಯನ್ನು ಹೊರಡಿಸುತ್ತಿರಲು,
ಆ ಪರ್ವತವೇ ಮಾತಾಡುವಂತೆ ಕಾಣಿಸಿತು. ಆ ರಣರಂಗದಲ್ಲಿ ಅಲ್ಲಲ್ಲಿ ಕತ್ತ

ಲೆಯಂತೆ ಕಪ್ಪಾದ ಮೈಯುಳ್ಳ ದೊಡ್ಡದೊಡ್ಡ ಭೂತಾಕಾರದ ಸಿಂಗಳೀ
ಕಗಳು,ಅಲ್ಲಲ್ಲಿ ತಮ್ಮ ದೊಡ್ಡ ತೋಳುಗಳನ್ನು ನೀಡಿ, ಮುಂದೆ ಸಿಕ್ಕಿದ ರಾ
ಕ್ಷಸರನ್ನೆಲ್ಲಾ ಆ ತೋಳುಗಳ ನಡುವೆ ಸೇರಿಸಿಕೊಂಡು, ಅವರನ್ನು ಒಂದೇ
ತುತ್ತಾಗಿ ನುಂಗುತಿದ್ದುವು. ಇಷ್ಟರಲ್ಲಿ ಅಂಗದನು ಆ ಯುದ್ಧಥಲ್ಲಿ ತನಗೆ
ಪ್ರತಿಭಟನಾದ ಇನ್ದ್ರಜಿತ್ತನ್ನು ಕೈಗಳಿಂದಪ್ಪಳಿಸಿ, ಒಂದೇ ಪ್ರಹಾರಕ್ಕೆ
ಅವನ ಸಾರಥಿಯನ್ನೂ, ಕುದುರೆಗಳನ್ನೂ ಕೊಂದುಕೆಡಹಿದನು. ಹೀಗೆ
ಕ್ರೂರವಾಗಿಯೂ, ಭಯಂಕರವಾಗಿಯೂ ಯುದ್ಧವು ನಡೆಯುತ್ತಿರುವಾ
ಗಲೇ, ಮಹಾಕಾಯವುಳ್ಳ ಇನ್ದ್ರಜಿತ್ತು,ಅಂಗದನಿಂದ ತನ್ನ ಸಾರಥಿಯೂ,
ರಥಾಶ್ವಗಳೂ ಹತವಾದುದನ್ನು ನೋಡಿ, ಆ ರಥವನ್ನು ಅಲ್ಲಿಯೇ ಬಿಟ್ಟು,
ಕ್ಷಣಮಾತ್ರದಲ್ಲಿ ಯಾರಿಗೂ ತಿಳಿಯದಂತೆ ಕಣ್ಮರೆಯಾದನು. ಅಂಗದನು
ನಡೆಸಿದ ಮಹಾದ್ಭುತವಾದ ಈ ಕಾರ್ಯವನ್ನು ನೋಡಿ ದೇವತೆಗಳೂ, ಋ
ಷಿಗಳೂ, ರಾಮಲಕ್ಷ್ಮಣರೂ, ಅವನನ್ನು ಬಹಳವಾಗಿ ಕೊಂಡಾಡಿದರು.
ಲೋಕದಲ್ಲಿ ಸಮಸ್ತಭೂತಗಳೂ, ಇನ್ದ್ರಜಿತ್ತಿನ ಪರಾಕ್ರಮವನ್ನು ಚೆ
ನ್ನಾಗಿ ಬಲ್ಲುವು. (ಅವನು ಯಾವಯುದ್ಧದಲ್ಲಿಯೂ, ದುರ್ಜಯನಾಗಿರು
ವನು. ಇಂತವನು ಅಂಗದನಮುಂದೆ ನಿಲ್ಲಲಾರದೆ ಅದೃಶ್ಯನಾಗಿ ಹೋದು
ದನ್ನು ನೋಡಿ ಎಲ್ಲರಿಗೂ ಆಶ್ಚರ್ಯವು ಹುಟ್ಟಿತು.) ಅಂತಹ ಮಹಾವೀರನೂ
ಕೂಡ ಅಂಗದನಿಂದ ಪರಾಜಿತನಾದುದನ್ನು ನೋಡಿ, ಎಲ್ಲರ ಮನಸ್ಸಿನಲ್ಲಿ
ಯೂ ಸಂತೋಷವೂ ಹುಟ್ಟಿತು. ಆಗ ಸಮಸ್ತಕಪಿಗಳೂ ಸುಗ್ರೀವ ವಿ
ಭೀಷಣಾದಿಗಳೊಡನೆ ಸೇರಿ, ಇಂದ್ರಜಿತ್ತಿಗುಂಟಾದ ಪರಾಭವಕ್ಕಾಗಿ “ಭ
ಲೆ! ಭಲೆ! ಶಹಬಾಸ್” ಎಂದು ಅಂಗದನನ್ನು ಕೊಂಡಾಡಿದರು. ಇಷ್ಟರಲ್ಲಿ
ಇನ್ದ್ರಜಿತ್ತಾದರೋ ತನಗೆ ಅಂಗದನಿಂದುಂಟಾದ ಪರಾಭವವನ್ನು ಸಹಿ
ಸಲಾರದೆ, ಅತಿಭಯಂಕರವಾದ ಕೋಪವನ್ನವಲಂಬಿಸಿದನು. ಈ ನಡುವೆ
ಇತ್ತಲಾಗಿ ರಾಮನು ವಾನರರನ್ನು ನೋಡಿ “ಎಲೆ ವಾನರರೆ ! ನೀವೆಲ್ಲರೂ
ಈಗ ನಿಮ್ಮ ರಾಜನಾದ ಸುಗ್ರೀವನ ಸಮೀಪದಲ್ಲಿಯೇ ಬಹಳ ಎಚ್ಚರಿಕೆ
ಯಿಂದಿರಬೇಕು. ಆ ಇನ್ದ್ರಜಿತ್ತು ಬ್ರಹ್ಮನಿಂದ ವರವನ್ನು ಹೊಂದಿದವ
ನು. ಮೂರುಲೋಕವನ್ನೂ ಬಹಳವಾಗಿ ಬಾಧಿಸುತಿದ್ದವನು. ಆದರೆ ಈಗ
ಅವನಿಗೆ ಮೃತ್ಯುವು ಸಮೀಪಿಸಿರುವುದು. ಅವನನ್ನು ಕೊಲ್ಲಬೇಕೆಂದಿರುವ

ನಿಮ್ಮ ಕೋರಿಕೆಯನ್ನು ಈಡೇರಿಸುವುದಕ್ಕಾಗಿಯೇ ಅವನು ಈಗ ಕಾಲ ಚೋದಿತನಾಗಿ ಬಂದಿರುವನು. (ಅವನು ಕಾಲಬಲವನ್ನು ನೋಡಿಕೊಂಡು ನಿಮ್ಮನ್ನು ಜಯಿಸಬೇಕೆಂದೇ ಬಂದಿರುವನು.) ಆದುದರಿಂದ ಈಗ ಮಾತ್ರ ನೀವೇನೂ ಆತುರಪಡದೆ,ನನಗಾಗಿ ಸ್ವಲ್ಪಹೊತ್ತಿನವರೆಗೆ ಸಹಿಸಿಕೊಂಡಿರ ಬೇಕು.(ಬ್ರಹ್ಮನ ವರವನ್ನು ಗೌರವಿಸುವುದಕ್ಕಾಗಿ ನಾನೂ ಈಗ ಕ್ಷಣಕಾ ಲದವರೆಗೆ ಸಹಿಸಿಕೊಂಡು ಸುಮ್ಮನಿರಬೇಕಾಗಿದೆ.)" ಎಂದನು. ಇಷ್ಟರ ಲ್ಲಿಯೇ ಪಾಪಾತ್ಮನಾದ ಆ ಇಂದ್ರಜಿತ್ತು, ಕಪಟಯುದ್ಧದಲ್ಲಿ ನಿಪುಣ ನಾದುದರಿಂದ, ಅಂತರ್ಧಾನವಿದ್ಯೆಯಿಂದ ಅದೃಶ್ಯನಾಗಿಯೇ ಇದ್ದು, ಸಿಡಿ ಲಿನಂತೆ ಜ್ವಲಿಸುವ ತೀಕ್ಷ್ಣಬಾಣಗಳನ್ನು ಪ್ರಯೋಗಿಸಲಾರಂಭಿಸಿದನು. ರಾಕ್ಷಸವೀರನಾದ ಆ ಇಂದ್ರಜಿತ್ತು, ಪರಮಕುಪಿತನಾಗಿ, ರಾಮಲಕ್ಷ್ಮಣ ರಿಬ್ಬರನ್ನೂ ಗುರಿಹಿಡಿದು, ಸರ್ಪರೂಪಗಳಾದ ಕ್ರೂರಬಾಣಗಳನ್ನು ಅವ ರ ಸಮಸ್ತಾವಯವಗಳಿಗೂ ವ್ಯಾಪಿಸುವಂತೆ ಪ್ರಯೋಗಿಸಿದನು. ಹೀಗೆ ಇಂದ್ರಜಿತ್ತು ಕಪಟಯುದ್ಧವನ್ನಾರಂಭಿಸಿ, ಮಾಯೆಯಿಂದ ಸಮಸ್ತ ಭೂತಗಳಿಗೂ ಅದೃಶ್ಯನಾಗಿ, ಆ ಯುದ್ಧದಲ್ಲಿ ರಘುಕುಲೋದ್ಭವರಾದ ರಾಮಲಕ್ಷ್ಮಣರಿಬ್ಬರನ್ನೂ ತನ್ನ ಸರ್ಪಾಸ್ತ್ರಗಳಿಂದ ಬಂಧಿಸಿ, ಕ್ಷಣಮಾ ತ್ರದಲ್ಲಿ ಅವರಿಬ್ಬರನ್ನೂ ಮೋಹಗೊಳಿಸಿದನು. ಯಾರಿಗೂ ತಿಳಿಯದಂತೆ ಆ ಇಂದ್ರಜಿತ್ತು ಸರ್ಪಾಸ್ತ್ರಗಳಿಂದ ಬಂಧಿಸಿದೊಡನೆ, ಪುರುಷಸಿಂಹರಾದ ರಾಮಲಕ್ಷ್ಮಣರಿಬ್ಬರೂ ಪರವಶರಾಗಿ ಬಿದ್ದುದನ್ನು ಅಲ್ಲಿದ್ದ ಸಮಸ್ತವಾ ನರರೂ ನೋಡಿದರು. ರಾವಣಪುತ್ರನಾದ ಇಂದ್ರಜಿತ್ತು ಮಹಾವೀರಾಗ್ರ ಣಿಯೆನಿಸಿಕೊಂಡರೂ ರಾಮಲಕ್ಷ್ಮಣರಿಗಿದಿರಾಗಿ ನಿಂತು ಯುದ್ಧಮಾ ಡಲಾರದೆ, ಮಾಯೆಯನ್ನವಲಂಬಿಸಿ, ಅವರಿಬ್ಬರನ್ನೂ ಹೀಗೆ ತನ್ನ ಬಾಣಗ ಳಿಂದ ಬಂಧಿಸಿಟ್ಟನು. ಇಲ್ಲಿಗೆ ನಾಲ್ವತ್ತು ನಾಲ್ಕನೆಯ ಸರ್ಗವು.

---

{ ಇಂದ್ರಜಿತ್ತಿನ ನಾಗಪಾಶದಿಂದ ರಾಮಲಕ್ಷ್ಮಣರು ಬದ್ಧ ರಾಗಿದ್ದುದು. }

ಬಲಾಢ್ಯನಾಗಿಯೂ ವೀರ್ಯಶಾಲಿಯಾಗಿಯೂ ಇರುವ ರಾಜಪುತ್ರ ನಾದ ರಾಮನು, ಇಂದ್ರಜಿತ್ತಿರುವ ಸ್ಥಳವನ್ನು ತಿಳಿದುಕೊಳ್ಳಬೇಕೆಂದ

ಪೇಕ್ಷಿಸಿ, ಹತ್ತುಮಂದಿವಾನರಯೂಥಪತಿಗಳನ್ನು ಆ ಕಾರ್ಯಕ್ಕಾಗಿ ನಿಯ ಮಿಸಿದನು. ಇದಕ್ಕಾಗಿ ಪರಂತಪನಾದ ಆ ರಾಮನು, ಸುಷೇಣನ ಮಕ್ಕಳಿಬ್ಬರು, ವಾನರ ಶ್ರೇಷ್ಠನಾದ ನೀಲನೊಬ್ಬನು, ವಾಲಿಪುತ್ರನಾದ ಅಂಗದನೊಬ್ಬನು, ಬಲಾಢ್ಯರಾದ ಶರಭವಿನತಜಾಂಬವಂತರೆಂಬ ಮೂವರು, ಮಹಾವೀರ್ಯವಂತರಾದ ಸಾನುಪ್ರಸ್ಥ ಋಷಭ ಋಷಭಸ್ಕಂಧರೆಂಬ ಮೂವರು; ಈ ಹತ್ತುಮಂದಿಯನ್ನೂ ಕರೆದು ಇಂದ್ರಜಿತ್ತಿರುವ ಸ್ಥಳವನ್ನು ತಿಳಿದು ಬರುವಂತೆ ಆಜ್ಞಾಪಿಸಿದನು. ಈ ರಾಮಾಜ್ಞೆಯನ್ನು ಕೇಳಿ ಆವಾನರರೆಲ್ಲರೂ ಪರಮಸಂತುಷ್ಟರಾಗಿ, ದೊಡ್ಡದೊಡ್ಡ ಮರಗಳನ್ನು ಕೈಗೆತ್ತಿಕೊಂಡು,ಇಂದ್ರಜಿತ್ತನ್ನು ಹುಡುಕುವುದಕ್ಕಾಗಿ ಆಕಾಶಕ್ಕೆ ಹಾರಿ,ನಾನಾ ದಿಕ್ಕುಗಳಿಗೂ ಹೊರಟರು. ಈ ವಾನರರು ತಡೆಯಿಲ್ಲದ ಮಹಾವೇಗವುಳ್ಳವರಾಗಿದ್ದರೂ, ಸರ್ವಾಸ್ತ್ರವಿಶಾರದನಾದ ಇಂದ್ರಜಿತ್ತು, ಪರಮಾಸ್ತ್ರರೂಪಗಳಾದ ತನ್ನ ಬಾಣಗಳಿಂದ ಅವರ ವೇಗವನ್ನು ತಡೆದು ಅವರನ್ನು ನಿವಾರಿಸಿದನು. ಭಯಂಕರವೇಗವುಳ್ಳವರಾಗಿದ್ದ ಈ ವಾನರರೆಲ್ಲರೂ ಇಂದ್ರಜಿತ್ತಿನ ಬಾಣಗಳಿಂದ ಭೇದಿಸಲ್ಪಟ್ಟ ದೇಹವುಳ್ಳವರಾಗಿ, ಮೇಘದಲ್ಲಿ ಮರೆಗೊಂಡಿರುವ ಸೂರ್ಯನಂತೆ .ಗಾಢಾಂಧಕಾರದಲ್ಲಿ ಮರೆಸಿಕೊಂಡಿದ್ದ ಆ ಇಂದ್ರಜಿತ್ತನ್ನು ಕಾಣಲಾರದೆ ಹೋದರು. ಯುದ್ಧದಲ್ಲಿ ಜಯಶೀಲನಾದ ಆ ಇಂದ್ರಜಿತ್ತಾದರೋ ಸರ್ವಾವಯವಗಳನ್ನೂ ಭೇದಿಸುವಂತಿರುವ ತೀಕ್ಷ್ಣಬಾಣಗಳನ್ನು ತೆಗೆದು, ರಾಮಲಕ್ಷ್ಮಣರಮೇಲೆಯೇ ಗುರಿಯಿಟ್ಟು ಹೊಡೆಯುತಿದ್ದನು. ಹೀಗೆ ರಾವಣಪುತ್ರನಾದ ಆ ಇಂದ್ರಜಿತ್ತು, ಅತ್ಯಾಕ್ರೋಶಗೊಂಡು, ತನ್ನ ಹಗೆತೀರುವಂತೆ ವೀರರಾದ ಆ ರಾಮಲಕ್ಷ್ಮಣರೆಂಬ ಸಹೋದರರಿಬ್ಬರಮೇಲೆ ಸರ್ಪಬಾಣಗಳನ್ನು ಎಡೆಬಿಡದೆ ಪ್ರಯೋಗಿಸುತ್ತಿರಲು,ಅವರ ದೇಹದಲ್ಲಿ ಸೂಜಿಯಮೊನೆಯಷ್ಟೂ ಅವಕಾಶವಿಲ್ಲದಂತೆ ಸರ್ವಾವಯವಗಳೂ ಆ ಬಾಣಗಳಿಂದಲೇ ತುಂಬಿ ಹೋದುವು. [1]ಅವರ ಸರ್ವಾಂಗಗಳಲ್ಲಿಯೂ ರಕ್ತವು ಸುರಿಯಲಾರಂಭಿಸಿತು.ಇದರಿಂ

---

1 ನ ಭೂತಸಂಘಸಂಸ್ಥಾನೋ ದೇಹೋಽಸ್ಯ ಪರಮಾತ್ಮನಃ। ನತಸ್ಯ ಪ್ರಾಕೃತಾ ಮೂರ್ತಿರ್ಮಾಂಸಮೇದೋಽಸ್ಥಿಸಂಭವಾ ॥ " ಎಂಬಂತೆ ರಾಮಲಕ್ಷ್ಮಣರ ದಿವ್ಯವಿಗ್ರಹ

ದ ಅವರಿಬ್ಬರ ದೇಹವೂ ಪುಷ್ಪಿತವಾದ ಮುತ್ತುಗದ ಮರದಂತೆ ಕಾಣುತಿ
ತ್ತು. ಆಗ ಕೆಂಪಾದ ಕಾಡಿಗೆಯ ರಾಶಿಯಂತೆ ಕಪ್ಪಾದ ಮೈಯುಳ್ಳ ರಾವಣ
ಪುತ್ರನಾದ ಇಂದ್ರಜಿತ್ತು, ಕೋಪದಿಂದ ಸ್ವಲ್ಪವಾಗಿ ಕೆಂಪೇರಿದ ಕಡೆ
ಗಣ್ಣುಳ್ಳವನಾಗಿ, ತಾನು ಕಣ್ಮರೆಯಾಗಿದ್ದಂತೆಯೇ ಆ ರಾಮಲಕ್ಷ್ಮಣರಿಬ್ಬ
ರನ್ನೂ ಕೂಗಿ ಹೇಳುವನು. “ಎಲೆ ಕ್ಷತ್ರಿಯಕುಮಾರರೆ! ನಾನು ಅದೃಶ್ಯ
ನಾಗಿ ಯುದ್ಧಮಾಡುವುದಕ್ಕೆ ತೊಡಗಿದರೆ, ಸುರನಾಥನಾದ ಇಂದ್ರನಾ
ದರೂ ನನ್ನನ್ನು ನೋಡುವುದಕ್ಕಾಗಲಿ, ನನ್ನನ್ನು ಸಮೀಪಿಸುವುದಕ್ಕಾಗ
ಲಿ ಶಕ್ತನಲ್ಲ. ಇನ್ನು ಕೇವಲಮನುಷ್ಯಮಾತ್ರರಾದ ನಿಮ್ಮಿಂದೇನಾಗು
ವುದು? ಎಲೆ ರಾಮಲಕ್ಷ್ಮಣರೆ! ನನಗೆ ಕೋಪವುಂಟಾದಮೇಲೆ ನಾ
ನು ಸುಮ್ಮನೆ ಬಿಡುವೆನೆ? ಹದ್ದಿನ ಗರಿಗಳುಳ್ಳ ಈ ನನ್ನ ಬಾಣಗಳಿಂದ ನಿಮ್ಮಿ
ಬ್ಬರ ದೇಹವನ್ನೂ ಎಡೆಬಿಡದೆ ಮುಚ್ಚಿ ಇದೋ! ಈಗಲೇ ಯಮಪುರಿಗೆ ಸಾ
ಗಿಸಿಬಿಡುವೆನು ನೋಡಿರಿ” ಎಂದನು. ರಾಮಲಕ್ಷ್ಮಣರಿಬ್ಬರೂ ಶಬ್ದ

---

ಗಳೆರಡೂ ಅಪ್ರಾಕೃತಗಳಾಗಿರುವಾಗ, ಆ ದೇಹಗಳಿಂದ ರಕ್ತಮಾಂಸಗಳು ಹೊರಡುವು
ದು ಹೇಗೆ? ಎಂದರೆ, ವಾಸ್ತವದಿಂದ ರಕ್ತವಿಲ್ಲದಿದ್ದರೂ, ಮನುಷ್ಯತ್ವವನ್ನು ತೋರಿ
ಸುವುದಕ್ಕಾಗಿಯೇ ಅವರು ರಕ್ತವನ್ನು ತೋರಿಸಿದುದಾಗಿ ಗ್ರಾಹ್ಯವು. ಆದರೆ ಇಷ್ಟು ನಿ
ರ್ಬಂಧದಿಂದಾದರೂ ಮನುಷ್ಯಭಾವವನ್ನಭಿನಯಿಸುವುದರಿಂದ ಫಲವೇನು? ಎಂದರೆ, ಸ
ರ್ವವಿಧದಲ್ಲಿಯೂ ಇವರು ಮನುಷ್ಯರಂತೆ ನಟಿಸದೆಹೋದರೆ ಇತರ ಜನಗಳಿಗೆ ಇವ
ರು ದೇವಾಂಶಪುರುಷರೆಂಬ ಭಾವವೇ ಸಂಪೂರ್ಣವಾಗಿ ಹುಟ್ಟಿ, ಆತನಂತೆ ತಮ್ಮಿಂದ
ಧರ್ಮಗಳೆಲ್ಲವನ್ನೂ ನಡೆಸುವುದು ಸಾಧ್ಯವಲ್ಲವೆಂದೂ ತೋರಬಹುದು. ಈ ಶಂಕೆಯನ್ನು
ನಿವಾರಿಸುವುದಕ್ಕಾಗಿಯೇ ಇವರು ಅವಕಾಶವಿದ್ದಾಗಲೆಲ್ಲಾ ಮನುಷ್ಯತ್ವವನ್ನು ನಡೆ
ಸುತ್ತಿದ್ದರೆಂಬುದೇ ರಹಸ್ಯವು. ಮತ್ತು ರಾವಣನು ಮನುಷ್ಯನೊಬ್ಬನಿಂದಲೇ ವಧ್ಯನಾದು
ದರಿಂದ, ತನ್ನಲ್ಲಿರುವ ಮನುಷ್ಯಸ್ವರೂಪವನ್ನೆಲ್ಲಾ ಅವನಿಗೆ ತೋರಿಸಬೇಕೆಂಬ ಉದ್ದೇ
ಶದಿಂದಲೇ ಹೀಗೆ ನಟಿಸಿದುದಾಗಿಯೂ ಹೇಳುವರು. ಇವರಿಬ್ಬರೂ ನಾಗಪಾಶಬದ್ಧರಾ
ಗಿ ಮಲಗಿದ್ದುದೇಕೆ! ಎಂದರೆ ಧರ್ಮನಿರತರಾದವರಿಗೆ ಒಮ್ಮೆ ಅಕಸ್ಮಾತ್ತಾಗಿ ಮಹಾವಿ
ಪತ್ತುಗಳು ಬಂದರೂ, ಕ್ಷಣಕಾಲದಲ್ಲಿಯೇ ಅವು ನಿವರ್ತಿಸುವುವೆಂದು ಲೋಕಕ್ಕೆ ತಿಳಿಸು
ವುದಕ್ಕಾಗಿಯೇ ಹೊರತು ಬೇರೆಯಲ್ಲ. ಹೀಗೆಯೇ ರಾಮನ ವಿರಹದುಃಖಾದಿಗಳಿಗೂ
ಕಾರಣಗಳನ್ನು ತಿಳಿಯಬೇಕು.

ವೇಧಿಯೆಂಬ ಶಸ್ತ್ರವಿದ್ಯೆಯನ್ನು ಬಲ್ಲವರಾಗಿ, ಶಬ್ದವನ್ನೇ ಗುರಿಹಿಡಿದು ತಮ್ಮ ಬಾಣಗಳನ್ನು ಪ್ರಯೋಗಿಸಿ ಇಂದ್ರಜಿತ್ತನ್ನು ತಡೆಯಬಲ್ಲವ ರಾಗಿದ್ದರೂ, ಧರ್ಮಜ್ಞರಾದುದರಿಂದ, ಧರ್ಮಯುದ್ಧದಲ್ಲಿಯೇ ದೃಷ್ಟಿ ಯಿಟ್ಟು ತಾಳ್ಮೆಯಿಂದಿರುತಿದ್ದರು. ಇಂದ್ರಜಿತ್ತು ಹೆಮ್ಮೆಯಿಂದ ಆರಾ ಮಲಕ್ಷ್ಮಣರಿಬ್ಬರನ್ನೂ ಮೂದಲಿಸುತ್ತ, ಮೇಲೆಮೇಲೆ ತೀಕ್ಷ್ಣಬಾಣ ಗಳನ್ನು ಪ್ರಯೋಗಿಸಿ, ತನಗೆ ಜಯವುಂಟಾಯಿತೆಂಬ ಸಂತೋಷದಿಂದ ಅ ಟ್ಟಹಾಸದೊಡನೆ ನಕ್ಕು ಸಿಂಹನಾದವನ್ನೂ ಮಾಡಿದನು. ಮತ್ತು ಕೆ ದರಿದ ಕಾಡಿಗೆಯಂತೆ ಕಪ್ಪುಮೈಯುಳ್ಳ ಆ ಇಂದ್ರಜಿತ್ತು, ಕಣ್ಮರೆಯಾ ಗಿದ್ದಂತೆಯೇ ದೊಡ್ಡ ಧನುಸ್ಸನ್ನು ಹಿಡಿದು ಟಂಕಾರಮಾಡುತ್ತ, ರಾ ಮಲಕ್ಷ್ಮಣರಮೇಲೆ ತೀಕ್ಷ್ಣಬಾಣಗಳನ್ನು ಎಡೆಬಿಡದೆ ಸುರಿಯುತ್ತಲೇ ಇದ್ದನು. ಶಸ್ತ್ರವಿದ್ಯೆಯ ಮರ್ಮವನ್ನು ಚೆನ್ನಾಗಿ ಬಲ್ಲ ಆ ರಾವಣಪುತ್ರ ನು, ಹೀಗೆ ರಾಮಲಕ್ಷ್ಮಣರ ಮರ್ಮಸ್ಥಾನಗಳಲ್ಲಿ ಮೇಲೆಮೇಲೆ ಬಾಣಗ ಳನ್ನು ಪ್ರಯೋಗಿಸುತ್ತ ಆಗಾಗ ಸಿಂಹನಾದವನ್ನೂ ಮಾಡುತಿದ್ದನು. ರಾಮಲಕ್ಷ್ಮಣರಿಬ್ಬರೂ ಸರ್ಪರೂಪಗಳಾದ ಅವನ ಬಾಣಗಳಲ್ಲಿ ಕಟ್ಟು ಬಿದ್ದು, ಕ್ಷಣಮಾತ್ರದಲ್ಲಿಯೇ ಕಣ್ಣುಕಾಣದೆ ಪ್ರಜ್ಞೆತಪ್ಪಿರು. ಇವರ ಸಮಸ್ತಾವಯವಗಳೂ ಶಸ್ತ್ರಗಳಿಂದ ಭೇದಿಸಲ್ಪಟ್ಟುವು. ಅಂಗಾಂಗ ಗಳಲ್ಲಿಯೂ ಬಾಣಗಳು ನಾಟಿಕೊಂಡುವು. ಇದರಿಂದ ಆ ಸಹೋದರರಿಬ್ಬ ರೂ ಪ್ರಜ್ಞೆತಪ್ಪಿದವರಾಗಿ, ಹಗ್ಗವನ್ನು ಸಡಿಲಿಸಿದ ಇಂದ್ರಧ್ವಜಗಳಂತೆ ಶಕ್ತಿಗುಂದಿ ಕೆಳಗೆಬಿದ್ದರು. ಈ ರಾಮಲಕ್ಷ್ಮಣರಿಬ್ಬರೂ ಮಹಾಧನುಷ್ಮಂ ತರಾಗಿದ್ದರೂ, ಇಂದ್ರಜಿತ್ತಿನ ಬಾಣಗಳು ಮರ್ಮಸ್ಥಾನಗಳಲ್ಲಿ ನಾಟಿದುದ ರಿಂದ, ಬಹಳವಾಗಿ ನೊಂದುಸಿಸ್ಸಲರಾದರು. ಅವರ ಸರ್ವಾವಯವಗಳೂ, ಸರ್ಪರೂಪಗಳಾದ ಬಾಣಗಳಿಂದ ಕಟ್ಟುಬಿದ್ದುವು. ಅವರ ಸರ್ವಾಂಗಗಳೂ ರಕ್ತಮಯವಾದುವು. ಅವರಿಬ್ಬರೂ ವೀರಶಯನವೆನಿಸಿಕೊಂಡ ರಣರಂಗದ ಲ್ಲಿ ಶಯಸಿಸಿದರು. ಇಬ್ಬರೂ ಬಹಳವಾಗಿ ಬಾಣಹತಿಯಿಂದ ನೊಂದು ಸಂ ಕಟಪಡುತಿದ್ದರು. ಅವರಿಬ್ಬರ ದೇಹದಲ್ಲಿಯೂ ಶಿರಸ್ಸಿನಿಂದ ಕರಾಗ್ರದವರೆ ಗೆ, ಒಂದು ಕಿರುಬೆರಳಿನಷ್ಟುಸ್ಥಳವಾದರೂ ಉಳಿಯದಂತೆ, ಸರ್ವಾವಯವಗ ಳೂ ಸರ್ಪರೂಪಗಳಾದ ಬಾಣಗಳಿಂದ ಭಿನ್ನವಾದುವು. ಸರ್ವಾಂಗವೂ ನಿ

ಶ್ಚಲವಾಯಿತು. ಹೀಗೆ ಆ ರಾಮಲಕ್ಷ್ಮಣರಿಬ್ಬರೂ ಕಾಮರೂಪಿಯಾದ ಆ
ಕ್ರೂರರಾಕ್ಷಸನ ಬಾಣಗಳಿಂದ ಭೇಧಿಸಲ್ಪಟ್ಟ ದೇಹವುಳ್ಳವರಾಗಲು, ಪ್ರ
ಸ್ರವಣ ಪರ್ವತಗಳಿಂದ ಹೊರಡುವ ಗಿರಿನದಿಗಳಂತೆ ಅವರಿಬ್ಬರ ದೇಹದಿಂ
ದಲೂ ರಕ್ತಪ್ರವಾಹವು ಹೊರಡುತಿತ್ತು. ಮೊದಲೇ ತನ್ನ ವೀರ್ಯದಿಂದ
ಇಂದ್ರನನ್ನು ಜಯಿಸಿ ಇಂದ್ರಜಿತ್ತೆಂದು ಪ್ರಸಿದ್ಧಿಹೊಂದಿದ ಆ ಕ್ರೂರರಾಕ್ಷ
ಸನು, ಕೋಪಾವಿಷ್ಟನಾಗಿ, ಮರ್ಮಸ್ಥಾನಗಳನ್ನು ಗುರಿಹಿಡಿದು ಬಾಣವ
ನ್ನು ಪ್ರಯೋಗಿಸುತ್ತಿರಲು, ಮೊದಲು ರಾಮನು ಕೆಳಗೆ ಬಿದ್ದನು. ಆ ರಾಕ್ಷ
ಸನು ನಾಗಾಸ್ತ್ರದಿಂದ ಬಂಧಿಸಿದಮೇಲೆಯೂ ಬಿಡದೆ, ಇನ್ನೂ ಇತರವಿಧಗ
ಳಾದ ಸಾಮಾನ್ಯಬಾಣಗಳನ್ನೂ ಬಿಡುವುದಕ್ಕೆ ತೊಡಗಿದನು.ಚಿನ್ನದ ಹಿಡಿಗ
ಳಿಂದಲೂ, ಸಾಣೆಯಿಕ್ಕಿ ಹೊಳೆಯುವ ಅಲಗುಗಳಿಂದಲೂ ಕೂಡಿದ ವಿವಿಧ
ಬಾಣಗಳನ್ನು ತೆಗೆದು ಆ ಬಾಣಗಳನ್ನು ಕೆಳಮುಖವಾಗಿ ರಾಮಲಕ್ಷ್ಮಣರ
ಕಡೆಗೆ ಪ್ರಯೋಗಿಸುತಿದ್ದನು.ಈ ಬಾಣಗಳಲ್ಲಿಯೋ ಚಕ್ರದಂತೆ ವರ್ತುಲಾ
ಕಾರವಾದ ಮೊನೆಯುಳ್ಳವು ಕೆಲವು. ಅರ್ಧಚಂದ್ರಾಕಾರದ ಮೊನೆಯುಳ್ಳ
ವು ಕೆಲವು.ಈಟಿಯಂತೆ ಮೊನೆಯುಳ್ಳವು ಕೆಲವು. ಅಂಜಲಿಯಂತೆ ಮೊನೆಯು
ಳ್ಳವು ಕೆಲವು.ಕರುವಿನ ಕೊಂಬಿನಂತೆ ಕವಲುಮೊನೆಯುಳ್ಳವು ಕೆಲವು. ಸಿಂ
ಹದ ಕೋರೆಗಳಂತೆ ಮೊನೆಯುಳ್ಳವು ಕೆಲವು.ಸಣ್ಣಕತ್ತಿಯಂತೆ ಮೊನೆಯು
ಳ್ಳವು ಕೆಲವು. ಇಂತಹ ಚಿತ್ರವಿಚಿತ್ರಗಳಾದ ಬಾಣಗಳಿಂದ ರಾಮನ ದೇ
ಹವನ್ನು ಪ್ರಹರಿಸುತಿದ್ದನು. ಈ ಬಾಣಹತಿಯಿಂದ ರಾಮನು ಬಹಳನೊಂ
ದವನಾಗಿ ವೀರಶಯನರೂಪವಾದ ರಣರಂಗದಲ್ಲಿ ಮಲಗಿಬಿಟ್ಟನು. ಉಭ
ಯಪಾರ್ಶ್ವಗಳಲ್ಲಿಯೂ, ಮಧ್ಯದಲ್ಲಿಯೂ ಬಾಗಿದ ರತ್ನಭೂಷಿತವಾದ ಧ
ನುಸ್ಸನ್ನು ಬಲವಾಗಿ ಹಿಡಿದಿದ್ದ ಅವನ ಮುಷ್ಟಿಯು, ಕ್ರಮವಾಗಿ ಸಡಿಲು
ತ್ತಬಂದಿತು. ಬಿಚ್ಚಿದ ಹೆದೆಯುಳ್ಳ ತನ್ನ ಧನುರ್ದಂಡವನ್ನು ನೆಲದಮೇಲೆ
ಊರಿ ನಿಂತಂತೆಯೇ ಆತನು ನೆಲಕ್ಕೆಬಿದ್ದನು. ಹೀಗೆ ರಾಮನು ಶರತಲ್ಪದಲ್ಲಿ
ಮಲಗಿದುದನ್ನು ಕಂಡೊಡನೆ ಲಕ್ಷ್ಮಣನಿಗೆ ತನ್ನ ಪ್ರಾಣದಲ್ಲಿಯೇ ನಿರಾಶೆ
ಯು ಹುಟ್ಟಿತು.ನಾಗಾಸ್ತ್ರಬದ್ಧನಾಗಿ ಬಿದ್ದಿರುವ ತನ್ನಣ್ಣನನ್ನು ಕಂಡು
ಲಕ್ಷ್ಮಣನಿಗೆ ಮಿತಿಮೀರಿದ ದುಃಖಾವೇಶವುಂಟಾಯಿತು. ಅಲ್ಲಿದ್ದ ಸಮಸ್ತ
ವಾನರರಿಗೂ ತಡೆಯಲಾರದ ಸಂಕಟವು ಹುಟ್ಟಿತು. ಹನುಮಂತನೇ ಮೊದ

ಲಾದ ಸಮಸ್ತವಾನರರೂ ಸೇರಿ ನಾಗಪಾಶಬದ್ಧರಾಗಿದ್ದ ರಾಮಲಕ್ಷ್ಮ ಣರಿಬ್ಬರನ್ನೂ ಸುತ್ತಿನಿಂತು, ಮಹಾವ್ಯಸನದಿಂದ ಸಂಕಟಪಡುತ್ತಾ ಕೊರಗಿ ತತ್ತಳಿಸುತ್ತಿದ್ದರು. ಇಲ್ಲಿಗೆ ನಾಲ್ವತ್ತೈದನೆಯ ಸರ್ಗವು.

---

ಸುಗ್ರೀವವಿಭೀಷಣಾದಿಗಳು ನಾಗಪಾಶಬದ್ಧರಾದ ರಾಮಲಕ್ಷ್ಮಣರ ಅವಸ್ಥೆಯನ್ನು ನೋಡಿ ದುಃಖಿಸಿದುದು. ಇಂದ್ರಜಿತ್ತು ಸುಗ್ರೀವಾದಿಗಳಮೇಲೆ ಬಾಣವನ್ನು ಹೊಡೆದುದು. ವಿಭೀಷಣನು ಸುಗ್ರೀವನನ್ನು ಸಮಾಧಾನಪಡಿಸಿದುದು. ಇಂದ್ರಜಿತ್ತು ರಾವಣನಿಗೆ ತನ್ನ ಜಯವನ್ನು ತಿಳಿಸಿದುದು.

ಆಮೇಲೆ ವಾನರರೆಲ್ಲರೂ ಇಂದ್ರಜಿತ್ತನ್ನು ಹುಡುಕುವುದಕ್ಕಾಗಿ ಭೂಮ್ಯಾಕಾಶಗಳನ್ನೆಲ್ಲಾ ಸುತ್ತಿಸುತ್ತಿನೋಡುತ್ತ, ಇತ್ತಲಾಗಿ ಸರ್ವಾಂಗಗಳಲ್ಲಿಯೂ ಬಾಣಗಳು ನಾಟಿ ನೆಲದಮೇಲೆ ಮಲಗಿದ್ದ ಸಹೋದರರಾದ ರಾಮಲಕ್ಷ್ಮಣರಿಬ್ಬರನ್ನೂ ಕಂಡರು. ಮಳೆಸುರಿದು ಶಾಂತವಾದ ಮೇಘದಂತೆ, ಇಂದ್ರಜಿತ್ತು, ಈ ರಾಮಲಕ್ಷ್ಮಣರಮೇಲೆ ಬಾಣವರ್ಷಗಳನ್ನು ಕರೆದು ಸುಮ್ಮನಾದಮೇಲೆ, ಸುಗ್ರೀವವಿಭೀಷಣರಿಬ್ಬರೂ ರಾಮನಿದ್ದಕಡೆಗೆ ಬಂದರು. ಅದಕ್ಕೆ ಮೊದಲೇ ಹನುಮಂತನೂ, ನೀಲನೂ, ಮೈಂದದ್ವಿವಿದರೂ, ಸುಷೇಣನೂ ಅಲ್ಲಿಗೆ ಬಂದು ರಾಮಲಕ್ಷ್ಮಣರನ್ನು ನೋಡಿ ಬಹಳ ದುಃಖಾಕ್ರಾಂತರಾಗಿ ನಿಂತಿದ್ದರು. ಅಲ್ಲಿ ರಾಮಲಕ್ಷ್ಮಣರಿಬ್ಬರೂ ಅತ್ತಿತ್ತ ಕದಲಲಾರದೆ ನಿಶ್ಚೇಷ್ಟರಾಗಿ, ನಡುನಡುವೆ ಮೆಲ್ಲಗೆ ಶ್ವಾಸವನ್ನು ಬಿಡುತ್ತಲೂ, ನಡುನಡುವೆ ಮೆಲ್ಲಗೆ ಕೈಕಾಲುಗಳನ್ನಾಡಿಸುತ್ತಲೂ,ರಕ್ತದಿಂದ ತೊಯ್ದ ಸರ್ವಾವಯವಗಳುಳ್ಳವರಾಗಿದ್ದರು. ಅವರ ಸರ್ವಾಂಗಗಳಲ್ಲಿಯೂ ಬಾಣಸಮೂಹಗಳು ನಾಟಿದ್ದುವು. ಒಮ್ಮೊಮ್ಮೆ ಸರ್ಪದಂತೆ ಉದ್ದವಾಗಿ ನಿಟ್ಟುಸಿರನ್ನು ಬಿಡುತಿದ್ದರು.ಅವರ ವೀರ್ಯವು ಕ್ರಮಕ್ರಮವಾಗಿ ತಗ್ಗುತ್ತ ಬಂದಿತು. ಸರ್ವಾಂಗಗಳೂ ರಕ್ತದಿಂದ ತೊಯ್ದು ಕೆಂಪಾಗಿದ್ದುದರಿಂದ, ನೆಲದಮೇಲೆ ಮಲಗಿಸಿಡಲ್ಪಟ್ಟ ಸುವರ್ಣಧ್ವಜಗಳಂತೆ ಶರತಲ್ಪದಲ್ಲಿ ಮಲಗಿದ್ದರು. ಆ ಅಣ್ಣತಮ್ಮಂದಿರಿಬ್ಬರ ಸುತ್ತಲೂ, ವಾನರ ಯೂಥಪತಿಗಳ

ಲ್ಲರೂ ಗುಂಪಾಗಿ ನಿಂತು ಕಣ್ಣೀರುಬಿಟ್ಟು. ದುಃಖಿಸುತಿದ್ದರು. ಬಾಣಸ ಮೂಹಗಳಿಂದ ಮುಚ್ಚಿದ ಮೈಯುಳ್ಳವರಾಗಿ ಮಲಗಿದ್ದ ಆ ರಘುಪುಂಗ ವರಿಬ್ಬರನ್ನೂ ನೋಡಿ, ವಿಭೀಷಣಸಹಿತವಾಗಿ ಸಮಸ್ತ ವಾನರಸೈನ್ಯವೂ ಸಂಕಟಪಡುವಿಂದ ತತ್ತಳಿಸುತಿತ್ತು. ಅಲ್ಲಿದ್ದ ವಾನರರು ಒಮ್ಮೆ ಮುಖವನ್ನೆತ್ತಿ ಅಂತರಿಕ್ಷವನ್ನು ನೋಡುವರು. ಒಮ್ಮೊಮ್ಮೆ ನಾಲ್ಕು ದಿಕ್ಕುಗಳಿಗೂ ತಿರು ಗಿ ನೋಡುವರು. ಎಷ್ಟು ನೋಡಿದರೇನು! ಆ ಯುದ್ಧರಂಗದಲ್ಲಿ ಮಾಯೆ ಯಿಂದ ಕಣ್ಮರೆಯಾಗಿದ್ದ ರಾವಣಪುತ್ರನಾದ ಇಂದ್ರಜಿತ್ತನ್ನು ಮಾತ್ರ ಕಾಣಲಿಲ್ಲ. ವಿಭೀಷಣನೊಬ್ಬನುಮಾತ್ರ ಇಂದ್ರಜಿತ್ತಿನಂತೆಯೇ ಮಾಯೆ ಯಲ್ಲಿ ನಿಪುಣನಾದುದರಿಂದ, ತಾನೂ ಮಾಯೆಯನ್ನವಲಂಬಿಸಿ ನಾಲ್ಕು ಕ ಡೆಗಳನ್ನೂ ನೋಡುತ್ತ ಕೊನೆಗೆ ಮಾಯೆಯಿಂದ ಬೇರೆಯವರ ಕಣ್ಣಿಗೆ ಕಾಣದೆ ನಿಂತಿದ್ದ ತನ್ನಣ್ಣನ ಮಗನಾದ ಇಂದ್ರಜಿತ್ತನ್ನು ಕಂಡನು. ವೀರ್ಯ ಕರ್ಮಗಳಲ್ಲಿ ಎಣೆಯಿಲ್ಲದವನಾಗಿಯೂ, ಯುದ್ಧದಲ್ಲಿ ಇದಿರಿಲ್ಲದವನಾಗಿ ಯೂ, ವರದಾನಬಲದಿಂದ ಬೇರೆಯವರಿಗೆ ಅದೃಶ್ಯನಾಗಿಯೂ, ತೇಜಸ್ಸಿ ನಿಂದಲೂ, ಯಶಸ್ಸಿನಿಂದಲೂ, ಪರಾಕ್ರಮದಿಂದಲೂ ಕೊಬ್ಬಿದವನಾಗಿ ಯೂ ಇದ್ದ ಆ ಇಂದ್ರಜಿತ್ತು, ವಾನರರ ಕಣ್ಣಿಗೆ ಗೋಚರಿಸದಿದ್ದರೂ ವಿ ಭೀಷಣನಿಗೆ ಸ್ಪಷ್ಟವಾಗಿ ಕಾಣಿಸಿದನು. ಇಷ್ಟರಲ್ಲಿ ಇಂದ್ರಜಿತ್ತು ತನ್ನ ನಾಗಾಸ್ತ್ರದ ಮಹಿಮೆಯನ್ನೂ,ಅತ್ತಲಾಗಿ ತನ್ನ ವೈರಿಗಳಾದ ರಾಮಲಕ್ಷ್ಮ ಣರು ಬಾಣಪ್ರಹಾರದಿಂದ ನೊಂದು ಮಲಗಿರುವುದನ್ನೂ ನೋಡಿ, ಮಿತಿ ಮೀರಿದ ಸಂತೋಷದಿಂದುಬ್ಬುತ್ತ,ತನ್ನ ಕಡೆಯ ರಾಕ್ಷಸರೆಲ್ಲರನ್ನೂ ಪ್ರೋ ತ್ಸಾಹಪಡಿಸುವುದಕ್ಕಾಗಿ ಅವರನ್ನು ಕುರಿತು “ಎಲೆ ರಾಕ್ಷಸಭಟರೆ! ಅದೋ ನೋಡಿರಿ! ಯಾರು ಖರದೂಷಣಾದಿಗಳನ್ನು ಕೊಂದ ಮಹಾಬಲಾಢ್ಯ ರೆಂದು ಪ್ರಸಿದ್ಧಿಹೊಂದಿದ್ದರೋ, ರಾಮಲಕ್ಷ್ಮಣರೆಂಬ ಆ ಸಹೋದರ ರಿಬ್ಬರೂ ನನ್ನ ಬಾಣಗಳಿಂದ ನೊಂದು ನಿಶ್ಚೇಷ್ಟರಾಗಿ ಮಲಗಿರುವುದನ್ನು ನೋಡಿರಿ! ದೇವತೆಗಳಾಗಲಿ, ಅಸುರರಾಗಲಿ, ಋಷಿಸಮೂಹಗಳಾಗಲಿ ಎ ಲ್ಲರೂ ಒಂದಾಗಿಸೇರಿ ಬಂದರೂ, ಇವರನ್ನು ಈ ನನ್ನ ನಾಗಪಾಶಗಳ ಕಟ್ಟಿ ನಿಂದ ಬಿಡಿಸುವುದು ಸಾಧ್ಯವಲ್ಲ. ಯಾರ ಪೌರುಷಕ್ಕಾಗಿ ಭಯಪಟ್ಟು ನ ನ್ನ ತಂದೆಯಾದ ರಾವಣನು ಹಗಲು ರಾತ್ರಿಯೂ ಚಿಂತೆಯಿಂದ ಕೊರಗು

ತ್ತ, ರಾತ್ರಿಕಾಲದ ಮೂರು ಜಾವಗಳಲ್ಲಿ ಒಂದು ಜಾವದ ಕಾಲವಾದರೂ ತನ್ನ ದೇಹವನ್ನು ಹಾಸಿಗೆಯ ಮೇಲಿಡದೆ,ಆ ರಾತ್ರಿಕಾಲವನ್ನೆಲ್ಲಾ ಕೇವಲ ಜಾಗರಣೆಯಿಂದಲೇ ಕಳೆಯುತ್ತಿರುವನೋ,ಮತ್ತು ಯಾವನ ನಿಮಿತ್ತವಾಗಿ ಲಂಕೆಯ ಜನವೆಲ್ಲವೂ ವರ್ಷಾಕಾಲದಲ್ಲಿ ನದೀಜಲವು ಕಲಗುವಂತೆ ವ್ಯಗ್ರ ಮನಸ್ಸುಳ್ಳುದಾಗಿರುವುದೋ, ಯಾವನು ನಮ್ಮೆಲ್ಲರನ್ನೂ ನಿರ್ಮೂಲವಾಗಿ ನಾಶಮಾಡಬೇಕೆಂಬ ದುರುದ್ದೇಶದಿಂದ ಪ್ರಯತ್ನಮಾಡಿ ಇಲ್ಲಿಗೆ ಬಂದ ನೋ,ಅಂತಹ ರಾಮನನ್ನು ಇದೋ ನಾನು ಇಲ್ಲಿ ಕೊಂದು ಕೆಡಹಿರುವೆನು. ಈ ರಾಮನೂ, ಈ ಲಕ್ಷ್ಮಣನೂ, ಈ ಸಮಸ್ತವಾನರರೂ ಸೇತುಬಂಧಾದಿಕಾರ್ಯಗಳಿಂದ ತೋರಿಸಿದ ಪರಾಕ್ರಮಗಳೆಲ್ಲವೂ ಶರತ್ಕಾಲದ ಮೇಘಗಳಂತೆ ನಿಷ್ಫಲಗಳಾಗಿ ಹೋದುವು." ಎಂದನು. ಹೀಗೆ ರಾವಣಪುತ್ರನಾದ ಇಂದ್ರಜಿತ್ತು ತನ್ನನ್ನು ಸುತ್ತಿನಿಂತಿದ್ದ ಸಮಸ್ತರಾಕ್ಷಸರಿಗೂ ಈ ಮಾತುಗಳನ್ನಾಡಿ, ತಿರುಗಿ ತನ್ನ ಬಾಣಪ್ರಯೋಗಕ್ಕೆ ತೊಡಗಿ, ಈ ರಾಮಲಕ್ಷ್ಮಣರನ್ನು ಸುತ್ತಿನಿಂತಿದ್ದ ಸುಗ್ರೀವಾದಿವಾನರಯೂಥಪತಿಗಳಮೇಲೆ ಎಡೆಬಿಡದೆ ಬಾಣಗಳನ್ನು ಬಿಡುತಿದ್ದನು. ನೀಲನನ್ನು ಒಂಭತ್ತುಬಾಣಗಳಿಂದ ಹೊಡೆದನು. ಮೈಂದದ್ವಿವಿದರಿಬ್ಬರಮೇಲೆಯೂ ಮೂರುಮೂರುಬಾಣಗಳನ್ನು ಪ್ರಯೋಗಿಸಿದನು. ಜಾಂಬವಂತನ ಎದೆಗೆ ಗುರಿಯಿಟ್ಟು ಒಂದು ಬಾಣವನ್ನು ಬಿಟ್ಟನು. ಹನುಮಂತನಮೇಲೆ ಹತ್ತು ಬಾಣಗಳನ್ನು ಪ್ರಯೋಗಿಸಿದನು. ಎಣೆಯಿಲ್ಲದ ತೇಜಸ್ಸುಳ್ಳ ಗವಾಕ್ಷಶರಭರೆಂಬ ವಾನರರಿಬ್ಬರನ್ನೂ ಎರಡೆರಡು ಬಾಣಗಳಿಂದ ಹೊಡೆದನು. ಗೋಲಾಂಗೂಲಾಧಿಪತಿಯಾದ ಗವಾಕ್ಷನಮೇಲೆ ಮತ್ತೊಮ್ಮೆ ಅನೇಕಬಾಣಗಳನ್ನು ಪ್ರಯೋಗಿಸಿದನು. ಹಾಗೆಯೇ ಅಂಗದನಮೇಲೆಯೂ ಅಸಂಖ್ಯಾತಗಳಾದ ಬಾಣಗಳನ್ನು ಬಿಟ್ಟನು. ಬಲಾಢ್ಯನಾಗಿಯೂ, ಮಹಾಧೈರ್ಯಶಾಲಿಯಾಗಿಯೂ ಇದ್ದ ಆ ಇಂದ್ರಜಿತ್ತು, ಹೀಗೆ ಆ ರಾತ್ರಿಯುದ್ಧದಲ್ಲಿ ಅಲ್ಲಿದ್ದ ಸಮಸ್ತವಾನರರನ್ನೂ, ಅಗ್ನಿಜ್ವಾಲೆಗೆ ಸಮಾನಗಳಾದ ತನ್ನ ತೀಕ್ಷ್ಣಬಾಣಗಳಿಂದ ತಡೆದು, ಸಂತೋಷದಿಂದ ಸಿಂಹನಾದವನ್ನು ಮಾಡಿದನು. ಹೀಗೆ ಮಹಾಬಾಹುವಾದ ಇಂದ್ರಜಿತ್ತು, ಸಮಸ್ತವಾನರರನ್ನೂ ತನ್ನ ಬಾಣಸಮೂಹಗಳಿಂದ ಪ್ರಹರಿಸಿ, ಬಾಯಿಮಾತಿನಿಂದಲೂ ಅವರವರನ್ನು ಹೆದರಿ



೨೩.೬೫. ರಾತ್ರಿಯುದ್ಧವು. ಇಂದ್ರಜಿತ್ತಿನ ನಾಗಪಾಶದಿಂದ ರಾಮಲಕ್ಷ್ಮಣರು ಮೂರ್ಛೆಹೊಂದಿದುದು. ವಿಭೀಷಣನು ಸುಗ್ರೀವಾದಿಗಳಿಗೆ ಧೈರ್ಯವನ್ನು ಹೇಳಿ ಸಮಾಧಾನಪಡಿಸಿದುದು.

ಸುತ್ತ, ಅಟ್ಟಹಾಸದಿಂದ ಪಕಪಕನೆ ನಕ್ಕು,ತಿರುಗಿ ತನ್ನ ಕಡೆಯ ರಾಕ್ಷಸರನ್ನು ನೋಡಿ "ಎಲೆ ರಾಕ್ಷಸರೆ ! ಇಲ್ಲಿನ ಸೇನಾಮುಖದಲ್ಲಿ ಸಮಸ್ತವಾನರ ಸೈನ್ಯವೂ ನೋಡುತ್ತಿರುವಾಗಲೇ,ಆ ಅಣ್ಣತಮ್ಮಂದಿರಾದ ರಾಮಲಕ್ಷ್ಮಣ ರಿಬ್ಬರನ್ನೂ ಭಯಂಕರಗಳಾದ ನನ್ನ ಬಾಣಪಾಶಗಳಿಂದ ಕಟ್ಟಿಹಾಕಿ ರುವೆನು. ನನ್ನ ಸರ್ಪಾಸ್ತ್ರಗಳಿಂದ ಬದ್ಧರಾದ ಆ ಸಹೋದರರಿಬ್ಬರೂ ಒಂದಾಗಿ ಮಲಗಿರುವುದನ್ನು ಚೆನ್ನಾಗಿ ನೋಡಿರಿ." ಎಂದನು. ಈ ಮಾತನ್ನು ಕೇಳಿದೊಡನೆ ಕಪಟಯುದ್ಧದಲ್ಲಿ ನಿಪುಣರಾದ ಆ ರಾಕ್ಷಸರೆಲ್ಲ ರೂ, ಇಂದ್ರಜಿತ್ತು ನಡೆಸಿದ ವೀರಕಾರ್ಯಕ್ಕಾಗಿ ಬಹಳಸಂತುಷ್ಟರಾಗಿ, ಆಶ್ಚರ್ಯದಿಂದ ಸ್ತಬ್ಧರಾದರು. ಮೇಘದಂತೆ ಮಹಾಕಾಯವುಳ್ಳ ಆ ರಾಕ್ಷ ಸರೆಲ್ಲರಿಗೂ ರಾಮನು ಹತನಾದನೆಂದೇ ನಿಶ್ಚಯವು ಹುಟ್ಟಿತು. ಮಹಾ ಧ್ವನಿಯುಂಟಾಗುವಂತೆ ಎಲ್ಲರೂ ಸಿಂಹನಾದವನ್ನು ಮಾಡುತ್ತಿದ್ದರು. ಒಬ್ಬೊಬ್ಬರೂ ಇಂದ್ರಜಿತ್ತನ್ನು ಕೊಂಡಾಡುತಿದ್ದರು. ಆಗ ಇಂದ್ರಜಿತ್ತೂ ಕೂಡ ರಾಮಲಕ್ಷ್ಮಣರಿಬ್ಬರೂ ಉಸಿರಾಡದೆ ನಿಶ್ಚೇಷ್ಟರಾಗಿ ನೆಲದಮೇ ಲೆ ಬಿದ್ದಿರುವುದನ್ನು ನೋಡಿ, ಅವರಿಬ್ಬರೂ ಸತ್ತರೆಂದೇ ನಿಶ್ಚಯಿಸಿಕೊಂ ಡನು. ಅವನ ಮನಸ್ಸಿಗೆ ಮಿತಿಮೀರಿದ ಸಂತೋಷವೂ ಹುಟ್ಟಿತು. ತನ್ನ ಕಡೆ ಯ ರಾಕ್ಷಸರನ್ನು ಮೇಲೆಮೇಲೆ ಪ್ರೋತ್ಸಾಹಿಸುತ್ತಾ, ಆ ಯುದ್ಧಭೂ ಮಿಯನ್ನು ಬಿಟ್ಟು, ಆಗಲೇ ಹಿಂತಿರುಗಿ ಲಂಕಾಪುರಿಯನ್ನು ಪ್ರವೇಶಿಸಿದನು. ಇತ್ತಲಾಗಿ ರಾಮಲಕ್ಷ್ಮಣರ ಸರ್ವಾವಯವರಳೂ ಬಾಣಮಯಗಳಾಗಿ, ಕೈ ಕಾಲು ಮೊದಲಾದ ಅಂಗಗಳಾಗಲಿ, ಬೆರಳು ಮೊದಲಾದ ಉಪಾಂಗಗಳಾ ಲಿ ಯಾವುದೊಂದೂ ಹೊರಗೆ ಕಾಣದೆ ಶಸ್ತ್ರಸಮೂಹಗಳಿಂದ ಮುಚ್ಚಿ ಹೋದುದನ್ನು ನೋಡಿ, ಸುಗ್ರೀವನ ಮನಸ್ಸಿನಲ್ಲಿ ಮಹತ್ತಾದ ಭಯವು ಹುಟ್ಟಿತು. ದುಃಖದಿಂದ ಆತನ ಕಣ್ಣುಗಳಲ್ಲಿ ನೀರು ತುಳುಕುತಿತ್ತು. ಅವ ನ ಮುಖವು ಕಂಪಿತು. ಹೀಗೆ ಅತಿದೈನ್ಯದಿಂದ ನಿಂತಿರುವ ಸುಗ್ರೀವನನ್ನು ನೋಡಿ ವಿಭೀಷಣನು ಮುಂದೆ ಬಂದು ಅವನನ್ನು ಸಮಾಧಾನಪಡಿಸುತ್ತ" "ಸುಗ್ರೀವಾ!ಭಯಪಡಬೇಡ ! ನಿನ್ನ ದುಃಖವನ್ನು ಬಿಡು! ಧೈರ್ಯದಿಂದಿರು! ಕಣ್ಣೀರನ್ನು ತಡೆಹಿಡು! ಯುದ್ಧದ ಕ್ರಮಗಳೇ ಹೀಗಲ್ಲವೆ ? ಯುದ್ಧದಲ್ಲಿ ಯಾವಾಗಲೂ ಜಯವೇ ಉಂಟಾಗುವುದೆಂಬ ನಿಶ್ಚಯವಿಲ್ಲವಷ್ಟೆ ? ಎಲೈ

ಕಪಿವೀರನೆ ! ನಮಗೆ ಭಾಗ್ಯಶೇಷವಿದ್ದಪಕ್ಷದಲ್ಲಿ ಮಹಾತ್ಮರಾಗಿಯೂ, ಮ ಹಾಬಲಾಢ್ಯರಾಗಿಯೂ ಇರುವ ಈ ಸಹೋದರರಿಬ್ಬರೂ ಶೀಘ್ರದಲ್ಲಿಯೇ ಚೇತರಿಸಿಕೊಳ್ಳಬಹುದಲ್ಲವೆ ? ನೀನು ಧೈರವನ್ನು ಬಿಡಬೇಡ! ನಾನು ನನ್ನ ಣ್ಣನನ್ನು ಬಿಟ್ಟು ಈ ರಾಮನನ್ನೇ ನಂಬಿ ಬಂದವನಲ್ಲವೆ? ಈಗ ಬೇರೆದಿಕ್ಕಿಲ್ಲ ದೆ ಅನಾಥನಾಗಿರುವ ನನಗೂ ನೀನೇ ಧೈರ್ಯವನ್ನು ಹೇಳಬೇಕು. ಸುಗ್ರೀವಾ! ಸತ್ಯವನ್ನೂ, ಧರ್ಮವನ್ನೂ ದೃಢವಾಗಿ ಅವಲಂಬಿಸಿರುವವರಿಗೆ ಎಂದಿಗೂ ಅಪಮೃತ್ಯುಭಯವುಂಟಾಗದು."ಎಂದನು. ವಿಭೀಷಣನು ಹೀಗೆಂದು ಹೇಳಿ, ಆದುವರೆಗೆ ಸುಗ್ರೀವನು ಕಣ್ಣೀರನ್ನು ಸುರಿಸಿದ ಅಶ್ಲೀಲವನ್ನು ನಿವಾರಿಸು ವುದಕ್ಕಾಗಿ ಕೈಯ್ಯಿಂದ ನೀರನ್ನು ತೆಗೆದುಕೊಂಡು ಸುಗ್ರೀವನ ಕಣ್ಣುಗಳ ನ್ನೊರಸಿದನು. ಆಮೇಲೆ ಧರ್ಮಾತ್ಮನಾದ ಆ ವಿಭೀಷಣನು ಸುಗ್ರೀವನಿಗೆ ರಾಕ್ಷಸರ ಮಾಯೆಯನ್ನು ಚೆನ್ನಾಗಿ ತೋರಿಸಿ ಧೈರ್ಯವನ್ನುಂಟುಮಾಡುವು ದಕ್ಕಾಗಿ,ತಿರುಗಿಮತ್ತಷ್ಟು ನೀರನ್ನು ಕೈಗೆತೆಗೆದುಕೊಂಡು,ಮಾಯೆಯಿಂದುಂ ಟಾದ ಮೋಹವನ್ನು ನಿವಾರಿಸತಕ್ಕ ವಿದ್ಯೆಯಿಂದ ಆ ನೀರನ್ನಭಿಮಂತ್ರಿಸಿ, ಆಮೇಲೆ ಆ ನೀರಿನಿಂದ ಸುಗ್ರೀವನ ಕಣ್ಣುಗಳನ್ನೊರಿಸಿದನು. ಹೀಗೆ ಮಂ ತ್ರಿಸಿದ ನೀರಿನಿಂದ ಸುಗ್ರೀವನ ಕಣ್ಣುಗಳನ್ನು ತೊಳೆದು, ಕಾಲೋಚಿತವಾ ದ ಮಾತಿನಿಂದ ಆತನನ್ನು ಕುರಿತು "ಎಲೈ ವಾನರ ರಾಜೇಂದ್ರನೆ ! ಅಧೈ ರ್ಯಪಡುವುದಕ್ಕೆ ಇದು ಕಾಲವಲ್ಲ. ಒಂದುವೇಳೆ ನಿನಗೆ ರಾಮಲಕ್ಷ್ಮಣರಲ್ಲಿ ರುವ ಮಿತಿಮೀರಿದ ಸ್ನೇಹವು ಹೀಗೆ ಮಾಡಿರಬಹುದು. ಅಂತಹ ಅತಿಸ್ನೇಹ ಕ್ಕೂ ಇದು ಅಕಾಲವು. ಇಂತಹ ಕಾಲದಲ್ಲಿ ಅದುಕೂಡ ಮರಣಕ್ಕೆ ಕಾರ ಣವಾಗುವುದು. ಆದುದರಿಂದ ಸಮಸ್ತಕಾರ್ಯಗಳನ್ನೂ ಕೆಡಿಸತಕ್ಕ ಈ ಅ ಧೈರ್ಯವನ್ನು ಬಿಟ್ಟು, ರಾಮನನ್ನು ಮುಂದಿಟ್ಟುಕೊಂಡು ಬಂದಿರುವ ಈ ಸ ಮಸ್ತವಾನರಸೈನ್ಯಗಳಿಗೂ ಮುಂದೆ ಹಿತವಾವುದೋ ಅದನ್ನಾಲೋ ಚಿಸು. ಹಾಗಿಲ್ಲವೇ ರಾಮನು ಮೂರ್ಛೆತಿಳಿದು ಮೇಲಕ್ಕೆ ಏಳುವವರೆಗೂ ಅವನನ್ನು ರಕ್ಷಿಸುತ್ತಿರು. ಕಕುತ್ಸ್ಥಕುಲತಿಲಕರಾದ ಈ ರಾಮಲಕ್ಷ್ಮಣರಿ ಬ್ಬರೂ ಮೂರ್ಛೆತಿಳಿದೆದ್ದೊಡನೆಯೇ ನಮ್ಮ ಭಯವನ್ನೆಲ್ಲಾ ನೀಗಿಸು ವರು. "ಹೀಗೆ ನಿಶ್ಚೇಷ್ಟರಾಗಿ ಮಲಗಿರುವವರು ತಿರುಗಿ ಹೀಗೆ ಚೇತರಿಸಿ ಕೊಳ್ಳಬಲ್ಲ"ರೆಂದು ಕೇಳುವೆಯಾ ? ಸುಗ್ರೀವಾ! ಈ ಬಂಧದಿಂದ ರಾಮನಿ

ಗೇನೂ ಆಗಲಾರದು. ಅವನು ಇದರಿಂದ ಮೃತಿಹೊಂದುವನೆಂಬ ಶಂಕೆಯು ನ್ನು ನೀನು ಬಿಟ್ಟುಬಿಡು. ಆ ರಾಮನ ಮುಖವನ್ನು ನೋಡಿದೆಯಾ ? ಅವನ ಮುಖದ ಕಳೆಯು ಇನ್ನೂ ಸ್ವಲ್ಪವಾದರೂ ಕುಂದಿಲ್ಲವು. ಸಾಯುವವರ ಮುಖದಲ್ಲಿ ಎಂದಿಗೂ ಈವಿಧವಾದ ಕಳೆಯಿರದು. ಆದುದರಿಂದ ಎಲೆ ವಾ ನರೇಂದ್ರನೆ ! ನಿನ್ನ ಮನಸ್ಸನ್ನು ಸಮಾಧಾನದಿಂದಿರಿಸು. ನಿನ್ನ ಕಡೆಯ ಸೈ ನ್ಯಕ್ಕೂ ಸಮಾಧಾನವನ್ನು ಹೇಳು.ನಾನು ಮುಂದೆ ನಡೆಸಬೇಕಾದ ಕೆಲವು ಕಾರ್ಯಗಳನ್ನು ಕ್ರಮಪಡಿಸಿ ಬರುವವರೆಗೂ ನೀನು ನಿನ್ನ ಮನಸ್ಸನ್ನು ತಡೆ ದಿಡು ! ಕಾರ್ಯಗಳನ್ನು ಕ್ರಮಪಡಿಸುವುದೇನೆಂದು ಕೇಳುವೆಯಾ ? ಎಲೆ ವಾನರೇಂದ್ರನೆ ! ಇದೋ ನೋಡು ! ಇತ್ತಲಾಗಿ ನಿನ್ನಕಡೆಯ ಕೆಲವು ವಾ ನರರು ನಟ್ಟಕಣ್ಣುಗಳಿಂದ ನನ್ನನ್ನು ನೋಡುತ್ತ, ನಾನೇ ಇಂದ್ರಜಿತ್ತೆಂದು ಭ್ರಮಿಸಿ,ಭಯದಿಂದ ಪುಳಕಿತವಾದ ಮೈಯುಳ್ಳವರಾಗಿ ಇನ್ನೂ ನಾನಾವಿ ಧ ಭಯವಿಕಾರಗಳನ್ನು ತೋರಿಸುತ್ತ, ಒಬ್ಬರಕಿವಿಯಲ್ಲೊಬ್ಬರು ಪಲಾ ಯನಮಂತ್ರವನ್ನು ಪದೇಶಿಸುತ್ತಿರುವರು ಆದುದರಿಂದ ಮೊದಲು ನಾ ನು ಇವರ ಭಯವನ್ನು ನೀಗಿಸಿಬರಬೇಕು. ಹಾಗಿಲ್ಲದಿದ್ದರೆ ಇವರು ನನ್ನ ನ್ನೇ ನೋಡಿ ಭಯಪಟ್ಟು ಓಡಿಹೋಗುವರು. ಮೊದಲು ಈ ವಾನರಿಗೆ ಭ ಯವನ್ನು ನೀಗಿಸಿ ಪ್ರೋತ್ಸಾಹವನ್ನು ಹುಟ್ಟಿಸಿಬರಬೇಕು. ಮುಡಿದು ಬಾಡಿ ದ ಹೂಮಾಲೆಯನ್ನು ಕಿತ್ತೆಸೆಯುವಂತೆ, ಈ ವಾನರರೆಲ್ಲರೂ ತಮ್ಮ ಮನ ಸ್ಸಿನಲ್ಲಿ ಹುಟ್ಟಿರುವ ಭಯವನ್ನು ಬಿಟ್ಟೊಗೆಯುವಂತೆ ಪ್ರಯತ್ನಿಸುವೆನು." ಎಂದನು. ಹೀಗೆ ವಿಭೀಷಣನು ಸುಗ್ರೀವನನ್ನು ಸಮಾಧಾನಪಡಿಸಿ, ಅತ್ತ ಲಾಗಿ ಭಯದಿಂದ ಓಡಿಹೋಗುತಿದ್ದ ಆ ವಾನರಸೈನ್ಯಗಳನ್ನು ಮೃದುವಾ ಕ್ಯದಿಂದ ಕೂಗಿ ಕರೆಯುತ್ತ, "ಎಲೈ, ಕಪಿವೀರರೆ ! ನಾನು ಇಂದ್ರಜಿತ್ತ ಲ್ಲ ! ವಿಭೀಷಣನು!" ಎಂದು, ಅವರಿಗೆ ನಂಬಿಕೆಯನ್ನು ಹುಟ್ಟಿಸಿ ಪ್ರೋತ್ಸಾ ಹಿಸಿದನು. ಇಷ್ಟರಲ್ಲಿ ಅತ್ತಲಾಗಿ ಮಹಾಮಾಯಾವಿಯಾದ ಇಂದ್ರಜಿ ತ್ತು, ತನ್ನ ಸಮಸ್ತ ಸೈನ್ಯಗಳಿಂದ ಪರಿವೃತನಾಗಿ ಲಂಕೆಯನ್ನು ಪ್ರವೇಶಿಸಿ ತಂದೆಯ ಬಳಿಗೆ ಹೋದನು. ಅಲ್ಲಿ ಸಭೆಯಲ್ಲಿದ್ದ ರಾವಣನಿಗೆ ಕೈಮುಗಿದು ನಮಸ್ಕರಿಸಿ, "ಜನಕಾ! ನಾನು ರಾಮಲಕ್ಷ್ಮಣರಿಬ್ಬರನ್ನೂ ವಧಿಸಿಬಂದೆನು" ಎಂಬೀ ಪ್ರಿಯವಾರ್ತೆಯನ್ನೂ ತಿಳಿಸಿದನು. ರಾವಣನು ಆ ಸಮಸ್ತ ರಾಕ್ಷಸ

ರ ಮಧ್ಯದಲ್ಲಿ ತನ್ನ ಶತ್ರುಗಳಾದ ರಾಮಲಕ್ಷ್ಮಣರು ಹತರಾದರೆಂದು ಕೇಳಿದೊಡನೆ ಸಂತೋಷವನ್ನು ತಡೆಯಲಾರದೆ,ಜಗ್ಗನೆ ಆಸನದಿಂದ ಮೇಲೆದ್ದು ಮುಂದೆ ಬಂದು, ತನ್ನ ಮಗನಾದ ಇಂದ್ರಜಿತ್ತನ್ನು ತನ್ನ ಎರಡು ಕೈಗಳಿಂದಲೂ ಆಲಿಂಗಿಸಿಕೊಂಡು, ಉಕ್ಕಿಬರುವ ಸಂತೋಷದಿಂದ ಆತನ ತಲೆಯನ್ನಾಘ್ರಾಣಿಸಿ, "ಎಲೈ, ವತ್ಸನೆ! ನೀನು ಆ ರಾಮ ಲಕ್ಷ್ಮಣರನ್ನು ಕೊಂದಬಗೆಯೇನು?" ಎಂದು ಕೇಳಿದನು. ಆಗ ಇಂದ್ರಜಿತ್ತು ತನ್ನ ತಂದೆಯಾದ ರಾವಣನ ಮುಂದೆ, ತಾನು ರಾತ್ರಿಯುದ್ಧದಲ್ಲಿ ರಾಮಲಕ್ಷ್ಮಣರನ್ನು ನಾಗಪಾಶದಿಂದ ಕಟ್ಟಿಕೆಡಹಿದ ಕ್ರಮಗಳೆಲ್ಲವನ್ನೂ ಇದ್ದುದಿದ್ದಂತೆ ಯಥಾಸ್ಥಿತವಾಗಿ ತಿಳಿಸಿದನು. ಆಗ ರಾವಣನು ಮಹಾರಥನಾದ ಇಂದ್ರಜಿತ್ತಿನ ಮಾತನ್ನು ಕೇಳಿ,ಮಿತಿಮೀರಿದ ಸಂತೋಷದಿಂದ ಹಿಗ್ಗುತ್ತ,ಆದುವರೆಗೂ ತನಗೆ ರಾಮನ ವಿಷಯವಾಗಿ ಮನಸ್ಸಿನಲ್ಲಿದ್ದ ಭಯವನ್ನು ನಿಶ್ಶೇಷವಾಗಿ ಬಿಟ್ಟು,ತನ್ನನ್ನು ಕೃತಾರ್ಥನನ್ನಾಗಿ ಭಾವಿಸಿಕೊಂಡು,ಬಾರಿಬಾರಿಗೂ ತನ್ನ ಮಗನ ಪರಾಕ್ರಮವನ್ನೆತ್ತಿ ಕೊಂಡಾಡುತಿದ್ದನು. ಇಲ್ಲಿಗೆ ನಾಲ್ವತ್ತಾರನೆಯ ಸರ್ಗವು.

---

ರಾವಣಾಜ್ಞೆಯಿಂದ ರಾಕ್ಷಸಸ್ತ್ರೀಯರು ಸೀತೆಯನ್ನು ಪುಷ್ಪಕವಿಮಾನದ ಮೇಲೇರಿಸಿ,ಯುದ್ಧಭೂಮಿಗೆ ಕರೆತಂದು, ನಾಗಪಾಶಬದ್ಧರಾಗಿ ಬಿದ್ದಿದ್ದ ರಾಮಲಕ್ಷ್ಮಣರನ್ನು ತೋರಿಸಿದುದು.

ಹೀಗೆ ರಾವಣಪುತ್ರನಾದ ಇಂದ್ರಜಿತ್ತು ರಾಮಲಕ್ಷ್ಮಣರನ್ನು ಜಯಿಸಿದುದರಿಂದ ತಾನು ಕೃತಾರ್ಥನೆಂದು ಭಾವಿಸಿ, ಹಿಂತಿರುಗಿ ಲಂಕೆಗೆ ಹೋದ ಮೇಲೆ, ಇತ್ತಲಾಗಿ ಹನುಮಂತನೂ, ಅಂಗದನೂ, ನೀಲನೂ, ಸುಷೇಣನೂ, ಕುಮುದನೂ, ನಲನೂ, ಗವಾಕ್ಷನೂ, ಗವಯನೂ, ಶರಭನೂ,ಜಾಂಬವಂತನೂ, ಗಂಧಮಾದನನೂ, ಋಷಭಸ್ಕಂಧನೂ, ರಂಭನೂ, ಶತವಲಿ, ಪೃಥು, ಮೊದಲಾದ ಅನೇಕ ವಾನರಸಿಂಹರು ದುಃಖಿತರಾಗಿ,ರಾಮನ ಸುತ್ತಲೂ ಸೇರಿನಿಂತು ಅವರಿಬ್ಬರನ್ನೂ ರಕ್ಷಿಸುತಿದ್ದರು. ಇತರ ವಾನರಯೂಥಪತಿಗಳು ತಮ್ಮತಮ್ಮ ಸೇನೆಗಳನ್ನು ವ್ಯೂಹಗಳಾಗಿ ಕಟ್ಟಿ, ನಾನಾಕಡೆಗಳಲ್ಲಿಯೂ ಎಚ್ಚರಿಕೆಯಿಂದ ನೋಡುತ್ತ,ದೊಡ್ಡದೊಡ್ಡ ಮರಗಳನ್ನು ಕೈಯ

ಲ್ಲಿ ಹಿಡಿದು, ಸಮಸ್ತದಿಕ್ಕುಗಳನ್ನೂ, ತಿರ್ಯಗೂರ್ಧ್ವಪ್ರದೇಶಗಳನ್ನೂ, ಕ ಣ್ಣಿಟ್ಟು ಕಾಯುತ್ತ, ಒಂದು ಹುಲ್ಲು ಕದಲಿದರೂ ರಾಕ್ಷಸರು ಬಂದರೆಂದೇ ಶಂಕಿಸುತ್ತ ಬಹಳ ಜಾಗರೂಕತೆಯಿಂದಿದ್ದರು. ಇಷ್ಟರಲ್ಲಿ ಅತ್ತಲಾಗಿ ರಾ ವಣನು, ಜಯಶೀಲನಾಗಿ ತನ್ನ ಬಳಿಗೆ ಬಂದ ತನ್ನ ಮಗನಾದ ಇಂದ್ರಜಿತ್ತ ನ್ನು ಮನ್ನಿಸಿ ಕಳುಹಿಸಿದಮೇಲೆ,ಸೀತೆಗೆ ಕಾವಲಾಗಿದ್ದ ರಾಕ್ಷಸಸ್ತ್ರೀಯರನ್ನು ಕರೆತರುವಂತೆ ಆಜ್ಞೆಮಾಡಿದನು. ಈ ರಾಜಾಜ್ಞೆಯಂತೆ ಕೆಲವು ರಾಕ್ಷಸಸ್ತ್ರೀ ಯರು ತ್ರಿಜಟೆಯೊಡನೆ ಸೇರಿ ರಾವಣನ ಬಳಿಗೆ ಬಂದರು. ಆಗ ರಾವಣನು ಸಂತೋಷದಿಂದ ಆ ರಾಕ್ಷಸಸ್ತ್ರೀಯರನ್ನು ನೋಡಿ "ಎಲೆ ರಾಕ್ಷಸಿಯರೆ! ನ ನ್ನ ಕುಮಾರನಾದ ಇಂದ್ರಜಿತ್ತಿನಿಂದ ರಾಮಲಕ್ಷ್ಮಣರಿಬ್ಬರೂ ಹತರಾದ ರೆಂಬ ವೃತ್ತಾಂತವನ್ನು ಈಗಲೇ ನೀವು ಸೀತೆಗೆ ತಿಳಿಸಬೇಕು. ಈ ಸಂಗತಿ ಯನ್ನು ತಿಳಿಸುವುದಲ್ಲದೆ, ಆಕೆಯನ್ನು ಪುಷ್ಪಕವಿಮಾನದ ಮೇಲೇರಿಸಿ ಕರೆ ತಂದು, ರಣರಂಗದಲ್ಲಿ ಹತರಾಗಿ ಬಿದ್ದಿರುವ ರಾಮಲಕ್ಷ್ಮಣರನ್ನು ಆಕೆಗೆ ತೋರಿಸಿರಿ! ಆ ಸೀತೆಯು ಇದುವರೆಗೂ ಯಾವನನ್ನು ನಂಬಿ,ನನಗೆ ವಶ ಳಾಗದೆ ನನ್ನನ್ನು ತಿರಸ್ಕರಿಸುತಿದ್ದಳೋ, ಆ ರಾಮನು ತನ್ನ ತಮ್ಮನೊ ಡನೆ ಯುದ್ಧಾಗ್ರದಲ್ಲಿ ಹತನಾಗಿ ಬಿದ್ದಿರುವನು. ಇನ್ನಾದರೂ ಆ ಸೀತೆಯು ತನ್ನ ಮನಸ್ಸಿನ ಶೋಕವನ್ನೂ,ವಿಚಾರವನ್ನೂ ಬಿಟ್ಟು,ರಾಮನು ಬರುವನೆಂ ಬ ಆಶೋತ್ತರವನ್ನೂ ತೊರೆದು,ಸರ್ವಾಭರಣಾಲಂಕೃತೆಯಾಗಿ ನನ್ನನ್ನು ಸೇ ರಬಹುದು. ಯುದ್ಧದಲ್ಲಿ ರಾಮನು ತನ್ನ ತಮ್ಮನಾದ ಲಕ್ಷ್ಮಣನೊಡನೆ ಹತನಾಗಿ ಬಿದ್ದಿರುವುದನ್ನು,ವಿಶಾಲಾಕ್ಷಿಯಾದ ಆ ಸೀತೆಯು ತನ್ನ ಕಣ್ಣಾರೆ ತಾನೇ ನೋಡಿದಪಕ್ಷದಲ್ಲಿ, ಆಕೆಗೆ ಇನ್ನುಮೇಲೆ ನನ್ನನ್ನು ಬಿಟ್ಟರೆ ಬೇರೆಗತಿ ಯಿಲ್ಲವೆಂದು ತಾನಾಗಿಯೇ ವ್ಯಕ್ತವಾಗುವುದು. ಇನ್ನುಮೇಲೆ ನಾನಾಗಿ ಪ್ರಾರ್ಥಿಸದಿದ್ದರೂ ಅವಳು ರಾಮನಲ್ಲಿ ನಟ್ಟಿರುವ ತನ್ನ ಮನಸ್ಸನ್ನು ತಾ ನಾಗಿಯೇ ತಿರುಗಿಸಿ ನನ್ನನ್ನು ಸೇರುವಳು" ಎಂದನು. ಆ ರಾಕ್ಷಸಸ್ತ್ರೀಯರೆ ಲ್ಲರೂ ದುರಾತ್ಮನಾದ ರಾವಣನ ಆಜ್ಞೆಯನ್ನು ಕೇಳಿ, "ಮಹಾರಾಜನ ಅಪ್ಪಣೆ" ಎಂದು ಹೇಳಿ,ಪುಷ್ಪಕವಿಮಾನವಿದ್ದ ಸ್ಥಳಕ್ಕೆ ಹೋದರು. ರಾವ ಣಾಜ್ಞೆಯಂತೆ ಆ ರಾಕ್ಷಸಿಯರೆಲ್ಲರೂ ಆ ಪುಷ್ಪಕವಿಮಾನವನ್ನು ತೆಗೆದು ಕೊಂಡು, ಅಶೋಕವನದಲ್ಲಿ ಸೀತೆಯಿದ್ದಸ್ಥಳಕ್ಕೆ ಬಂದು, ಮೊದಲೇ ಪತಿ

ಶೋಕದಿಂದ ಕೊರಗುತ್ತಿರುವ ಆ ಸೀತೆಯನ್ನು ಪುಷ್ಪಕವಿಮಾನದಲ್ಲಿ ಕು ಳ್ಳಿರಿಸಿದರು. ಹೀಗೆ ರಾಕ್ಷಸಸ್ತ್ರೀಯರು ಸೀತೆಯನ್ನೂ, ತ್ರಿಜಟೆಯನ್ನೂ ಪು ಷ್ಪಕದ ಮೇಲೇರಿಸಿಕೊಂಡು, ಆಕೆಗೆ ರಾಮಲಕ್ಷ್ಮಣರನ್ನು ತೋರಿಸುವು ದಕ್ಕಾಗಿ ರಣರಂಗಕ್ಕೆ ಕರೆತಂದರು. ಅತ್ತಲಾಗಿ ಲಂಕೆಯಲ್ಲಿ ರಾಕ್ಷಸೇಶ್ವರ ದಾದ ರಾವಣನು, ಪರಮಸಂತೋಷದಿಂದ ತನ್ನ ಪಟ್ಟಣವೆಲ್ಲವನ್ನೂ ಅ ಲಂಕರಿಸುವಂತೆ ಆಜ್ಞೆಮಾಡಿದನು. ಬೀದಿಬೀದಿಗಳಲ್ಲಿಯೂ ಸಾಲಾಗಿ ಧ್ವಜ ಪತಾಕೆಗಳನ್ನೆತ್ತಿಸಿದನು. ಅಲ್ಲಿನ ಬೀದಿಬೀದಿಗಳಲ್ಲಿಯೂ, "ರಾಮಲಕ್ಷ್ಮ ರಿಬ್ಬರೂ ಇಂದ್ರಜಿತ್ತಿನಿಂದ ಯುದ್ಧದಲ್ಲಿ ಹತರಾದರು" ಎಂದು ಸಾರಿಸಿ ಡಂಗುರವನ್ನು ಹೊಡೆಸಿದನು. ಇತ್ತಲಾಗಿ ಸೀತೆಯು ತ್ರಿಜಟೆಯೊಡನೆ ಪು ಷ್ಪಕವಿಮಾನವನ್ನೇರಿ ಹೋಗಿ, ರಣರಂಗದಲ್ಲಿ ಅಲ್ಲಲ್ಲಿ ಸತ್ತುಬಿದ್ದಿದ್ದ ವಾನ ರಸೈನ್ಯಗಳೆಲ್ಲವನ್ನೂ ನೋಡುತ್ತಬಂದಳು. ಅಲ್ಲಲ್ಲಿ, ರಾಕ್ಷಸರು ಮನಸ್ಸಿನಲ್ಲಿ ಮಹಾಸಂತೋಷದಿಂದುಬ್ಬಿ ಸಿಂಹನಾದಮಾಡುವುದನ್ನೂ, ವಾನರರೆಲ್ಲರೂ ರಾಮಲಕ್ಷ್ಮಣರನ್ನು ಸುತ್ತಿನಿಂತು ದುಃಖಾರ್ತರಾಗಿರುವುದನ್ನೂ ನೋ ಡಿದಳು. ಕೊನೆಗೆ ಅಲ್ಲಿ ವೀರರಾದ ರಾಮಲಕ್ಷ್ಮಣರಿಬ್ಬರೂ ಬಾಣಪೀಡಿ ತರಾಗಿ ಪ್ರಜ್ಞೆಯಿಲ್ಲದೆ ಶರತಲ್ಪಗಳಲ್ಲಿ ಮಲಗಿರುವುದನ್ನೂ ಕಂಡಳು. ಅವರು ಧರಿಸಿದ್ದ ಕವಚಗಳು ಛಿನ್ನಭಿನ್ನವಾಗಿ ಹರಿದು, ಅವರು ಕೈಯಲ್ಲಿ ಹಿಡಿ ದಿದ್ದ ಬಿಲ್ಲು ಜಾರಿ ಬಿದ್ದು, ಅವರ ಸರ್ವಾವಯವಗಳೂ ಬಾಣಗಳಿಂದ ಭಿನ್ನವಾಗಿದ್ದುವು. ಹೀಗೆ ಆ ಸಹೋದರರಿಬ್ಬರೂ ಬಾಣದ ಪೊದೆಗಳಂತೆ ನೆಲದಲ್ಲಿ ಬಿದ್ದಿರುವುದನ್ನು ನೋಡಿದಳು. ಕಮಲದಳದಂತೆ ಕಣ್ಣುಳ್ಳವರಾ ಗಿಯೂ, ಪರಸ್ಪರಪ್ರಿಯಸಹೋದರರಾಗಿಯೂ, ಪುರುಷಸಿಂಹರಾಗಿ ಯೂ ಇದ್ದ ರಾಮಲಕ್ಷ್ಮಣರಿಬ್ಬರೂ, ಅಗ್ನಿ ಪುತ್ರರಾದ ಸ್ಕಂಧವಿಶಾ ಖರಂತೆ ತೇಜಸ್ಸಿನಿಂದ ಜ್ವಲಿಸುತ್ತ, ಬಾಣದ ಹಾಸಿಗೆಯಮೇಲೆ ಅಷ್ಟುದುರ ವಸ್ಥೆಯನ್ನು ಹೊಂದಿ ಮಲಗಿರುವುದನ್ನು ಕಂಡೊಡನೆ ಸೀತೆಯ ಮನಸ್ಸು ಭೇದಿಸಿತು. ಸಂಕಟದಿಂದ ತತ್ತಳಿಸುತ್ತ ಬಹಳ ಹೊತ್ತಿನವರೆಗೆ ವಿಲಪಿಸಿದ ಳು. ನಿರ್ದೋಷವಾದ ಶುಭಲಕ್ಷಣಗಳಿಂದೊಪ್ಪುವ ಆ ಜನಕಪುತ್ರಿಯು, ತ ನ್ನ ಪತಿಯಾದ ರಾಮನೂ, ತನ್ನ ಮೈದುನನಾದ ಲಕ್ಷ್ಮಣನೂ ನೆಲದ ಮ ಣ್ಣಿನಲ್ಲಿ ಬಿದ್ದಿರುವುದನ್ನು ನೋಡಿ ರೋದಿಸುವುದಕ್ಕೆ ತೊಡಗಿದಳು. ಅವಳ

ಕಣ್ಣುಗಳಲ್ಲಿ ಪಳಪಳನೆ ನೀರು ಸುರಿಯುತಿತ್ತು. ದೇವತೆಗಳಂತೆ ಮಹಾಪ್ರಭಾವಸಂಪನ್ನರಾದ ಆ ರಾಮಲಕ್ಷ್ಮಣರನ್ನು ನೋಡಿ ಸೀತೆಯು ಅವರಿಬ್ಬರೂ ಹತರಾದರೆಂದೇ ಊಹಿಸಿಕೊಂಡು, ಪರಮದುಃಖಿತೆಯಾಗಿ ವಿಲಪಿಸುವುದಕ್ಕೆ ತೊಡಗಿದಳು. ಇಲ್ಲಿಗೆ ನಾಲ್ವತ್ತೇಳನೆಯ ಸರ್ಗವು.

---

{ ಸೀತೆಯು ರಾಮಲಕ್ಷ್ಮಣರ ದುರವಸ್ಥೆಯನ್ನು ನೋಡಿ ನಾನಾವಿಧವಾಗಿ ವಿಲಪಿಸಿದುದು. }

ತನ್ನ ಪತಿಯಾದ ರಾಮನೂ, ಬಲಾಢ್ಯನಾದ ಲಕ್ಷ್ಮಣನೂ ಶಸ್ತ್ರಹತರಾಗಿ ಬಿದ್ದಿರುವುದನ್ನು ನೋಡಿ, ಸೀತೆಯು ದುಃಖದಿಂದ ಮೈಮರೆತು,ಕೇಳುವವರಿಗೆ ಕರುಣೆಹುಟ್ಟುವಂತೆ ವಿಲಪಿಸುವಳು. "ಹಾ! ನನ್ನ ದೌರ್ಭಾಗ್ಯವೆ! ಪೂರ್ವದಲ್ಲಿ ಸಾಮುದ್ರಿಕಲಕ್ಷಣವನ್ನು ತಿಳಿದ ಯಾವ ಶಾಸ್ತ್ರಜ್ಞರು"ನನ್ನನ್ನು ನೋಡಿ "ಈಕೆಯು ಪುತ್ರವತಿಯಾಗುವಳೆಂದೂ, ಇವಳಿಗೆ ವೈಧವ್ಯವಿಲ್ಲ" ವೆಂದೂ ಹೇಳಿದ್ದರೋ,ಆ ಜ್ಞಾನಿಗಳೆಲ್ಲರೂ ಈಗ ರಾಮನು ಹತನಾದುದರಿಂದ ಸುಳ್ಳಾಡಿದಂತಾಯಿತು. ಮೊದಲು ಯಾರು ನನ್ನ ಪತಿಯಾದ ರಾಮನು ಅಶ್ವಮೇಧಾದಿಯಾಗಗಳನ್ನು ನಡೆಸತಕ್ಕವನೆಂದೂ, ಸತ್ರಗಳನ್ನು ನಡೆಸತಕ್ಕವನೆಂದೂ ನಿರ್ಧರಿಸಿ ಹೇಳಿದ್ದರೋ,ಆ ಜ್ಞಾನಿಗಳೆಲ್ಲರೂ ಈಗ ನನ್ನ ಪತಿಯು ಹತನಾದುದರಿಂದ ಅಸತ್ಯವಾದಿಗಳೆನಿಸಿಕೊಂಡರು. ಮೊದಲು ಜ್ಯೋತಿಶ್ಶಾಸ್ತ್ರವಿಶಾರದರಾದ ಯಾವ ಬ್ರಾಹ್ಮಣರು, ನಾನು ಕಿವಿಯಾರೆ ಕೇಳುವಂತೆ, ನನ್ನಿದಿರಿಗೆ "ನೀನು ಮಾಂಗಲ್ಯವತಿ"ಯೆಂದು ಹೇಳಿದ್ದರೋ,ಅಂತಹ ಜ್ಞಾನಿಗಳ ಮಾತೆಲ್ಲವೂ ಈಗ ರಾಮನು ಹತನಾದುದರಿಂದ ಸುಳ್ಳೆನಿಸಿಕೊಂಡುವು. ಮೊದಲು ಯಾವ ಮಹಾತ್ಮರು ನನ್ನನ್ನು ನೋಡಿ "ನೀನು ಮಹಾವೀರನಾದ ರಾಜನಿಗೆ ಪತ್ನಿ"ಯೆಂದೂ, "ನೀನು ಪರಮಭಾಗ್ಯವತಿ"ಯೆಂದೂ ಹೇಳಿದ್ದರೋ,ಆ ಜ್ಞಾನಿಗಳ ಮಾತೆಲ್ಲವೂ ಈಗ ರಾಮನು ಹತನಾದುದರಿಂದ ಅಸತ್ಯವೆನಿಸಿಕೊಂಡಿತು. ಇದೋ! ಈಗಲೂ ಈ ನನ್ನ ಕಾಲುಗಳಲ್ಲಿ ಪದ್ಮರೇಖೆಯು ಸ್ಪಷ್ಟವಾಗಿ ಕಾಣುತ್ತಿರುವುದು.ಇಂತಹ ಶುಭಲಕ್ಷಣಗಳುಳ್ಳ ಸ್ತ್ರೀಯರೆಲ್ಲರೂ ಚಕ್ರವರ್ತಿಮಹಿಷಿಯರಾಗಿ ಪತಿಗಳೊಡನೆ

ಸಾಮ್ರಾಜ್ಯದಲ್ಲಿ ಅಭಿಷಿಕ್ತೆಯರಾಗುವರೆಂದು ನಾನು ಚೆನ್ನಾಗಿ ಕೇಳಿಬಲ್ಲೆ ನು. ಇವೆಲ್ಲವೂ ನನ್ನಲ್ಲಿಮಾತ್ರ ನಿಷ್ಫಲಗಳಾದುದೇಕೆ!ಹಾದೈವವೆ! ಲೋಕ ದಲ್ಲಿ ಮಂದಭಾಗ್ಯೆಯರಾದ ಸ್ತ್ರೀಯರು ಯಾವ ದುರ್ಲಕ್ಷಣಗಳಿದ್ದರೆ ವೈ ಧವ್ಯವನ್ನು ಹೊಂದುವರೋ, ಅಂತಹ ದುರ್ಲಕ್ಷಣಗಳು ನನ್ನ ದೇಹದಲ್ಲಿ ಎಲ್ಲಿ ಹುಡುಕಿದರೂ ಸ್ವಲ್ಪಮಾತ್ರವೂ ಕಾಣುವುದಿಲ್ಲ. ಆದುದರಿಂದ ಈಗ ನನ್ನಲ್ಲಿ ಕಾಣುವ ಶುಭಲಕ್ಷಣಗಳೂ ನಿಷ್ಫಲಗಳೆಂದೇ ಎಣಿಸಬೇಕಾಯಿ ತಲ್ಲವೆ? ಧ್ವಜಕುಲಿಶಾದಿಶುಭಲಕ್ಷಣಗಳೊಡನೆ ಸ್ತ್ರೀಯರ ದೇಹದಲ್ಲಿ ಕಾಣು ವ ಪದ್ಮರೇಖೆಗಳು, ತಮ್ಮ ಹೆಸರಿಗೆ ತಕ್ಕಂತೆ ಅವರ ದೇಹದಲ್ಲಿ ಪದ್ಮೆಯ ನ್ನೇ (ಭಾಗ್ಯಲಕ್ಷ್ಮಿಯನ್ನೇ) ನೆಲೆಗೊಳಿಸುವುವೆಂದು ಲಕ್ಷಣಶಾಸ್ತ್ರಗಳೆಲ್ಲವೂ ಹೇಳುವುವು. ಈಗ ರಾಮನು ಹತನಾದುದರಿಂದ ನನ್ನಲ್ಲಿಮಾತ್ರ ಆ ಶಾಸ್ತ್ರ ವಚನಗಳೂ ಅಸತ್ಯವೆನಿಸಿಕೊಂಡುವು. ನನ್ನಲ್ಲಿಯಾದರೋ ಸಾಮುದ್ರಿಕ ಶಾಸ್ತ್ರೋಕ್ತಗಳಾದ ಯಾವ ಲಕ್ಷಣಗಳಿಗೂ ಸ್ವಲ್ಪವಾದರೂ ನ್ಯೂನತೆಯಿ ಲ್ಲ. ನನ್ನ ತಲೆಕೂದಲುಗಳೆಲ್ಲವೂ ಸೂಕ್ಷ್ಮಗಳಾಗಿಯೂ, ಸಮವಾಗಿ ಒಂ ದೇ ಅಳತೆಯುಳ್ಳವುಗಳಾಗಿಯೂ, ಕಪ್ಪಾಗಿಯೂ ಇರುವುವು. ನನ್ನ ಹುಬ್ಬು ಗಳೆರಡೂ ಒಂದಕ್ಕೊಂದು ಕೂಡಿರದೆ ಪ್ರತ್ಯೇಕವಾಗಿರುವುವು. [1]ನನ್ನ ಮೊ ಳಕಾಲುಗಳೆರಡೂ ಸ್ವಲ್ಪವಾದರೂ ಕೂದಲಿಲ್ಲದೆ ದುಂಡಗಿರುವುದು. ನನ್ನ ಹಲ್ಲುಗಳೆಲ್ಲವೂ ದಟ್ಟವಾಗಿ ಒಂದಕ್ಕೊಂದು ಸೇರಿರುವುವೇ ಹೊರತು,ನಡು ನಡುವೆ ಸಂದುಬಿಟ್ಟು ವಿರಳವಾಗಿಲ್ಲ!ಕಣ್ಣುಗಳಿಗೆ ಸಮೀಪವಾದ ನನ್ನ ಹಣೆ ಯಪಾರ್ಶ್ವಗಳೂ,ನನ್ನ ಕಣ್ಣುಗಳೂ ನನ್ನ ಕೈಕಾಲುಗಳೂ, ನನ್ನ ಹಿಮ್ಮಡಿ ಗಳೂ,ನನ್ನ ತೊಡೆಗಳೂ ಲಕ್ಷಣಾನುಸಾರವಾಗಿ ಉಬ್ಬಿರುವುವು.[2] ನನ್ನ ಬೆರ ಳುಗಳೆಲ್ಲವೂ ದುಂಡಗಿರುವ ಉಗುರುಗಳಿಂದ ಕೂಡಿ, ನುಣುಪಾಗಿ, ಅವ ಯವಸನ್ನಿವೇಶಕ್ಕೆ ತಕ್ಕ ಸಮಪ್ರಮಾಣವುಳ್ಳವುಗಳಾಗಿರುವುವು. ನನ್ನ ಸ್ತ

---

1 ಇಲ್ಲಿ "ರೋಮಹೀನೇ ಶುಭೇ ಸ್ನಿಗ್ಧೇ ಯಜ್ಜಂಘೇ ಕ್ರಮವರ್ತುಲೇ । ಸಾ ರಾಜಪತ್ನೀ ಭವತಿ ವಿಶಿರೇ ಸುಮನೋಹರೇ" ಎಂದು ಸ್ಕಾಂದವಚನವು.

2 ಇಲ್ಲಿ "ಸ್ನಿಗ್ಧಾಸ್ಸಮುನ್ನತಾಸ್ತತ್ರ ವೃತ್ತಾಃ ಪಾವನಖಾ ಶ್ಶುಭಾಃ।" ಎಂ ದು ಸ್ಕಾಂದವಚನವು.

ನಗಳೆರಡೂ! ಒತ್ತಾಗಿ ಉಬ್ಬಿಬೆಳೆದು ತೊಟ್ಟುಗಳ ಕಡೆಯಲ್ಲಿ ಹಳ್ಳವಾಗಿರುವುವು. ನನ್ನ ನಾಭಿಯು ಸುತ್ತಲೂ ಉಬ್ಬಿ ನಡುವೆ ಹಳ್ಳವಾಗಿರುವುದು. ನನ್ನ ಪಕ್ಕೆಗಳೂ, ನನ್ನ ಎದೆಯೂ ಮಾಂಸತುಂಬಿ ಉಬ್ಬಿರುವುವು. ನನ್ನ ಮೈಬಣ್ಣವು ಚಿನ್ನದಂತೆ ಹೊಳೆಯುವುದು. ನನ್ನ ಮೈಕೂದಲುಗಳೆಲ್ಲವೂ ಬಹಳ ಮೃದುವಾಗಿರುವುವು. ನನ್ನ ಪಾದತಲಗಳೂ, ನನ್ನ ಕಾಲ್ಬೆರಳುಗಳೂ, ನೆಲದಲ್ಲಿ ಸಂದುಬಿಡದಂತೆ ಚೆನ್ನಾಗಿ ಊರಿನಿಲ್ಲುವುದರಿಂದ ಸಾಮುದ್ರಿಕಶಾಸ್ತ್ರಜ್ಞರೆಲ್ಲರೂ ನನ್ನನ್ನು [1]ಶುಭಲಕ್ಷಣವುಳ್ಳವಳೆಂದೇ ಹೇಳುವರು. ನನ್ನ ಕೈಗಳೂ ಕಾಲುಗಳೂ ಪೂರ್ಣವಾದ ಯವರೇಖೆಯಿಂದ ಕೂಡಿ, ನಡುವೆ ಸಂದುಬಿಡದೆ ದಟ್ಟವಾಗಿ ಸೇರಿದ ಬೆರಳುಗಳಿಂದ ಶೋಭಿಸುತ್ತಿರುವುವು. ಕನ್ಯಾಲಕ್ಷಣವನ್ನು ತಿಳಿದ ಬ್ರಾಹ್ಮಣರು ನನ್ನನ್ನು ಯಾವಾಗಲೂ, ಕಿರುನಗೆಯುಳ್ಳವಳೆಂದು ಹೇಳಿರುವರು. ಜ್ಯೌತಿಷಸಿದ್ಧಾಂತದಲ್ಲಿ ನಿಪುಣರಾದ ವಿಪ್ರರೆಲ್ಲರೂ ನನಗೆ ನನ್ನ ಪತಿಯೊಡನೆ ಸಾಮ್ರಾಜ್ಯಪಟ್ಟಾಭಿಷೇಕವಾಗುವುದೆಂದೂ ಸೂಚಿಸಿರುವರು. ಇವೆಲ್ಲವೂ ಈಗ ನನ್ನ ಭಾಗಕ್ಕೆ ಮಾತ್ರ ವ್ಯರ್ಥವಾಗಬೇಕೆ? ಸಹೋದರರಾದ ರಾಮಲಕ್ಷ್ಮಣರಿಬ್ಬರೂ, ಆ ಜನಸ್ಥಾನದಲ್ಲೆಲ್ಲಾ ನನ್ನನ್ನು ಹುಡುಕಿ, ಕೊನೆಗೆ ನನ್ನ ವೃತ್ತಾಂತವನ್ನೂ ತಿಳಿದುಕೊಂಡು, ನನ್ನನ್ನು ಬಿಡಿಸುವುದಕ್ಕಾಗಿ ಅಕ್ಷೋಭ್ಯವಾದ ಮಹಾಸಮುದ್ರವನ್ನೂ ದಾಟಿಬಂದು, ಗೋಷ್ಪದಮಾತ್ರದಂತಿರುವ ಇಂದ್ರಜಿತ್ತಿನ ಮಾಯೆಯಿಂದ ಹತರಾದರಲ್ಲಾ! ಆ ರಾಮಲಕ್ಷ್ಮಣರಿಬ್ಬರೂ, ವಾರುಣಾಸ್ತ್ರವನ್ನೂ, ಆಗ್ನೇಯಾಸ್ತ್ರವನ್ನೂ, ಐಂದ್ರಾಸ್ತ್ರವನ್ನೂ, ವಾಯವ್ಯಾಸ್ತ್ರವನ್ನೂ, ಬ್ರಹ್ಮಶಿರೋನಾಮಕಾಸ್ತ್ರವನ್ನೂ ಪಡೆದವರಲ್ಲವೆ? ಆ ಅಸ್ತ್ರಗಳೆಲ್ಲವೂ ಈಗ ಏನಾದುವು? ಇಂದ್ರಜಿತ್ತು ಯುದ್ಧದಲ್ಲಿ ಮಾಯೆಯಿಂದ ಅದೃಶ್ಯನಾಗಿ ದೇವೇಂದ್ರಸಮಾನರಾಗಿಯೂ, ನನಗೆ ದಿಕ್ಕಾಗಿಯೂ ಇದ್ದ ರಾಮಲಕ್ಷ್ಮಣರಿಬ್ಬರನ್ನೂ ಕಪಟಯುದ್ಧದಿಂದ ಕೊಂದನಲ್ಲವೆ? ಇನ್ನು ನನಗೆ ದಿಕ್ಕಾರು? ಯುದ್ಧದಲ್ಲಿ ರಾಮನ ಕಣ್ಣಿಗೆ ಬಿದ್ದ ವೈರಿಯು ಎಷ್ಟೇ ಮನೋವೇಗವುಳ್ಳವನಾಗಿದ್ದರೂ ಪ್ರಾಣದಿಂದ ಹಿಂತಿರುಗಿ ಹೋಗಲಾರನು. ಅಂ

---

1. ಇಲ್ಲಿ "ಚಕ್ರವರ್ತಿಸ್ತ್ರಿಯಃ ಪಾಣೌ ನಂದ್ಯಾವರ್ತಃ ಪ್ರದಕ್ಷಿಣಃ" ಇತ್ಯಾದಿ ಸಾಮುದ್ರಿಕೋಕ್ತವಾದ ನಂದ್ಯಾವರ್ತಲಕ್ಷಣಗಳಿಂದ ಕೂಡಿದವಳೆಂದು ತಿಳಿಯಬೇಕು.

ತಹ ಮಹಾಬಲಪರಾಕ್ರಮಿಯಾದ ರಾಮನೂಕೂಡ, ತನ್ನ ತಮ್ಮನಾದ ಲಕ್ಷ್ಮಣನೊಡನೆ ಸೇರಿ ಯುದ್ಧದಲ್ಲಿ ಹತನಾಗಿ ಬಿಳುವುದೆಂದರೇನು? ಲೋಕದಲ್ಲಿ ಕಾಲಕ್ಕಿಂತಲೂ ಪ್ರಬಲವಾದುದು ಯಾವುದೊಂದೂ ಇಲ್ಲವು. ದೈವವನ್ನು ಗೆಲ್ಲಬೇಕೆಂದರೆ ಯಾರಿಗೂ ಎಷ್ಟುಮಾತ್ರವೂ ಸಾಧ್ಯವಲ್ಲ! ಹಾ ಕಷ್ಟವೆ! ಶೋಚನೀಯಾವಸ್ಥೆಯನ್ನು ಹೊಂದಿದ ಆ ನನ್ನ ಅತ್ತೆಯನ್ನು ನೆನೆಸಿಕೊಂಡಾಗ ನನಗುಂಟಾಗುವ ದುಃಖವು, ರಾಮನನ್ನಾಗಲಿ, ಮಹಾಬಲಾಢ್ಯನಾದ ಲಕ್ಷ್ಮಣನನ್ನಾಗಲಿ, ನನ್ನ ಸ್ಥಿತಿಯನ್ನೇ ಆಗಲಿ ನನ್ನ ತಾಯಿಯನ್ನೇ ಆಗಲಿ ನೆನೆಸಿಕೊಂಡರೂ ಅಷ್ಟು ವ್ಯಥೆಯನ್ನುಂಟುಮಾಡದು. ಆ ನನ್ನ ಅತ್ತೆಯಾದ ಕೌಸಲ್ಯೆಯು, ಈಗಲೂ ಅಹೋರಾತ್ರವೂ ಮನಸ್ಸಿಗೆ ನೆಮ್ಮದಿಯಿಲ್ಲದೆ, 'ಈ ಹದಿನಾಲ್ಕು ವರ್ಷಗಳ ವನವಾಸವ್ರತವನ್ನು ಮುಗಿಸಿ ತನ್ನ ಮುದ್ದುಮಗನಾದ ರಾಮನು ಸೀತಾಲಕ್ಷ್ಮಣರೊಡನೆಬಂದು, ಯಾವಾಗ ತನ್ನ ಕಣ್ಣುಗಳಿಗೆ ಆತ್ಯಾನಂದವನ್ನು ಬೀರೋವನೋ ಎಂದು ಎಡೆಬಿಡದೆ ಚಿಂತಿಸುತ್ತಿರುವಳಲ್ಲವೆ? ಇನ್ನು ಆಕೆಯ ಗತಿಯೇನು?" ಎಂದು ವಿಲಪಿಸಿದಳು. ಹೀಗೆ ಗೋಳಿಡುತಿದ್ದ ಸೀತೆಯನ್ನು ನೋಡಿ, ತ್ರಿಜಟೆಯೆಂಬ ರಾಕ್ಷಸಿಯು ಆಕೆಯನ್ನು ಸಮಾಧಾನಪಡಿಸುತ್ತ, "ಅಮ್ಮ ಸೀತೆ! ನೀನು ದುಃಖಿಸಬೇಡ! ಧೈರ್ಯದಿಂದಿರು! ಈ ನಿನ್ನ ಪತಿಯು ಬದುಕಿರುವನು. ಈ ಸಹೋದರರಿಬ್ಬರೂ ಬದುಕಿರುವರೆಂಬುದನ್ನು ಸೂಚಿಸುವಂತೆ ನನಗೆ ಅನುಭವಸಿದ್ಧಗಳಾದ ಕೆಲವು ಕಾರಣಗಳು ಸ್ಪಷ್ಟವಾಗಿ ಕಾಣಿಸುತ್ತಿರುವುವು. ಅವುಗಳನ್ನೂ ಹೇಳುವೆನು ಕೇಳು! ನಿನ್ನ ಪತಿಯು ಹತನಾಗಿದ್ದ ಪಕ್ಷದಲ್ಲಿ, ಈ ಯುದ್ಧರಂಗದಲ್ಲಿ ಅವನ ಕಡೆಯ ಯೋಧರ ಮುಖಗಳೆಲ್ಲವೂ ಹೀಗೆ ಕೋಪಾವೇಶದಿಂದ ಕೂಡಿದವುಗಳಾಗಿಯೂ, ಸಂತೋಷದಿಂದ ಪ್ರಸನ್ನಗಳಾಗಿಯೂ ಇರಲಾರವು. ಮತ್ತು ಎಲೆ ಸೀತೆ! ಈಗ ನಾವು ಏರಿಬಂದಿರುವ ಈ ಪುಷ್ಪಕವಿಮಾನವು ದಿವ್ಯವಾದುದರಿಂದ, ಈ ರಾಮಲಕ್ಷ್ಮಣರು ಈಗ ಪ್ರಾಣವನ್ನು ಬಿಟ್ಟಿದ್ದ ಪಕ್ಷದಲ್ಲಿ ಇದು ಪತಿಹೀನೆಯಾದ ನಿನ್ನನ್ನು ವಹಿಸಿಕೊಂಡಿರಲಾರದು! ಯುದ್ಧದಲ್ಲಿ ಪ್ರಧಾನವೀರನು ಹತನಾದಪಕ್ಷದಲ್ಲಿ, ಅವನ ಕಡೆಯ ಸೈನ್ಯಗಳೆಲ್ಲವೂ ಉತ್ಸಾಹಭಂಗವನ್ನು ಹೊಂದಿ, ಮುಂದಿನ ಪ್ರಯತ್ನವನ್ನೂ ಬಿಟ್ಟು, ಜಲಮಧ್ಯದಲ್ಲಿ ನಾವಿಕನಿಲ್ಲದ ದೋಣಿಯಂತೆ, ಯುದ್ಧದಲ್ಲಿ ತಮ್ಮನ್ನು ನಡೆ

ಸುವುದಕ್ಕೆ ತಕ್ಕ ನಿಯಾಮಕರಿಲ್ಲದುದಕ್ಕಾಗಿ, ಹಿಂದುಮುಂದು ತೋರದೆ ತತ್ತಳಿಸುತ್ತಿದ್ದುವು.ಈಗ ಈ ವಾನರಸೇನೆಯ ಸ್ಥಿತಿಯು ಹಾಗಿಲ್ಲ!ಈ ಸೈನಿಕರು,ಮನಸ್ಸಿನಲ್ಲಿ ಭಯಸಂಭ್ರಮಗಳೊಂದೂ ಇಲ್ಲದೆ, ತಮ್ಮ ಮಹೋತ್ಸಾಹವನ್ನೂ ಬಿಡವೆ,ಈಗ ನಾನು ನಿನಗೆ ಯಾರನ್ನು ಬದುಕಿರುವರೆಂದು ದೃಢವಾಗಿ ತಿಳಿಸುತ್ತಿರುವೆನೋ ಆ ರಾಮಲಕ್ಷ್ಮಣರಿಬ್ಬರನ್ನೂ ಸಂತೋಷದಿಂದಲೂ ಎಚ್ಚರಿಕೆಯಿಂದಲೂ ರಕ್ಷಿಸುತ್ತಿರುವರು. ಹೀಗೆ ಸ್ಪಷ್ಟವಾಗಿ ತಿಳಿದುಬರುವ ಈ ಚಿಹ್ನಗಳಿಂದ, ಈ ಸಹೋದರರಿಬ್ಬರೂ ಬದುಕಿರುವರೆಂದು ನೀನು ದೃಢವಾಗಿ ನಂಬಬಹುದು. ನೀನು ಅವರನ್ನು ಪ್ರಾಣದೊಡನೆ ಮಲಗಿರುವಂತೆಯೇ ಭಾವಿಸಿ ಚೆನ್ನಾಗಿ ನೋಡು. ಎಲೆ ಸೀತೆ!ನಿನ್ನಲ್ಲಿರುವ ಸ್ನೇಹದಿಂದಲೇ ನಾನು ಇಷ್ಟುದೂರದವರೆಗೆ ಹೇಳುತ್ತಿರುವೆನು. ಇದುವರೆಗೂ ಸುಳ್ಳೆಂಬುದು ನನ್ನಬಾಯಿಂದ ಹೊರಟುದಿಲ್ಲ. ಮುಂದೆಯೂ ಯಾವಾಗಲೂ ಹೊರಡುವ ಸಂಭವವಿಲ್ಲ. ನೀನು ನಿನ್ನ ದೃಢವಾದ ಪಾತಿವ್ರತ್ಯದಿಂದ ಸಮಸ್ತಜನಗಳ ಮನಸ್ಸಿಗೂ ಉಲ್ಲಾಸವನ್ನುಂಟುಮಾಡುವ ಸುಸ್ವಭಾವವುಳ್ಳವಳಾದುದರಿಂದಲೇ, ನನಗೂ ನಿನ್ನಲ್ಲಿ ಮನಸ್ಸು ನಟ್ಟುಹೋಗಿರುವುದು. ಯುದ್ಧದಲ್ಲಿ ದೇವೇಂದ್ರನೊಡಗೂಡಿ,ದೇವಾಸುರರೇ ಬಂದರೂ ಈ ರಾಮಲಕ್ಷ್ಮಣರನ್ನು ಗೆಲ್ಲುವುದು ಸಾಧ್ಯವಲ್ಲ. ಇವರಿಬ್ಬರೂ ಈಗ ಬದುಕಿರುವುದಕ್ಕೆ ಸೂಚಕಗಳಾದ ಚಿಹ್ನಗಳೂ ಚೆನ್ನಾಗಿ ಕಾಣುತ್ತಿರುವುವು. ಇವುಗಳನ್ನು ನೋಡಿಯೇ ನಾನು ನಿನಗೆ ನಿರ್ಧರವಾಗಿ ಹೇಳುತ್ತಿರುವೆನು.ಎಲೆ ಸೀತೆ!ಮತ್ತೊಂದು ಮುಖ್ಯಸೂಚನೆಯುಂಟು.ಅದನ್ನೂ ನೀನು ಚೆನ್ನಾಗಿ ಗಮನಿಸಿನೋಡು. ಇವರಿಬ್ಬರೂ ಮೂರ್ಛಿತರಾಗಿದ್ದರೂ,ಇವರಮುಖದ ಕಳೆಯು ಸ್ವಲ್ಪವಾದರೂ ಕಂದದಿರುವುದು ನೋಡು. ಆಯುಸ್ಸುತೀರಿ ಪ್ರಾಣವನ್ನು ಬಿಟ್ಟವರ ಮುಖವು, ಆಕ್ಷಣವೇ ಬಹಳವಿಕಾರವನ್ನು ಹೊಂದುವುದು. ಇವರ ಮುಖದಲ್ಲಿ ಅಂತಹ ವಿಕಾರವೇನೂ ಕಾಣುವುದಿಲ್ಲ. ಆದುದರಿಂದ ಎಲೆ ಸೀತೆ! ನೀನು ಈ ರಾಮಲಕ್ಷ್ಮಣರ ವಿಷಯವಾದ ನಿನ್ನ ದುಃಖವನ್ನು ಬಿಟ್ಟುಬಿಡು.ಅವರು ಹತರಾದರೆಂಬ ಭ್ರಾಂತಿಯನ್ನೂ ಬಿಡು! ಮನಸ್ಸಿನಲ್ಲಿ ಧೈರ್ಯವನ್ನು ಹೊಂದು!ಈಮಹಾತ್ಮರು ಬದುಕಿರುವುದೇನೂ ಅಶಕ್ಯವಲ್ಲ"ಎಂದಳು. ದೇವಕನ್ಯೆಯಂತಿದ್ದ ಆ ಸೀತೆಯು ತ್ರಿಜಟೆಯು ಹೇಳಿದ ಈ ಸ

ಮಾಧಾನವಾಕ್ಯವನ್ನು ಕೇಳಿ, ಅವಳಿಗೆ ಕೈಮುಗಿಯುತ್ತ "ಅಮ್ಮ ತ್ರಿಜಟೆ! ನೀನು ಹೇಳಿದಂತೆಯೇ ಅವರು ಕ್ಷೇಮದಿಂದ ಬದುಕಿರಲಿ"ಎಂದಳು. ಆಗಲೇ ತ್ರಿಜಟೆಯು ಮನೋವೇಗವುಳ್ಳ ಆ ಪುಷ್ಪಕವಿಮಾನವನ್ನು ಹಿಂತಿರುಗಿಸಿ, ದುಃಖಿತಳಾದ ಸೀತೆಯನ್ನು ಸಮಾಧಾನಪಡಿಸುತ್ತ ಲಂಕಾಪುರಿಗೆ ಕರೆತಂದಳು. ಅಲ್ಲಿ ರಾಕ್ಷಸಸ್ತ್ರೀಯರೆಲ್ಲರೂ, ಸೀತೆಯನ್ನೂ, ತ್ರಿಜಟೆಯನ್ನೂ ಪುಷ್ಪಕದಿಂದಿಳಿಸಿ ಅಶೋಕವನಕ್ಕೆ ಸೇರಿಸಿದರು. ಅನೇಕ ವೃಕ್ಷಸಮೂಹಗಳಿಂದ ಕೂಡಿರುವುದಾಗಿಯೂ, ರಾವಣನಿಗೆ ಮುಖ್ಯವಿಹಾರೋದ್ಯಾನವಾಗಿಯೂ ಇದ್ದ ಅಶೋಕವನವನ್ನು ಪ್ರವೇಶಿಸಿದಮೇಲೆಯೂ ಸೀತೆಯು, ತಾನು ಆ ರಾಜಪುತ್ರರನ್ನು ನೋಡಿ ಬಂದ ರೀತಿಯನ್ನೇ ಮನಸ್ಸಿನಲ್ಲಿ ಚಿಂತಿಸುತ್ತ,ಬಹಳವಾಗಿ ದುಃಖಪಡುತಿದ್ದಳು. ಇಲ್ಲಿಗೆ ನಾಲ್ವತ್ತೆಂಟನೆಯಸರ್ಗವು.

---

ರಾಮನು ಸ್ವಲ್ಪವಾಗಿ ಮೂರ್ಛೆ ತಿಳಿದೆದ್ದು, ಲಕ್ಷ್ಮಣನನ್ನು ಕುರಿತು ದುಃಖಿಸಿದುದು. ಮತ್ತು ಸುಗ್ರೀವನನ್ನು ಕಿಷ್ಕಿಂಧೆಗೆ ಹಿಂತಿರುಗಿ ಹೋಗುವಂತೆ ಹೇಳಿದುದು. ವಿಭೀಷಣನು ವಾನರಸೈನ್ಯಕ್ಕೆ ಧೈರ್ಯವನ್ನು ಹೇಳಿ ನಿಲ್ಲಿಸಿ, ತಿರುಗಿ ರಾಮನ ಬಳಿಗೆ ಬಂದುದು.

ಭಯಂಕರಗಳಾದ ನಾಗಪಾಶಗಳಲ್ಲಿ ಕಟ್ಟುಬಿದ್ದು,ಹಾವುಗಳಂತೆ ನಿಟ್ಟುಸಿರುಬಿಡುತ್ತ, ರಕ್ತದಿಂದ ತೊಯ್ದು, ನೆಲದಲ್ಲಿ ಮಲಗಿದ್ದ ಮಹಾತ್ಮರಾದ ದಶರಥಕುಮಾರರನ್ನು, ಸುಗ್ರೀವನೇ ಮೊದಲಾಗಿ ಮಹಾಬಲಶಾಲಿಗಳಾದ ವಾನರೋತ್ತಮರೆಲ್ಲರೂ ಸುತ್ತಿನಿಂತು, ದುಃಖದಿಂದ ಕೊರಗುತಿದ್ದರು. ಇಷ್ಟರಲ್ಲಿ ವೀರ್ಯವಂತನಾದ ರಾಮನು ನಾಗಪಾಶದಿಂದ ಬದ್ಧನಾಗಿದ್ದರೂ, ಧೀರನಾದುದರಿಂದ ಸ್ವಲ್ಪಕಾಲದಲ್ಲಿಯೇ ಮೂರ್ಛೆತಿಳಿದು ಚೇತರಿಸಿಕೊಂಡನು. ಹೀಗೆ ಮೂರ್ಛೆತಿಳಿದ ರಾಮನು, ತನ್ನ ಪಕ್ಕದಲ್ಲಿ ಬಾಣದಿಂದ ನಾಟಲ್ಪಟ್ಟ ಮೈಯುಳ್ಳವನಾಗಿ, ರಕ್ತದಿಂದ ತೊಯ್ದು, ಸಂಕಟದಿಂದ ಕಂದಿದ ಮುಖವುಳ್ಳ ತನ್ನ ತಮ್ಮನಾದ ಲಕ್ಷ್ಮಣನನ್ನು ನೋಡಿ,ದುಃಖವನ್ನು ತಡೆಯಲಾರದೆ ವಿಲಪಿಸುವನು. "ಹಾ ಕಷ್ಟವೆ! ನನ್ನ ಪ್ರಿ

ಯಸಹೋದರನಾದ ಲಕ್ಷ್ಮಣನು ಹೀಗೆ ಯುದ್ಧದಲ್ಲಿ ಶತ್ರುಗಳಿಂದ ನಿರ್ಜಿ
ತನಾಗಿ, ನೆಲದಲ್ಲಿ ಮಲಗಿರುವುದನ್ನು ನಾನು ಕಣ್ಣಾರೆ ನೋಡುತ್ತಿರುವೆನ
ಲ್ಲಾ! ಇನ್ನು ನನಗೆ ಸೀತೆಯಿಂದಾಗಬೇಕಾದುದೇನು? ನನಗೆ ಪ್ರಾಣಗಳಿ
ದ್ದೂ ಫಲವೇನು? ಈ ಭೂಲೋಕದಲ್ಲಿ ಹುಡುಕಿದಪಕ್ಷದಲ್ಲಿ,ಸೀತೆಗೆ ಸಾಟಿ
ಯಾದ ಪತ್ನಿಯನ್ನು ಹೇಗಾದರೂ ಸಂಪಾದಿಸಿಕೊಳ್ಳಬಹುದು. ಆದರೆ
ನನಗೆ ಪ್ರಾಣಸಹಾಯಕನಾಗಿಯೂ, ಯುದ್ಧಸಮರ್ಥನಾಗಿಯೂ ಇರು
ವ,ಈ ಲಕ್ಷ್ಮಣನಂತಹ ಪ್ರಿಯಸಹೋದರನನ್ನು ಪಡೆಯುವುದು ಸಾಧ್ಯವೆ?
ಎಂದಿಗೂ ಸಾಧ್ಯವಲ್ಲ! ಸುಮಿತ್ರಾನಂದವರ್ಧನನಾದ ಈ ಲಕ್ಷ್ಮಣನು
ಪ್ರಾಣವನ್ನು ಬಿಟ್ಟಿರುವುದೇ ನಿಜವಾದಪಕ್ಷದಲ್ಲಿ, ನಾನೂ ಈಗ ವಾನರರ
ಕಣ್ಣೆದಿರಾಗಿಯೇ ಪ್ರಾಣಗಳನ್ನು ಬಿಟ್ಟುಬಿಡುವೆನು. ಹಾ! ಮುಂದೆ ಗತಿ
ಯೇನು? ನಾನು ಅಯೋಧ್ಯೆಗೆ ಹೋಗಿ ನನ್ನ ತಾಯಿಯಾದ ಕೌಸಲ್ಯೆಗೆ ಏ
ನೆಂದು ಪ್ರತ್ಯುತ್ತರವನ್ನು ಕೊಡಲಿ! ಕೈಕೇಯಿಗಾದರೂ ಏನೆಂದು ಸಮಾ
ಧಾನವನ್ನು ಹೇಳಲಿ! ಲಕ್ಷ್ಮಣನಿಲ್ಲದೆ ನಾನುಮಾತ್ರವೇ ಅಲ್ಲಿಗೆ ಹೋದ
ಪಕ್ಷದಲ್ಲಿ, ಅಲ್ಲಿ ತನ್ನ ಪ್ರಿಯಪುತ್ರನನ್ನು ಕಣ್ಣಾರೆ ನೋಡಬೇಕೆಂದು ತತ್ತಳಿ
ಸಿ ತವಕಿಸುತ್ತಿರುವ ಆ ಸುಮಿತ್ರಾದೇವಿಯು, ತಮ್ಮನನ್ನಗಲಿ ಬಂದ ನನ್ನ
ನ್ನುನೋಡಿ, ನನ್ನಿಂದ ಈ ಅಪ್ರಿಯವಾರ್ತೆಯನ್ನೂ ಕೇಳಿದಮೇಲೆ, ಕರುವ
ನ್ನು ಕಳೆದುಕೊಂಡ ಹಸುವಿನಂತೆ ದುಃಖದಿಂದ ತತ್ತಳಿಸುತ್ತ ಕುರರಿಯಂ
ತೆ ಕೂಗತೊಡಗಿದರೆ, ಅವಳನ್ನು ನಾನು ಯಾವವಿಧದಿಂದ ಸಮಾಧಾನಪಡಿ
ಸಲಿ! ಶತ್ರುಘ್ನಸಹಾಯಕನಾದ ಭರತನಿಗೆ ನಾನೇನೆಂದು ಹೇಳಲಿ ! ನ
ನ್ನೊಡನೆ ಕಾಡಿಗೆ ಬಂದ ಲಕ್ಷ್ಮಣನನ್ನು ಬಿಟ್ಟು, ಈಗ ನಾನೊಬ್ಬನೇ ಹಿಂತಿ
ರುಗಿ ಅಯೋಧ್ಯೆಗೆ ಹೋದರೆ, ಸುಮಿತ್ರೆಯು ನನ್ನನ್ನು ನೋಡಿ "ರಾಮಾ!
ನೀನು ನಿನ್ನೊಡನೆ ಲಕ್ಷ್ಮಣನನ್ನೂ ಕಾಡಿಗೆ ಕರೆದುಕೊಂಡು ಹೋದವನಲ್ಲ
ವೆ?ಹಿಂತಿರುಗಿ ಬರುವಾಗ ಅವನನ್ನು ಬಿಟ್ಟು ನೀನು ಮಾತ್ರವೇ ಬಂದೆಯಾ?"
ಎಂದು ನನ್ನನ್ನು ನಿಂದಿಸದೆ ಬಿಡುವಳೆ? ಅಯ್ಯೋ! ಅದನ್ನು ಕೇಳಿ ನಾನು
ಹೇಗೆ ಸಹಿಸಲಿ? ಆ ಮಾತನ್ನು ನಾನು ಕೇಳಲಾರೆನು ! ಇನ್ನುಮೇಲೆ ನನಗೆ
ಬದುಕಿನಲ್ಲಿಯೇ ಆಸೆಯಿಲ್ಲ. ಇಲ್ಲಿಯೇ ನಾನೂ ಪ್ರಾಣವನ್ನು ಕಳೆದುಕೊ
ಳ್ಳುವೆನು? ಹಾ! ಲಕ್ಷ್ಮಣನನ್ನು ಕಾಡಿಗೆ ಕರೆದುಕೊಂಡು ಬರುವ ದುಷ್ಕಾ

ರ್ಯಕ್ಕೆ ನಾನೇಕೆ! ಕೈಹಾಕಿದೆನು? ಛೀ ನಾನೆಂತಹ ಅಪೂಜ್ಯನು? ನನ್ನ ಬದುಕನ್ನು ಸುಡಬೇಕು! ನನಗಾಗಿಯೇ ಅಲ್ಲವೇ ನನ್ನ ತಮ್ಮನಾದ ಲಕ್ಷ್ಮಣನು ಹೀಗೆ ನೆಲದಲ್ಲಿ ಬಿದ್ದು, ಪ್ರಾಣವಿಲ್ಲದಂತೆ ಶರತಲ್ಪದಲ್ಲಿ ಮಲಗಿರುವನು." ಎಂದು ವಿಲಪಿಸುತ್ತ, ಆಮೇಲೆ ಲಕ್ಷ್ಮಣನಕಡೆಗೆ ನೋಡಿ, "ವತ್ಸ ಲಕ್ಷ್ಮಣಾ! ನಾನು ಆಗಾಗ ದುಃಖಿತನಾದ ಕಾಲಗಳಲ್ಲೆಲ್ಲಾ, ನೀನು ನನ್ನನ್ನು ಸಮಾಧಾನಪಡಿಸುತಿದ್ದೆಯಲ್ಲವೆ? ಈಗ ನೀನು ಈ ಅವಸ್ಥೆಯನ್ನು ಹೊಂದಿದಮೇಲೆ, ನಾನು ಎಷ್ಟೆಷ್ಟು ದುಃಖಿಸಿದರೂ, ನನ್ನೊಡನೆ ಮಾತಾಡುವುದಕ್ಕೂ ಶಕ್ತಿಯಿಲ್ಲದೆ ಬಿದ್ದಿರುವೆಯಲ್ಲಾ! ಯಾವ ನೀನು ಈಗಿನಯುದ್ಧದಲ್ಲಿ ಅನೇಕರಾಕ್ಷಸರನ್ನು ಕೊಂದು ಕೆಡಹಿದೆಯೋ, ಅಂತಹ ವೀರನಾದ ನೀನು, ಆ ರಾಕ್ಷಸರನ್ನು ಕೆಡಹಿದ ಭೂಮಿಯಲ್ಲಿ, ಅದೇಶತ್ರುಗಳಿಂದ ಹತನಾಗಿ ಬಿದ್ದಿರುವೆಯಲ್ಲಾ! ನಾನಿನ್ನೇನು ಹೇಳಲಿ? ಈ ನಿನ್ನ ಅಂಗಾಂಗಗಳಲ್ಲಿಯೂ ರಕ್ತವು ಸುರಿಯುತ್ತಿರುವುದು. ಸರ್ವಾಂಗಗಳಲ್ಲಿಯೂ ಬಾಣಗಳು ನಾಟಿರುವುವು. ಶರತಲ್ಪದಲ್ಲಿ ಮಲಗಿ, ಅಸ್ತಂಗತನಾಗುವ ಸೂರ್ಯನಂತೆ ಕಾಣುತ್ತಿರುವೆಯಲ್ಲಾ!" ಎಂದು ರೋದಿಸುತಿದ್ದು, ಮನಸ್ಸಂಕಟವನ್ನು ತಡೆಯಲಾರದೆ ತಿರುಗಿ ತನ್ನಲ್ಲಿ ತಾನು "ಹಾ! ನಾನಿನ್ನೇನು ಮಾಡಲಿ? ಮರ್ಮಗಳಲ್ಲಿ ಬಾಣಗಳು ನಾಟಿರುವುದರಿಂದ, ಮಾತನಾಡುವುದಕ್ಕೂ ಇವನಿಗೆ ಶಕ್ತಿಯಿಲ್ಲ! ಇವನ ದೃಷ್ಟಿಯಿಂದಲೇ ಇವನ ಬಾಧೆಯು ಸೂಚಿಸಲ್ಪಡುವುದು! ದಿವ್ಯಕಾಂತಿವಿಶಿಷ್ಟನಾದ ಈ ಲಕ್ಷ್ಮಣನು, ನಾನು ಕಾಡಿಗೆ ಬಂದಾಗಲೂ ನನ್ನನ್ನು ಬಿಟ್ಟಿರಲಾರದೆ, ಹೇಗೆ ಹಿಂಬಾಲಿಸಿಬಂದನೋ, ಹಾಗೆಯೇ ನಾನೂ ಈಗ ಇವನು ಯಮನಬಳಿಗೆ ಹೋಗುವಾಗ, ಅವನನ್ನೇ ಹಿಂಬಾಲಿಸಿ ಹೋಗುವೆನು. ಈತನು ಯಾವಾಗಲೂ ಬಂಧುಜನಗಳಲ್ಲಿ ಪ್ರೀತಿಯನ್ನು ತೋರಿಸತಕ್ಕವನು. ಯಾವಾಗಲೂ ನನ್ನನ್ನು ನಿಯಮದಿಂದ ಅನುಸರಿಸುತಿದ್ದವನು. ಇಂತಹ ಸಾಧುಗುಣವುಳ್ಳ ಈತನು ಈ ನನ್ನ ಅಕ್ರಮದಿಂದಲ್ಲವೇ ಇಷ್ಟುದುರವಸ್ಥೆಯನ್ನು ಹೊಂದಿರುವನು. ವೀರನಾದ ಈ ಲಕ್ಷ್ಮಣನು ತನಗೆ ಎಷ್ಟೇ ಕೋಪವುಂಟಾದಾಗಲೂ ನನ್ನೊಡನೆ ಪರುಷವಾಗಿಯಾಗಲಿ, ಅಪ್ರಿಯವಾಗಿಯಾಗಲಿ, ಮಾತಾಡಿದುದನ್ನು ನಾನು ಯಾವಾಗಲೂ ಕೇಳಿದುದಿಲ್ಲ. ಅಯ್ಯೋ! ಇವನ ಗುಣಗಳೆಲ್ಲವೂ ಈಗ ನನ್ನ ನೆನಪಿಗೆ ಬರುತ್ತಿರುವುವಲ್ಲಾ

ಒಂದೇಸಲಕ್ಕೆ ಐನೂರುಬಿಲ್ಲುಗಳನ್ನು ಹಿಡಿದು ಬಾಣವನ್ನು ಪ್ರಯೋಗಿಸುವು
ದಕ್ಕೆ ತಕ್ಕ ಸಹಸ್ರಭುಜಗಳುಳ್ಳ 'ಕಾರ್ತವೀರ್ಯಾರ್ಜುನನಿಗಿಂತಲೂ,ಬಾಣಪ್ರ
ಯೋಗಚಾತುರ್ಯದಲ್ಲಿ ಈ ಲಕ್ಷ್ಮಣನೇ ಹೆಚ್ಚೆಂದು ಹೇಳಬಹುದು. ಈತ
ನಿಗೆ ಎರಡೇ ಕೈಗಳಿದ್ದರೂ, ಸಹಸ್ರಭುಜವುಳ್ಳ ಕಾರ್ತವೀರ್ಯನು ತನ್ನ ಸಾ
ವಿರತೋಳುಗಳನ್ನೂ ಉಪಯೋಗಿಸಿ, ಐನೂರುಬಾಣಗಳನ್ನು ಪ್ರಯೋಗಿ
ಸುವಷ್ಟು ಕಾಲದಲ್ಲಿ, ಈತನೂ ಅಷ್ಟುಬಾಣಗಳನ್ನು ಬಿಡಬಲ್ಲನಾದುದರಿಂದ
ಶಸ್ತ್ರಾಸ್ತ್ರಪ್ರಯೋಗಗಳಲ್ಲಿ ಕಾರ್ತವೀರ್ಯನಿಗಿಂತಲೂ ಈ'ಲಕ್ಷ್ಮಣನೇ ಮೇ
ಲೆನಿಸಿರುವನು. ಅಯ್ಯೋ! ಯಾವನು ತನ್ನಬಾಣಗಳಿಂದ ಮಹಾತ್ಮನಾದ
ಇಂದ್ರನ ಬಾಣಗಳನ್ನೂ ತಡೆಯಬಲ್ಲನೋ, ಅಂತಹ ವೀರಾಗ್ರಣಿಯಾದ ಲ
ಕ್ಷ್ಮಣನು, ಸರ್ವೋತ್ತಮವಾದ ಸುಖಶಯ್ಯೆಯಲ್ಲಿ ಮಲಗತಕ್ಕವನಾಗಿರು
ವಾಗಲೂ, ಈಗ ಬರೀನೆಲದಮೇಲೆ ಮಲಗಿರುವನಲ್ಲಾ ! ನಾನು
ವಿಭೀಷಣನಿಗೆ, ರಾಕ್ಷಸರಾಜ್ಯದಲ್ಲಿ ಪಟ್ಟವನ್ನು ಕಟ್ಟುವುದಾಗಿ ಬಾಯಿಬಿ
ಟ್ಟು ಹೇಳಿದೆನು. ಆ ಕಾರ್ಯವನ್ನೂ ನಡೆಸದೆ ಹೋದೆನು. ಈ ನನ್ನ ಮಿಥ್ಯಾ
ಪ್ರತಿಜ್ಞೆಯೂಕೂಡ ಮುಂದೆ ನನ್ನನ್ನು ದಹಿಸದೆ,ಬಿಡದು. ಎಲೆ ಸುಗ್ರೀ
ವಾ! ನೀನಾದರೂ ಈ ಕ್ಷಣವೇ ಇಲ್ಲಿಂದ ಹೊರಟು ಕಿಷ್ಕಿಂಧೆಗೆ ಹೋಗಿ
ಸೇರಿಬಿಡು. ನಾವಿಬ್ಬರೂ ಇಲ್ಲದಿರುವುದನ್ನು ನೋಡಿ, ಬಲಾಢ್ಯನಾದ ರಾ
ವಣನು,ನಿನ್ನನ್ನು ಬೆನ್ನಟ್ಟಿಕೊಂಡು ಬರುವನು. ನಿನಗಿಂತಲೂ ಅವನು ಬಲಾ
ಢ್ಯನು. ಆದುದರಿಂದ ನೀನು ಈ ಅಂಗದನನ್ನೂ ಸಂಗಡ ಕರೆದುಕೊಂಡು,
ಈ ಸಮಸ್ತವಾನರಸೈನ್ಯಗಳೊಡನೆಯೂ, ಸುಹೃಜ್ಜನಗಳೊಡನೆಯೂ,
ನಲನೀಲಾದಿವಾನರಯೂಥಪತಿಗಳೊಡನೆಯೂ ಕೂಡಿ, ಈಗ ನಾವು ಬಂ
ದ ದಾರಿಯಿಂದಲೇ ಸಮುದ್ರವನ್ನು ದಾಟಿ ಹೋಗು. ಈ ಹನುಮಂತನು
ಯುದ್ಧದಲ್ಲಿ ನನಗಾಗಿ ಬೇರೊಬ್ಬರಿಂದ ಸಾಧ್ಯವಾಗದ ಎಷ್ಟೋ ಕಾರ್ಯ
ವನ್ನು ನಡೆಸಿರುವನು. ಋಕ್ಷರಾಜನಾದ ಈ ಜಾಂಬವಂತನೂ, ಗೋಲಾಂ
ಗೂಲಾಧಿಪತಿಯಾದ ಈ ಗವಾಕ್ಷನೂ, ನನಗಾಗಿ ಈ ಯುದ್ಧದಲ್ಲಿ ಎಷ್ಟೋ
ಸಾಹಸಗಳನ್ನು ನಡೆಸಿರುವರು. ಇವರ ಪ್ರೀತಿಗಾಗಿ ನಾನು ಬಹಳಸಂತೋ
ಷಪಟ್ಟೆನು. ಯುವರಾಜನಾದ! ಈ ಅಂಗದನೂ, ಮೈಂದನೂ, ದ್ವಿವಿದನೂ
ಈ ಕೇಸರಿಯೂ, ಸಂಪಾತಿಯೂ, ನನಗಾಗಿ ಎಷ್ಟೋಭಯಂಕರಯುದ್ಧ

ಗಳನ್ನು ನಡೆಸಿದರು. ಹಾಗೆಯೇ ಈ ಗವಯನೂ, ಗವಾಕ್ಷನೂ, ಶರಭನೂ ಗಜನೂ, ಇನ್ನೂ ಇತರ ವಾನರವೀರರೆಲ್ಲರೂ, ನನಗಾಗಿ ತಮ್ಮ ಪ್ರಾಣಗಳನ್ನೂ ಲಕ್ಷ್ಯಮಾಡದೆ, ಯುದ್ಧಮಾಡಿದರು. ಸುಗ್ರೀವಾ! ಯಾರು ಎಷ್ಟು ಪ್ರಯತ್ನಮಾಡಿದರೇನು? ದೈವವನ್ನತಿಕ್ರಮಿಸಬೇಕೆಂದರೆ ಮನುಷ್ಯರಿಗೆ ಸಾಧ್ಯವೆ? ಎಂದಿಗೂ ಸಾಧ್ಯವಲ್ಲ! ಎಲೆ ಪರಂತಪನೆ! ಮನಃಪೂರ್ವಕವಾಗಿ ಶ್ರೇಯಸ್ಸನ್ನು ಕೋರುವ ಆಪ್ತಮಿತ್ರನಿಂದ, ಎಷ್ಟುದೂರದವರೆಗೆ ಸಹಾಯವನ್ನು ಮಾಡಲು ಸಾಧ್ಯವೋ, ಅಷ್ಟರವರೆಗೂ,ನೀನೂ ನನ್ನ ವಿಷಯದಲ್ಲಿ ನಿರ್ವಂಚನೆಯಾಗಿ ಸಹಾಯವನ್ನು ಮಾಡಿಬಿಟ್ಟಿರುವೆ! ನೀನು ಧರ್ಮಜ್ಞನಾಗಿಯೂ,ಅಧರ್ಮಭೀರುವಾಗಿಯೂ ಇದ್ದು, ನನಗೆ ಮಾಡಿದಸಹಾಯಕ್ಕಾಗಿ ನಾನು ಎಷ್ಟುಕೃತಜ್ಞತೆಯನ್ನು ತೋರಿಸಿದರೂ ಸಾಲದು." ಎಂದು ಹೇಳಿ, ಆಮೇಲೆ ಅಲ್ಲಿದ್ದ ಸಮಸ್ತವಾನರವೀರರನ್ನೂ ನೋಡಿ, "ಎಲೆ ವಾನರೋತ್ತಮರೆ! ನೀವು ನನ್ನ ವಿಷಯದಲ್ಲಿ ನಡೆಸಬೇಕಾದ ಮಿತ್ರಕಾರ್ಯವನ್ನು ನಿರ್ವಂಚನೆಯಾಗಿ ನಡೆಸಿಬಿಟ್ಟಿರುವಿರಿ. ಇನ್ನು ನೀವು ಯಥೇಷ್ಟವಾಗಿ ನಿಮ್ಮ ನಿಮ್ಮ ನಿವಾಸಗಳಿಗೆ ಹಿಂತಿರುಗಬಹುದು. ನಿಮಗೆ ನಾನು ಅನುಜ್ಞೆಯನ್ನು ಕೊಟ್ಟಿರುವೆನು" ಎಂದನು. ಹೀಗೆ ರಾಮನು ದುಃಖದಿಂದ ಹೇಳಿದ ಮಾತನ್ನು ಕೇಳಿ, ಅಲ್ಲಿದ್ದ ಸಮಸ್ತ ವಾನರರೂ, ದುಃಖದಿಂದ ಕೆಂಪೇರಿದ ಕಣ್ಣುಳ್ಳವರಾಗಿ ಕಣ್ಣೀರುಬಿಡುತಿದ್ದರು. ಇಷ್ಟರಲ್ಲಿ ವಿಭೀಷಣನು ಗದಾಪಾಣಿಯಾಗಿ ಅಲ್ಲಲ್ಲಿ ಓಡಿಹೋಗುತಿದ್ದ ವಾನರಸೈನ್ಯಗಳೆಲ್ಲವನ್ನೂ ತಡೆದು ನಿಲ್ಲಿಸಿ,ವೇಗದಿಂದ ಹಿಂತಿರುಗಿ ರಾಮನಿದ್ದಸ್ಥಳಕ್ಕೆ ಬಂದನು. ಕಾಡಿಗೆಯ ರಾಶಿಯಂತೆ ಕಪ್ಪಾದ ಮೈಯುಳ್ಳ ವಿಭೀಷಣನು ಗದೆಯನ್ನು ಕೈಯಲ್ಲಿ ಹಿಡಿದು ವೇಗದಿಂದ ಬರುವುದನ್ನು ನೋಡಿ, ರಾಮಲಕ್ಷ್ಮಣರನ್ನು ಸುತ್ತಿನಿಂತಿದ್ದ ವಾನರರೆಲ್ಲರೂ, ಅವನೇ ಇಂದ್ರಜಿತ್ತೆಂದು ಭ್ರಮಿಸಿ, ಭಯದಿಂದ ಪಲಾಯನಮಾಡುವುದಕ್ಕೆ ತೊಡಗಿದರು. ವಿಭೀಷಣನಾದರೋ,ಇತ್ತಲಾಗಿ ಪ್ರಜ್ಞೆಯಿಲ್ಲದೆ ಕೊಳೆಮುಚ್ಚಿದ ಮೈಯುಳ್ಳವನಾಗಿ, ನಿಶ್ಚೇಷ್ಟನಾಗಿ, ಶರತಲ್ಪದಲ್ಲಿ ಮಲಗಿದ್ದ ರಾಮಲಕ್ಷ್ಮಣರನ್ನು ನೋಡಬೇಕೆಂಬ ಆತ್ಯಾತುರದಿಂದ ಬರುತಿದ್ದನು. ಆ ವಾನರರೆಲ್ಲರೂ, ಅಲ್ಲಿ ರಾಮಲಕ್ಷ್ಮಣರು ಅನುಭವಿಸುತಿದ್ದ ದುರವಸ್ಥೆಯನ್ನೂ, ತಮ್ಮ ಕಡೆಗೆ ಬರುತಿದ್ದ ವಿಭೀಷಣನ ಆತುರವನ್ನೂ ನೋಡಿ

ಅವನನ್ನೇ ಇಂದ್ರಜಿತ್ತೆಂದು ತಿಳಿದು,ಮಹಾವ್ಯಥೆಯಿಂದ ಕೂಡಿ ಬಿರುಗಾಳಿಗೆ ಸಿಕ್ಕಿದ ಮೇಘಗಳಂತೆ, ನಾನಾಕಡೆಗಳಿಗೆ ಚದರುತಿದ್ದರು. ಇಲ್ಲಿಗೆ ಹಾಲ್ವತ್ತೊಂಭತ್ತನೆಯ ಸರ್ಗವು.

---

ವಿಭೀಷಣನು ರಾಮಲಕ್ಷ್ಮಣರ ಅವಸ್ಥೆಯನ್ನು ನೋಡಿ ದುಃಖಿಸುತ್ತಿರಲು, ಸುಗ್ರೀವನು ಅವನನ್ನು ಸಮಾಧಾನಗೊಳಿಸಿದುದು. ಇಷ್ಟರಲ್ಲಿ ಗರುತ್ಮಂತನು ಬಂದು ರಾಮಲಕ್ಷ್ಮಣರಿಂದ ನಾಗಪಾಶವನ್ನು ಬಿಡಿಸಿದುದು. ಇದನ್ನು ನೋಡಿ ಸಮಸ್ತವಾನರರೂ ಸಂತೋಷದಿಂದ ಸಿಂಹನಾದಗಳನ್ನು ಮಾಡಿದುದು.

ಆಗ ಮಹಾತೇಜಸ್ವಿಯಾಗಿಯೂ, ಬಲಾಢ್ಯನಾಗಿಯೂ ಇರುವ ವಾನರರಾಜನಾದ ಸುಗ್ರೀವನು, ತನ್ನೊಡನಿದ್ದ ವಾನರರೆಲ್ಲರೂ ಹಾಗೆ ಆಕಸ್ಮಾತ್ತಾಗಿ ಪಲಾಯಿತರಾದುದನ್ನು ನೋಡಿ, ಅದಕ್ಕೆ ಕಾರಣವೇನೆಂದು ತಿಳಿಯದೆ, “ಆಹಾ! ಇದೇನು? ಪ್ರವಾಹದಲ್ಲಿ ಇದಿರುಗಾಳಿಗೆ ಸಿಕ್ಕಿದ ದೋಣಿಯಂತೆ, ನಮ್ಮ ವಾನರಸೇನೆಯೆಲ್ಲವೂ ಹೀಗೆ ವ್ಯಾಕುಲವಾಗಿರುವುದಕ್ಕೆ ಕಾರಣವೇನು ?" ಎಂದು ಕೇಳಿದನು. ಆಗ ವಾಲಿಪುತ್ರನಾದ ಅಂಗದನು ಅವನನ್ನು ಕುರಿತು, “ಎಲೆ ಆರ್ಯನೆ! ಇದೋ ! ಇಲ್ಲಿ ದಶರಥಪುತ್ರರಾದ, ಮಹಾತ್ಮರಾದ ರಾಮಲಕ್ಷ್ಮಣರಿಬ್ಬರೂ, ಸರ್ವಾವಯವಗಳಲ್ಲಿಯೂ, ಬಾಣವು ನಾಟಿರುವುದರಿಂದ, ರಕ್ತದಿಂದ ತೊಯ್ದ ಮೆಯ್ಯುಳ್ಳವರಾಗಿ ಶರತಲ್ಪದಲ್ಲಿ ಮಲಗಿರುವುದನ್ನು ನೀನು ನೋಡಲಿಲ್ಲವೆ ? ನಮ್ಮ ವಾನರಸೇನೆಗೆ ಭಯವುಂಟಾಗುವುದಕ್ಕೆ ಇದಲ್ಲದೆ ಬೇರೆ ಕಾರಣವಿಲ್ಲ" ಎಂದನು. ಆಗ ವಾನರರಾಜನಾದ ಸುಗ್ರೀವನು ತನ್ನ ಪ್ರಿಯಪುತ್ರನಾದ ಅಂಗದನನ್ನು ನೋಡಿ, “ವತ್ಸನೆ ! ಹಾಗಲ್ಲ ! ಹೀಗೆ ರಾಮಲಕ್ಷ್ಮಣರು ಮಲಗಿರುವುದುಮಾತ್ರವೇ ಇದಕ್ಕೆ ಕಾರಣವಲ್ಲ! ಇದೂ ಒಂದು ಕಾರಣವಾಗಿದ್ದರೂ ಇದಕ್ಕೆ ಬೇರೆ ಯಾವುದೋ ಒಂದು ಪ್ರಧಾನಕಾರಣವಿರಬೇಕು ! ಏಕೆಂದರೆ, ಈ ವಾನರರ ಮುಖದಲ್ಲಿ ದುಃಖಚಿಹ್ನಗಳೊಡನೆ ಬಹಳವಾದ ಭಯಚಿಹ್ನೆಗಳೂ ಕಾಣುತ್ತಿರುವುವು. ಇವರೆಲ್ಲರೂ ಮಿತಿಮೀರಿದ ಭಯದಿಂದ ಕ

ಣ್ಣುಗಳನ್ನರಳಿಸುತ್ತ, ತಾವುತಾವು ಕೈಯಲ್ಲಿ ಹಿಡಿದಿದ್ದ ಕಲ್ಲುಮರಗಳೇ ಮೊ ದಲಾದ ಯುದ್ಧಸಾಧನಗಳನ್ನೂ ಕೆಳಕ್ಕೆ ಬಿಸುಟು, ದಿಕ್ಕುದಿಕ್ಕಿಗೆ ಪಲಾಯ ನ ಮಾಡುತ್ತಿರುವರು ನೋಡು! ಇದರಲ್ಲಿ ಒಬ್ಬರನ್ನೊಬ್ಬರು ನೋಡಿಯೂ ನಾಚಿಕೆಯಿಲ್ಲದೆ, ಹಿಂತಿರುಗಿಯೂ ನೋಡದೆ, ತಮ್ಮ ಪ್ರಾಣಸಂರಕ್ಷಣೆ ಯಲ್ಲಿರುವ ಆತುರಕ್ಕಾಗಿ ಒಬ್ಬರನ್ನೊಬ್ಬರು ತಳ್ಳಿಕೊಂಡು, ವೇಗದಿಂದೋ ಡುವುದನ್ನು ನೋಡು! ಅಲ್ಲಲ್ಲಿ ನೆಲದಮೇಲೆ ಬಿದ್ದಿರುವವರನ್ನೂ ಲಕ್ಷ್ಯಮಾ ಡದೆ, ಅವರ ಮೇಲೆ ಕಾಲಿಟ್ಟು ದಾಟಿಹೋಗುತ್ತಿರುವರು ನೋಡು!" ಎಂದನು. ಇಷ್ಟರಲ್ಲಿ ವೀರನಾದ ವಿಭೀಷಣನು ಗದಾಪಾಣಿಯಾಗಿ ಬಂದು ಸುಗ್ರೀವನನ್ನಾಶೀರ್ವದಿಸಿ ರಾಮನನ್ನು ನೋಡಿದನು. ಆಗ ಸುಗ್ರೀವನು ವಾನರರೆಲ್ಲರೂ ವಿಭೀಷಣನನ್ನು ನೋಡಿಯೇ ಭಯಪಟ್ಟು ಪಲಾಯನಮಾ ಡುವರೆಂದು ತಿಳಿದು, ತನ್ನ ಸಮೀಪದಲ್ಲಿದ್ದ ಭಲ್ಲೂಕರಾಜನಾದ ಜಾಂಬ ವಂತನನ್ನು ನೋಡಿ ''ಎಲೈ ಆರ್ಯನೆ! ಅದೋ! ನಮ್ಮ ವಾನರಸೈನ್ಯಗಳೆಲ್ಲವೂ ಈ ವಿಭೀಷಣನು ಬಂದುದನ್ನುನೋಡಿ, ಇಂದ್ರಜಿತ್ತೆಂಬ ಭ್ರಾಂತಿಯಿಂದ ಭಯಪಟ್ಟು, ಓಡುತ್ತಿರುವರು. ನೀನು ಅವರಿಗೆ ಆ ಭಯವನ್ನು ತಪ್ಪಿಸಿ ''ಈಗ ಬಂದವನು ವಿಭೀಷಣನೇ ಹೊರತು, ಇಂದ್ರಜಿತ್ತಲ್ಲ"ವೆಂದು ಧೈರ್ಯ ವನ್ನು ಹೇಳಿ ತಡೆದು ನಿಲ್ಲಿಸು" ಎಂದನು. ಸುಗ್ರೀವಾಜ್ಞೆಯನ್ನು ಕೇಳಿ ದೊಡನೆ ಜಾಂಬವಂತನು ವೇಗದಿಂದೋಡಿ, ಪಲಾಯನಮಾಡುತಿದ್ದ ಆ ವಾನರರನ್ನೆಲ್ಲಾ ಅಡ್ಡಗಟ್ಟಿ ನಿಲ್ಲಿಸಿ, ಸಮಾಧಾನವನ್ನು ಹೇಳಿ ಹಿಂತಿರುಗಿಸಿದ ನು. ಆ ವಾನರರೆಲ್ಲರೂ ಜಾಂಬವಂತನ ಮಾತನ್ನು ಕೇಳಿ, ವಿಭೀಷಣದರ್ಶನ ದಿಂದ ತಮಗುಂಟಾದ ಭಯವನ್ನು ಬಿಟ್ಟು, ಹಿಂತಿರುಗಿ ಬಂದು ತಮ್ಮ ಸ್ಥಳದಲ್ಲಿ ನಿಂತರು. ಇತ್ತಲಾಗಿ ಧರ್ಮಾತ್ಮನಾದ ವಿಭೀಷಣನು, ರಾಮ ಲಕ್ಷ್ಮಣರ ಅಂಗಾಂಗಗಳಲ್ಲಿಯೂ, ಬಾಣಗಳು ನಾಟಿರುವುದನ್ನುನೋಡಿ, ವ್ಯಸನದಿಂದ ಕದಲಿದ ಇಂದ್ರಿಯಗಳುಳ್ಳವನಾದನು. ಹಾಗಿದ್ದರೂ ಅವನು ಸಮಯೋಚಿತಬುದ್ಧಿಯುಳ್ಳವನಾದುದರಿಂದ, ಧೈರ್ಯಗೆಡದೆ, ಬೊಗಸೆ ಯಲ್ಲಿ ನೀರನ್ನು ತಂದು, ಆ ರಾಮಲಕ್ಷ್ಮಣರ ಕಣ್ಣುಗಳನ್ನು ತೊಡೆದು ದುಃಖದಿಂದ ಕುಗ್ಗಿದ ಮನಸ್ಸುಳ್ಳವನಾಗಿ ನಿಂತು ವಿಲಪಿಸುವನು. ''ಆಹಾ! ಇದೇನನರ್ಥವು? ಇವರಿಬ್ಬರೂ ಎಣೆಯಿಲ್ಲದ ಬಲಪರಾಕ್ರಮವುಳ್ಳವರು ?

ಯುದ್ಧಪ್ರಿಯರು? ಹೀಗಿದ್ದರೂ ರಾಕ್ಷಸರ ಕಪಟಯುದ್ಧಕ್ಕೆ ಸಿಕ್ಕಿ ಈದು ರವಸ್ಥೆಯನ್ನು ಹೊಂದಿರುವರಲ್ಲಾ! ಇವರಿಬ್ಬರೂ ಧರ್ಮಯುದ್ಧವನ್ನೇ ನಡೆಸತಕ್ಕವರೇ ಹೊರತು, ಕಪಟಯುದ್ಧಕ್ಕೆ ಎಂದಿಗೂ ಪ್ರವರ್ತಿಸುವವರಲ್ಲವೆಂಬುದನ್ನು ತಿಳಿದೇ,ನನ್ನಣ್ಣನ ಮಗನಾದ ಇಂದ್ರಜಿತ್ತು,ರಾಕ್ಷಸರಿಗೆ ಸಹಜವಾದ ಕುಟಿಲಬುದ್ಧಿಯನ್ನೇ ಅವಲಂಬಿಸಿ, ಕಪಟಯುದ್ಧವನ್ನು ಮಾಡಿ ಇವರನ್ನು ವಂಚಿಸಿಬಿಟ್ಟನು. ದುಷ್ಪುತ್ರನಾಗಿಯೂ, ದುರಾತ್ಮನಾಗಿಯೂ ಇರುವ ಆ ಇಂದ್ರಜಿತ್ತು ಇವರ ವಿಷಯದಲ್ಲಿ ಬಹಳ ಮೋಸವನ್ನು ಮಾಡಿದನು. ಆಹಾ ? ಇವರ ಸರ್ವಾವಯವಗಳಲ್ಲಿಯೂ ರಕ್ತವು ಸುರಿಯುತ್ತಿರುವುದು. ಸರ್ವಾಂಗಗಳಲ್ಲಿಯೂ ಬಾಣಗಳು ನಾಟಿರುವುದರಿಂದ ನೆಲದಮೇಲೆ ಮಲಗಿರುವ ಶಲ್ಯಮೃಗಳಂತೆ ಕಾಣುತ್ತಿರುವರು. ನಾನು ಯಾರ ಪರಾಕ್ರಮದ ಬಲದಿಂದಲೇ ಪ್ರತಿಷ್ಠೆಯನ್ನು ಹೊಂದಿ ವೃದ್ಧಿಗೆ ಬರಬೇಕೆಂದು ನಂಬಿದ್ದೆನೋ, ಅಂತಹ ಪುರುಷಸಿಂಹರಾದ ರಾಮಲಕ್ಷ್ಮಣರಿಬ್ಬರೂ, ತಮ್ಮ ದೇಹವನ್ನು ಬಿಡುವುದಕ್ಕಾಗಿ, ಈ ದೀರ್ಘನಿದ್ರೆಯನ್ನವಲಂಬಿಸಿರುವರಲ್ಲಾ! ಇನ್ನು ನನಗೆ ರಾಜ್ಯದಾಸೆಯೂ ಹೋಯಿತು!ಇನ್ನು ನನ್ನ ಕೋರಿಕೆಗಳೆಲ್ಲವೂ ವಿಫಲವಾದುವು! ಇನ್ನು ನಾನು ಬದುಕಿದ್ದರೂ ಅನೇಕವಿಪತ್ತುಗಳಿಗೆ ಗುರಿಯಾಗಬೇಕಾಗುವುದು. ನನ್ನ ಹಗೆಯಾದ ರಾವಣನೂ ತನ್ನ ಪ್ರತಿಜ್ಞೆಯನ್ನು ಮುಗಿಸಿಕೊಂಡುಬಿಟ್ಟನು. ಅವನ ಕೋರಿಕೆಯೂ, ನೆರವೇರಿತು." ಎಂದು ವಿಲಪಿಸುತಿದ್ದನು. ಆಗ ವಾನರರಾಜನಾದ ಸುಗ್ರೀವನು ಎಂತಹ ವ್ಯಸನಗಳಲ್ಲಿಯೂ ಎದೆಗುಂದದ ಧೀರಸ್ವಭಾವವುಳ್ಳವನಾದುದರಿಂದ, ದುಃಖಿಸುತಿದ್ದ ವಿಭೀಷಣನನ್ನು ಆಲಿಂಗಿಸಿಕೊಂಡು, "ಎಲೆ ಧರ್ಮಜ್ಞನೆ! ದುಃಖಿಸಬೇಡ! ರಾಮಲಕ್ಷ್ಮಣರಿಗೆ ಅಪಾಯವೇನೂ ಇರಲಾರದು. ನಿನಗೆ ಲಂಕಾರಾಜ್ಯವು ಕೈಸೇರುವುದರಲ್ಲಿಯೂ ಸಂದೇಹವಿಲ್ಲ. ಇಷ್ಟುಮಾತ್ರಕ್ಕೆ ರಾವಣನೂ, ಅವನ ಮಗನಾದ ಇಂದ್ರಜಿತ್ತೂ ಕೃತಕೃತ್ಯರಾದರೆಂದೆಣಿಸಬೇಡ. ಇಂದ್ರಜಿತ್ತಿನ ಸರ್ಪಾಸ್ತ್ರಗಳು ಇವರಿಗೆ ಮರಣಾಂತವಾದ ಬಾಧೆಯನ್ನುಂಟುಮಾಡುವುದೆಂಬ ಶಂಕೆಯನ್ನು ಬಿಡು ? ಇವರಿಬ್ಬರೂ ಕೇವಲ ಮೂರ್ಛಿತರಾಗಿರುವುದು ಮಾತ್ರವೇ ಹೊರತು ಬೇರೆಯಲ್ಲ! ಇನ್ನು ಸ್ವಲ್ಪಕಾಲದಲ್ಲಿಯೇ ಇವರು ಮೂರ್ಛೆತಿಳಿದೆದ್ದು, ಯುದ್ಧದಲ್ಲಿ ರಾವಣನ

ನ್ನು ಅವನ ಪರಿವಾರಗಳೊಡನೆ ಕೊಲ್ಲುವುದರಲ್ಲಿ ಸಂದೇಹವಿಲ್ಲ" ಎಂದನು. ಹೀಗೆ ಸುಗ್ರೀವನು, ವಿಭೀಷಣನಿಗೆ ಸಮಾಧಾನವಾಕ್ಯವನ್ನು ಹೇಳಿದಮೇಲೆ, ತನ್ನ ಪಕ್ಕದಲ್ಲಿದ್ದ ತನ್ನ ಮಾವನಾದ ಸುಷೇಣನನ್ನು ನೋಡಿ, "ಎಲೆ ಪೂಜ್ಯನೆ! ನೀನು ಇಲ್ಲಿಯೇ ನಿರೀಕ್ಷಿಸುತಿದ್ದು, ಪರಂತಪರಾದ ಈ ಸಹೋದರರಿಬ್ಬರೂ ಮೂರ್ಛೆತಿಳಿದೆದ್ದಮೇಲೆ, ಶೂರರಾದ ಕೆಲವು ವಾನರರೊಡಗೂಡಿ, ಇವರನ್ನೂ ಕರೆದುಕೊಂಡು ಕಿಷ್ಕಿಂಧೆಗೆ ಹೋಗು! ನಾನಾದರೋ ಇಲ್ಲಿ ರಾವಣನನ್ನೂ, ಅವನ ಪುತ್ರರನ್ನೂ, ಬಂಧುಗಳನ್ನೂ ಯುದ್ಧದಲ್ಲಿ ಕೊಂದು, ದೇವೇಂದ್ರನು ತನ್ನ ಕೈತಪ್ಪಿಹೋದ ರಾಜ್ಯಲಕ್ಷ್ಮಿಯನ್ನು ತಿರುಗಿ ಕೈಸೇರಿಸಿಕೊಂಡಂತೆ ಸೀತೆಯನ್ನು ಕರೆತರುವೆನು" ಎಂದನು. ಆಗ ಸುಗ್ರೀವನ ಮಾತನ್ನು ಕೇಳಿ ಸುಷೇಣನು "ಎಲೆ ರಾಜನೆ! ಪೂರ್ವದಲ್ಲಿ ದೇವಾಸುರರಿಗೆ ಬಹಳ ಭಯಂಕರವಾಗಿ ನಡೆದ ಮಹಾಯುದ್ಧವನ್ನು ನಾನು ಬಲ್ಲೆನು. ಆಗ ಬಾಣಪ್ರಯೋಗದಲ್ಲಿ ಕುಶಲರಾಗಿಯೂ, ಆಯುಧವಿದ್ಯೆಯನ್ನು ಚೆನ್ನಾಗಿ ಬಲ್ಲವರಾಗಿಯೂ ಇದ್ದ ಅಸುರರು, ಆಗಾಗ ದೇವತೆಗಳನ್ನು ತಮ್ಮ ಮಾಯೆಯಿಂದ ಮರುಳುಮಾಡಿ ಪ್ರಹರಿಸಿದರು. ಆಗ ದೇವತೆಗಳಲ್ಲಿ ಕೆಲವರು ಬಾಣಪೀಡಿತರಾಗಿಯೂ, ಕೆಲವರು ಮೂರ್ಛಿತರಾಗಿಯೂ, ಕೆಲವರು ಮೃತರಾಗಿಯೂ, ಬಿದ್ದಿರುವುದನ್ನು ನೋಡಿ, ಅವರ ಗುರುವಾದ ಬೃಹಸ್ಪತ್ಯಾಚಾರ್ಯನು, ಮಂತ್ರಭೂಯಿಷ್ಠಗಳಾಗ ಮೃತಸಂಜೀವಿನಿ ಮೊದಲಾದ ವಿದ್ಯೆಗಳಿಂದ, ಅವರಿಗೆ ಚಿಕಿತ್ಸೆಗಳನ್ನುಮಾಡಿ ಬದುಕಿಸಿರುವನು. ಆದುದರಿಂದ ಈಗಲೂ ಆ ಮೂಲಿಕೆಗಳನ್ನು ತರುವುದಕ್ಕಾಗಿ ನಮ್ಮಲ್ಲಿ ಸಮರ್ಥರಾದ ಪನಸ ಸಂಪಾತಿಗಳೇ ಮೊದಲಾದ ಕೆಲವು ವಾನರರು, ಶೀಘ್ರದಲ್ಲಿಯೇ ಕ್ಷೀರ ಸಮುದ್ರಕ್ಕೆ ಹೋಗಲಿ! ಈ ವಾನರರುಮಾತ್ರವೆ ಪರ್ವತಗಳಲ್ಲಿರುವ ಮಹೌಷಧಿಗಳೆಲ್ಲವನ್ನೂ ಚೆನ್ನಾಗಿ ಬಲ್ಲರು. ದೇವತೆಗಳಿಂದ ನಿರ್ಮಿತವಾದ ಸಂಜೀವಕರಣಿ, ಮತ್ತು ವಿಶಲ್ಯಕರಣಿಗಳೆಂಬ ಆ ದಿವ್ಯಮೂಲಿಕೆಗಳನ್ನು ತರಿಸುವುದಕ್ಕಾಗಿ ಇವರನ್ನೇ ಕಳುಹಿಸು! ಸಮುದ್ರಗಳಲ್ಲಿ ಮೇಲೆನಿಸಿಕೊಂಡ ಕ್ಷೀರಸಮುದ್ರದಲ್ಲಿ, ಮೊದಲು ದೇವತೆಗಳು ಅಮೃತಮಥನಮಾಡಿದ ಸ್ಥಳದಲ್ಲಿ, ಚಂದ್ರವೆಂದೂ, ದ್ರೋಣವೆಂದೂ ಎರಡು ಪರ್ವತಗಳುಂಟು. ಆ ಪರ್ವತಗಳಲ್ಲಿಯೇ ನಾನು ಹೇಳಿದ ದಿವ್ಯೌಷಧಿಗಳೆರಡೂ



೨೩೮೫. ಗರುತ್ಮಂತನು ರಾಮಲಕ್ಷ್ಮಣರ ಬಳಿಗೆ ಬಂದುದು. ಇವನನ್ನು ಕಂಡೊಡನೆ ರಾಮ
ಲಕ್ಷ್ಮಣರ ದೇಹವನ್ನು ಬಂಧಿಸಿದ್ದ ಸರ್ಪಗಳೆಲ್ಲವೂ ಭಯದಿಂದ ಬಿಟ್ಟುಹೋದುದು.

ಸಿಕ್ಕುವುವು. ಸರ್ವೋತ್ತಮಗಳಾದ ಈ ಎರಡು ಮೂಲಿಕೆಗಳನ್ನೂ ಅ
ಲ್ಲಿ ದೇವತೆಗಳೇ ಬಿತ್ತಿಬೆಳಸಿರುವರು. ಎಲೆ ಮಹಾರಾಜನೆ! ವಾಯು
ಪುತ್ರನಾದ ಹನುಮಂತನನ್ನು ಶೀಘ್ರದಲ್ಲಿ ಅಲ್ಲಿಗೆ ಕಳುಹಿಸು" ಎಂದನು.
ಸುಷೇಣನು ಈ ಮಾತುಗಳನ್ನಾಡುತ್ತಿರುವಷ್ಟರಲ್ಲಿಯೇ ಆಕಾಶದಲ್ಲಿ
ಮಿಂಚುತ್ತಿರುವ ಮೇಘಗಳನ್ನು ದಿಕ್ಕುದಿಕ್ಕಿಗೆ ಚದರಿಸುವಂತೆಯೂ, ಸ
ಮುದ್ರಜಲವನ್ನು ಉಲ್ಲೋಲಕಲ್ಲೋಲವಾಗಿ ಮಾಡುವಂತೆಯೂ, ಸ
ಮಸ್ತಭೂಮಿಯನ್ನೂ ನಡುಗಿಸುವಂತೆಯೂ, ಒಂದು ದೊಡ್ಡಬಿರುಗಾಳಿ
ಯು ಬೀಸಿತು. ಇದೇ ಗರುತ್ಮಂತನ ರೆಕ್ಕೆಯ ಗಾಳಿಯು. ಈ ದೊಡ್ಡಗಾಳಿ
ಯಿಂದ ಲಂಕೆಯಲ್ಲಿದ್ದ ಮಹಾವೃಕ್ಷಗಳೆಲ್ಲವೂ ನಿರ್ಮೂಲವಾಗಿ ಕಿತ್ತು
ಸಮುದ್ರದಲ್ಲಿ ಬೀಳುತಿದ್ದುವು. ಲಂಕೆಯಲ್ಲಿದ್ದ ಸರ್ಪಗಳೂ, ಸಮುದ್ರದ ಇ
ತರಜಲಜಂತುಗಳೂ ಭಯದಿಂದ ನಡುಗುತ್ತ ಸಮುದ್ರಜಲದಲ್ಲಿ ಪ್ರವೇ
ಶಿಸುತಿದ್ದುವು. ಇಷ್ಟರಲ್ಲಿಯೇ ವಾನರರೆಲ್ಲರೂ ಅಗ್ನಿಯಂತೆ ಜ್ವಲಿಸುವ ದಿವ್ಯ
ತೇಜಸ್ಸುಳ್ಳ ಬಲಾಢ್ಯನಾದ ಗರುತ್ಮಂತನನ್ನು ಕಂಡರು. ಈ ಗರುತ್ಮಂತ
ನನ್ನು ಕಂಡೊಡನೆ ಆ ರಾಮಲಕ್ಷ್ಮಣರ ದೇಹಕ್ಕೆ ಸುತ್ತಿದ್ದ ಬಾಣರೂಪ
ಗಳಾದ ಸರ್ಪಗಳೆಲ್ಲವೂ ಭಯದಿಂದ ಚದರಿ ಪಲಾಯನಮಾಡಿದುವು. ಆ
ಮೇಲೆ ಗರುಡನು ನೆಟ್ಟಗೆ ರಾಮಲಕ್ಷ್ಮಣರು ಮಲಗಿದ್ದ ಸ್ಥಳಕ್ಕೆ ಬಂ
ದು, ಅವರಿಬ್ಬರನ್ನೂ ನೋಡಿ, ಅವರಿಂದ ಮನ್ನಿಸಲ್ಪಟ್ಟವನಾಗಿ, ತನ್ನ
ಎರಡು ಕೈಗಳಿಂದಲೂ, ಚಂದ್ರಬಿಂಬಗಳಂತಿದ್ದ ಆ ರಾಜಕುಮಾರರ
ಮುಖವನ್ನು ಸವರಿದನು. ಗರುತ್ಮಂತನು ತನ್ನ ಕೈಗಳಿಂದ ಅವರ ದೇ
ಹವನ್ನು ಸವರಿದೊಡನೆಯೇ, ಅವರಿಬ್ಬರ ದೇಹದಲ್ಲಿದ್ದ ಗಾಯಗಳೆಲ್ಲವೂ
ಆರಿ, ಅವರಿಬ್ಬರ ದೇಹವೂ ಶೀಘ್ರದಲ್ಲಿಯೇ ದಿವ್ಯವರ್ಣವನ್ನು
ಹೊಂದಿ ನುಣುಪಾಗಿ ಹೊಳಪೇರಿದುವು. ಹಾಗೆಯೇ ಅವರಿಬ್ಬರಿಗೂ
ಕ್ರಮವಾಗಿ ಪರರನ್ನು ನಿಗ್ರಹಿಸತಕ್ಕ ದಿವ್ಯತೇಜಸ್ಸೂ, ಪರಾಕ್ರಮವೂ,
ಶರೀರಬಲವೂ, ದೇಹಕಾಂತಿಯೂ, ಮಹೋತ್ಸಾಹವೂ, [1] ಸೂಕ್ಷ್ಮಾರ್ಥಪರಿ

---

1 ಇಲ್ಲಿ "ಪ್ರದರ್ಶನಂಚ ಬುದ್ಧಿಶ್ಚ ಸ್ಮೃತಿಶ್ಚ ದ್ವಿಗುಣಂ ತಯೋಃ" ಎಂದು ಮೂಲ
ವು. ಇಲ್ಲಿ "ಬುದ್ಧಿಶ್ಚ" ಎಂಬಲ್ಲಿರುವ "ಧಿ" ಎಂಬಕ್ಷರವು ಗಾಯತ್ರಿಯ ಹದಿನೇಳನೆಯ

ಜ್ಞಾನವೂ, ವಿವೇಕವೂ, ಸ್ಮರಣಶಕ್ತಿಯೂ, ಮೊದಲಿಗಿಂತಲೂ, ಇಮ್ಮಡಿಯಾದುವು. ಆಗ ಗರುತ್ಮಂತನು, ಮಹಾಪರಾಕ್ರಮಿಗಳಾಗಿಯೂ, ದೇವೇಂದ್ರಸಮಾನರಾಗಿಯೂ ಇದ್ದ ಆ ರಾಜಕುಮಾರರಿಬ್ಬರನ್ನೂ ಮೇಲಕ್ಕೆತ್ತಿ, ಸಂತುಷ್ಟಾಂತರಂಗನಾಗಿ ಅವರಿಬ್ಬರನ್ನೂ ಪ್ರೀತಿಪೂರ್ವಕವಾಗಿ ಆಲಿಂಗಿಸಿಕೊಂಡನು. ಆಗ ರಾಮನು ಗರುತ್ಮಂತನನ್ನು ನೋಡಿ “ಅಯ್ಯಾ! ಈಗ ನಾವಿಬ್ಬರೂ ನಿನ್ನ ಅನುಗ್ರಹಬಲದಿಂದ ಇಂದ್ರಜಿತ್ತಿನಿಂದುಂಟಾದ ಮಹಾವಿಪತ್ತನ್ನು ತಪ್ಪಿಸಿಕೊಂಡೆವು. ಮೊದಲಿನಂತೆಯೇ ಬಲಾಢ್ಯರಾದೆವು. ಎಲೆ ಪಕ್ಷಿರಾಜನೆ! ಈಗ ನಿನ್ನನ್ನು ನೋಡಿದುದರಿಂದ, ನಮ್ಮ ತಂದೆಯಾದ ದಶರಥಮಹಾರಾಜನನ್ನೂ, ನಮ್ಮ ತಾತನಾದ ಅಜಮಹಾರಾಜನನ್ನೂ ಕಣ್ಣೆದಿರಾಗಿ ನೋಡಿದಂತೆ, ನಮ್ಮಿಬ್ಬರ ಮನಸ್ಸೂ ಅತ್ಯಂತಪ್ರಸನ್ನವಾಗುತ್ತಿರುವುದು. ಸರ್ವೋತ್ತಮವಾದ ರೂಪಸಂಪತ್ತಿಯುಳ್ಳವನಾಗಿಯೂ, ದಿವ್ಯಗಂಧಮಾಲ್ಯಗಳನ್ನು ಧರಿಸಿದವನಾಗಿಯೂ, ನಿರ್ಮಲವಸ್ತ್ರವನ್ನುಟ್ಟವನಾಗಿಯೂ, ದಿವ್ಯಾಭರಣಾಲಂಕೃತನಾಗಿಯೂ ಇರುವ ನಿನ್ನನ್ನು ನೋಡಿ ನನಗೆ ಅತ್ಯಾಶ್ಚರ್ಯವುಂಟಾಗಿರುವುದು. ನೀನು ಯಾರು?” ಎಂದು ಕೇಳಿದನು. ತೇಜಸ್ವಿಯಾಗಿಯೂ, ಮಹಾಬಲಾಢ್ಯನಾಗಿಯೂ ಇದ್ದ ಪಕ್ಷಿರಾಜನು, ಸಂತೋಷದಿಂದ ಕಣ್ಣುಗಳಲ್ಲಿ, ಆನಂದಬಾಷ್ಪವನ್ನು ಸುರಿಸುತ್ತ, ರಾಮನನ್ನು ನೋಡಿ “ರಾಮಾ! ನನ್ನನ್ನು ಯಾರೆಂದು ಕೇಳುವೆಯಾ? ನಾನು ನಿನ್ನ[1] ಪ್ರಿಯಸಖನು. ನಿನಗೆ ಹೊರಗಿನ ಪ್ರಾಣದಂತಿರುವವನು. ನನಗೆ ಗರುತ್ಮಂತನೆಂದು ಹೆಸರು! ನಿಮ್ಮಿಬ್ಬರಿಗೂ ಸಹಾಯ್ಯವನ್ನು ಮಾಡುವುದಕ್ಕಾಗಿಯೇ ಇಲ್ಲಿಗೆ ಬಂದೆನು. ಕ್ರೂರಕರ್ಮನಾದ ಆ ಇಂದ್ರಜಿತ್ತು, ಅದ್ಭುತಶಕ್ತಿರೂಪವಾದ ತನ್ನ ಮಾಯಾಬಲದಿಂದ ನಿರ್ಮಿಸಿದ, ಬಹಳಭಯಂಕರಗಳಾದ ಈ ಸರ್ಪಾಸ್ತ್ರದ ಕಟ್ಟನ್ನು ಬಿಡಿಸುವುದಕ್ಕೆ, ಮಹಾವೀರ್ಯವುಳ್ಳ ಅಸುರರಿಂದಾಗಲಿ, ಬಲಾಢ್ಯರಾದ ದಾನವರಿಂದಾಗಲಿ, ದೇವೇಂ

---

ಅಕ್ಷರವಾದುದರಿಂದ, ಇದುವರೆಗೆ ರಾಮಾಯಣದಲ್ಲಿ ಹದಿನಾರುಸಹಸ್ರಗ್ರಂಥಗಳು ಮುಗಿದುವು, ಇಲ್ಲಿಂದ ಹದಿನೇಳನೆಯಸಹಸ್ರವು ಆರಂಭಿಸುವುದಾಗಿ ತಿಳಿಯಬೇಕು.

1 ಇಲ್ಲಿ ತಾನು ವಿಷ್ಣುರೂಪಿಯಾದ ರಾಮನಿಗೆ ವಾಹನವೆಂದು ತಿಳಿಸುವುದಕ್ಕೆ ಪ್ರೀಯಾಗಿ, ಗೂಢೋಕ್ತಿಯಿಂದ ತಾನು ಸಖನೆಂದು ಹೇಳಿಕೊಂಡುದಾಗಿ ಗ್ರಾಹ್ಯವು.



೨೩೮೬. ರಾಮಲಕ್ಷ್ಮಣರು ಗರುತ್ಮಂತನನ್ನು ನೋಡಿ ನೀನು ಯಾರೆಂದು ಕೇಳಿದುದು.
ಗರುಡನು ರಾಮನಿಗೂ ತನಗೂ ಇರತಕ್ಕ ಸಂಬಂಧವನ್ನು ತಿಳಿಸಿದುದು.

ಧ್ರನೊಡಗೂಡಿದ ದೇವಗಂಧರ್ವಾದಿಗಳಿಂದಾಗಲಿ ಸಾಧ್ಯವಲ್ಲ. ಆ ಬಾಣರೂಪಗಳಾದ ಸರ್ಪಗಳು ಬಹಳತೀಕ್ಷ್ಣ ದಂಷ್ಟ್ರಗಳಿಂದಲೂ, ಕ್ರೂರವಿಷಗಳಿಂದಲೂ ಕೂಡಿರುವುವು. ಇಂದ್ರಜಿತ್ತಿನ ಮಾಯಾಪ್ರಭಾವದಿಂದ ಆ ಸರ್ಪಗಳೇ ಬಾಣರೂಪಗಳಾಗಿ ನಿನ್ನನ್ನು ಬಾಧಿಸುತಿದ್ದುವು. ರಾಮಾ! ನೀನು ಧರ್ಮಜ್ಞನು! ಸತ್ಯಪರಾಕ್ರಮನು! ನಿನ್ನ ತಮ್ಮನಾದ ಈ ಲಕ್ಷ್ಮಣನೂ ಕೂಡ ಯುದ್ಧದಲ್ಲಿ ಎಂತಹ ಶತ್ರುಗಳನ್ನಾದರೂ ಧ್ವಂಸಮಾಡಬಲ್ಲವನು. ಆದುದರಿಂದ ನೀವಿಬ್ಬರೂ ಮಹಾಭಾಗ್ಯಶಾಲಿಗಳು! ನಿಮಗೆ ಯಾರಿಂದಲೂ, ಎಂದಿಗೂ ಭಯವಿಲ್ಲವು. ನೀವು ಹೀಗೆ ನಾಗಪಾಶದಲ್ಲಿ ಕಟ್ಟುಬಿದ್ದಿರುವರೆಂಬ ವೃತ್ತಾಂತವನ್ನು ಕೇಳಿದೊಡನೆ, ನಾನು ನಿಮ್ಮಲ್ಲಿರುವ ಸ್ನೇಹದಿಂದ, ಮಿತ್ರಧರ್ಮವನ್ನನುಸರಿಸಿ, ವೇಗದಿಂದಿಲ್ಲಿಗೆ ಬಂದೆನು. ಮಹಾಭಯಂಕರವಾದ ಆ ನಾಗಾಸ್ತ್ರಬಂಧವನ್ನೂ ಬಿಡಿಸಿದೆನು. ಇನ್ನುಮೇಲೆ ನೀವು ಬಹಳ ಎಚ್ಚರಿಕೆಯಿಂದ ಆಯಾ ಅಸ್ತ್ರಗಳಿಗೆ, ತಕ್ಕ ಪ್ರತ್ಯಸ್ತ್ರಗಳನ್ನು ಬಿಡುವುದರಲ್ಲಿ ಬಹಳ ಜಾಗರೂಕರಾಗಿರಬೇಕು. ಇಲ್ಲಿನ ರಾಕ್ಷಸರೆಲ್ಲರೂ ಬಹಳವಾಗಿ ಕಪಟಯುದ್ಧವನ್ನು ಮಾಡತಕ್ಕವರು. ಇದೇ ಅವರಿಗೆ ಸ್ವಭಾವವು. ಶೂರರಾಗಿಯೂ, ಶುದ್ಧಸ್ವಭಾವವುಳ್ಳವರಾಗಿಯೂ ಇರುವ ನೀವು ಎಷ್ಟುಮಾತ್ರವೂ, ಕಪಟಯುದ್ಧಕ್ಕೆ ಪ್ರವರ್ತಿಸುವವರಲ್ಲ. ಆದರೇನು? ನಿಮ್ಮ ಋಜುಸ್ವಭಾವವೇ ನಿಮಗೆ ಯಾವಾಗಲೂ ಬೆಂಬಲವಾಗಿರುವುದು. ಆದರೆ ನೀವು ಈ ರಾಕ್ಷಸರನ್ನುಮಾತ್ರ ಯುದ್ಧದಲ್ಲಿ ಎಷ್ಟುಮಾತ್ರವೂ ನಂಬಬಾರದು. ಅವರು ಕಪಟಯುದ್ಧಮಾಡುವವರೆಂಬುದಕ್ಕೆ ಈಗಲೇ ನಿಮಗೆ ಚೆನ್ನಾಗಿ ನಿದರ್ಶನವು ಕಾಣಿಸಿತಲ್ಲವೆ?" ಎಂದನು. ಗರುತ್ಮಂತನು ಹೀಗೆಂದು ಹೇಳಿ ತನ್ನ ಮಿತ್ರಭಾವವನ್ನು ತೋರಿಸುವುದಕ್ಕೆ ತಕ್ಕಂತೆ, ರಾಮನನ್ನಾಲಿಂಗಿಸಿಕೊಂಡು, ತಾನು ಹಿಂತಿರುಗಿ ಹೋಗುವುದಕ್ಕೆ ಅವನ ಅನುಜ್ಞೆಯನ್ನು ಪಡೆಯುವುದಕ್ಕಾಗಿ ತಿರುಗಿ ರಾಮನನ್ನು ಕುರಿತು "ಎಲೆ ಪ್ರಿಯಮಿತ್ರನೆ! ನೀನು ಸಮಸ್ತಧರ್ಮಗಳನ್ನೂ ಬಲ್ಲವನು. ಶತ್ರುಗಳಲ್ಲಿಯೂ ದೋಷವನ್ನೆಣಿಸದೆ ಅವರನ್ನು ಪ್ರೇಮಿಸತಕ್ಕವನು. ಇನ್ನು ನಾನು ಹೋಗಿಬರುವೆನು. ನನಗೆ ಅನುಮತಿಯನ್ನುಕೊಡು. ಎಲೆ ವೀರನೆ! ನಮ್ಮಿಬ್ಬರಿಗೂ ಹಿಂದೆ ಯಾವಕಾಲದಲ್ಲಿ ಹೇಗೆ ಸ್ನೇಹವುಂಟಾಯಿತೆಂಬ ವಿಷಯವನ್ನು ತಿಳಿ

ಯುವುದಕ್ಕಾಗಿ ಈಗ ನೀನು ಆತುರಪಡಬೇಕಾದುದಿಲ್ಲ. ನೀನು ಮುಂದಿನ ಯುದ್ಧದಲ್ಲಿ ನಡೆಸಬೇಕಾದ ಕಾರ್ಯವನ್ನು ನಡೆಸಿ ಕೃತಕೃತ್ಯನಾದ ಮೇಲೆ, ನಮ್ಮಿಬ್ಬರಿಗೂ ಹೇಗೆ ಸ್ನೇಹವುಂಟಾಯಿತೆಂಬುದು ತಾನಾಗಿಯೇ ತಿಳಿಯುವುದು. ರಾಮಾ! ಇನ್ನು ಮುಂದೆ ನೀನು ಯಾವುದಕ್ಕೂ ಚಿಂತಿಸಬೇಕಾದುದಿಲ್ಲ. ಮುಂದೆ ನೀನು ನಿನ್ನ ಬಾಣಪರಂಪರೆಗಳಿಂದ ಈ ಲಂಕೆಯಲ್ಲಿ ಮುದುಕರು, ಮಕ್ಕಳು ಹೊರತು ಉಳಿದ ರಾಕ್ಷಸರೆಲ್ಲರನ್ನೂ ನಿರ್ನಾಮವಾಗಿ ಮಾಡಿ, ನಿನಗೆ ಮುಖ್ಯಶತ್ರುವಾದ ರಾವಣನನ್ನೂ ಕೊಂದು, ಸೀತೆಯನ್ನೂ ಪಡೆಯುವೆ" ಎಂದನು. ಮಹಾವೀರ್ಯಶಾಲಿಯಾದ ಗರುತ್ಮಂತನು ಈ ಮಾತನ್ನು ಹೇಳಿ, ರಾಮಲಕ್ಷ್ಮಣರಿಬ್ಬರನ್ನೂ, ವಿಪತ್ತಿನಿಂದ ತಪ್ಪಿಸಿ, ಸಮಸ್ತವಾನರರೂ ಆಶ್ಚರ್ಯದಿಂದ ನೋಡುತ್ತಿರುವಾಗಲೇ ಅವರಿಬ್ಬರನ್ನೂ ಪ್ರದಕ್ಷಿಣೆಮಾಡಿ, ಬಾರಿಬಾರಿಗೂ ಅವರನ್ನು ಪ್ರೀತಿಯಿಂದಾಲಂಗಿಸಿ ವಾಯುವಿನಂತೆ ಅಂತರಿಕ್ಷಮಾರ್ಗಕ್ಕೆ ಹಾರಿಬಿಟ್ಟನು. ಆಗ ಅಲ್ಲಿದ್ದ ವಾನರಯೂಥಪತಿಗಳೆಲ್ಲರೂ, [1]

---

1 ಇಲ್ಲಿ ವಿಚಾರಾರ್ಹವಾದ ಒಂದು ವಿಷಯವುಂಟು. "ಪಿಶಾಚಾನ್ ದಾನವಾನ್ ಯಕ್ಷಾನ್ ಪೃಥಿವ್ಯಾಂಚೈವ ರಾಕ್ಷಸಾನ್ । ಅಂಗುಳ್ಯಗ್ರೇಣ ತಾನ್ ಹನ್ಯಾಂ" ಎಂದು ತಾನು ಪಿಶಾಚ ದಾನವ ಯಕ್ಷಾದಿಗಳೆಲ್ಲರನ್ನೂ ಬೆರಳಿನ ತುದಿಯಿಂದಲೇ ಕೊಲ್ಲಬಲ್ಲೆನೆಂದು ಹೇಳಿದ ನಿರವಧಿಕಶಕ್ತಿಸಂಪನ್ನನಾಗಿಯೂ, ಸರ್ವಜ್ಞನಾಗಿಯೂ ಇರುವ ರಾಮನು, ಇಲ್ಲಿ ತಾನು ಕೇವಲ ಅಶಕ್ತನಂತೆಯೂ, ಅಜ್ಞನಂತೆಯೂ ನಟಿಸಿ, ಇಂದ್ರಜಿತ್ತಿನ ಪ್ರಹಾರದಿಂದ ನೊಂದು ರಕ್ತಸ್ರಾವದೊಡನೆ ನೆಲದಲ್ಲಿ ಮಲಗಿರುವುದೇಕೆ! " ಎಂದರೆ ಲೋಕದಲ್ಲಿ ಸದಾಚಾರವನ್ನು ಪ್ರಚಾರಗೊಳಿಸುವುದಕ್ಕಾಗಿಯೇ ಹಾಗಿದ್ದುದಾಗಿ ತಿಳಿಯಬೇಕು. ಇಂದ್ರಜಿತ್ತಿನಿಂದ ಅಪಜಯಹೊಂದಿದಂತೆ ನಟಿಸಿದುದರ ಭಾವವೇನೆಂದರೆ; ಶುದ್ಧಹೃದಯರಾಗಿಯೂ, ನಿಷ್ಕಪಟರಾಗಿಯೂ ಇರುವವರಿಗೆ, ಪ್ರಾಣಸಂದೇಹವನ್ನುಂಟುಮಾಡುವಷ್ಟು ವಿಪತ್ತು ಬಂದರೂ, ಅವರಿಗೆ ನಾಶವು ಸಂಭವಿಸದೆಂದೂ, ಹಾಗಿಲ್ಲದ ಪಾಪಿಗಳಿಗೆ ಕಾರ್ಯವು ಕೈಗೂಡಿಬಂದಂತೆ ತೋರಿದರೂ ಅಕಸ್ಮಾತ್ತಾಗಿ ತಪ್ಪಿಹೋಗುವುದೆಂದೂ, ಆದುದರಿಂದ ಪುರುಷರಿಗೆ ಶುಚಿತ್ವನಿಷ್ಕಾಪಟ್ಯಾದಿಗುಣಗಳು ಅತ್ಯವಶ್ಯವಾಗಿರಬೇಕೆಂದೂ ತೋರಿಸಿದಂತಾಗುವುದು. ದೇವತೆಗಳ ಪ್ರಾರ್ಥನೆಯಂತೆ ರಾಮಾವತಾರವನ್ನೆತ್ತಿದ ಶ್ರೀಮಹಾವಿಷ್ಣುವಿಗೆ ರಾವಣವಧಕಾರ್ಯವೊಂದೇ ಉದ್ದೇಶ್ಯವಲ್ಲವೆ? ಈ ನಟನೆಗಳೆಲ್ಲವೂ ಏಕೆ? " ಎಂದರೆ; ದುಷ್ಕರ್ಮಿಗಳನ್ನು ನಾಶಮಾಡುವುದರೊಡನೆ ಧರ್ಮಸಂಸ್ಥಾಪನವೂ ಅವತಾರಕ್ಕೆ ಪ್ರಯೋಜನವೆಂದರಿಯಬೇಕು. ಇದಕ್ಕಾಗಿಯೇ "ಚಾತುರ್ವರ್ಣ್ಯಂಚ ಲೋಕೇಸ್ಮಿನ್ ಸ್ವೇ

ರಾಮಲಕ್ಷ್ಮಣರಿಗೆ ಸಂಭವಿಸಿದ್ದ ವಿಪತ್ತು ನೀಗಿ, ಅವರಿಗೆ ಸೌಖ್ಯವುಂಟಾದುದನ್ನು ನೋಡಿ,ಸಂತೋಷದಿಂದ ಸಿಂಹನಾದವನ್ನು ಮಾಡಲಾರಂಭಿಸಿದರು. ಒಬ್ಬೊಬ್ಬರೂ ಉತ್ಸಾಹದಿಂದ ಬಾಲವನ್ನೊದರುತಿದ್ದರು. ಅಲ್ಲಲ್ಲಿ ವಾನರಸೈನಿಕರಲ್ಲಿ ಕೆಲವರು ಸಂತೋಷದಿಂದ ಭೇರಿಗಳನ್ನು ನುಡಿಸಿದರು. ಕೆಲವರು ಮೃದಂಗಗಳನ್ನು ಬಾಜಿಸಿದರು. ಕೆಲವರು ಶಂಖಗಳನ್ನು ಪೂರೈಸಿದರು.ಕೆಲವರು ಸಿಂಹನಾದಮಾಡಿದರು.ಮರಗಳನ್ನು ಹಿಡಿದು ಯುದ್ಧಮಾಡತಕ್ಕ ಕೆಲವು ವಾನರರು,ತಮ್ಮ ವೀರ್ಯವ ಕೊಬ್ಬಿಸಂದುಬ್ಬುತ್ತ, ಆಗಾಗ ಭುಜಗಳನ್ನಪ್ಪಳಿಸಿ,ಅಲ್ಲಲ್ಲಿ ಕೈಗೆ ಸಿಕ್ಕಿದ ಮರಗಳನ್ನು ಕಿತ್ತುಕೊಂಡು ತಿರುಗಿ ಯುದ್ಧಸನ್ನದ್ಧರಾಗಿ ನಿಂತರು. ಹೀಗೆ ವಾನರರೆಲ್ಲರೂ ಲಕ್ಷೋಪಲಕ್ಷಸಂಖ್ಯೆಯಿಂದ ಗುಂಪುಗೂಡಿ, ತಮ್ಮ ಸಿಂಹನಾದಗಳಿಂದಲೇ ರಾಕ್ಷಸರನ್ನು ನಡುಗಿಸುತ್ತ,ಯುದ್ಧಸನ್ನದ್ಧರಾಗಿ, ಲಂಕೆಯ ಬಾಗಿಲುಗಳಿಗೆ ಬಂದರು.ಅರ್ಧರಾತ್ರಿಯಲ್ಲಿ ಹೀಗೆ ವಾನರರೆಲ್ಲರೂ ಸೇರಿ ಮಾಡುತಿದ್ದ ದೊಡ್ಡಸಿಂಹನಾದಧ್ವನಿಯು, ವರ್ಷಾರಂಭದಲ್ಲಿ ಗುಡುಗುತ್ತಿರುವ ಮೇಘಗಳ ಧ್ವನಿಯಂತೆ ಬಹಳ ಭಯಂಕರವಾಗಿ ಕೇಳಿಸಿತು. ಇಲ್ಲಿಗೆ ಐವತ್ತನೆಯ ಸರ್ಗವು.

---

**ರಾವಣಾಜ್ಞೆಯಿಂದ ಧೂಮ್ರಾಕ್ಷನು ಸೇನಾಸಮೇತನಾಗಿ ಬಂದು ವಾನರಸೇನೆಯನ್ನು ನೋಡಿದುದು**

ಹೀಗೆ ಬಲಾಢ್ಯರಾದ ವಾನರರೆಲ್ಲರೂ ಸೇರಿ ಸಂತೋಷದಿಂದ ಸಿಂಹನಾದವನ್ನು ಮಾಡುತ್ತಿರಲು, ಈ ದೊಡ್ಡ ತುಮುಲಧ್ವನಿಯು, ಅತ್ತ

---

ಸ್ವೇ ಧರ್ಮೇನಿಯೋಕ್ಷ್ಯತಿ" ಎಂದು ವ್ಯಕ್ತವಾಗಿ ಹೇಳಲ್ಪಟ್ಟಿರುವುದು. ಧರ್ಮಸ್ಥಾಪನವೆಂಬುದು ಧರ್ಮೋಪದೇಶಮಾತ್ರದಿಂದಲೇ ಸಿದ್ಧಿಸದು.ಅಂತಹ ಉಪದೇಶಗಳನ್ನು ಶ್ರುತಿಸ್ಮೃತಿಗಳೇ ಮಾಡಿರುತ್ತವೆ.ಆಚಾರದಿಂದಲೂ ಅದನ್ನು ತೋರಿಸಬೇಕೆಂಬುವೇ ಭಗವದವತಾರಪ್ರಯೋಜನವು. ಹಾಗಿಲ್ಲದಪಕ್ಷದಲ್ಲಿ ಅಪ್ರಮೇಯಮಹಾಮಹಿಮೆಯುಳ್ಳ ರಾಮನು,ತನ್ನ ಮನಸ್ಸಿಗೆತೋರಿದ ಕ್ಷಣದಲ್ಲಿಯೇ ರಾವಣನನ್ನುಕೊಂದು ಕಾರ್ಯವನ್ನು ಮುಗಿಸಬಹುದಾಗಿತ್ತು. ಆಗ ಈ ನಟನೆಗಳೊಂದೂ ಅವಶ್ಯವಿರಲಿಲ್ಲ. ಒಂದೊಂದು ಧರ್ಮವನ್ನೂ ತಾನೇ ನಡೆಸಿ ತೋರಿಸಬೇಕೆಂಬ ಉದ್ದೇಶದಿಂದಲೇ ರಾಮನು ಈ ವಿರಹಬಾಧಾದಿಗಳನ್ನೆಲ್ಲಾ ನಟಿಸುವುದಾಗಿ ತಿಳಿಯಬೇಕು.

ಲಾಗಿ ಲಂಕೆಯೊಳಗಿದ್ದ ರಾವಣನಿಗೂ, ಇತರರಾಕ್ಷಸರಿಗೂ ಕೇಳಿಸಿತು. ಹರ್ಷಸೂಚಕವಾದ ಈ ಗಂಭೀರಧ್ವನಿಯು ಕಿವಿಗೆ ಬಿದ್ದೊಡನೆ, ರಾವಣನು ಬೆಜ್ಜರಗೊಂಡು, ತನ್ನನ್ನು ಸುತ್ತಿದ್ದ ಮಂತ್ರಿಗಳನ್ನು ನೋಡಿ, "ಆಹಾ! ಇದೇನು ? ವಾನರರೆಲ್ಲರೂ ಹೀಗೆ ಒಟ್ಟಾಗಿ ಸಂಭ್ರಮದಿಂದ ಗರ್ಜಿಸುವುದಕ್ಕೆ ಕಾರಣವೇನು ? ಮೇಘಗಳು ಗುಡುಗುವಂತೆ ಮಹಾಧ್ವನಿಯಿಂದ ಸಿಂಹನಾದವನ್ನು ಮಾಡುತ್ತಿರುವರಲ್ಲಾ ! ಓಹೋ ! ಇವರಿಗೇನೋ ಬಹಳವಾಗಿ ಸಂತೋಷವು ಹುಟ್ಟಿದಂತಿದೆ! ಇದು ನಿಜವು? ಇದರಲ್ಲಿ ಸಂದೇಹವಿಲ್ಲ.ಇವರ ಅಟ್ಟಹಾಸಕ್ಕೆ ಸಮುದ್ರವೇ ಕ್ಷೋಭೆಹೊಂದಿದಂತಾಗಿರುವುದು!ಇದೇನಾಶ್ಚರ್ಯವು! ಅಲ್ಲಿ ಸಹೋದರರಾದ ರಾಮಲಕ್ಷ್ಮಣರಿಬ್ಬರೂ ತೀಕ್ಷ್ಣಬಾಣಗಳಿಂದ ಬದ್ಧರಾಗಿ ಶರತಲ್ಪದಲ್ಲಿ ಮಲಗಿರುವುದೆಂದರೇನು ? ವಾನರರು ಸಂತೋಷದಿಂದುಬ್ಬಿ ಮಹಾಧ್ವನಿಯಿಂದ ಹೀಗೆ ಸಿಂಹನಾದಮಾಡುವುದೆಂದರೇನು ? ಇವು ಒಂದಕ್ಕೊಂದಕ್ಕೆ ಕೇವಲವಿರುದ್ಧವಲ್ಲವೆ ? ಒಂದುವೇಳೆ ರಾಮಲಕ್ಷ್ಮಣರಿಬ್ಬರಿಗೂ ಆಕಸ್ಮಾತ್ತಾಗಿ ಆ ಶರಬಂಧವೇನಾದರೂ ಬಿಟ್ಟುಹೋಗಿರಬಹುದೆ ? ಈ ವಾನರರ ಅಟ್ಟಹಾಸಧ್ವನಿಯನ್ನು ಕೇಳಿದರೆ ಹಾಗೆಯೇ ಊಹಿಸಬೇಕಾಗಿದೆ" ಎಂದನು. ರಾವಣನು ಮಂತ್ರಿಗಳೊಡನೆ ಈ ಮಾತನ್ನು ಹೇಳಿ ಸಮೀಪದಲ್ಲಿದ್ದ ರಾಕ್ಷಸಯೋಧರನ್ನು ಕುರಿತು, "ಎಲೆ ರಾಕ್ಷಸರೆ ! ಈಗ ಆ ವಾನರರೆಲ್ಲರಿಗೂ ಮಹಾವ್ಯಸನಕಾಲವು ಬಂದೊದಗಿರುವಾಗಲೂ, ಅವರು ಇಷ್ಟು ಸಂತೋಷದಿಂದಿರುವುದಕ್ಕೆ ಕಾರಣವೇನೆಂಬುದನ್ನು ನೀವು ಶೀಘ್ರದಲ್ಲಿಯೇ ತಿಳಿದು ಬಂದು ನನಗೆ ಹೇಳಬೇಕು." ಎಂದು ಆಜ್ಞೆಮಾಡಿದನು. ಈ ರಾಜಾಜ್ಞೆಯನ್ನು ಕೇಳಿದೊಡನೆ, ಅಲ್ಲಿದ್ದ ರಾಕ್ಷಸರು ಸಂಭ್ರಮದಿಂದೆದ್ದು, ಪ್ರಾಕಾರದ ಮೇಲೇರಿನಿಂತು ಅತ್ತಲಾಗಿ ಮಹಾತ್ಮನಾದ ಸುಗ್ರೀವನಿಂದ ರಕ್ಷಿತವಾಗಿ ನಿಂತಿದ್ದ ದೊಡ್ಡ ವಾನರಸೇನೆಯನ್ನು ಕಂಡರು. ಮತ್ತು ಅಲ್ಲಿ ಮಹಾನುಭಾವರಾದ ರಾಮಲಕ್ಷ್ಮಣರಿಬ್ಬರೂ ಭಯಂಕರವಾದ ನಾಗಪಾಶದಿಂದ ಮುಕ್ತರಾಗಿ ಸುಖದಿಂದ ನಿಂತಿರುವುದನ್ನೂ ನೋಡಿದರು. ಈ ಸನ್ನಿವೇಶಗಳನ್ನು ನೋಡಿದೊಡನೆ ಅವರೆಲ್ಲರಿಗೂ ಮನಸ್ಸಿನಲ್ಲಿ ಬಹಳ ವಿಷಾದವು ಹುಟ್ಟಿತು. ಆ ಘೋರರಾಕ್ಷಸರೆಲ್ಲರೂ ಅಗಲೇ ಭಯದಿಂದ ಎದೆಗುಂದಿದವರಾಗಿ, ಪ್ರಾಕಾರದಿಂದ ಕೆ

ಳಗಿಳಿದು, ಕಂದಿದ ಮುಖದಿಂದ ರಾವಣನ ಬಳಿಗೆ ಬಂದರು. ಅವರೆಲ್ಲರೂ ಮುಖದಲ್ಲಿ ದೈನ್ಯವನ್ನು ತೋರಿಸುತ್ತ ರಾವಣನ ಮುಂದೆ ನಿಂತು, ರಾಮಲಕ್ಷ್ಮಣರಿಬ್ಬರೂ ನಾಗಪಾಶದಿಂದ ಮುಕ್ತರಾಗಿ ಸುಖದಿಂದ ನಿಂತಿರುವರೆಂಬ ಆ ಪ್ರಿಯವಾರ್ತೆಯೆಲ್ಲವನ್ನೂ ಇದ್ದುದಿದ್ದಂತೆ ತಿಳಿಸುವುದಕ್ಕೆ ತೊಡಗಿ "ಎಲೈ ಮಹಾರಾಜನೆ! ನಿನ್ನ ಪುತ್ರನಾದ ಇಂದ್ರಜಿತ್ತು, ಭಯಂಕರವಾದ ತನ್ನ ನಾಗಪಾಶದಿಂದ ಆ ರಾಮಲಕ್ಷ್ಮಣರಿಬ್ಬರನ್ನೂ ಕೈಕಾಲುಗಳನ್ನಾಡಿಸುವುದಕ್ಕೂ ಸಾಧ್ಯವಿಲ್ಲದಂತೆ ಕಟ್ಟಿಹಾಕಿಬಂದನಷ್ಟೆ? ಮಹಾಗಜದಂತೆ ಗಂಭೀರಗಮನವುಳ್ಳ ಆ ಸಹೋದರರಿಬ್ಬರೂ, ಆ ಬಾಣದ ಕಟ್ಟುಗಳನ್ನು ಹೇಗೋ ತಪ್ಪಿಸಿಕೊಂಡು, ಕಟ್ಟಿದ ಹಗ್ಗವನ್ನು ಕಿತ್ತು ನಿಂತಿರುವ ಮದದಾನೆಗಳಂತೆ ರಣರಂಗದ ನಡುವೆ ನಿಂತಿರುವರು." ಎಂದರು. ಈ ಮಾತನ್ನು ಕೇಳಿ ರಾವಣನು, ಮನಸ್ಸಿನಲ್ಲಿ ಮಿತಿಮೀರಿದ ದುಃಖವನ್ನೂ, ವಿಷಾದವನ್ನೂ ಹೊಂದಿ, ಕಂದಿದ ಮುಖವುಳ್ಳವನಾಗಿ, ತನ್ನಲ್ಲಿ ತಾನು, "ಆಹಾ! ಇದೇನಿದು! ತನ್ನ ವೀರ್ಯದಿಂದ ದೇವೇಂದ್ರನನ್ನೇ ಜಯಿಸಿ ಬಂದ ನನ್ನ ಮಗನು, ತಾನು ವರಬಲದಿಂದ ಸಂಪಾದಿಸಿದ ತೀಕ್ಷ್ಣಬಾಣಗಳಿಂದ, ಈಗಲೇ ಆ ರಾಮಲಕ್ಷ್ಮಣರಿಬ್ಬರನ್ನೂ ಅಳ್ಳಾಡದಹಾಗೆ ಕಟ್ಟಿಬಂದನು. ಆ ಬಾಣಗಳಾದರೂ ಸಾಮಾನ್ಯವೆ? ವಿಷಸರ್ಪಗಳಂತೆ ಕ್ರೂರವಾದುವು. ಯಾವಲ್ಲಿಯೂ ವ್ಯರ್ಥವಾಗತಕ್ಕವುಗಳಲ್ಲ! ಸೂರ್ಯನಿಗೆಣೆಯಾದ ತೇಜಸ್ಸುಳ್ಳವುಗಳು! ಇಂತಹ ದಿವ್ಯಾಸ್ತ್ರದಿಂದ ಕಟ್ಟಿಬಿಟ್ಟಿದರೂವಾಗಲೂ ಆ ನನ್ನ ವೈರಿಗಳಿಬ್ಬರೂ ಆ ಕಟ್ಟನ್ನೇ ಬಿಡಿಸಿಕೊಂಡಮೇಲೆ, ಇನ್ನು ಈ ರಾಕ್ಷಸಸೇನೆಗಳಿಗೆಲ್ಲಕ್ಕೂ ಪ್ರಾಣಸಂದೇಹವೇ ಸಂಭವಿಸಿದಂತೆ ನನಗೆ ತೋರುವುದು! ಮೊದಲು ಅನೇಕಾವೃತ್ತಿ, ಎಷ್ಟೋ ಯುದ್ಧಗಳಲ್ಲಿ ಶತ್ರುಗಳ ಪ್ರಾಣವನ್ನು ಹೀರಿದುವುಗಳಾಗಿಯೂ, ವಾಸುಕಿಯಂತೆ ತೇಜಸ್ಸಿನಿಂದ ದೇದೀಪ್ಯಮಾನಗಳಾಗಿಯೂ ಇದ್ದ ಆ ಬಾಣಗಳೇ ಹೀಗೆ ನಿಷ್ಫಲಗಳಾದುವೆಂದರೆ ಇನ್ನು ಹೇಳುವುದೇನು?" ಎಂದು ಚಿಂತೆಗೊಂಡಿದ್ದನು. ಆಮೇಲೆ ರಾವಣನು ಕ್ರಮಕ್ರಮವಾಗಿ ಕೋಪವನ್ನು ತಂದುಕೊಂಡು, ವಿಷಸರ್ಪದಂತೆ ನಿಟ್ಟುಸಿರನ್ನು ಬಿಡುತ್ತ, ರಾಕ್ಷಸರ ನಡುವೆ ನಿಂತಿದ್ದ ಧೂಮ್ರಾಕ್ಷನೆಂಬ ಸೇನಾಪತಿಯನ್ನು ನೋಡಿ, "ಧೂಮ್ರಾಕ್ಷಾ! ನಡೆದ ಸಂಗತಿಯನ್ನು ಕೇಳಿದೆಯಷ್ಟೆ! ಆದರೇನು! ಇದೊಂ

ದೂ ನಿನ್ನ ಪರಾಕ್ರಮಕ್ಕೆ ಇದಿರಲ್ಲ.ನಿನ್ನ ವೀರ್ಯವೋ ಬಹಳ ಭಯಂಕರವಾದುದು. ಆದುದರಿಂದ ಈಗಲೇ ನೀನು ದೊಡ್ಡರಾಕ್ಷಸಸೈನ್ಯವನ್ನು ಸೇರಿಸಿಕೊಂಡು ಹೊರಡು!" ಎಂದನು. ರಾಕ್ಷಸಯೋಧರ ಬಲಾಬಲಗಳನ್ನು ಚೆನ್ನಾಗಿ ಬಲ್ಲವನಾದ ರಾವಣನು ಹೀಗೆ ಅಜ್ಞೆಮಾಡಿದೊಡನೆ, ಧೂಮ್ರಾಕ್ಷನು ಬಹಳ ಸಂತೋಷಗೊಂಡವನಾಗಿ, ಆತನಿಗೆ ನಮಸ್ಕರಿಸಿ ರಾಜಭವನದಿಂದ ಹೊರಟನು. ಹೀಗೆ ಧೂಮ್ರಾಕ್ಷನು ರಾಜದ್ವಾರದಿಂದ ಹೊರಟು, ಅಲ್ಲಿದ್ದ ಬಲಾಧ್ಯಕ್ಷನನ್ನು ಕುರಿತು, 'ಎಲೆ ಸೇನಾಪತೀ? ನಾನು ಯುದ್ಧಕ್ಕಾಗಿ ಹೊರಡುತ್ತಿರುವೆನು. ನನ್ನ ಸಮಸ್ತಸೈನ್ಯಗಳನ್ನೂ ಕರೆತರಿಸು! ಆಲಸ್ಯವಿಲ್ಲದೆ ತ್ವರೆಮಾಡು?'' ಎಂದನು. ರಾಜಾಜ್ಞೆಯನ್ನನುಸರಿಸಿ ಧೂಮ್ರಾಕ್ಷನು ಹೇಳಿದ ಈ ಮಾತನ್ನು ಕೇಳಿದೊಡನೆ ಆ ಬಲಾಧ್ಯಕ್ಷನು ತನ್ನ ಕೈಕೆಳಗಿನ ಸಮಸ್ತಸೇನೆಯನ್ನೂ ಸಿದ್ಧಪಡಿಸಿದನು. ಬಲಾಢ್ಯರಾದ ಅನೇಕಘೋರರಾಕ್ಷಸಯೋಧರು ತಮ್ಮತಮ್ಮ ಶೌರ್ಯಸೂಚಕಗಳಾದ ವೀರಘಂಟೆಗಳನ್ನು ನಡುವಿಗೆ ಕಟ್ಟಿಕೊಂಡು,ಶೂಲಮುದ್ಗರಗಳೇ ಮೊದಲಾದ ವಿವಿಧಾಯುಧಗಳನ್ನೂ ಕೈಯಲ್ಲಿ ಹಿಡಿದವರಾಗಿ, ಉತ್ಸಾಹದಿಂದ ಸಿಂಹನಾದಮಾಡುತ್ತ, ಧೂಮ್ರಾಕ್ಷನನ್ನು ಪರಿವೇಷ್ಟಿಸಿ ಸಿದ್ಧರಾಗಿ ನಿಂತರು. ಆ ರಾಕ್ಷಸಯೋಧರೆಲ್ಲರೂ, ಅವರವರ ಯುದ್ಧಾಭ್ಯಾಸಕ್ಕೆ ತಕ್ಕಂತೆ, ಕೆಲವರು ಗದೆಗಳನ್ನೂ, ಕೆಲವರು ಪಟ್ಟಸಗಳನ್ನೂ, ಕೆಲವರು ಕಬ್ಬಿಣದ ಗುದಿಗಳನ್ನೂ, ಕೆಲವರು ಮುಸಲಗಳನ್ನೂ, ಕೆಲವರು ಪರಿಘಗಳನ್ನೂ, ಕೆಲವರು ಭಿಂಡಿವಾಲಗಳನ್ನೂ, ಕೆಲವರು ಭಲ್ಯಗಳನ್ನೂ, ಕೆಲವರು ಪ್ರಾಸಗಳನ್ನೂ, ಕೆಲವರು ಗಂಡುಗೊಡಲಿಗಳನ್ನೂ ಹಿಡಿದು, ಮೇಘಗಳಂತೆ ಗರ್ಜಿಸುತ್ತ ನಾಲ್ಕುಕಡೆಗಳಿಂದಲೂ ಹೊರಟರು. ಬೇರೆ ಕೆಲವು ರಾಕ್ಷಸವೀರರು, ಯುದ್ಧಕವಚಗಳನ್ನು ಧರಿಸಿ,ಧ್ವಜಾಲಂಕೃತಗಳಾಗಿಯೂ, ಸುವರ್ಣಗವಾಕ್ಷಗಳಿಂದ ಶೋಭಿತಗಳಾಗಿಯೂ, ವಿಚಿತ್ರಮುಖಗಳುಳ್ಳ ಕತ್ತೆಗಳಮೇಲೆ ಹೂಡಿದುವುಗಳಾಗಿಯೂ ಇರುವ ಉತ್ತಮರಥಗಳನ್ನೇರಿ ಹೊರಟರು. ಕೆಲವರು ಮದದಾನೆಗಳನ್ನೂ,ಕೆಲವರು ಉತ್ತಮಾಶ್ವಗಳನ್ನೂ ಏರಿ ಹೊರಟರು. ತೀವ್ರಧ್ವನಿಯುಳ್ಳ ಧೂಮ್ರಾಕ್ಷನು ತೋಳಗಳಂತೆಯೂ, ಸಿಂಹಗಳಂತೆಯೂ ಮುಖವುಳ್ಳ ಕತ್ತೆಗಳಿಂದ ಹೂಡಿದ ಒಂದು ಸ್ವರ್ಣ

ರಥವನ್ನೇರಿದನು. ಹೀಗೆ ಮಹಾವೀರ್ಯಶಾಲಿಯಾದ ಆ ಧೂಮ್ರಾಕ್ಷನು, ದೊಡ್ಡ ಸಿಂಹನಾದಧ್ವನಿಯೊಡನೆ ಕತ್ತೆಗಳಿಂದ ಹೂಡಿದ ತನ್ನ ಉತ್ತಮರಥವನ್ನೇರಿ, ಅನೇಕರಾಕ್ಷಸಯೋಧರಿಂದ ಪರಿವೃತನಾಗಿ, ಮಹೋತ್ಸಾಹದಿಂದ ನಗುತ್ತ, ವಾನರಯೂಥಪತಿಯಾದ ಹನುಮಂತನು ತಡೆದುನಿಂತಿದ್ದ ಪಶ್ಚಿಮದ್ವಾರದ ಕಡೆಗೆ ಬಂದನು. ಭಯಂಕರಪರಾಕ್ರಮವುಳ್ಳ ಆ ಘೋರರಾಕ್ಷಸನು ಹೀಗೆ ಯುದ್ಧೋದ್ಯುಕ್ತನಾಗಿ ಬರುತ್ತಿರುವಾಗಲೇ, ಅವನಿಗಡ್ಡಲಾಗಿ ಅನೇಕದುರ್ನಿಮಿತ್ತಗಳು ಕಾಣಬಂದುವು. ಅಪಶಕುನಸೂಚಕಗಳಾದ ಪಕ್ಷಿಗಳು ಅಡ್ಡಬರುತಿದ್ದುವು. ಅವನ ರಥಶಿಖರದಮೇಲೆ ಮಹಾಭಯಂಕರವಾದ ಒಂದು ದೊಡ್ಡ ರಣಹದ್ದು ಬಂದು ಬಿದ್ದಿತು. ಅವನ ಧ್ವಜಾಗ್ರದಲ್ಲಿ ಶವಭಕ್ಷಕಗಳಾದ ಹಕ್ಕಿಗಳು ಸಾಲಾಗಿ ಬಂದು ಸೇರಿದುವು. ರಕ್ತದಿಗ್ಧವಾದ ಮತ್ತು ಬಿಳುಪಾದ ಒಂದು ದೊಡ್ಡ ಮುಂಡವು, ವಿಕೃತಧ್ವನಿಯಿಂದ ರೋದನಮಾಡುತ್ತ, ಧೂಮ್ರಾಕ್ಷನ ಮುಂಭಾಗದಲ್ಲಿ, ಅಂತರಿಕ್ಷದಿಂದ ಕೆಳಗೆ ಬಿದ್ದಿತು.ಮೇಘದಿಂದ ರಕ್ತವರ್ಷವು ಸುರಿಯಿತು. ಭೂಮಿಯು ಗಡಗಡನೆ ನಡುಗಿತು. ಸಿಡಿಲು ಹೊಡೆದಂತೆ ಮಹಾಧ್ವನಿಯಿಂದ ಇದಿರುಗಾಳಿಯು ಬೀಸುತಿತ್ತು. ಸಮಸ್ತದಿಕ್ಕುಗಳಲ್ಲಿಯೂ ಕತ್ತಲೆ ಕವಿದು ಸ್ವಲ್ಪಮಾತ್ರವೂ ಪ್ರಕಾಶವಿಲ್ಲದಂತಾಯಿತು. ರಾಕ್ಷಸರಿಗೆ ಪ್ರಾಣನಾಶಸೂಚಕಗಳಾಗಿಯೂ, ಮಹಾಘೋರಗಳಾಗಿಯೂ ಇರುವ ಈ ಉತ್ಪಾತಗಳನ್ನು ನೋಡಿ, ಧೂಮ್ರಾಕ್ಷನ ಮನಸ್ಸಿನಲ್ಲಿ ಮಹತ್ತಾದ ಭಯವೂ, ಚಿಂತೆಯೂ ಹುಟ್ಟಿತು. ಧೂಮ್ರಾಕ್ಷನಿಗೆ ಮುಂದಾಗಿ ಬರುತಿದ್ದ ರಾಕ್ಷಸರೆಲ್ಲರೂ ಭಯದಿಂದ ಹಿಂದುಮುಂದು ತೋರದೆ ಸ್ತಬ್ಧರಾದರು. ಇಷ್ಟಾದರೂ ಬಲಾಢ್ಯನಾದ ಧೂಮ್ರಾಕ್ಷನು ಆ ಉತ್ಪಾತಗಳನ್ನು ಲಕ್ಷ್ಯಮಾಡದೆ, ಧೈರ್ಯದಿಂದ ಮನಸ್ಸನ್ನು ಸ್ಥಿರಪಡಿಸಿಕೊಂಡು, ಅನೇಕರಾಕ್ಷಸಸೈನಿಕರಿಂದ ಪರಿವೃತನಾಗಿ, ಯುದ್ಧೋತ್ಸಾಹದಿಂದ ಪಟ್ಟಣವನ್ನು ಬಿಟ್ಟು ಹೊರಟುಬಂದು, ಶ್ರೀರಾಮನ ಭುಜಬಲದಿಂದ ರಕ್ಷಿತವಾಗಿಯೂ, ಕೇವಲ ಕಪಿಮಯವಾಗಿಯೂ, ಮಹಾಸಮುದ್ರದಂತೆ ಅಪಾರವಾಗಿಯೂ ಇದ್ದ [1]ರಾಮನ ಸೈನ್ಯವನ್ನು ಕಂಡನು. ಇಲ್ಲಿಗೆ ಐವತ್ತೊಂದನೆಯ ಸರ್ಗವು.

---

1 ರಾಮಲಕ್ಷ್ಮಣರು ನಾಗಾಸ್ತ್ರಬದ್ಧರಾಗಿ ಮಲಗಿದ್ದುದು, ಹಾಸ್ಯದಿನದ ರಾತ್ರಿಯಿಂ

## ಧೂಮ್ರಾಕ್ಷನು ಹನುಮಂತನಿಂದ ಹತನಾದುದು.

ಇತ್ತಲಾಗಿ ವಾನರರೂ ಯುದ್ಧಾಕಾಂಕ್ಷೆಯಿಂದಲೇ ಕಾದಿದ್ದುದರಿಂದ,ತಮಗಿದಿರಾಗಿ ಧೂಮ್ರಾಕ್ಷನು ಯುದ್ಧಸನ್ನದ್ಧನಾಗಿ ಬರುತ್ತಿರುವುದನ್ನು ಕಂಡೊಡನೆ,ಪರಮಸಂತೋಷದಿಂದ ಸಿಂಹನಾದಗಳನ್ನು ಮಾಡಿದರು. ಒಬ್ಬೊಬ್ಬರೂ ವೃಕ್ಷಗಳನ್ನೆತ್ತಿಕೊಂಡು ಹೋರಿದರು. ರಾಕ್ಷಸರೂ ಶೂಲಮುದ್ಗರಾದ್ಯಾಯುಧಗಳೊಡನೆ ಮುಂದೆ ಬಂದರು. ಈ ಎರಡು ಪಕ್ಷದವರೂ ಒಬ್ಬರನ್ನೊಬ್ಬರು ಬಹಳ ಪ್ರಬಲವಾಗಿ ಹೊಡೆದಾಡುವುದಕ್ಕೆ ತೊಡಗಿದರು. ಇಬ್ಬರಿಗೂ ಬಹಳ ಭಯಂಕರವಾದ ತುಮುಲಯುದ್ಧವು ನಡೆಯಿತು. ಘೋರ ರಾಕ್ಷಸರೆಲ್ಲರೂ ಒಂದಾಗಿ ಸೇರಿ ಬಂದು, ಮಹಾಭಯಂಕರಗಳಾದ ಪರಿಘಗಳಿಂದಲೂ, ತ್ರಿಶೂಲಗಳಿಂದಲೂ, ಇನ್ನೂ ಬಗೆಬಗೆಯ ಆಯುಧಗಳಿಂದಲೂ, ನಾನಾಕಡೆಯಲ್ಲಿಯೂ ವಾನರರನ್ನು ಕತ್ತರಿಸುತ್ತಬಂದರು. ಇತ್ತಲಾಗಿ ವಾನರರೂ ರಾಕ್ಷಸರನ್ನು ವೃಕ್ಷಗಳಿಂದ ಬಡಿದು ಕೊಲ್ಲುತಿದ್ದರು. ಈ ಕಪಿಗಳ ಹಾವಳಿಯನ್ನು ನೋಡಿ, ರಾಕ್ಷಸರಿಗೆ ಮೇಲೆಮೇಲೆ ಕೋಪವು ಹೆಚ್ಚಿತು. ಅವರೆಲ್ಲರೂ, ಅತಿಭಯಂಕರಗಳಾಗಿಯೂ, ಕಾಲಾಗ್ನಿಯಂತೆ ಪ್ರದೀಪ್ತಮಾನಗಳಾಗಿಯೂ, ಕಂಕಪತ್ರವುಳ್ಳವುಗಳಾಗಿಯೂ ಇರುವ ತೀಕ್ಷ್ಣಗಳಾದ ಋಜುಬಾಣಗಳಿಂದ ವಾನರರನ್ನು ಪ್ರಹರಿಸುತಿದ್ದರು. ಹೀಗೆ ರಾಕ್ಷಸರು ದೊಡ್ಡದೊಡ್ಡ ಗದೆಗಳನ್ನೂ, ಪಟ್ಟಿಸಗಳನ್ನೂ ಕೂಟಮುದ್ಗರಾದ್ಯಾಯುಧಗಳನ್ನೂ ಹಿಡಿದು, ಕಂಡಕಂಡ ಕಡೆಯಲ್ಲಿ ವಾನರರನ್ನು ಧ್ವಂಸಮಾಡುತ್ತಿರಲು, ಬಲಾಢ್ಯರಾದ ವಾನರೆಲ್ಲರೂ ರೋಷೋತ್ಸಾಹಗಳಿಂದುಬ್ಬುತ್ತ ಸ್ವಲ್ಪಮಾತ್ರವೂ, ಹಿಂಜರಿಯದೆ ನುಗ್ಗಿ ಹೋರಾಡಿದರು. ಶೂಲಮುದ್ಗರಾದ್ಯಾಯುಧಗಳಿಂದ ತಾವು ಗಾಯಹೊಂದಿದ, ರೋಷದಿಂದ ಮರಗಳನ್ನೂ, ಶಿಲೆಗಳನ್ನೂ ಕೈಗೆತ್ತಿಕೊಂಡರು. ಆ ವಾನರವೀರರೆಲ್ಲರೂ, ಬಹಳ ಕ್ರೂರಧ್ವನಿಯಿಂದಾರ್ಭಟಿಸಿ ಸಿಂಹನಾದಮಾಡುತ್ತ,ತಮ್ಮತಮ್ಮ ಹೆಸರುಗಳನ್ನು ವೀರವಾದದಿಂದುಗ್ಗಡಿ

---

ದೂ,ಮರುದಿನದ ಎರಡನೆ ಗಳಿಗೆಯ ಪ್ರಾತಃಕಾಲದಲ್ಲಿ ಧೂಮ್ರಾಕ್ಷನ ಯುದ್ಧಪ್ರಯಾಣವೆಂದೂ ತಿಳಿಯಬೇಕು.

ಸುತ್ತ, ಕಂಡಕಂಡ ರಾಕ್ಷಸರನ್ನು ನಾನಾಕಡೆಗಳಲ್ಲಿ ಪ್ರಹರಿಸುತಿದ್ದರು. ಹೀಗೆ ವಾನರರು ನಾನಾವಿಧಶಿಲೆಗಳನ್ನೂ, ವೃಕ್ಷಗಳನ್ನೂ ಹಿಡಿದು ರಾಕ್ಷಸರನ್ನೂ, ರಾಕ್ಷಸರು ವಿವಿಧಾಯುಧಗಳನ್ನು ಹಿಡಿದು ವಾನರರ ನ್ನೂ ಪ್ರಹರಿಸುತ್ತಿರಲು, ಈ ವಾನರ ರಾಕ್ಷಸರ ಯುದ್ಧವು ಮಹಾಭಯಂ ಕರವಾಗಿಯೂ,ಅತ್ಯಾಶ್ಚರ್ಯವಾಗಿಯೂ ಕಾಣಿಸಿತು.ಹೀಗಿರುವಾಗ ಕ್ರಮಕ್ರ ಮವಾಗಿ ವಾನರರ ಕೈ ಮೇಲಾಯಿತು. ಜಯಶಾಲಿಗಳಾದ ವಾನರರ ಕೈ ಯಿಂದ ಹತರಾದ ಕೆಲವು ರಾಕ್ಷಸರು ಕೈಕಾಲು ಮುಂತಾದ ಅವಯವಗ ಳೇ ಕಾಣದಂತೆ ನಜ್ಜುಗುಜ್ಜಾಗಿ ಕೆಳಗೆ ಬಿದ್ದರು, ಕೆಲವು ರಾಕ್ಷಸರು ಬಾ ಯಿಂದ ರಕ್ತವನ್ನು ಕಕ್ಕುತಿದ್ದರು. ಕೆಲವು ವಾನರರು ಅಲ್ಲಲ್ಲಿ ತಮ್ಮ ಕೈಗೆ ಸಿಕ್ಕಿದ ಕೆಲವು ರಾಕ್ಷಸರನ್ನು ಹಿಡಿದು, ಅವರ ಪಾರ್ಶ್ವಭಾಗಗಳನ್ನು ಹಿಡಿ ದು ಎರಡುತುಂಡಾಗಿ ಸಿಗಿದು ಹಾಕುತಿದ್ದರು. ಕೆಲವರನ್ನು ಮರದ ಕೊಂಬೆಗಳಿಂದ ಬಡಿದು ಕೊಂದು ಹೆಣಗಳನ್ನು ರಾಶಿಹಾಕುತಿದ್ದರು. ಕೆಲವರನ್ನು ಶಿಲೆಗಳಿಂದ ಚೂರ್ಣಮಾಡಿದರು. ಕೆಲವರನ್ನು ಹಲ್ಲುಗಳಿಂದ ಸಿಗಿದುಹಾಕಿದರು. ಅಲ್ಲಲ್ಲಿ ವಾನರರು ಬೀಸಿಬಿಸಿದ ಪರ್ವತಶಿಖರಗಳಿಂದ ಮುರಿದುಬಿದ್ದ ಧ್ವಜಗಳೂ, ಸತ್ತುಬಿದ್ದ ಕತ್ತೆಗಳೂ,ಚೂರ್ಣಮಾಡಲ್ಪಟ್ಟ ರಥಗಳೂ,ಉರುಳಾಡುತಿದ್ದ ರಾಕ್ಷಸರ ದೇಹಗಳೂ,ನೆಲಕ್ಕುರುಳಿದ ಪರ್ವತಾ ಕಾರಗಳಾದ ಆನೆಗಳೂ, ಕತ್ತರಿಸಿಬಿದ್ದ ಕುದುರೆಗಳೂ, ಮೂರ್ಛಿತರಾದ ರಾವುತರೂ,ಆ ರಣಭೂಮಿಯ ಸಮಸ್ತಭಾಗಗಳಲ್ಲಿಯೂ ಎಡೆಬಿಡದೆ ತುಂ ಬಿದ್ದರು. ಅಲ್ಲಲ್ಲಿ ಭಯಂಕರಪರಾಕ್ರಮಿಗಳಾದ ಕೆಲವು ವಾನರರು, ಮ ಹಾವೇಗದಿಂದ ಆಗಾಗ ಮೇಲೆ ಹಾರಿ, ತಮ್ಮ ಕೂರುಗುರುಗಳಿಂದ ರಾ ಕ್ಷಸರ ಮುಖಗಳನ್ನು ಪರಚುತ್ತಿರಲು, ಆದರಿಂದ ಅನೇಕರಾಕ್ಷಸರು, ಅಂದ ಗೆಟ್ಟ ಮುಖಗಳಿಂದಲೂ, ಕೆದರಿದ ಕೂದಲುಗಳಿಂದಲೂ ವಿಕಾರರೂಪ ವುಳ್ಳವರಾಗಿ, ರಕ್ತಗಂಧದೊಡನೆ ಮೂರ್ಛಿತರಾಗಿ ನೆಲಕ್ಕೆ ಬಿದ್ದರು. ಈ ವಾನರರ ಚೇಷ್ಟೆಯನ್ನು ನೋಡಿ ಕೆಲವು ರಾಕ್ಷಸರು, ಮಿತಿಮೀರಿ ಕೋಪ ಗೊಂಡು, ಭಯಂಕರಧ್ವನಿಯಿಂದ ಗರ್ಜಿಸುತ್ತ, ವಜ್ರಾಯುಧಗಳಂತೆ ಕ ಠಿನಸ್ಪರ್ಶವುಳ್ಳ ತಮ್ಮ ಅಂಗೈಗಳನ್ನು ಮೇಲೆತ್ತಿಕೊಂಡು ಆ ವಾನರರ ನ್ನು ಇದಿರಿಸಿ ಹೋದರು. ಹೀಗೆ ರಾಕ್ಷಸರು ತಮ್ಮ ಮೇಲೆ ನುಗ್ಗಿಬರುವು

ವನ್ನು ಕಂಡು, ಅವರಿಗಿಂತಲೂ, ಮಹಾವೇಗವುಳ್ಳ ಕೆಲವು ವಾನರರು, ಮುಂದೆ ನುಗ್ಗಿ ಅವರನ್ನು ತಮ್ಮ ಮುಷ್ಟಿಗಳಿಂದ ಹೊಡೆದು, ಕಾಲುಗಳಿಂದೊದೆದು, ಹಲ್ಲುಗಳಿಂದ ಸಿಗಿದು,ವೃಕ್ಷಗಳಿಂದ ಬಡಿದು ಕೊಲ್ಲುತಿದ್ದರು. ಈ ವಾನರರ ಪ್ರಹಾರವನ್ನು ತಡೆಯಲಾರದೆ ಅಲ್ಲಿದ್ದ ರಾಕ್ಷಸರೆಲ್ಲರೂ ಭಯದಿಂದ ಹಿಂತಿರುಗಿ ಓಡಿಹೋಗುವುದಕ್ಕೆ ತೊಡಗಿದರು. ಇಷ್ಟರಲ್ಲಿ ಸೇನಾಪತಿಯಾದ ಧೂಮ್ರಾಕ್ಷನು, ಹೀಗೆ ತನ್ನ ಕಡೆಯ ರಾಕ್ಷಸರೆಲ್ಲರೂ ಭಯದಿಂದ ಪಲಾಯನಮಾಡುವುದನ್ನು ನೋಡಿ, ಈ ವಾನರರ ಕಾರ್ಯಕ್ಕಾಗಿ ಕೋಪಗೊಂಡು, ಯುದ್ಧೋತ್ಸಾಹದಿಂದ ಕೊಬ್ಬಿದ ಆ ವಾನರರನ್ನು ತಾನೇ ಇದಿರಿಸಿ ಯುದ್ಧವನ್ನು ತೊಡಗಿದನು ಇವನ ಕಡೆಯ ಕೆಲವು ರಾಕ್ಷಸರು,ಅಲ್ಲಲ್ಲಿ ಕೆಲವು ವಾನರರನ್ನು ಪ್ರಾಸಗಳಿಂದ ಪ್ರಹರಿಸಿ,ಅವರ ಸರ್ವಾಂಗಗಳಲ್ಲಿಯೂ ರಕ್ತವು ಸೋರುವಂತೆ ಗಾಯಪಡಿಸಿದರು. ಕೆಲವರನ್ನು ಮುದ್ಗರಗಳಿಂದ ಹೊಡೆದು ನೆಲಕ್ಕೆ ಕೆಡಹಿದರು. ಕೆಲವರನ್ನು ಪರಿಘಗಳಿಂದಲೂ, ಭಿಂಡಿವಾಲಗಳಿಂದಲೂ ಭೇದಿಸಿ ತುಂಡುಮಾಡಿದರು. ಕೆಲವರನ್ನು ಪಟ್ಟಿಸಗಳಿಂದ ತಿವಿದುಕೊಂದರು. ಕೆಲವರನ್ನು ಶೂಲಗಳಿಂದಿರಿದು ಅವರ ದೇಹದಲ್ಲಿ ರಕ್ತಸ್ರಾವವನ್ನುಂಟುಮಾಡಿದರು. ಈ ರಾಕ್ಷಸರ ಪ್ರಹಾರವನ್ನು ತಡೆಯಲಾರದೆ, ಕೆಲವು ವಾನರರು ಭಯದಿಂದ ರಣರಂಗವನ್ನು ಬಿಟ್ಟು ಪಲಾಯನಮಾಡಿದರು. ಹೀಗೆ ರಾಕ್ಷಸರ ಪ್ರಹಾರಕ್ಕೆ ಸಿಕ್ಕಿದ ವಾನರರಲ್ಲಿ, ಎದೆಸೀಳಿ ಸತ್ತವರು ಕೆಲವರು. ಪಕ್ಕದ ಕರುಳುಕಿತ್ತು ಸತ್ತವರು ಕೆಲವರು. ತ್ರಿಶೂಲಗಳಿಂದ ತಿವಿಯಲ್ಪಟ್ಟು, ಕಿತ್ತ ನರಗಳೊಡನೆ ಸತ್ತುಬಿದ್ದವರು ಕೆಲವರು. ಹೀಗೆ ವಾನರರಾಕ್ಷಸರಿಗೆ ನಡೆದ ಆ ದೊಡ್ಡ ತುಮುಲಯುದ್ಧವು ಅತ್ಯಂತಭಯಂಕರವಾಯಿತು. ರಣರಂಗದ ಸಮಸ್ತಭಾಗವೂ ಶಸ್ತ್ರಪ್ರಹಾರಶಬ್ದದಿಂದಲೇ ತುಂಬಿಹೋಯಿತು. ಯಾವಕಡೆಯನ್ನು ನೋಡಿದರೂ, ಶಿಲೆಗಳೂ, ವೃಕ್ಷಗಳೂ, ದಟ್ಟವಾಗಿ ತುಂಬಿದ್ದುವು. ಧನುಷ್ಟಂಕಾರಗಳೆಂಬ ತಂತಿಯ ವಾದ್ಯಗಳಿಂದಲೂ, ಗದ್ಗದಸ್ವರಗಳೆಂಬ ತಾಳಗಳಿಂದಲೂ, ಕುಗ್ಗಿದ ದೀನಧ್ವನಿಯೆಂಬ ಸಂಗೀತದಿಂದಲೂ, ಆ ರಣರಂಗವು, ಸಂಗೀತಶಾಲೆಯಂತೆ ಕಾಣಿಸುತಿತ್ತು. ಇಷ್ಟರಲ್ಲಿ ಧೂಮ್ರಾಕ್ಷನುವೀರ್ಯದ ಕೊಬ್ಬಿನಿಂದ ನಗುತ್ತ, ರಣಾಗ್ರದಲ್ಲಿ ಧನುರ್ಧಾರಿಯಾ

ಗಿ ಮುಂಪೆ ಬಂದು, ;ಬಾಣವರ್ಷವನ್ನು ಕರೆದು, ವಾನರರನ್ನು ಚದರಿಸಿ ದಿಕ್ಕುದಿಕ್ಕಿಗೆ ಓಡಿಸುತಿದ್ದನು. ಇತ್ತಲಾಗಿ ಹನುಮಂತನು, ತನ್ನ ಕಡೆಯ ವಾನರಸೈನ್ಯವೆಲ್ಲವೂ, ಧೂಮ್ರಾಕ್ಷನ ಬಾಣಪ್ರಹಾರದಿಂದ ನೊಂದುದ ನ್ನು ಕಂಡು, ಅತಿಕೋಪಾವಿಷ್ಟನಾಗಿ, ಒಂದುದೊಡ್ಡಶಿಲೆಯನ್ನೆತ್ತಿಕೊಂಡು ಆ ಧೂಮ್ರಾಕ್ಷನಿಗೆದಿರಾಗಿ ಹೊರಟನು. ಸಹಜವಾಗಿಯೇ ಪಿಂಗಳನೇತ್ರ ವುಳ್ಳವನಾಗಿಯೂ, ತನ್ನ ತಂದೆಯಾದ ವಾಯುದೇವನಿಗೆಣೆಯಾದ ಪರಾ ಕ್ರಮವುಳ್ಳವನಾಗಿಯೂ ಇದ್ದ ಆ ಹನುಮಂತನು, ಕೋಪದಿಂದ ಮತ್ತ ಷ್ಟು ಕೆಂಪೇರಿದ ಕಣ್ಣುಳ್ಳವನಾಗಿ,ತಾನು ಹೊತ್ತು ತಂದಿದ್ದ ದೊಡ್ಡಶಿಲೆ ಯನ್ನು ಧೂಮ್ರಾಕ್ಷನ ರಥದಮೇಲೆ ಬೀಸಿದನು. ಈ ದೊಡ್ಡ ಶಿಲೆಯು ತನಗಿದಿರಾಗಿ ಬರುವುದನ್ನು ನೋಡಿದೊಡನೆ, ಧೂಮ್ರಾಕ್ಷನು ತನ್ನ ಗದೆಯನ್ನು ಕೈಗೆತ್ತಿಕೊಂಡು, ವೇಗದಿಂದ ರಥವನ್ನು ಬಿಟ್ಟು ಕೆಳಕ್ಕೆ ಹಾರಿ ನೆಲದಮೇಲೆ ನಿಂತನು. ಹನುಮಂತನಿಂದ ಪ್ರಯುಕ್ತವಾದ ಆದೊಡ್ಡಶಿಲೆ ಯು ಧೂಮ್ರಾಕ್ಷನ ರಥಗಳನ್ನೂ, ಅದರ ಚಕ್ರಗಳನ್ನೂ, ನೊಗಗಳನ್ನೂ, ಅದರ ಕುದುರೆಗಳನ್ನೂ,ಧ್ವಜಗಳನ್ನೂ,ಅದರಲ್ಲಿದ್ದ ಬಿಲ್ಲನ್ನೂ ಪುಡಿಪುಡಿಯಾ ಗಿಮಾಡಿ ಭೂಮಿಯಲ್ಲಿ ಬಿದ್ದಿತು. ವಾಯುಪುತ್ರನಾದ ಹನುಮಂತನು ಹೀ ಗೆ ಧೂಮ್ರಾಕ್ಷನ ರಥವನ್ನು ಮುರಿದಮೇಲೆ, ಸ್ಕಂಧಗಳಿಂದಲೂ, ಶಾಖೆಗ ಳಿಂದಲೂ ಕೂಡಿದ ದೊಡ್ಡದೊಡ್ಡ ಮರಗಳನ್ನು ಕಿತ್ತು ತಂದು, ಇತರ ರಾಕ್ಷಸರೊಡನೆ ಯುದ್ಧಕ್ಕೆ ನಿಂತನು. ಅಲ್ಲಲ್ಲಿ ಕೆಲವು ರಾಕ್ಷಸರು ಈ ಆಂಜ ನೇಯನ ವೃಕ್ಷಪ್ರಹಾರದಿಂದ ತಲೆಯೊಡೆದು ರಕ್ತದಿಂದ ತೊಯ್ದು ಕೆಳ ಕ್ಕುರುಳಿದರು. ಹೀಗೆ ಹನುಮಂತನು ವೃಕ್ಷಪ್ರಹಾರಗಳಿಂದ ಅಲ್ಲಿದ್ದ ಸ ಮಸ್ತರಾಕ್ಷಸಸೈನ್ಯವನ್ನೂ ಓಡಿಸಿ, ಒಂದು ದೊಡ್ಡ ಪರ್ವತಶಿಖರವನ್ನು ಕೈಗೆತ್ತಿಕೊಂಡು, ಧೂಮ್ರಾಕ್ಷನಿಗಿದಿರಾಗಿ ನುಗ್ಗಿದನು. ಹೀಗೆ ತನಗಿದಿರಾಗಿ ಬರುತ್ತಿರುವ ಹನುಮಂತನನ್ನು ನೋಡಿ ಧೂಮ್ರಾಕ್ಷನು, ತನ್ನ ಗದೆಯ ನ್ನೆತ್ತಿಕೊಂಡು ಸಿಂಹನಾದವನ್ನು ಮಾಡುತ್ತ, ಹನುಮಂತನನ್ನಿದಿರಿಸಿ ನಿಂ ತನು. ಮತ್ತು ವೀರ್ಯವಂತನಾದ ಆ ಧೂಮ್ರಾಕ್ಷನು, ಅತ್ಯಾಕ್ರೋಶದಿಂ ದ ಕೂಡಿದವನಾಗಿ, ಸುತ್ತಲೂ ಮುಳ್ಳುಗಳುಳ್ಳ ಆ ದೊಡ್ಡ ಗದೆಯನ್ನೆತ್ತಿ ಹನುಮಂತನ ತಲೆಯಮೇಲೆ ಪ್ರಹರಿಸಿದನು. ಭಯಂಕರಾಕಾರವುಳ್ಳ ಆ

ದೊಡ್ಡಗದೆಯಿಂದ ಪ್ರಹರಿಸಲ್ಪಟ್ಟರೂ, ವಾಯುವಿನಂತೆ ಮಹಾವೇಗವುಳ್ಳ ಹನುಮಂತನು,ಸ್ವಲ್ಪಮಾತ್ರವೂ ಆ ಗದಾಪ್ರಹಾರವನ್ನು ಲಕ್ಷ್ಯಮಾಡದೆ, ತಾನು ಹೊತ್ತುತಂದ ಪರ್ವತಶಿಖರವನ್ನು ಧೂಮ್ರಾಕ್ಷನ ನಡುನೆತ್ತಿಗೆ ಸರಿಯಾಗಿ ಗುರಿಯಿಟ್ಟು ಬೀಸಿದನು. ಈ ಪರ್ವತಶಿಖರವು ಮೇಲೆ ಬಿದ್ದೊಡನೆ ಧೂಮ್ರಾಕ್ಷನ ಸಮಸ್ತಾವಯವಗಳೂ ಛಿನ್ನಭಿನ್ನಗಳಾಗಲು, ಆ ರಾಕ್ಷಸನು ವಜ್ರಾಯುಧದಿಂದ ಚೂರ್ಣವಾದ ಪರ್ವತದಂತೆ ಕೆಳಗೆ ಬಿದ್ದನು. ಈ ಧೂಮ್ರಾಕ್ಷನು ಹತನಾಗಿ ಬಿದ್ದುದನ್ನು ನೋಡಿ, ಅಲ್ಲಲ್ಲಿ ಸತ್ತುಳಿದ ಕೆಲವು ರಾಕ್ಷಸರು,ತಮ್ಮಮೇಲೆ ಬೆನ್ನಟ್ಟಿ ಬಂದು ಹೊಡೆಯುತ್ತಿರುವ ವಾನರರ ಪ್ರಹಾರವನ್ನು ಸಹಿಸಲಾರದೆ, ಭಯದಿಂದ ಹಿಂತಿರುಗಿ ಲಂಕೆಗೆ ಓಡಿಹೋದರು. ಇತ್ತಲಾಗಿ ಮಹಾತ್ಮನಾದ ವಾಯುಕುಮಾರನಾದರೋ, ತನಗೆ ಪ್ರಬಲವೈರಿಯಾದ ಆ ಧೂಮ್ರಾಕ್ಷನನ್ನು ಕೊಂದು ರಣರಂಗವೆಲ್ಲವನ್ನೂ ರಕ್ತಪ್ರವಾಹಗಳಿಂದ ತುಂಬಿ,ಯುದ್ಧಶ್ರಮದಿಂದ ಬಳಲಿದವನಾಗಿ ತನ್ನ ಕಡೆಯ ಸಮಸ್ತವಾನರರಿಂದಲೂ ಉಪಚರಿಸಲ್ಪಡುತ್ತ ಸಂತೋಷದಿಂದಿದ್ದನು. ಇಲ್ಲಿಗೆ ಐವತ್ತೆರಡನೆಯ ಸರ್ಗವು.

---

{ಧೂಮ್ರಾಕ್ಷನ ವಧವನ್ನು ಕೇಳಿ ರಾವಣನು ವಜ್ರದಂಷ್ಟ್ರನನ್ನು ಕಳುಹಿಸಿದುದು. ಅಂಗದನು ವಜ್ರದಂಷ್ಟ್ರನ ಸೇನೆಯನ್ನು ನಾಶಮಾಡಿದುದು.}

ಅತ್ತಲಾಗಿ ರಾಕ್ಷಸೇಶ್ವರನಾದ ರಾವಣನು. ಧೂಮ್ರಾಕ್ಷನು ಹತನಾದನೆಂಬ ಸುದ್ದಿಯನ್ನು ಕೇಳಿ ದುಃಖಗೊಂಡು, ಹಾವಿನಂತೆ ನಿಟ್ಟುಸಿರುಬಿಡುತ್ತ,ಅತ್ಯಾಕ್ರೋಶವನ್ನು ಹೊಂದಿದನು. ಈ ಕೋಪಾವೇಶದಿಂದ ರಾವಣನು ಬಹಳವಾಗಿ ಕಲಗಿದ ಮನಸ್ಸುಳ್ಳವನಾಗಿ, ಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ,ಶೂರನಾಗಿಯೂ,ಬಲಾಢ್ಯನಾಗಿಯೂ ಇದ್ದ ವಜ್ರದಂಷ್ಟ್ರನೆಂಬ ರಾಕ್ಷಸನನ್ನು ಕರೆದು “ ಎಲೈ ರಾಕ್ಷಸವೀರನೆ! ಈಗಲೇ ನೀನು ಇಲ್ಲಿಂದ ಹೊರಡು! ನಿನ್ನ ಸಹಾಯಕ್ಕಾಗಿ ದೊಡ್ಡರಾಕ್ಷಸಸೇನೆಯನ್ನೂ ಸಂಗಡಕರೆದುಕೊಂಡು ಹೋಗು!ಇಲ್ಲಿಂದ ಹೋಗಿ ದಶರಥಕುಮಾರನಾದ ರಾಮನನ್ನೂ, ಸುಗ್ರೀವನನ್ನೂ, ಅಲ್ಲಿರುವ ಇತರವಾನರರೆಲ್ಲರನ್ನೂ ಕೊಂದು ಬಾ!”

ಎಂದನು. ಮಾಯೆಯಲ್ಲಿ ನಿಪುಣನಾದ ಆ ವಜ್ರದಂಷ್ಟ್ರನು ರಾವಣಾಜ್ಞೆಯನ್ನು ಕೇಳಿ ಆತನಿಗೆ ಕೈಮುಗಿದು. “ಮಹಾರಾಜನೆ! ಅಪ್ಪಣೆ! ಹಾಗೆಯೇ ನಡೆಸುವೆನು!” ಎಂದು ಹೇಳಿ, ದೊಡ್ಡ ರಾಕ್ಷಸಸೈನ್ಯವನ್ನೂ, ಕೆಲವು ಬಲಾಧ್ಯಕ್ಷರನ್ನೂ ಕರೆದುಕೊಂಡು ಹೊರಟನು. ಇವನ ಹಿಂದೆ ಅನೇಕಗಜತುರಗಾದಿಸೈನ್ಯಗಳೂ, ಒಂಟೆಗಳೂ, ಕತ್ತೆಗಳೂ, ಪತಾಕಾಧ್ವಜಚಿತ್ರಿತಗಳಾದ ರಥಗಳೂ, ಅಸಂಖ್ಯಾತಗಳಾಗಿ ಹೊರಟುವು. ಈ ಸಮಸ್ತಸೈನ್ಯಗಳೂ ಗಂಧಪುಷ್ಪಾದ್ಯಲಂಕಾರಗಳಿಂದಲೂ, ಯುದ್ಧಕವಚಗಳಿಂದಲೂ, ವಿಚಿತ್ರಗಳಾದ ಕಿರೀಟಕೇಯೂರಾದಿ ರತ್ನಾಭರಣಗಳಿಂದಲೂ ಭೂಷಿತಗಳಾಗಿ, ವಜ್ರದಂಷ್ಟ್ರನನ್ನು ಹಿಂಬಾಲಿಸಿ ಹೊರಟುವು. ವಜ್ರದಂಷ್ಟ್ರನೂ ಕೂಡ ಉತ್ತಮಪತಾಕೆಗಳಿಂದಲಂಕೃತವಾಗಿಯೂ, ಸುವರ್ಣಕಾಂತಿಯಿಂದ ದೇದೀಪ್ಯಮಾನವಾಗಿಯೂ ಇದ್ದ ತನ್ನ ರಥಕ್ಕೆ ಪ್ರದಕ್ಷಿಣವನ್ನು ಮಾಡಿ ಆ ರಥವನ್ನೇರಿಕುಳಿತನು. ರಥದಸುತ್ತಲೂ ಅನೇಕಪದಾತಿಗಳು ನಾನಾವಿಧಗಳಾದ ದಂಡಗಳನ್ನೂ, ತೋಮರಗಳನ್ನೂ, ಶೂಲಗಳನ್ನೂ, ಮುಸಲಗಳನ್ನೂ, ಭಿಂಡಿವಾಲಗಳನ್ನೂ, ಪಾಶಗಳನ್ನೂ, ಶಕ್ತ್ಯಾಯುಧಗಳನ್ನೂ, ಪಟ್ಟಸಗಳನ್ನೂ, ಖಡ್ಗಗಳನ್ನೂ, ಚಕ್ರಗಳನ್ನೂ, ಗದೆಗಳನ್ನೂ, ತೀಕ್ಷ್ಣಗಳಾದ ಗಂಡುಗೊಡಲಿಗಳನ್ನೂ, ಇನ್ನೂ ವಿವಿಧಾಯುಧಗಳನ್ನೂ ಹಿಡಿದು ಯುದ್ಧಸನ್ನದ್ಧರಾಗಿ ಹೊರಟರು. ಈ ಸೈನ್ಯದಲ್ಲಿದ್ದ ಒಬ್ಬೊಬ್ಬರಾಕ್ಷಸರೂ ಉತ್ತಮವಸ್ತ್ರವನ್ನುಟ್ಟು ಸರ್ವಾಭರಣಭೂಷಿತರಾಗಿ ಜ್ವಲಿಸುತಿದ್ದರು. ಯುದ್ಧಸಮರ್ಥರಾದ ಕೆಲವುರಾಕ್ಷಸರು ತೋಮರಗಳನ್ನೂ, ಅಂಕುಶಗಳನ್ನೂ ಹಿಡಿದು, ಜಂಗಮಪರ್ವತಗಳಂತೆ ಮಹೋನ್ನತಗಳಾದ ಮದದಾನೆಗಳನ್ನೇರಿ ಬಂದರು. ಬೇರೆ ಕೆಲವುರಾಕ್ಷಸರು ಶುಭಲಕ್ಷಣವುಳ್ಳವುಗಳಾಗಿಯೂ, ಮಹಾಬಲವುಳ್ಳವುಗಳಾಗಿಯೂ ಇದ್ದ ಬೇರೆ ಕೆಲವು ಯುದ್ಧಗಜಗಳನ್ನೇರಿ ಬಂದರು. ಹೀಗೆ ಕಪ್ಪುಮೈಯುಳ್ಳ ಅನೇಕರಾಕ್ಷಸರು, ಸುವರ್ಣಾಭರಣಗಳಿಂದಲಂಕೃತರಾಗಿ ಸಿಂಹನಾದಗಳನ್ನು ಮಾಡುತ್ತ, ಮುಂದೆಮುಂದೆ ಸಾಗಿಬರುತ್ತಿರಲು, ವರ್ಷಾಕಾಲದಲ್ಲಿ ಮಿಂಚಿನೊಡಗೂಡಿ ಗರ್ಜಿಸುತ್ತಿರುವ ಮೇಘಪರಂಪರೆಯಂತೆ ಕಾಣುತಿದ್ದರು. ಹೀಗೆ ಸಮಸ್ತರಾಕ್ಷಸಸೈನ್ಯವೂ ವಜ್ರದಂಷ್ಟ್ರನೊಡನೆ ಪುರಮಧ್ಯದಿಂದ ಹೊರಟು, ವಾನರಯೂಥಪತಿಯಾದ ಅಂಗ

ದನು ಕಾಯುತಿದ್ದ ದಕ್ಷಿಣದ್ವಾರದ ಕಡೆಗೆ ಬಂದುಸೇರಿತು. ಈ ದೊಡ್ಡ ರಾಕ್ಷಸಸೈನ್ಯವು ಪಟ್ಟಣದಿಂದ ಹೊರಟಾಗಲೇ ಅಲ್ಲಲ್ಲಿ ಕೆಲವು ದುರ್ನಿಮಿತ್ತಗಳು ತಲೆದೋರುತಿದ್ದುವು. ಮೇಘಶೂನ್ಯವಾದ ಆಕಾಶದಿಂದ ಭಯಂಕರಸ್ವರೂಪವುಳ್ಳ ಉಲ್ಕೆಗಳು ಬೀಳುತಿದ್ದುವು. ಅಲ್ಲಲ್ಲಿ ನರಿಗಳು ಬಾಯಿಂದ ಅಗ್ನಿಜ್ವಾಲೆಗಳನ್ನು ಕಕ್ಕುತ್ತ, ಭಯಂಕರಧ್ವನಿಯಿಂದ ಅರುಚುತಿದ್ದುವು. ಅಲ್ಲಲ್ಲಿ ಕ್ರೂರಮೃಗಗಳು ರಾಕ್ಷಸರಿಗೆ ಮರಣವನ್ನು ಸೂಚಿಸುವಂತೆ ಅಮಂಗಳವಾಗಿ ಕೂಗುತಿದ್ದುವು. ಯುದ್ಧಕ್ಕಾಗಿ ಮುಂದೆಮುಂದೆ ಸಾಗಿಬರುತಿದ್ದ ರಾಕ್ಷಸಯೋಧರೂ ಕೂಡ,ದಾರಿಯಲ್ಲಿ ಆಕಸ್ಮಾತ್ತಾಗಿ ಭಯಪಟ್ಟು ತಡವರಿಸಿ ನಿಲ್ಲುತಿದ್ದರು. ಮಹಾತೇಜಸ್ವಿಯಾಗಿಯೂ ಬಲಾಢ್ಯನಾಗಿಯೂ ಇರುವ ವಜ್ರದಂಷ್ಟ್ರನು, ಈ ಮಹೋತ್ಪಾತಗಳೆಲ್ಲವನ್ನೂ ತಾನು ಕಣ್ಣಾರೆ ನೋಡುತಿದ್ದರೂ ತನ್ನ ಮನಸ್ಸಿನಲ್ಲಿ ಧೈರ್ಯವನ್ನು ಬಿಡದೆ, ಯುದ್ಧಾತುರದಿಂದ ಬಂದನು. ಈ ದೊಡ್ಡ ರಾಕ್ಷಸಸೈನ್ಯವು ಇದಿರಾಗಿ ಬರುವುದನ್ನು ಕಂಡೊಡನೆ, ಇತ್ತಲಾಗಿ ವಾನರರೆಲ್ಲರೂ ಉತ್ಸಾಹದಿಂದುಬ್ಬುತ್ತ, ಹತ್ತುದಿಕ್ಕುಗಳನ್ನೂ ತುಂಬುವಂತೆ ಮಹಾಧ್ವನಿಯಿಂದ ಸಿಂಹನಾದಗಳನ್ನು ಮಾಡಿದರು. ಕೊನೆಗೆ ಭಯಂಕರಾಕಾರವುಳ್ಳ ಸಮಸ್ತವಾನರರೂ ರಾಕ್ಷಸರಮೇಲೆ ನುಗ್ಗಿಬಂದರು. ವಾನರರಾಕ್ಷಸರಿಬ್ಬರೂ ಸೇರಿ ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಹಟದಿಂದ ತುಮುಲಯುದ್ಧವನ್ನಾರಂಭಿಸಿದರು. ಈ ಎರಡುಪಕ್ಷದವರೂ ಮಹೋತ್ಸಾಹದಿಂದ ಒಬ್ಬರಮೇಲೊಬ್ಬರು ಬಿದ್ದು ಯುದ್ಧಮಾಡುವಾಗ, ಅಲ್ಲಲ್ಲಿ ಕೆಲವರು ಮೈಮುರಿದು,ತಲೆಯೊಡೆದು, ಸರ್ವಾಂಗಗಳಿಂದಲೂ ರಕ್ತವನ್ನು ಸುರಿಸುತ್ತ ಕೆಳಗೆ ಬಿದ್ದರು. ಇಂತಹ ಮಹಾಯುದ್ಧಗಳಲ್ಲಿಯೂ ಹಿಂಜರಿಯದ ಮಹಾದ್ಭುತಪರಾಕ್ರಮವುಳ್ಳ ಕೆಲವುರಾಕ್ಷಸರು, ಪರಿಘಗಳನ್ನು ಹಿಡಿದು, ಅಲ್ಲಲ್ಲಿ ಸಿಕ್ಕಿದ ವಾನರಸೈನಿಕರಮೇಲೆ ನುಗ್ಗಿ ಹೊಡೆಯುತ್ತ,ಅವರ ಮೇಲೆ ವಿವಿಧಾಯುಧಗಳನ್ನು ಪ್ರಯೋಗಿಸುತಿದ್ದರು. ಆ ಯುದ್ಧದಲ್ಲಿವಾನರರಾಕ್ಷಸ ಸೈನಿಕರಿಬ್ಬರೂ ಒಬ್ಬರಿಗೊಬ್ಬರಿಗೆ ಹೊಡೆದಾಡುತ್ತಿರುವಾಗ ಅವರವರು ವೃಕ್ಷಗಳನ್ನೂ, ಶಿಲೆಗಳನ್ನೂ,ಆಯುಧಗಳನ್ನೂ, ಪ್ರಯೋಗಿಸಿದುದರಿಂದುಂಟಾದ ಮಹಾಧ್ವನಿಯೇ ಅತಿಭಯಂಕರವಾಗಿ ರಣರಂಗವೆಲ್ಲವನ್ನೂ ವ್ಯಾಪಿಸಿ, ಜನರ ಹೃದಯವನ್ನು ಭೇದಿಸುವಂತೆ ಕೇಳಿಸುತಿತ್ತು. ಅಲ್ಲಲ್ಲಿ ರಥ

ನೇಮಿಧ್ವನಿಯೂ, ಧನುಸ್ಸಿನ ಟಂಕಾರಧ್ವನಿಯೂ, ಶಂಖಭೇರೀಮೃದಂಗಾದಿವಾದ್ಯಗಳ ಧ್ವನಿಯೂ ತುಮುಲವಾಗಿ ವ್ಯಾಪಿಸಿತು. ಅಲ್ಲಲ್ಲಿ ಕೆಲವರು ತಮ್ಮತಮ್ಮಲ್ಲಿದ್ದ ಶಸ್ತ್ರಾಸ್ತ್ರಗಳೆಲ್ಲವನ್ನೂ ಪ್ರಯೋಗಿಸಿ, ಅವೆಲ್ಲವೂ ಮುಗಿದಮೇಲೆ ಬಾಹುಯುದ್ಧವನ್ನಾರಂಭಿಸಿದರು. ಅಲ್ಲಲ್ಲಿ ಕೆಲವು ವಾನರರು ತಮ್ಮ ಕೈಗೆ ಸಿಕ್ಕಿದ ರಾಕ್ಷಸರನ್ನು ಅಂಗೈಗಳಿಂದಪ್ಪಳಿಸಿಯೂ,ಕಾಲುಗಳಿಂದ ತುಳಿದೂ, ಮುಷ್ಟಿಗಳಿಂದ ಹೊಡೆದೂ, ವೃಕ್ಷಗಳಿಂದ ಬಡಿದೂ, ಮೊಳಕಾಲುಗಳಿಂದ ಗುದ್ದಿಯೂ, ಕೊಂದು ಕೆಡಹುತಿದ್ದರು. ಯುದ್ಧಮದದಿಂದುಬ್ಬಿದ ಬೇರೆ ಕೆಲವು ವಾನರರು,ಅಲ್ಲಲ್ಲಿಸಿಕ್ಕಿದ ರಾಕ್ಷಸರನ್ನು ಶಿಲೆಗಳಿಂದ ಹೊಡೆದು ಕೊಂದುಚೂರ್ಣಮಾಡುತಿದ್ದರು. ಸೇನಾಪತಿಯಾದ ವಜ್ರದಂಷ್ಟ್ರನಾದರೋ, ಪ್ರಳಯಕಾಲದಲ್ಲಿ ಪಾಶಹಸ್ತನಾದ ಯಮನಂತೆ ಭಯಂಕರಾಕಾರವುಳ್ಳವನಾಗಿ,ಅಲ್ಲಲ್ಲಿ ಸಂಚರಿಸುತ್ತ,ಅಲ್ಲಲ್ಲಿ ಸಿಕ್ಕಿದ ವಾನರರನ್ನು ಬಾಣಗಳಿಂದ ಹೊಡೆದು ಬೆದರಿಸಿ ಓಡಿಸುತಿದ್ದನು. ಬಲಾಢ್ಯರಾಗಿಯೂ, ಆಯುಧವಿದ್ಯೆಯಲ್ಲಿ ನಿಪುಣರಾಗಿಯೂ ಇದ್ದ ಅನೇಕರಾಕ್ಷಸರು, ಆ ರಣರಂಗದಲ್ಲಿ ಕೋಪದಿಂದ ಮೈಮರೆಯದೆ ವಿವಿಧಾಯುಧಗಳನ್ನು ಹಿಡಿದು ವಾನರಸೈನ್ಯವನ್ನು ಕೊಂದುಕೆಡಹುತಿದ್ದರು. ಹೀಗೆ ರಾಕ್ಷಸರೆಲ್ಲರೂ ಅಲ್ಲಲ್ಲಿ ವಾನರಸೈನ್ಯವನ್ನು ಹಿಂದುಮುಂದುನೋಡದೆ ಕೊಲ್ಲುತ್ತಿರುವುದನ್ನು ಕಂಡು, ವಾಲಿಪುತ್ರನಾದ ಅಂಗದನು, ಪ್ರಳಯಕಾಲಾಗ್ನಿಯಂತೆ ಕೋಪದಿಂದ ಜ್ವಲಿಸುತ್ತ, ಕೆಂಪೇರಿದ ಕಣ್ಣುಳ್ಳವನಾಗಿ, ಒಂದು ದೊಡ್ಡವೃಕ್ಷವನ್ನು ಕಿತ್ತುಕೊಂಡು, ಕ್ಷುದ್ರಮೃಗಗಳನ್ನು ಬೆನ್ನಟ್ಟಿಹೋಗುವ ಸಿಂಹದಂತೆ ಆ ರಾಕ್ಷಸರ ಗುಂಪಿನಲ್ಲಿ ನುಗ್ಗಿ ಅವರೆಲ್ಲರನ್ನೂ ಕೊಲ್ಲುತ್ತಬಂದನು. ಇಂದ್ರನಿಗೆಣೆಯಾದ ಪರಾಕ್ರಮವುಳ್ಳ ಆ ಅಂಗದನು ರಾಕ್ಷಸಸೈನ್ಯದಲ್ಲಿ ನುಗ್ಗಿ ಮಹಾಭಯಂಕರವಾದ ಯುದ್ಧವನ್ನು ನಡೆಸಿದಾಗ, ಈ ಅಂಗದನಿಗಿದಿರಾದ ರಾಕ್ಷಸರೆಲ್ಲರೂ ಬಹಳ ಘೋರಪರಾಕ್ರಮವುಳ್ಳವರಾಗಿದ್ದರೂ, ಅವನ ಪ್ರಹಾರದಿಂದ ನೊಂದು, ಬುಡವನ್ನು ಕಡಿದ ಮರಗಳಂತೆ ತಲೆಯೊಡೆದು ಕೆಳಕ್ಕುರುಳುತಿದ್ದರು. ಆಗ ಆ ರಣಭೂಮಿಯೆಲ್ಲವೂ ಮುರಿದ ರಥಗಳಿಂದಲೂ, ಸತ್ತುಬಿದ್ದ ಕುದುರೆಗಳಿಂದಲೂ, ಕತ್ತರಿಸಿದ ವಿಚಿತ್ರಧ್ವಜಗಳಿಂದಲೂ, ಛಿನ್ನಭಿನ್ನಗಳಾದ ವಾನರರಾಕ್ಷಸರ ದೇಹಗಳಿಂದಲೂ, ರಕ್ತಪ್ರವಾಹದಿಂದಲೂ ತುಂಬಿ, ಮಹಾಭ

ಯಂಕರವಾಯಿತು. ಆ ಯುದ್ಧದಲ್ಲಿ ಅಲ್ಲಿನ ಭೂಪ್ರದೇಶವೆಲ್ಲವೂ ಅಲ್ಲಲ್ಲಿ ಕೆದರಿಬಿದ್ದ ಹಾರಕೇಯೂರಾದಿ ಭೂಷಣಗಳಿಂದಲೂ, ವಿಚಿತ್ರವಸ್ತ್ರಗಳಿಂದಲೂ, ವಿವಿಧಶಸ್ತ್ರಗಳಿಂದಲೂ ಅಲಂಕೃತವಾಗಿ, ನಕ್ಷತ್ರಗಳಿಂದಲೂ, ಚಂದ್ರಬಿಂಬದಿಂದಲೂ ಅಲಂಕೃತವಾದ ಶರತ್ಕಾಲದರಾತ್ರಿಯಂತೆ ಪ್ರಕಾಶಿಸುತಿತ್ತು. ಆಗ ಅಲ್ಲಿನೆರೆದಿದ್ದ ದೊಡ್ಡರಾಕ್ಷಸಸೇನೆಯೆಲ್ಲವೂ ಅಂಗದನವೇಗವನ್ನಿದಿರಿಸಿಸಿಲ್ಲಲಾರದೆ,ಬಿರುಗಾಳಿಗೆ ಸಿಕ್ಕಿದ ಮೇಘಗಳಂತೆ ನಾನಾದಿಕ್ಕುಗಳಿಗೂ ಚದರಿಪಲಾಯನಮಾಡಿದುವು. ಇಲ್ಲಿಗೆ ಐವತ್ತುಮೂರನೆಯ ಸರ್ಗವು.

---

## ವಜ್ರದಂಷ್ಟ್ರನು ಅಂಗದನಿಂದ ಹತನಾದುದು.

ಇಷ್ಟರಲ್ಲಿ ಮಹಾಬಲಾಢ್ಯನಾದ ವಜ್ರದಂಷ್ಟ್ರನು, ತನ್ನ ಸೈನ್ಯವು ಪರಾಜಿತವಾಗಿ ಭಯದಿಂದ ಪಲಾಯನಮಾಡುವುದನ್ನೂ, ಅಂಗದನು ಜಯದಿಂದ ಉತ್ಸಾಹಗೊಂಡಿರುವುದನ್ನೂ ನೋಡಿ, ಬಹಳ ಕೋಪಾವೇಶವನ್ನು ಹೊಂದಿ, ತಾನು ಹಿಡಿದಿದ್ದ ಮಹಾಧನುಸ್ಸನ್ನು ಮಿಡಿದು ವಜ್ರಾಯುಧದ ಘೋರತದಂತೆ ಮಹಾಧ್ವನಿಯನ್ನುಂಟುಮಾಡುತ್ತ, ವಾನರಸೈನ್ಯದಮೇಲೆ ದೊಡ್ಡ ಬಾಣವರ್ಷವನ್ನು ಕರೆದನು. ರಾಕ್ಷಸಸೈನ್ಯದಲ್ಲಿ ಅನೇಕಶೂರರಾಕ್ಷಸರು ರಥಾರೂಢರಾಗಿ ನಾನಾಯುಧಗಳನ್ನು ಹಿಡಿದು ವಾನರರನ್ನು ತಡೆಯುತಿದ್ದರು. ಇತ್ತಲಾಗಿ ಪ್ರಮುಖರಾದ ವಾನರರೂಕೂಡ ನಾನಾಭಾಗಗಳಲ್ಲಿಯೂ ಗುಂಪುಗುಂಪಾಗಿ ಸೇರಿ ಶಿಲೆಗಳನ್ನು ಹಿಡಿದು ರಾಕ್ಷಸರನ್ನು ಪ್ರಹರಿಸಿ ಯುದ್ಧಮಾಡುತಿದ್ದರು. ಆ ಮಹಾಯುದ್ಧದಲ್ಲಿ ಅನೇಕರಾಕ್ಷಸರು ಕಪಿವೀರರಮೇಲೆ ಸಾವಿರಾರು ಸಂಖ್ಯೆಗಳಿಂದ ವಿವಿಧಾಯುಧಗಳನ್ನು ಪ್ರಯೋಗಿಸಿದರು. ಮದದಾನೆಗಳಂತೆ ಮಹಾವೀರ್ಯವುಳ್ಳ ವಾನರರೂಕೂಡ,ಶಿಲೆಗಳಿಂದಲೂ, ವೃಕ್ಷಗಳಿಂದಲೂ,ಪರ್ವತಗಳಿಂದಲೂ ರಾಕ್ಷಸರನ್ನು ಪ್ರಹರಿಸಿದರು. ಶೂರರಾಗಿಯೂ ಯುದ್ಧದಲ್ಲಿ ಹಿಂಜರಿಯದವರಾಗಿಯೂ ಇದ್ದ ಆ ವಾನರರಾಕ್ಷಸರಿಬ್ಬರಿಗೂ ಮೇಲೆಮೇಲೆ ಯುದ್ಧವು ಪ್ರಬಲವಾಯಿತು.ಆ ಯುದ್ಧದಲ್ಲಿಯೋ,ತಲೆಯೊಡೆದು ಬಿದ್ದವರುಕೆಲವರು!ಕಾ

ಲುಮುರಿದು ಬಿದ್ದವರು ಕೆಲವರು! ಕೈಕತ್ತರಿಸಿಬಿದ್ದವರು ಕೆಲವರು! ಶಸ್ತ್ರಗಳಿಂದ ಕತ್ತರಿಸಿದ ಮೈಯುಳ್ಳವರು ಕೆಲವರು. ರಕ್ತದಿಂದ ತೊಯ್ದ ದೇಹವುಳ್ಳವರು ಕೆಲವರು ಹೀಗೆ ಅಲ್ಲಲ್ಲಿ ಆಯುದ್ಧರಂಗದ ಸಮಸ್ತಭಾಗಗಳಲ್ಲಿಯೂ, ಕಪಿಗಳೂ, ರಾಕ್ಷಸರೂ ಸತ್ತು ನೆಲದಮೇಲೆ ಬಿದ್ದಿದ್ದರು. ಹದ್ದು, ಕಾಗೆ, ಗಿಡುಗ, ಮುಂತಾದ ಮಾಂಸಾಹಾರಿಪಕ್ಷಿಗಳೆಲ್ಲವೂ ಸುತ್ತಲೂ ಆವರಿಸಿ ನಿಂತುವು. ಅಲ್ಲಲ್ಲಿ ನರಿಗಳು ಗುಂಪುಸೇರಿದುವು. ಅಲ್ಲಲ್ಲಿ ಭೀರುಗಳಿಗೆ ಭಯವನ್ನು ಹೆಚ್ಚಿಸುವಂತೆ,ತಲೆಯಿಲ್ಲದ ಮುಂಡಗಳು ಹಾರಿಹಾರಿ ಕುಣಿಯುತಿದ್ದುವು. ಆಗಿನ ಯುದ್ಧದಲ್ಲಿ ವಾನರರಾಕ್ಷಸರಿಬ್ಬರಲ್ಲಿಯೂ, ತಲೆಯೊಡೆದವರೂ, ಕೈಮುರಿದವರೂ, ತೋಳುಡಿದವರೂ,ಎರಡು ತುಂಡಾಗಿಕತ್ತರಿಸಿದ ದೇಹವುಳ್ಳವರೂ, ಅಸಂಖ್ಯಾತವಾಗಿ ಬಿದ್ದಿದ್ದರು. ವಜ್ರದಂಷ್ಟ್ರನು ನೋಡುತ್ತಿರುವಾಗಲೇ ವಾನರಸೈನ್ಯವು ಅನೇಕ ರಾಕ್ಷಸಸೈನ್ಯವನ್ನು ಮುರಿದು ಕೊಲ್ಲುತಿದ್ದುವು! ಮಹಾಪರಾಕ್ರಮಿಯಾದ ವಜ್ರದಂಷ್ಟ್ರನು ತನ್ನ ರಾಕ್ಷಸಸೈನ್ಯವೆಲ್ಲವೂ ವಾನರರಿಂದ ಹತವಾಗಿ. ಅಲ್ಲಲ್ಲಿ ಕೆಲವರು ಭಯಗೊಂಡಿರುವುದನ್ನು ನೋಡಿ, ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ, ತನ್ನ ಭಯಂಕರವಾದ ಧನುಸ್ಸನ್ನು ಕೈಗೆತ್ತಿಕೊಂಡು, ವಾನರಸೈನ್ಯವನ್ನು ಹೆದರಿಸುತ್ತ ಮುಂದೆ ನುಗ್ಗಿದನು. ಹದ್ದಿನ ಗರಿಗಳುಳ್ಳ ತೀಕ್ಷ್ಣಬಾಣಗಳನ್ನು ಸೆಳೆದು ಅಲ್ಲಲ್ಲಿ ವಾನರರನ್ನು ಹೊಡೆಯುತಿದ್ದನು. ಒಂದೊಂದೇ ಬಾಣಪ್ರಹಾರದಿಂದ, ಆ ವಾನರಸೈನ್ಯದಲ್ಲಿ ಒಮ್ಮೊಮ್ಮೆ ಏಳುಮಂದಿಯಂತೆಯೂ, ಎಂಟುಮಂದಿಯಂತೆಯೂ, ಒಂಭತ್ತುಮಂದಿಯಂತೆಯೂ, ಐದುಮಂದಿಯಂತೆಯೂ ಕೊಂದು ಕೆಡಹುತ್ತಬಂದನು. ಈ ವಜ್ರದಂಷ್ಟ್ರನ ಬಾಣಹತಿಯಿಂದ ಅಲ್ಲಲ್ಲಿ ಕೆಲವು ವಾನರರು ಕತ್ತರಿಸಿದ ತಲೆಯುಳ್ಳವರಾಗಿ ಕೆಳಗೆ ಬೀಳುತಿದ್ದರು. ಉಳಿದ ಕೆಲವು ವಾನರರು ಗುಂಪುಗುಂಪಾಗಿ ಹೊರಟು,ಪ್ರಜೆಗಳು ಬ್ರಹ್ಮನಲ್ಲಿ ಮರೆಹುಗುವಂತೆ ಅಂಗದನ ಸಮೀಪಕ್ಕೆ ಬಂದು ಅವನನ್ನಾಶ್ರಯಿಸಿದರು. ಆಗ ವಾಲಿಪುತ್ರನಾದ ಅಂಗದನು ತನ್ನ ಸೈನ್ಯಕ್ಕೆ ಸಂಭವಿಸಿದ ಭಂಗವನ್ನು ನೋಡಿ ಕೋಪಗೊಂಡು, ತನ್ನನ್ನೇ ಇದಿರುನೋಡುತಿದ್ದ ವಜ್ರದಂಷ್ಟ್ರನನ್ನು ತಾನೂ ಕೋಪದಿಂದ ದುರುದುರನೆ ನೋಡಿದನು. ಕೊನೆಗೆ ವಾನರರಾಕ್ಷಸ ಸೇನಾಪತಿಗಳಾದ ಅಂಗದನಿಗೂ, ವಜ್ರ

ದಂಷ್ಟ್ರನಿಗೂ ದೊಡ್ಡಯುದ್ಧಕ್ಕೆ ಮೊದಲಾಯಿತು. ಇಬ್ಬರಿಗೂ ಮೇಲೆ ಮೇಲೆ ಕೋಪವು ಹೆಚ್ಚುತಿತ್ತು. ಸಿಂಹವೂ, ಆನೆಯೂ ಹೋರಾಡುವಂತೆ ಇಬ್ಬರೂ ಕಲಹಕ್ರೀಡೆಯನ್ನು ತೊಡಗಿದರು.ಇಷ್ಟರಲ್ಲಿ ಬಲಾಢ್ಯನಾದ ವಜ್ರದಂಷ್ಟ್ರನು, ಆನೆಯನ್ನು ಅಂಕುಶದಿಂದ ತಿವಿಯುವಂತೆ ಸಾವಿರಬಾಣಗಳನ್ನು ಅಂಗದನ ಮರ್ಮಸ್ಥಾನಗಳಿಗೆ ಗುರಿಯಿಟ್ಟುಹೊಡೆದನು. ಇದರಿಂದ ಅಂಗದನ ಸರ್ವಾಂಗಗಳಲ್ಲಿಯೂ ರಕ್ತವು ಕಿತ್ತುಕೊಂಡಿತು. ಆಗ ಬಲಾಢ್ಯನಾಗಿಯೂ, ಭಯಂಕರಪರಾಕ್ರಮವುಳ್ಳವನಾಗಿಯೂ ಇದ್ದ ಅಂಗದನು, ಅಷ್ಟೊಂದು ಬಾಣಪ್ರಯೋಗಗಳನ್ನೂ ಲಕ್ಷ್ಯಮಾಡದೆ, ಒಂದುದೊಡ್ಡಮರವನ್ನು ಕಿತ್ತುತಂದು, ವಜ್ರದಂಷ್ಟ್ರನಮೇಲೆ ಬೀಸಿದನು. ವಜ್ರದಂಷ್ಟ್ರನು ತನಗಿದಿರಾಗಿ ಬರುತಿದ್ದ ಆ ದೊಡ್ಡ ವೃಕ್ಷವನ್ನುನೋಡಿಯೂ, ಧೈರ್ಯವನ್ನುಬಿಡದೆ, ತನ್ನ ಬಾಣಗಳಿಂದ ಆ ವೃಕ್ಷವನ್ನು ಸಹಸ್ರಭಾಗಗಳಾಗಿ ಖಂಡಿಸಿ ನೆಲಕ್ಕೆ ಕೆಡಹಿದನು. ಅಂಗದನು ವಜ್ರದಂಷ್ಟ್ರನ ಈ ಅದ್ಭುತ ಪರಾಕ್ರಮವನ್ನು ನೋಡಿ ವಿಸ್ಮಯಪಡುತ್ತ, ಬೇರೊಂದುದೊಡ್ಡಪರ್ವತವನ್ನೆತ್ತಿಕೊಂಡು ಬಂದು, ವಜ್ರದಂಷ್ಟ್ರನಕಡೆಗೆ ಬಿಸುಟು, ದೊಡ್ಡ ಸಿಂಹನಾದವನ್ನೂಮಾಡಿದನು.ಈಪರ್ವತವು ತನಗಿದಿರಾಗಿ ಬರುವುದನ್ನುನೋಡಿ ವಜ್ರದಂಷ್ಟ್ರನು, ಅದು ತನ್ನಮೇಲೆ ಬೀಳುವಷ್ಟರಲ್ಲಿಯೇ ಗದೆಯನ್ನು ಕೈಗೆತ್ತಿಕೊಂಡು ರಥದಿಂದ ಹಾರಿ ನೆಲದಮೇಲೆ ನಿಂತನು. ಇಷ್ಟರಲ್ಲಿ ಅಂಗದನು ಮುಂದೆನುಗ್ಗಿ,ವಜ್ರದಂಷ್ಟ್ರನ ಕೈಯಲ್ಲಿದ್ದ ಗದೆಯನ್ನು ಕಿತ್ತುಕೊಂಡು, ಅದರಿಂದಲೇ ಅವನ ರಥವನ್ನು,ಅದರಚಕ್ರಗಳೊಡನೆಯೂ, ಅದರಮೂಕಿಯೊಡನೆಯೂ,ಅದರ ಕುದುರೆಗಳೊಡನೆಯೂ ತುಂಡುತುಂಡಾಗಿಬೀಳುವಂತೆ ಹೊಡೆದು ಕೆಡಹಿದನು. ಆಮೇಲೆ ವೀರನಾದ ಅಂಗದನು ವೃಕ್ಷಗಳಿಂದ ತುಂಬಿದ ಬೇರೊಂದು ದೊಡ್ಡಪರ್ವತವನ್ನು ಕಿತ್ತುತಂದು, ವಜ್ರದಂಷ್ಟ್ರನ ತಲೆಯಮೇಲೆ ಬೀಸಿದನು. ಇದರ ಪ್ರಹಾರದಿಂದ ವಜ್ರದಂಷ್ಟ್ರನು ರಕ್ತವನ್ನು ಕಾರುತ್ತಮೂರ್ಛಿತನಾದನು.ಮುಹೂರ್ತಕಾಲದವರೆಗೆ ಪ್ರಜ್ಞೆಯಿಲ್ಲದೆ ನಿಟ್ಟುಸಿರುಬಿಡುತ್ತ, ತಾನು ಹಿಡಿದಿದ್ದ ಬೇರೊಂದು ಗದೆಯನ್ನು ಊರಿದಂತೆಯೇ ಸ್ತಬ್ಧನಾಗಿದ್ದನು. ಕ್ಷಣಕಾಲದಲ್ಲಿಯೇ ಆ ರಾಕ್ಷಸನು ಮೂರ್ಛೆತಿಳಿದವನಾಗಿ, ಆ ಗದೆಯನ್ನೆತ್ತಿಕೊಂಡು ಕೋಪದಿಂದ ಮುಂದೆ

ಬಂದು, ಅಂಗದನ ಎದೆಯನ್ನು ಪ್ರಹರಿಸಿದನು. ಕೊನೆಗೆ ವಜ್ರದಂಷ್ಟ್ರನು ಆ ಗದೆಯನ್ನೂ ಬಿಸುಟು, ಅಂಗದದೊಡನೆ ಮುಷ್ಟಿಯುದ್ಧವನ್ನಾರಂಭಿಸಿದನು. ಆ ವಾನರರಾಕ್ಷಸರಿಬ್ಬರೂ ಒಬ್ಬರನ್ನೊಬ್ಬರು ಬಹಳಕ್ರೂರವಾಗಿ ಪ್ರಹರಿಸುತಿದ್ದರು. ಪರಸ್ಪರಪ್ರಹಾರಗಳಿಂದ ಇಬ್ಬರ ದೇಹದಲ್ಲಿಯೂ ರಕ್ತವು ಕಿತ್ತುಕೊಂಡಿತು. ಇಬ್ಬರಿಗೂ ಬಳಲಿಕೆಯುಂಟಾಯಿತು. ಇಬ್ಬರೂ ರಕ್ತದಿಗ್ಧಗಾತ್ರರಾಗಿ ಅಂಗಾರಕಬುಧಗ್ರಹಗಳಂತೆ ಕಾಣುತಿದ್ದರು. ಆಮೇಲೆ ಮಹಾತೇಜಸ್ವಿಯಾಗಿಯೂ, ಕಪಿಶ್ರೇಷ್ಠನಾಗಿಯೂ ಇದ್ದ ಅಂಗದನು, ಅನೇಕಪುಷ್ಪಫಲಗಳಿಂದ ತುಂಬಿದ ಒಂದುದೊಡ್ಡ ವೃಕ್ಷವನ್ನೆತ್ತಿಕೊಂಡು ಯುದ್ಧಕ್ಕೆ ನಿಂತನು.ಹಾಗೆಯೇ ವಜ್ರದಂಷ್ಟ್ರನೂ ಒಂದುದೊಡ್ಡ ವೃಕ್ಷವನ್ನು ಹಿಡಿದು ನಿಂತನು!ಆದರಿಂದ ಇಬ್ಬರೂಸ್ವಲ್ಪಹೊತ್ತಿನವರೆಗೆ ಯುದ್ಧವನ್ನು ನಡೆಸಿದಮೇಲೆ, ಅಂಗದನು ವೃಷಭಚರ್ಮದಿಂದ ಮಾಡಿದ ಬಂದುಗುರಾಣಿಯನ್ನೂ, ಕಿರುಗಂಟೆಗಳಿಂದ ಕೂಡಿ ಉತ್ತಮವಾದ ಚರ್ಮದ ಚೀಲದಲ್ಲಿಡಲ್ಪಟ್ಟ ಒಂದು ದೊಡ್ಡ ಕತ್ತಿಯನ್ನೂ ಹಿಡಿದು ನಿಲ್ಲಲು, ವಜ್ರದಂಷ್ಟ್ರನೂ ಹಾಗೆಯೇ ಕತ್ತಿಯನ್ನೂ, ಗುರಾಣಿಯನ್ನೂ ಕೈಗೆತ್ತಿಕೊಂಡನು. ಹೀಗೆ ವಾನರರಾಕ್ಷಸರಿಬ್ಬರೂ ಒಬ್ಬರನ್ನೊಬ್ಬರು ಜಯಿಸಬೇಕೆಂಬ ಹಟದಿಂದ ನಾನಾರೀತಿಯಲ್ಲಿ ಯುದ್ಧಮಾಡುತ್ತ, ಸ್ವಲ್ಪಮಾತ್ರವೂ ಕರುಣೆಯಿಲ್ಲದೆ ಒಬ್ಬರನ್ನೊಬ್ಬರು ಪ್ರಬಲವಾಗಿ ಹೊಡೆಯುತಿದ್ದರು.ಅವರಿಬ್ಬರೂ ರಕ್ತವನ್ನು ಕಾರುವ ಗಾಯಗಳಿಂದ ತುಂಬಿದ ಮೈಯುಳ್ಳವರಾಗಿ, ಪುಷ್ಪಿತಗಳಾದ ಮುತ್ತುಗದ ಮರಗಳಂತೆ ಕಾಣಿಸುತಿದ್ದರು. ಇಬ್ಬರೂ ಬಹಳಹೊತ್ತಿನವರೆಗೆ ಯುದ್ಧಮಾಡಿ, ಕೊನೆಗೆ ಬಳಲಿ, ನೆಲದ ಮೇಲೆ ಮಂಡಿಯನ್ನೂರಿ ಕುಳಿತರು. ನಿಮಿಷಮಾತ್ರದಲ್ಲಿಯೇ ಕಪಿಶ್ರೇಷ್ಠನಾದ ಅಂಗದನು ಕೋಪದಿಂದ ಕೆಂಪೇರಿದ ಮೈಯುಳ್ಳವನಾಗಿ, ಕೋಲಿನಿಂದ ಕೆಣಕಿದ ಸರ್ಪದಂತೆ ಮೇಲೆದ್ದು ನಿಂತು, ಚೆನ್ನಾಗಿ ಸಾಣೆಯಿಕ್ಕೆ ಕೊಳೆಯಿಲ್ಲದೆ ಹೊಳೆಯುತ್ತಿರುವ ಒಂದು ಖಡ್ಗದಿಂದ ವಜ್ರದಂಷ್ಟ್ರನ ತಲೆ

---

1 ಧೂಮ್ರಾಕ್ಷನು ಹತನಾದ ಮರುದಿನದಲ್ಲಿ ಎಂದರೆ, ತೃತೀಯಾತಿಥಿಯಲ್ಲಿ ವಜ್ರದಂಷ್ಟ್ರನ ವಧೆಯೆಂದು ತಿಳಿಯಬೇಕು.

ಯನ್ನು ಕತ್ತರಿಸಿಕೆಡಹಿದನು. ಸರ್ವಾಂಗಗಳಲ್ಲಿಯೂ ರಕ್ತವು ಸುರಿಯುತ್ತಿರಲು, ಆ ವಜ್ರದಂಷ್ಟ್ರನ ತಲೆಯು ಅವನ ದೇಹದಿಂದ ಬೇರೆಯಾಗಿ ರೋಷದಿಂದ ತಿರುಗುವ ಕಣ್ಣಾಲಿಗಳೊಡನೆ ಕೆಳಗೆ ಬಿದ್ದಿತು. ವಜ್ರದಂಷ್ಟ್ರನು ಹತನಾದುದನ್ನು ನೋಡಿ ಅಲ್ಲಿದ್ದ ಸಮಸ್ತರಾಕ್ಷಸರಿಗೂ ಮನಸ್ಸಿನಲ್ಲಿ ಭಯವು ಹುಟ್ಟಿತು. ಅವರೆಲ್ಲರೂ ಭಯದಿಂದ ಮೈತಿಳಿಯದೆ ನಾನಾಕಡೆಗಳಲ್ಲಿಯೂ ವಾನರರಿಂದ ಪ್ರಹರಿಸಲ್ಪಡುತ್ತ, ದೈನ್ಯದಿಂದ ಬಾಡಿದ ಮುಖವುಳ್ಳವರಾಗಿ, ನಾಚಿಕೆಯಿಂದ ತಲೆಯೆತ್ತಲಾರದೆ, ಹಿಂತಿರುಗಿ ಲಂಕೆಗೆ ಪಲಾಯನಮಾಡಿದರು. ಇತ್ತಲಾಗಿ ಮಹೇಂದ್ರಪರಾಕ್ರಮವುಳ್ಳ ಬಲಾಢ್ಯನಾದ ಅಂಗದನು, ವಜ್ರದಂಷ್ಟ್ರನನ್ನು ಕೊಂದುದಕ್ಕಾಗಿ ಸಮಸ್ತವಾನರಸೈನ್ಯದಿಂದಲೂ ಪೂಜಿಸಲ್ಪಡುತ್ತ, ದೇವತೆಗಳ ನಡುವೆ ನಿಂತ ದೇವೇಂದ್ರನಂತೆ ಆ ದೊಡ್ಡವಾನರಸೈನ್ಯದ ಮಧ್ಯದಲ್ಲಿ ಪರಮಸಂತೋಷದಿಂದಿದ್ದನು. ಇಲ್ಲಿಗೆ ಐವತ್ತುನಾಲ್ಕನೆಯಸರ್ಗವು.

---

**ರಾವಣಾಜ್ಞೆಯಿಂದ ಅಕಂಪನನು ಲಂಕೆಯ ಪಶ್ಚಿಮದ್ವಾರಕ್ಕೆ ಬಂದು, ಅಲ್ಲಿದ್ದ ಹನುಮಂತನೊಡನೆ ಯುದ್ಧಮಾಡಿದುದು.**

ವಜ್ರದಂಷ್ಟ್ರನು ಅಂಗದನಿಂದ ಹತನಾದುದನ್ನು ಕೇಳಿ ರಾವಣನು ತನ್ನ ಮುಂದೆ ಕೈಮುಗಿದು ನಿಂತಿದ್ದ ಬಲಾಢ್ಯನಾದ ಪ್ರಹಸ್ತನನ್ನು ನೋಡಿ “ಎಲೆ ಸೇನಾಪತೀ! ಈಗಲೇ ನೀನು ಭಯಂಕರಪರಾಕ್ರಮದಿಂದ ದುರ್ಜಯರಾದ ಕೆಲವು ರಾಕ್ಷಸಯೋಧರನ್ನು ಕರೆಸಿ, ಸರ್ವಶಸ್ತ್ರನಿಪುಣನಾದ ಅಕಂಪನನನ್ನು ಮುಂದಿಟ್ಟುಕೊಂಡು ಯುದ್ಧಕ್ಕೆ ಹೊರಡುವಂತೆ ನಿಯಮಿಸು! ಆ ಅಕಂಪನನಲ್ಲಿ ನನಗೆ ಸಂಪೂರ್ಣವಾದ ಭರವಸವುಂಟು. ಅವನು ಯುದ್ಧದಲ್ಲಿ ಆಶತ್ರುಗಳೆಲ್ಲರನ್ನೂ ಅಡಗಿಸಬಲ್ಲನು ತನ್ನ ಸೇನೆಗೂ ಅಪಾಯವಿಲ್ಲದೆ ರಕ್ಷಿಸಿಕೊಳ್ಳಬಲ್ಲನು. ಸೇನೆಯನ್ನು ನಡೆಸುವುದರಲ್ಲಿಯೂ ಸಮರ್ಥನು! ಅನೇಕಯುದ್ಧಗಳಲ್ಲಿ ಪ್ರಸಿದ್ಧಿಹೊಂದಿದವನು. ಯಾವಾಗಲೂ ನನಗೆ ಮನಃಪೂರ್ವಕವಾಗಿ ಹಿತವನ್ನು ಕೋರತಕ್ಕವನು. ಯುದ್ಧದಲ್ಲಿಯೂ

ಮಹೋತ್ಸಾಹವುಳ್ಳವನು. ಎಂತಹ ಶತ್ರುಗಳನ್ನಾದರೂ ನಿಗ್ರಹಿಸದೆಬಿಡು ವವನಲ್ಲ. ಅವನು ಸಂದೇಹವಿಲ್ಲದೆ, ಆ ರಾಮಲಕ್ಷ್ಮಣರನ್ನೂ, ಬಲಾಢ್ಯನೆನಿಸಿಕೊಂಡ ಸುಗ್ರೀವವನ್ನೂ ಜಯಿಸಿ, ಭಯಂಕರರಾದ ಇತರವಾನರರನ್ನೂ ಕೊಂದು ಬರುವನು. " ಎಂದನು. ಈ ರಾವಣಾಜ್ಞೆಯನ್ನು ಕೇಳಿದೊಡನೆ ಪ್ರಹಸ್ತನು ಆ ರಾಜಾಜ್ಞೆಯಂತೆಯೇ ಶೀಘ್ರದಲ್ಲಿ ಸೇನೆಗಳನ್ನು ಸಿದ್ಧಪಡಿಸಿದನು. ಬಲಾಧ್ಯಕ್ಷನಾದ ಪ್ರಹಸ್ತನ ಆಜ್ಞೆಯಂತೆ ಅನೇಕವೀರ ರಾಕ್ಷಸರು, ವಿವಿಧಾಯುಧಗಳನ್ನು ಹಿಡಿದು, ಭಯಂಕರವಾದ ಆಕಾರದಿಂದಲೂ,ಘೋರಸ್ವರೂಪವುಳ್ಳ ಕಣ್ಣುಗಳಿಂದಲೂ ಕೂಡಿ,ಪಟ್ಟಣದಿಂದ ಯುದ್ಧಕ್ಕಾಗಿ ಹೊರಟರು.ಆಗಮೇಘದಂತೆ ದೊಡ್ಡ ದೇಹವುಳ್ಳವನಾಗಿಯೂ, ಕಾಳಮೇಘದಂತೆ ಕಪ್ಪುಮೈಯುಳ್ಳವನಾಗಿಯೂ, ಮೇಘಧ್ವನಿಯಂತೆ ಮಹಾಧ್ವನಿಯುಳ್ಳವನಾಗಿಯೂ ಇದ್ದ ಅಕಂಪನನು, ಉತ್ತಮಗಳಾದ ಸುವರ್ಣಕುಂಡಲಗಳನ್ನು ಧರಿಸಿ,ದೊಡ್ಡರಥವನ್ನೇರಿ ಅನೇಕರಾಕ್ಷಸರಿಂದ ಪರಿವೃತನಾಗಿ ಸೇನೆಯಮುಂದೆ ಹೊರಟನು. ಆ ಅಕಂಪನನ ಅಸಾಧಾರಣವೀರ್ಯವನ್ನು ಹೇಳಬೇಕಾದುದೇನು ? ಯುದ್ಧದಲ್ಲಿ ದೇವತೆಗಳಾದರೂ ಅವನನ್ನು ಕದಲಿಸಲಾರರು! ಇದರಿಂದಲೇ ಆತನಿಗೆ ಅಕಂಪನನೆಂಬ ಹೆಸರು ಬಂದಿರುವುದು. ಆ ರಾಕ್ಷಸಸೇನೆಯ ಮಧ್ಯದಲ್ಲಿ ಅವನು ತನ್ನ ತೇಜಸ್ಸಿನಿಂದ ಸೂರ್ಯನಂತೆ ಜ್ವಲಿಸುತ್ತಿರುವನು. ಹೀಗೆ ಎಣೆಯಿಲ್ಲದವೀರ್ಯದಿಂದಲೂ, ಪರಾಕ್ರಮದಿಂದಲೂ ಪ್ರಸಿದ್ಧನಾದ ಆ ಅಕಂಪನನು, ಯುದ್ಧಾತುರದಿಂದ ರಥವನ್ನೇರಿ ಬರುತಿದ್ದಾಗ, ನಡುದಾರಿಯಲ್ಲಿ ಆತನಿಗೂ ಅಲ್ಲಲ್ಲಿ ದುಶ್ಶಕುನಗಳು ಕಾಣಿಸಲಾರಂಭಿಸಿದುವು. ಅವನ ರಥವನ್ನೆಳೆಯುತಿದ್ದ ಕುದುರೆಗಳಮುಖದಲ್ಲಿ ಅಕಸ್ಮಿಕವಾಗಿ ದೈನ್ಯವು ತೋರಿತು. ಅಕಂಪನನ ಎಡದಕಣ್ಣು ಇದ್ದಕ್ಕಿದ್ದಹಾಗೆ ಅದಿರಿತು. ಅವನ ಮುಖವರ್ಣವು ಕಂದಿತು. ಅವನ ಕಂಠಸ್ವರವು ಕುಗ್ಗಿತು. ಇವನು ಹೊರಡುವುದಕ್ಕೆಮೊದಲು ಅತ್ಯಂತಪ್ರಕಾಶವಿಶಿಷ್ಟವಾಗಿ ಕಾಣುತಿದ್ದ ಹಗಲು, ಅಕಸ್ಮಾತ್ತಾಗಿ ಭಯಂಕರವಾದ ಬಿರುಗಾಳಿಯಿಂದ ಮೋಡಮುಚ್ಚಿ ಕತ್ತಲೆಕವಿದಂತಾಯಿತು. ದಾರಿಯಲ್ಲಿ ಮೃಗಪಕ್ಷಿಗಳೆಲ್ಲವೂ ಭಯಂಕರಧ್ವನಿಯಿಂದ ಕೂಗಿಡುತಿದ್ದುವು. ಸಿಂಹದಂತೆ ಉಬ್ಬಿದಹೆಗಲುಳ್ಳವನಾಗಿಯೂ, ಹೆಬ್ಬುಲಿಯಂತೆ ಪರಾಕ್ರಮವುಳ್ಳವನಾಗಿಯೂ ಇದ್ದ ಅಕಂ

ಪನನು,ಈ ಉತ್ಪಾತಗಳನ್ನು ತನ್ನ ಕಣ್ಣಾರೆ ನೋಡಿಯೂ ಲಕ್ಷ್ಯಮಾಡದೆ, ರಣರಂಗಕ್ಕೆ ಹೋದನು. ಹೀಗೆ ಅವನು ಅನೇಕರಾಕ್ಷಸರೊಡನೆ ಯುದ್ಧಕ್ಕೆ ಹೊರಟುಬಂದಾಗ,ಇವನಕಡೆಯ ರಾಕ್ಷಸರು ಮಾಡಿದ ದೊಡ್ಡಸಿಂಹನಾದ ಧ್ವನಿಯು ಸಮುದ್ರವನ್ನೇ ಕಪಲಿಸುವಂತೆ ಕೇಳಿಸುತಿತ್ತು. ಈ ರಾಕ್ಷಸರ ಕೋಲಾಹಲವನ್ನು ಕೇಳಿದಮಾತ್ರದಲ್ಲಿಯೇ ವಾನರರ ಮನಸ್ಸಿನಲ್ಲಿ ಭಯವು ಹುಟ್ಟಿತು. ಈ ರಾಕ್ಷಸಸೈನ್ಯವನ್ನು ನೋಡುವುದಕ್ಕೆಮೊದಲೇ ಸಮಸ್ತ ವಾನರರೂ, ಗಿಡಗಳನ್ನೂ, ಬೆಟ್ಟಗಳನ್ನೂ ಕೈಗೆತ್ತಿಕೊಂಡು ಯುದ್ಧಕ್ಕೆ ಸಿದ್ಧರಾಗಿನಿಂತಿದ್ದರು. ಇತ್ತಲಾಗಿ ರಾಮನ!ನಿಮಿತ್ತವಾಗಿಯೂ, ಅತ್ತಲಾಗಿ ರಾವಣನನಿಮಿತ್ತವಾಗಿಯೂ, ತಮ್ಮ ಪ್ರಾಣವನ್ನಾದರೂ ಒಪ್ಪಿಸುವುದ ಕ್ಕೆ ಸಿದ್ಧರಾಗಿದ್ದ ವಾನರಿಗೂ, ರಾಕ್ಷಸರಿಗೂ ಬಹಳ ಭಯಂಕರವಾದ ಯುದ್ಧವು ಮೊದಲಾಯಿತು. ಆ ವಾನರರಾಕ್ಷಸರಿಬ್ಬರೂ ಸಮಬಲವುಳ್ಳವ ರು. ಇಬ್ಬರೂ ಸಮಾನಶೌರ್ಯವುಳ್ಳವರು. ಇಬ್ಬರೂ ಪರ್ವತದಂತೆ ಮಹಾ ಕಾಯವುಳ್ಳವರು. ಹೀಗೆ ಬಲವೀರ್ಯಾದಿಗಳಲ್ಲಿ ಸಮಾನರಾದ ಈ ವಾನರ ರಾಕ್ಷಸರಿಬ್ಬರೂ, ಒಬ್ಬರನ್ನೊಬ್ಬರು ಕೊಲ್ಲಬೇಕೆಂಬ ಹಟದಿಂದ ಘೋರ ಯುದ್ಧವನ್ನು ನಡೆಸಿದರು. ಅತಿಬಲಾಢ್ಯರಾದ ಈ ಎರಡುಪಕ್ಷದವರೂ ಆ ಯುದ್ಧಕಾಲದಲ್ಲಿ ಆಗಾಗ ನಡೆಸುತಿದ್ದ ಸಿಂಹನಾದಧ್ವನಿಗಳೂ, ಒ ಬ್ಬರನ್ನೊಬ್ಬರು ಸೋದಿದಾದ ಕೋಪದಿಂದ ಬೊಬ್ಬಿಡುವ ಧ್ವನಿಗಳೂ, ಬಹಳ ಪ್ರಬಲವಾಗಿ ಕೇಳಿಸಿತು. ಈ ಎರಡು ಸೈನ್ಯಗಳ ಸಂಚಾರದಿಂದ ಮೇಲಿದ್ದ ಕೆಂಧೂಳಿಯು, ಅತ್ಯಂತಭಯಂಕರವಾಗಿ ಹತ್ತುದಿಕ್ಕುಗಳನ್ನೂ ಮರೆಸುವಂತೆ ವ್ಯಾಪಿಸಿತು. ಬೀಳಿಪಟ್ಟೆಯ ದುಕೂಲದಂತೆ ಅಲ್ಲಲ್ಲಿ ಬಿಳು ಪಾಗಿ ಹಬ್ಬಿದ ಧೂಳಿಯಿಂದ, ಅಲ್ಲಿನ ಸಮಸ್ತ ಪ್ರಾಣಿಗಳೂ ಮರೆಸಿದಂ ತಾಗಿ, ಆ ಯುದ್ಧಭೂಮಿಯಲ್ಲಿ ಒಬ್ಬರನ್ನೊಬ್ಬರು ತಿಳಿಯುವುದೇ ಅಸಾಧ್ಯ ವಾಯಿತು. ಆ ಯುದ್ಧಭೂಮಿಯೆಲ್ಲವೂ ಹೀಗೆ ಧೂಳಿಯಿಂದ! ಮುಚ್ಚಿಹೋ ದಾಗ, ಅಲ್ಲಿನ ಧ್ವಜಗಳಾಗಲಿ, ಪತಾಕೆಗಳಾಗಲಿ, ಯುದ್ಧಕವಚಗಳಾಗಲಿ, ರಥಾಶ್ವಗಳಾಗಲಿ, ರಥಗಳಾಗಲಿ, ಆಯುಧಗಳಾಗಲಿ ಸ್ವಲ್ಪಮಾತ್ರವೂ ಕಾಣುತ್ತಿರಲಿಲ್ಲ. ಆ ತುಮುಲಯುದ್ಧದಲ್ಲಿ ವಾನರರಾಕ್ಷಸರಿಬ್ಬರೂ, ಒಬ್ಬರ ಮೇಲೊಬ್ಬರು ಬಿಳುವ ಸಂಭ್ರಮದಲ್ಲಿ,ಆಗಾಗ ಬೊಬ್ಬೆಯಿಡುತಿದ್ದ ಸಿಂಹ

ನಾದಧ್ವನಿಯೊಂದುಮಾತ್ರವೇ ಬಹಳಪ್ರಬಲವಾಗಿ ಕೇಳಿಸುತಿತ್ತೇ ಹೊರ ತು,ಇತರವಸ್ತುಗಳೊಂದೂ ಕಣ್ಣಿಗೆ ಗೋಚರಿಸುತ್ತಿರಲಿಲ್ಲ. ಹೀಗೆ ಆ ರಣ ರಂಗದ ಸಮಸ್ತಭಾಗಗಳೂ ಕೆಂಧೂಳಿಯಿಂದ ಕತ್ತಲೆಕವಿದಂತಾಗ ಲು, ಅಲ್ಲಲ್ಲಿ ಕೆಲವು ವಾನರರು ಕೋಪಾವೇಶಪರವಶರಾಗಿ, ತಮ್ಮವರೆಂಬು ದನ್ನೂ ತಿಳಿಯದೆ, ತಮ್ಮ ಕಡೆಯ ವಾನರರನ್ನೇ ಬಡಿದು ಕೊಲ್ಲುತಿದ್ದರು. ಹಾಗೆಯೇ ರಾಕ್ಷಸರೂ ತಮ್ಮ ಕಡೆಯ ರಾಕ್ಷಸರನ್ನೇ ಪ್ರಹರಿಸಿ ಸಂಹರಿ ಸುತಿದ್ದರು. ಹೀಗೆ ವಾನರರಾಕ್ಷಸರಿಬ್ಬರೂ ಕೆಂದೂಳಿಯ ಕತ್ತಲೆಯಿಂದ ಕಣ್ಣುಕಾಣದೆ, ಕೈಗೆ ಸಿಕ್ಕಿದ ಹಾಗೆಲ್ಲಾ ತಮ್ಮವರನ್ನೂ, ಶತ್ರುಗಳನ್ನೂ ಕೊಲ್ಲುತ್ತ, ಆ ಯುದ್ಧಭೂಮಿಯೆಲ್ಲವನ್ನೂ ಕ್ಷಣಮಾತ್ರದಲ್ಲಿ ಕೇವಲರ ಕ್ತಮಯವನ್ನಾಗಿ ಮಾಡಿದರು. ಇದರಮೇಲೆ ಈ ಸೈನಿಕರ ಕಾಲಿನ ತುಳಿತ ದಿಂದ ಆ ರಕ್ತಪ್ರವಾಹವೆಲ್ಲವೂ ಅಲ್ಲಲ್ಲಿ ಕೆಸರು ಗಟ್ಟಿತು. ವಿಶೇಷ ವಾದ ಈರಕ್ತಪ್ರವಾಹದಿಂದ ನೆಲದಿಂದೆದ್ದ ಧೂಳಿಯು ಕ್ರಮಕ್ರಮವಾಗಿ ತಗ್ಗುತ್ತ ಬಂದಿತು. ಅಲ್ಲಿನ ಸಮಸ್ತ ಭೂಪ್ರದೇಶವೂ ಕೇವಲ ಶವಶರೀರ ಗಳಿಂದಲೇ ತುಂಬಿಹೋಯಿತು. ವಾನರರಾಕ್ಷಸರಿಬ್ಬರೂ, ವೃಕ್ಷಗಳಿಂದ ಲೂ, ಶಕ್ತಿಗಳಿಂದಲೂ, ಶಿಲೆಗಳಿಂದಲೂ, ಪ್ರಾಸಗಳಿಂದಲೂ, ಗದೆಗಳಿಂದ ಲೂ, ಪರಿಘುಗಳಿಂದಲೂ, ತೋಮರಗಳಿಂದಲೂ ಒಬ್ಬರಿಗೊಬ್ಬರು ಬಹಳ ಸಾಹಸದಿಂದ ಹೊಡೆದಾಡುತಿದ್ದರು. ಪರ್ವತಾಕಾರವುಳ್ಳ ಮತ್ತು ಭಯಂ ಕರಕರ್ಮಿಗಳಾದ ಕೆಲವು ವಾನರರು,ದೊಡ್ಡ ಬಾಗಿಲಗುಳಿಗಳಂತಿದ್ದ ತಮ್ಮ ಭುಜಗಳಿಂದ ಅಲ್ಲಲ್ಲಿ ಸಿಕ್ಕಿದ ರಾಕ್ಷಸರನ್ನು ಬಡಿದು ಕೊಂದರು. ಹಾಗೆಯೇ ರಾಕ್ಷಸರೂ ಮಹಾಕೋಪವುಳ್ಳವರಾಗಿ, ಪ್ರಾಸತೋಮರಾದ್ಯಾಯುಧಗ ಳನ್ನೆತ್ತಿ ಹಿಡಿದು, ಅತಿತೀಕ್ಷ್ಣಗಳಾದ ಆ ಮಹಾಯುಧಗಳಿಂದ ವಾನರರನ್ನು ವಧಿಸುತಿದ್ದರು.ಹೀಗೆ ಆರಾಕ್ಷಸರು ತೋರಿಸುತಿದ್ದ ಭಯಂಕರಸಾಹಸವನ್ನು ಸೇನಾಪತಿಯಾದ ಅಕಂಪನನುನೋಡಿ, ಅವರ ವೀರ್ಯಕ್ಕೆ ಮೆಚ್ಚಿ, ಅವರನ್ನು ಮನ್ನಿಸಿ ಮೇಲೆಮೇಲೆ ಪ್ರೋತ್ಸಾಹಿಸುತ್ತ, ತಾನೂ ಮೇಲೆಮೇಲೆ ಕೋಪ ದಿಂದುಕ್ಕುತಿದ್ದನು. ಇತ್ತಲಾಗಿ ವಾನರವೀರರೂ ಕೂಡ ಅಲ್ಲಲ್ಲಿ ರಾಕ್ಷಸರ ನ್ನಿದಿರಿಸಿ, ಅವರ ಕೈಗಳಲ್ಲಿದ್ದ ಆಯುಧಗಳನ್ನು ಕಿತ್ತುಕೊಂಡು, ದೊಡ್ಡ ದೊಡ್ಡ ಮರಗಳಿಂದಲೂ, ಕಲ್ಲುಗಳಿಂದಲೂ ಅವರನ್ನು ಬಡಿದು ಕೆಡಹು

ತಿದ್ದರು. ಇಷ್ಟರಲ್ಲಿ ಕುಮುದನಳಮೈಂದದ್ವಿವಿದರೆಂಬ ನಾಲ್ಕುಮಂದಿ ವಾನರವೀರರು, ಆ ರಾಕ್ಷಸರ ಹಾವಳಿಯನ್ನು ನೋಡಿ ಕೋಪಗೊಂಡವರಾಗಿ, ಮಹಾವೇಗವನ್ನು ಹಿಡಿದು ಮುಂದೆ ನುಗ್ಗಿದರು. ಮಹಾವೀರ್ಯವುಳ್ಳ ಈ ನಾಲ್ಕುಮಂದಿ ವಾನರಯೂಥಪತಿಗಳೂ, ರಾಕ್ಷಸರ ಸೇನಾಮುಖವನ್ನು ಸೇರಿ, ದೊಡ್ಡದೊಡ್ಡ ಮರಗಳನ್ನು ಹಿಡಿದು ಲೀಲಾಮಾತ್ರದಿಂದಲೇ ದೊಡ್ಡಯುದ್ಧವನ್ನು ನಡೆಸಿದರು. ಈ ನಾಲ್ವರೂ ರಾಕ್ಷಸಸೇನೆಯಲ್ಲಿ ನುಗ್ಗಿ,ಗುಂಪುಗುಂಪಾಗಿ ರಾಕ್ಷಸರನ್ನು ಹಿಡಿದು ಕೊಲ್ಲುತಿದ್ದರು.ಇಲ್ಲಿಗೆ ಐವತ್ತೈದನೆಯ ಸರ್ಗವು.

---

## ಅಕಂಪನನು ಹನುಮಂತನಿಂದ ಹತನಾದುದು.

ಈ ವಾನರೋತ್ತಮರು ಹೀಗೆ ರಾಕ್ಷಸಸೈನ್ಯಕ್ಕೆ ನುಗ್ಗಿ ದೊಡ್ಡ ಸಾಹಸವನ್ನು ನಡೆಸುತ್ತಿರುವುದನ್ನು ನೋಡಿ, ಅಕಂಪನನು ಅತ್ಯಾಕ್ರೋಶವನ್ನು ಹೊಂದಿದನು. ಶತ್ರುಗಳ ಹಾವಳಿಯನ್ನುನೋಡಿ ಕೋಪಪರವಶನಾದ ಆ ಅಕಂಪನನು,ತನ್ನ ಮಹಾಧನುಸ್ಸನ್ನು ಮಿಡಿಯುತ್ತ, ತನ್ನ ಸಾರಥಿಯನ್ನು ಕುರಿತು, ‘‘ಎಲೆ ಸೂತನೆ ! ಅದೋ! ಅತ್ತಲಾಗಿ ಅನೇಕವಾನರರು ಸೇರಿ ನಮ್ಮ ಕಡೆಯ ರಾಕ್ಷಸರನ್ನು ತಂಡತಂಡವಾಗಿ ಕೊಲ್ಲುತ್ತಿರುವರು. ಶೀಘ್ರದಲ್ಲಿ ಅಲ್ಲಿಗೆ ರಥವನ್ನು ನಡೆಸು! ಆ ವಾನರರೆಲ್ಲರೂ ಬಹಳ ಭಯಂಕರ ಸ್ವರೂಪವುಳ್ಳವರು! ಬಹಳ ಬಲಾಢ್ಯರು! ಗಿಡಗಳನ್ನೂ, ಬೆಟ್ಟಗಳನ್ನೂ ಆಯುಧಗಳನ್ನಾಗಿ ಹಿಡಿದು, ನಮಗಿದಿರಾಗಿ ನಿಂತಿರುವರು. ಯುದ್ಧವಿಶಾರದರೆಂದು ಪ್ರಸಿದ್ಧಿಹೊಂದಿದ ಆ ಸಮಸ್ತವಾನರರನ್ನೂ ನಾನು ಈಗಲೇ ಕೊಲ್ಲಬೇಕೆಂದಿರುವೆನು. ಇವರಿಂದ ನಮ್ಮ ಸಮಸ್ತರಾಕ್ಷಸಸೈನ್ಯವೂ ಹತವಾದಂತೆ ಕಾಣುತ್ತಿದೆ. ರಥವನ್ನು ಬೇಗನೆ ನಡೆಸು ” ಎಂದನು. ರಥಿಕೋತ್ತಮನಾದ ಅಕಂಪನನು ಹೀಗೆಂದು ಹೇಳಿ, ಮಹಾವೇಗವುಳ್ಳ ಕುದುರೆಗಳಿಂದ ಹೂಡಿದ ತನ್ನ ರಥವನ್ನು ನಡೆಸಿಕೊಂಡು ಬಂದು, ಕೋಪದಿಂದ ಬಾಣಪರಂಪರೆಗಳನ್ನು ಕರೆಯುತ್ತ, ಅನೇಕ ವಾನರರನ್ನು ಕೊಲ್ಲುತ್ತ ಬಂದನು. ಆಗವಾನರರಿಗೆ ಅವನಮುಂದೆ ನಿಲ್ಲುವುದೇ ಸಾಧ್ಯವಿಲ್ಲದೆಹೋ

ಯಿತು. ಇನ್ನು ಅವನೊಡನೆ ಯುದ್ಧಮಾಡುವುದೆಂತಲೇನು ? ಸಮಸ್ತವಾನ
ರರೂ ಅಕಂಪನನ ಬಾಣಗಳಿಂದ ನೊಂದು, ಚೆಲ್ಲಾಚದರಾಗಿ ಓಡುವುದ
ಕ್ಕಾರಂಭಿಸಿದರು. ಹೀಗೆ ತನ್ನಕಡೆಯ ವಾನರರು ಅಕಂಪನನ ಕೈಗೆ ಸಿಕ್ಕಿ
ಮೃತ್ಯುವಶರಾಗುತ್ತಿದ್ದುದನ್ನುನೋಡಿ, ಮಹಾಬಲಾಢ್ಯನಾದ ಹನುಮಂತ
ನು ಆ ರಾಕ್ಷಸರನನ್ನು ತಡೆಯುವುದಕ್ಕಾಗಿ ಮುಂದೆಬಂದನು. ಈ ಮಹಾ
ಕಪಿಯು ತಮಗೆ ಸಹಾಯಕನಾಗಿ ಮುಂದೆಬಂದುದನ್ನು ನೋಡಿ, ಆ ವಾನ
ರವೀರರೂಕೂಡ, ಸಂತೋಷಗೊಂಡವರಾಗಿ, ಎಲ್ಲರೂ ಹಿಂತಿರುಗಿ ಬಂದು
ಗುಂಪುಗೂಡಿ,ಹನುಮಂತನನ್ನು ಸುತ್ತಿನಿಂತರು.ಬಲಾಢ್ಯನಾದ ಆಹನುಮಂ
ತನು ತಮಗೆ ಬೆಂಬಲವಾಗಿ ಮುಂದೆಬಂದು ನಿಂತುದನ್ನುನೋಡಿದೊಡನೆ
ಅಲ್ಲಿದ್ದ ಸಮಸ್ತವಾನರಯೂಥಪತಿಗಳಿಗೂ ಮೊದಲಿನ್ನ ಬಲವು ಇಮ್ಮಡಿ
ಯಾದಂತೆ ತೋರಿತು. ಇಷ್ಟರಲ್ಲಿ ಅಕಂಪನನು ತನ್ನಮುಂದೆ ಬೆಟ್ಟದಂತೆ
ನಿಂತಿದ್ದ ಹನುಮಂತನನ್ನುನೋಡಿ, ಇಂದ್ರನು ಪರ್ವತಗಳಮೇಲೆ ಮಳೆಯ
ನ್ನು ಸುರಿಸುವಂತೆ, ಅವನಮೇಲೆ ಬಾಣವರ್ಷಗಳನ್ನು ಕರೆದನು. ಮಹಾಬ
ಲಾಢ್ಯನಾದ ಹನುಮಂತನಾದರೋ,ತನ್ನಮೈಮೇಲೆಬೀಳುತಿದ್ದ ತೀಕ್ಷ್ಣಬಾ
ಣಗಳನ್ನೂ ಲಕ್ಷ್ಯಮಾಡದೆ ಅಕಂಪನನನ್ನುಕೊಲ್ಲಬೇಕೆಂದು ಮನಸ್ಸಿನಲ್ಲಿ
ನಿರ್ಧರಿಸಿಕೊಂಡನು. ಆಕ್ಷಣವೇ ಮಹಾತೇಜಸ್ವಿಯಾಗಿಯೂ ವಾಯುಪು
ತ್ರನಾಗಿಯೂ ಇರುವ ಹನುಮಂತನು ನೆಲವನ್ನು ನಡುಗಿಸುವಂತೆ, ವೇಗ
ದಿಂದ ಕಾಲಿಡುತ್ತ, ಆ ರಾಕ್ಷಸನಿಗಿದಿರಾಗಿ ಬಂದನು. ತೇಜಸ್ಸಿನಿಂದ ದೇದೀ
ಪ್ಯಮಾನನಾಗಿ, ಆಗಾಗ ಸಿಂಹನಾದಮಾಡುತಿದ್ದ ಈ ಹನುಮಂತನ ರೂ
ಪವು ಆಗ ಮಧ್ಯಾಹ್ನದ ಸೂರ್ಯನ ತೇಜಸ್ಸಿನಂತೆ ನೋಡಲಸಾಧ್ಯವಾಗಿತ್ತು.
ಅತಿಕೋಪಾವಿಷ್ಟನಾದ ಹನುಮಂತನು ಆಗ ತನ್ನಕೈಯಲ್ಲಿಯಾವ ಆಯುಧ
ವೂ ಇಲ್ಲದುದನ್ನುನೋಡಿ, ಸಮೀಪದಲ್ಲಿದ್ದ ಒಂದುಬೆಟ್ಟವನ್ನು ಕೈಗೆತ್ತಿ
ಕೊಂಡನು. ಹೀಗೆ ಆ ವಾಯುಪುತ್ರನು ಒಂದೇಕೈಯಿಂದ ಆ ದೊಡ್ಡಬೆ
ಟ್ಟವನ್ನು ಮೇಲಕ್ಕೆತ್ತಿಹಿಡಿದು, ಮಹಾಧ್ವನಿಯಿಂದಸಿಂಹನಾದಮಾಡುತ್ತ,
ಅದನ್ನು ಗಿರಗಿರನೆ ತಿರುಗಿಸಿದನು. ಹಾಗೆಯೇ ಆ ಆಂಜನೇಯನು, ನಮುಚಿ
ಯೆಂಬ ದಿರಿಸುವುದಕ್ಕಾಗಿ ವಜ್ರಾಯುಧವನ್ನೆತ್ತಿಕೊಂಡು ಬರುವ ಮಹೇಂ
ದ್ರನಂತೆ, ಆ ಮಹಾಪರ್ವತವನ್ನು ಕೈಯಿಂದ ತಿರುಗಿಸುತ್ತ, ರಾಕ್ಷಸಸೇನಾ

ಪತಿಯಾದ ಅಕಂಪನನಮೇಲೆ ನುಗ್ಗಿದನು. ಅಕಂಪನನಾದರೋ ಹೀಗೆ ದೊಡ್ಡ ಬೆಟ್ಟವನ್ನು ಹಿಡಿದು ತನ್ನಮೇಲೆ ನುಗ್ಗಿಬರುತಿಪ್ಪ ಹನುಮಂತನನ್ನು ದೂರದಿಂದಲೇ ಕಂಡು, ಆ ಕ್ಷಣವೇ ಅರ್ಧಚಂದ್ರಬಾಣಗಳನ್ನು ಪ್ರಯೋಗಿಸಿ, ಆ ಹನುಮಂತನು ಹಿಡಿದಿದ್ದ ಬೆಟ್ಟವನ್ನು ತುಂಡುತುಂಡಾಗಿ ಕೆಡಹಿದನು. ಆಗ ಹನುಮಂತನು ತಾನು ಮೇಲಕ್ಕೆತ್ತಿ ಹಿಡಿದಿದ್ದ ಪರ್ವತಶಿಖರವು ಅಂತರಿಕ್ಷದಲ್ಲಿಯೇ ರಾಕ್ಷಸನ ಬಾಣದಿಂದ ಭಿನ್ನವಾಗಿ ಬಿದ್ದುದನ್ನು ನೋಡಿ ಅತ್ಯಾಕ್ರೋಶವನ್ನು ಹೊಂದಿದನು. ಹೀಗೆ ಕೋಪಗೊಂಡ ಹನುಮಂತನು ಆಗಲೂ ತನ್ನ ದರ್ಪವನ್ನು ಬಿಡದೆ, ವೇಗದಿಂದ ಹೋಗಿ, ಸಮೀಪದಲ್ಲಿ ಬೆಟ್ಟದಂತೆ ಮಹೋನ್ನತವಾಗಿ ಬೆಳೆದಿದ್ದ ಒಂದು ಆಲದ ಮರವನ್ನು ಕಿತ್ತುಕೊಂಡನು. ದೊಡ್ಡದೊಡ್ಡ ಶಾಖೆಗಳಿಂದ ಕೂಡಿದ ಆ ವೃಕ್ಷವನ್ನೆತ್ತಿ ಮಹೋತ್ಸಾಹದಿಂದ ಕೂಡಿದವನಾಗಿ, ಅದನ್ನು ಗಿರಗಿರನೆ ತಿರುಗಿಸುತ್ತ, ತನ್ನ ತೊಡೆಯ ವೇಗದಿಂದಲೇ ಸಮೀಪದಲ್ಲಿದ್ದ ಇತರವೃಕ್ಷಗಳೆಲ್ಲವೂ ಮುರಿದು ಬೀಳುವಂತೆಯೂ, ತನ್ನ ಕಾಲಿನ ತುಳಿತಕ್ಕೆ ಭೂಮಿಯು ಭೇದಿಸುವಂತೆಯೂ ಮಹಾವೇಗದಿಂದ ಅಕಂಪನನನ್ನಿದಿರಿಸಿ ಮುಂದೆ ಹೋದನು. ಹೀಗೆ ಹನುಮಂತನು ಕೋಪದಿಂದ ಮುಂದೆ ಹೋಗುವಾಗಲೇ ಅಲ್ಲಲ್ಲಿ ಸಿಕ್ಕಿದ ಆನೆಗಳನ್ನೂ, ಆನೆಗಳಮೇಲೆ ಕುಳಿತಿದ್ದ ಮಾವುತರನ್ನೂ, ಅಲ್ಲಲ್ಲಿ ಸಿಕ್ಕಿದ ರಥಗಳನ್ನೂ, ರಥಾರೂಢರಾಗಿದ್ದ ರಥಿಕರನ್ನೂ, ತನಗಿದಿರಾಗಿ ನಿಂತಿದ್ದ ಪದಾತಿಗಳನ್ನೂ, ಕ್ರಮಕ್ರಮವಾಗಿ ಕೊಂದು ಕೆಡಹುತ್ತಬಂದನು. ಕೋಪಗೊಂಡ ಕಾಲಾಂತಕನಂತೆ ಆ ಯುದ್ಧಭೂಮಿಯಲ್ಲಿ ರಾಕ್ಷಸಸೈನ್ಯವನ್ನು ಕೊಂದು ಕೆಡಹುತಿದ್ದ ಆ ಹನುಮಂತನನ್ನು ನೋಡಿ ರಾಕ್ಷಸರೆಲ್ಲರಿಗೂ ಭಯವು ಹುಟ್ಟಿತು. ಅನೇಕರಾಕ್ಷಸರು ಇವನಮುಂದೆ ನಿಲ್ಲಲಾರದೆ ಭಯದಿಂದ, ಪಲಾಯನಮಾಡುತಿದ್ದರು. ಇಷ್ಟರಲ್ಲಿ ರಾಕ್ಷಸವೀರನಾದ ಅಕಂಪನನು ತನ್ನ ಕಡೆಯ ರಾಕ್ಷಸರೆಲ್ಲರೂ ಭಯದಿಂದ ಪಲಾಯನಮಾಡುತ್ತಿರುವುದನ್ನೂ, ಹನುಮಂತನು ಕೋಪದಿಂದ ಮುಂದೆ ಬರುವುದನ್ನೂ ನೋಡಿ, ಅತ್ಯಾಕ್ರೋಶವನ್ನು ಹೊಂದಿದವನಾಗಿ ದೊಡ್ಡ ಸಿಂಹನಾದವನ್ನು ಮಾಡಿದನು. ಒಡನೆಯೇ ಆ ಅಕಂಪನನು ಮರ್ಮಭೇದಕಗಳಾದ ಹದಿನಾಲ್ಕುತೀಕ್ಷ್ಣಬಾಣಗಳಿಂದ ಹನುಮಂತನನ್ನು ಪ್ರಹರಿಸಿದನು. ಹನುಮಂತನ ದೇಹದಲ್ಲಿ ಪರಂ

ಪರೆಯಾಗಿ ಬಾಣಗಳು ಬಂದು ನಾಟಲು, ಅನೇಕವೃಕ್ಷಗಳಿಂದ ತುಂಬಿದ ದೊಡ್ಡ ಪರ್ವತದಂತೆ ಕಾಣುತಿದ್ದನು. ಮಹಾಕಾಯವುಳ್ಳವನಾಗಿಯೂ, ಮಹಾವೀರ್ಯವುಳ್ಳವನಾಗಿಯೂ, ಮಹಾಧೈರ್ಯಶಾಲಿಯಾಗಿಯೂ ಇದ್ದ ಆ ಹನುಮಂತನು ಅಕಂಪನನ ಬಾಣಗಳಿಂದ ನಾಟಿದ ದೇಹವುಳ್ಳವನಾಗಿ ಪುಷ್ಪಿತವಾದ ಮುತ್ತುಗದಮರದಂತೆಯೂ, ಹೊಗೆಯಿಲ್ಲದೆ ಉರಿಯುತ್ತಿರುವ ಅಗ್ನಿಹೋತ್ರನಂತೆಯೂ ಕಾಣಿಸಿದನು. ಆಮೇಲೆ ವೀರನಾದ ಹನುಮಂತನು, ಮಿತಿಮೀರಿದ ತನ್ನ ವೇಗವನ್ನವಲಂಬಿಸಿ, ಮತ್ತೊಂದು ದೊಡ್ಡಮರವನ್ನು ಕಿತ್ತುತಂದು, ಅದರಿಂದ ರಾಕ್ಷಸನಸೇನಾಪತಿಯಾದ ಆ ಅಕಂಪನನ ತಲೆಯಮೇಲೆ ಪ್ರಹರಿಸಿದನು. ಮಹಾತ್ಮನಾಗಿಯೂ, ವಾನರೋತ್ತಮನಾಗಿಯೂ ಇದ್ದ ಆ ಹನುಮಂತನು, ವೃಕ್ಷದಿಂದ ಪ್ರಹರಿಸಿದೊಡನೆಯೇ, ಅಕಂಪನನು ಅದರಿಂದ ಹತನಾಗಿ ಸತ್ತು ನೆಲಕ್ಕೆಬಿದ್ದನು. ಈ ರಾಕ್ಷಸಶ್ರೇಷ್ಠನಾದ ಅಕಂಪನನು ಹನುಮಂತನಿಂದ ಹತನಾಗಿಬಿದ್ದುದನ್ನು ನೋಡಿ,ಅಲ್ಲಿದ್ದ ಸಮಸ್ತರಾಕ್ಷಸರಿಗೂ ಮಹಾಭಯವು ಹುಟ್ಟಿತು. ಭೂಕಂಪವುಂಟಾದಾಗ ಭೂಮಿಯ ಮೇಲಿನವೃಕ್ಷಗಳೆಲ್ಲವೂ ನಡುಗುವಂತೆ, ಎಲ್ಲರೂ ಭಯದಿಂದ ಗಡಗಡನೆ ನಡುಗುತಿದ್ದರು. ಎಲ್ಲರ ಮನಸ್ಸಿಗೂ ಮಹಾವ್ಯಥೆಯುಂಟಾಯಿತು. ಆ ರಾಕ್ಷಸರೆಲ್ಲರೂ ಹೀಗೆ ಪರಾಜಯವನ್ನು ಹೊಂದಿ, ತಾವು ಹಿಡಿದಿದ್ದ ಆಯುಧಗಳನ್ನು ಅಲ್ಲಲ್ಲಿಯೇ ಬಿಸುಟು,ಅಲ್ಲಲ್ಲಿ ತಮ್ಮನ್ನು ಬೆನ್ನಟ್ಟಿ ಬರುತಿದ್ದ ವಾನರರ ಹಾವಳಿಯನ್ನು ತಡೆಯಲಾರದೆ,ಲಂಕೆಗೆ ಹಿಂತಿರುಗಿ ಓಡಿಹೋದರು. ಹೀಗೆ ಪರಾಜಿತರಾಗಿ ಓಡುತಿದ್ದ ಆ ರಾಕ್ಷಸರ ದುರವಸ್ಥೆಯನ್ನು ಕೇಳಬೇಕೆ? ಆ ರಾಕ್ಷಸರೆಲ್ಲರೂ ತಾವು ಬದುಕಿದರೆ ಸಾಕೆಂದು ದಿಕ್ಕುದಿಕ್ಕಿಗೆ ಪಲಾಯನಮಾಡುವಾಗ, ಒಬ್ಬೊಬ್ಬರೂ,ಬಿಚ್ಚಿದ ತಲೆಕೂದಲುಳ್ಳವರಾಗಿದ್ದರು. ಒಬ್ಬೊಬ್ಬರೂ ಭಯದಿಂದ ತಡಬಡಿಸುತಿದ್ದರು. ಒಬ್ಬೊಬ್ಬರ ಮೈಯಲ್ಲಿಯೂ ಬೆವರು ಕಿತ್ತುಕೊಂಡಿತು. ಒಬ್ಬೊಬ್ಬರೂ ನಿಟ್ಟುಸಿರನ್ನು ಬಿಡುತ್ತ ಮಾನದಮೇಲೆಯೂ ದೃಷ್ಟಿಯಿಲ್ಲದೆ,ಒಬ್ಬರನ್ನೊಬ್ಬರು ನೂಕಿಕೊಂಡು ಪಲಾಯನಮಾಡುತಿದ್ದರು.ಮತ್ತು ಆ ರಾಕ್ಷಸರು ತಮ್ಮನ್ನು ಬೆನ್ನಟ್ಟಿ ಬರುತಿದ್ದ ವಾನರರನ್ನು ಆಗಾಗ ಹಿಂತಿರುಗಿನೋಡುತ್ತ,ತಮ್ಮ ಮೈಮೇಲೆ ಪ್ರಜ್ಞೆಯಿಲ್ಲದೆ ಓಡಿದರು. ಹೀಗೆ ರಾಕ್ಷಸರೆಲ್ಲರೂ

ಭಯದಿಂದ ಪಲಾಯನಮಾಡಿ ಲಂಕೆಯನ್ನು ಸೇರಿದ ಮೇಲೆ,ಇತ್ತಲಾಗಿ ಬಲಾಢ್ಯರಾದ ಸಮಸ್ತವಾನರರೂ ಸೇರಿ ಹನುಮಂತನನ್ನು ಬಹಳವಾಗಿ ಪೂಜಿಸಿದರು. ಬಲಾಢ್ಯನಾದ ಹನುಮಂತನೂ ಕೂಡ ಅವರ ಸತ್ಕಾರಕ್ಕೆ ಸಂತೋಷಪಟ್ಟವನಾಗಿ ಅವರನ್ನು ಕುರಿತು “ಎಲೆ ಮಿತ್ರರೆ! ನಿಮ್ಮ ಸಾಹಾಯ್ಯದ ಬಲದಿಂದಲೇ ನನಗೆ ಈ ಜಯವುಂಟಾಯಿತೇ ಹೊರತು ಬೇರೆಯಲ್ಲ." ಎಂದು ಹೇಳಿ, ಅವರೆಲ್ಲರನ್ನೂ ಅವರವರ ಗೌರವಕ್ಕೆ ತಕ್ಕಂತೆ ಮನ್ನಿಸಿದನು. ಜಯಶೀಲರಾದ ಸಮಸ್ತವಾನರರೂ, ಹನುಮಂತನಿಗುಂಟಾದ ಜಯವನ್ನು ತಮ್ಮ ಸಮಸ್ತಸೈನ್ಯಕ್ಕೂ ತಿಳಿಸುವಂತೆ ತಮ್ಮ ಶಕ್ತಿಯನ್ನು ಮೀರಿ ಸಿಂಹನಾದಗಳನ್ನು ಮಾಡಿದರು. ಆ ಸಿಂಹನಾದಧ್ವನಿಯಿಂದಲೇ ಬಲಾಢ್ಯರಾದ ಅನೇಕರಾಕ್ಷಸರನ್ನು ನಡುಗಿಸುತಿದ್ದರು. ಹೀಗೆ ವಾಯುಪುತ್ರನಾದ ಆ ಮಹಾಕಪಿಯು, ಅಕಂಪನನೊಡನೆ ಅನೇಕರಾಕ್ಷಸರನ್ನು ಸಂಹರಿಸಿ, ಪೂರ್ವದಲ್ಲಿ ಭಯಂಕರನಾಗಿಯೂ, ಶತ್ರುನಾಶಕನಾಗಿಯೂ ಇದ್ದ ಕೈಟಭಾಸುರನನ್ನು ಕೊಂದ ಮಹಾವಿಷ್ಣುವಿನಂತೆ ವೀರಲಕ್ಷ್ಮೀವಿರಾಜಿತನಾಗಿ, ಆ ರಣರಂಗದಲ್ಲಿ ಶೋಭಿಸುತಿದ್ದನು. ಸಮಸ್ತ ದೇವತೆಗಳೂ ಆ ಹನುಮಂತನನ್ನು ಕೊಂಡಾಡಿ ಪೂಜಿಸುತಿದ್ದರು.ರಾಮಲಕ್ಷ್ಮಣರೂ,ಸುಗ್ರೀವಾದಿವಾನರರೂ, ಮಹಾಬಲಾಢ್ಯನಾದ ವಿಭೀಷಣನೂ ಆ ಹನುಮಂತನ ವೀರ್ಯಕ್ಕೆ ಮೆಚ್ಚಿ, ಅವನನ್ನು ಬಹಳವಾಗಿ ಪೂಜಿಸಿ ಮನ್ನಿಸಿದರು. ಇಲ್ಲಿಗೆ ಐವತ್ತಾರನೆಯ ಸರ್ಗವು.

---

## ಪ್ರಹಸ್ತನು ಯುದ್ಧಕ್ಕೆ ಹೊರಟುದು.

ರಾಕ್ಷಸೇಶ್ವರನಾದ ರಾವಣನು ಅಕಂಪನನ ವಧವನ್ನು ಕೇಳಿದೊಡನೆ ತಡೆಯಲಾರದ ಕೋಪವನ್ನು ಹೊಂದಿದನು. ಭಯದಿಂದ ಅವನ ಮುಖದಲ್ಲಿ ಸ್ವಲ್ಪವಾಗಿ ದೈನ್ಯವೂ ತೋರಿತು. ಮುಂದಿದ್ದ ತನ್ನ ಸಮಸ್ತಮಂತ್ರಿಗಳನ್ನೂ ಕಣ್ಣೆಟ್ಟುನೋಡಿದನು.ತನ್ನಲ್ಲಿ ತಾನೇ ಮುಹೂರ್ತಕಾಲದವರೆಗೆ ಚಿಂತಿಸಿದನು. ಹೀಗೆ ರಾವಣನು ಕ್ಷಣಕಾಲದವರೆಗೆ ವಿಚಾರಮಗ್ನನಾಗಿದ್ದು, ಕೊನೆಗೆ ಮಂತ್ರಿಗಳೊಡನೆ ಆಲೋಚಿಸಿ, ಮರುದಿನದ ಪ್ರಾತಃಕಾ

ಲದಲ್ಲಿ ಹಾಸಿಗೆಯಿಂದೆದ್ದೊಡನೆ ತನ್ನ ಸೇನಾವ್ಯೂಹಗಳೆಲ್ಲವನ್ನೂ ನೋಡಿ ಬರುವುದಕ್ಕಾಗಿ ಪಟ್ಟಣವನ್ನು ಸುತ್ತುವುದಕ್ಕೆ ಹೋದನು. ಹೀಗೆ ರಾವಣನು ಅರಮನೆಯಿಂದ ಹೊರಟು ಅನೇಕರಾಕ್ಷಸಸಮೂಹಗಳಿಂದ ಸುರಕ್ಷಿತವಾಗಿಯೂ, ಅನೇಕಸೇನಾವ್ಯೂಹಗಳಿಂದ ನಿಬಿಡವಾಗಿಯೂ, ಧ್ವಜಪತಾಕೆಗಳ ಸಾಲಿನಿಂದ ಶೋಭಿತವಾಗಿಯೂ ಇದ್ದ ತನ್ನ ಪಟ್ಟಣವೆಲ್ಲವನ್ನೂ ನೋಡಿದನು. ರಾಕ್ಷಸೇಶ್ವರನಾದ ಆ ರಾವಣನು ತನ್ನಪುರದಸುತ್ತಲೂ ವಾನರಸೇನೆಯು ಮುತ್ತಿನಿಂತಿರುವುದನ್ನು ನೋಡಿ ಸಹಿಸಲಾರದೆ, ಉಚಿತಕಾಲದಲ್ಲಿ ತನಗೆ ಪರಮಾಪ್ತನಾಗಿಯೂ, ಯುದ್ಧವಿಶಾರದನಾಗಿಯೂ ಇರುವ ಪ್ರಹಸ್ತನನ್ನು ಕರೆದು ಹೇಳುವನು. “ಪ್ರಹಸ್ತಾ! ನೀನಾದರೋ ಯುದ್ಧದಲ್ಲಿ ಮಹಾನಿಪುಣನು. ನಿನಗೆ ತಿಳಿಯದ ವಿಷಯವಿಲ್ಲ. ಈಗ ಶತ್ರುಸೈನ್ಯವು ಬಂದು ಅಕಸ್ಮಾತ್ತಾಗಿ ನಮ್ಮಪಟ್ಟಣವನ್ನು ಮುತ್ತಿ ಪೀಡಿಸುತ್ತಿರುವುದು. ಇದನ್ನು ತಪ್ಪಿಸುವುದಕ್ಕೆ, ಯುದ್ಧವಲ್ಲದೆ ಬೇರೆಯಾವ ಉಪಾಯವೂ ನನಗೆ ತೋರಲಿಲ್ಲ. ಈಕಾರ್ಯಭಾರವನ್ನು ಸರಿಯಾಗಿನಡೆಸಬೇಕಾದರೂ, ನಾನಾಗಲಿ ನೀನಾಗಲಿ, ನನ್ನಕುಮಾರನಾದ ಇಂದ್ರಜಿತ್ತಾಗಲಿ, ನಿಕುಂಭನಾಗಲಿ, ಇಷ್ಟುಮಂದಿಯಲ್ಲಿ ಯಾರಾದರೂ ಒಬ್ಬರು ಮುಂದೆ ನಿಲ್ಲಬೇಕೇ ಹೊರತು. [1]ಇದನ್ನು ತಪ್ಪಿಸುವುದಕ್ಕೆ ಬೇರೊಬ್ಬರಿಂದ ಸಾಧ್ಯವಿಲ್ಲ. ಆದುದರಿಂದ ಅಂತಹ ಮಹಾಬಲಸಂಪನ್ನನಾದ ನೀನೇ ಈಗತಕ್ಕಷ್ಟು ಸೈನ್ಯವನ್ನು ಸೇರಿಸಿಕೊಂಡು ಶೀಘ್ರದಲ್ಲಿಯೇ ಆ ವಾನರರಿರುವ ಸ್ಥಳಕ್ಕೆಹೋಗಿ ಜಯವನ್ನು ಹೊಂದಿಬರಬೇಕು. ಪ್ರಹಸ್ತಾ ! ನೀನು ಅಲ್ಲಿಗೆ ಹೋಗಿ ಯುದ್ಧಮಾಡಬೇಕಾದ ಅವಶ್ಯಕವೇ ಇಲ್ಲ. ಇಲ್ಲಿಂದ ನೀನು ಯುದ್ಧಸನ್ನದ್ಧನಾಗಿ ಹೊರಟಾಗ, ನಿನ್ನ ರಾಕ್ಷಸಸೈನಿಕರ ಸಿಂಹನಾದಧ್ವನಿಗಳನ್ನು ಕೇಳಿದಮಾತ್ರದಲ್ಲಿಯೇ ಸ್ವಭಾವಚಪಲನಾದ ಆವಾನರಸೈನ್ಯವೆಲ್ಲವೂಭಯದಿಂದಪಲಾಯನಮಾಡುವುದು.

---

1 ಇಲ್ಲಿ “ನಾನ್ಯಯುದ್ಧಾತ್ಪ್ರಪಶ್ಯಾಮಿ ಮೋಕ್ಷಂ ಯುದ್ಧವಿಶಾರದ” ಎಂದು ಮೂಲವು. ಇದಕ್ಕೆ “ನಾನ್ಯಂ ಯುದ್ಧಾತ್ಪ್ರಪಶ್ಯಾಮಿ” ಎಂಬ ಪಾಠಾಂತರವೂ ಉಂಟು. ಈ ಪಾಠದಲ್ಲಿ “ಯುದ್ಧವಲ್ಲದೆ ಬೇರೆ ಯಾವ ಮಾರ್ಗದಿಂದಲೂ ನಮಗೆ ಬಿಡುಗಡೆಯಿಲ್ಲವೆಂದು ನನಗೆ ತೋರುವುದು” ಎಂದು ಅರ್ಥಾಂತರವನ್ನು ಗ್ರಹಿಸಬೇಕು.

ಆ ವಾನರರೆಲ್ಲರೂ, ಸಹಜವಾಗಿಯೇ ಧೈರ್ಯವಿಲ್ಲದವರು. ಯುದ್ಧಕಾರ್ಯದಲ್ಲಿ ಚೆನ್ನಾಗಿ ಶಿಕ್ಷೆಹೊಂದದವರು. ಬಹಳ ಚಪಲಸ್ವಭಾವವುಳ್ಳವರು. ಆದುದರಿಂದ ಸಿಂಹಗರ್ಜನವನ್ನು ಕೇಳಿದ ಆನೆಗಳಂತೆ ನಿನ್ನ ಸಿಂಹನಾದವನ್ನು ಕೇಳಿದಮಾತ್ರದಲ್ಲಿಯೇ ಸಹಿಸಲಾರದೆ ಪಲಾಯನಮಾಡುವರು. ಎಲೈ! ಮಂತ್ರಿಶ್ರೇಷ್ಠನೆ! ಹಾಗೆ ವಾನರಸೈನ್ಯವೆಲ್ಲವೂ ಪಲಾಯನಮಾಡಿದ ಉತ್ತರಕ್ಷಣದಲ್ಲಿಯೇ! ರಾಮಲಕ್ಷ್ಮಣರಿಬ್ಬರೂ, ತಮಗೆ ಬೇರೆ ಸಹಾಯವಿಲ್ಲದುದಕ್ಕಾಗಿ ನಿನ್ನ ಕೈಗೆ ಸಿಕ್ಕಿಬೀಳುವರು. ಪ್ರಹಸ್ತಾ! ಒಂದುವೇಳೆ ನೀನು "ಮುಂದಿನ ಯುದ್ಧದಲ್ಲಿಯೂ ನಮಗೇ ಹಾನಿಯುಂಟಾಗಬಾರದೆ? ಜಯಾಪಜಯಗಳನ್ನು ಮೊದಲೇಹೇಗೆ ನಿರ್ಣಯಿಸಬಹುದು. ಆದುದರಿಂದ ಯುದ್ಧಮಾಡದೆ ಈಗ ತಟಸ್ಥರಾಗಿರುವುದರಲ್ಲಿ ದೋಷವೇನು?" ಎಂದು ಕೇಳುವೆಯಾ? ಹಾಗಲ್ಲ. ನಾವು ಯುದ್ಧವನ್ನುಮಾಡದೆ ತಟಸ್ಥರಾದರೂ ಶತ್ರುಗಳು ನಮ್ಮನ್ನುಸುಮ್ಮನೆಬಿಡಲಾರರು.ಅವರಿಂದ ನಮಗೆ ಮರಣವುಂಟಾಗುವುದೇ ನಿಶ್ಚಯವು.ಹಾಗಿಲ್ಲದೆ ಈಗ ನಾವು ನಮ್ಮಿಂದಸಾಧ್ಯವಾದಷ್ಟು ಪ್ರಯತ್ನಮಾಡಿ ಯುದ್ಧವನ್ನು ನಡೆಸಿದಪಕ್ಷದಲ್ಲಿ ನಮಗೆ ಮರಣವೇ ಉಂಟಾಗುವುದೋ, ಜಯವೇ ಉಂಟಾಗುವುದೋ ಎಂದು ನಿಶ್ಚಯಿಸಿ ತಿಳಿಯುವುದಕ್ಕಿಲ್ಲ. ಆದುದರಿಂದ ನಾವು ಮರಣವನ್ನುಹೊಂದಿ ಜಯಶೀಲರಾಗಿ ಬರಬಹುದೆಂಬ ಸಂದೇಹವಾದರೂ ಉಂಟು. ಈಗ ನಾವು ಯುದ್ಧವನ್ನು ನಿಲ್ಲಿಸಿದಪಕ್ಷದಲ್ಲಿ ನಿಸ್ಸಂದೇಹವಾಗಿ ಮರಣವೇ ಸಂಭವಿಸುವುದು. ಆದುದರಿಂದ ನಿಸ್ಸಂದೇಹವಾಗಿ ಸಂಭವಿಸುವ ಮರಣಕ್ಕೆ ತಲೆಯೊಡ್ಡುವುದಕ್ಕಿಂತಲೂ, ಸಂದೇಹಾಸ್ಪದವಾದ ಮರಣಕ್ಕೆ ತಲೆಯೊಡ್ಡುವುದು ಮೇಲಲ್ಲವೆ? ಆದುದರಿಂದ ಈಗ ನಾವು ಸುಮ್ಮನಿರುವುದಕ್ಕಿಂತಲೂ, ಯುದ್ಧಕ್ಕೆ ಹೊರಡುವುದೇ ಉಚಿತವು. ಇದೇ ನನ್ನಭಿಪ್ರಾಯವು. ಇದರಮೇಲೆ ಈನನ್ನ ಅಭಿಪ್ರಾಯಕ್ಕೆ ಅನುಕೂಲವಾಗಿಯೋ, ಪ್ರತಿಕೂಲವಾಗಿಯೋ ನಿನ್ನ ಮನಸ್ಸಿಗೆ ಉಚಿತವೆಂದು ತೋರಿದುದನ್ನು ನನಗೆ ತಿಳಿಸು. ಹೇಗಿದ್ದರೂ ನೀನು ನನಗೆ ಹಿತವನ್ನುಕೋರತಕ್ಕವನಾದುದರಿಂದ ನಿನ್ನ ಮನೋಭಿಪ್ರಾಯವೇ ನನಗೂ ಹಿತವಾಗುವುದು"ಎಂದನು. ರಾವಣನು ಹೇಳಿದ ಈ ಮಾತನ್ನು ಕೇಳಿ ಸೇನಾಪತಿಯಾದ ಪ್ರಹಸ್ತನು, ಶುಕ್ರಾಚಾರ್ಯನು ದೈತ್ಯೇಂದ್ರನಿಗೆ ಮಂ

ತ್ಪ್ರಾಲೋಚನೆಯನ್ನು ಹೇಳುವಂತೆ, ಅವನನ್ನು ಕುರಿತು. "ಎಲೆ ರಾಜೇಂದ್ರ ನೆ ! ಮೊದಲೇ ನಾವು ಕಾರ್ಯನಿಪುಣರಾದ ವಿಭೀಷಣಾದಿಮಂತ್ರಿಗಳೊಡನೆ ಆಲೋಚಿಸಿದ ವಿಷಯವೇಹೊರತು ಇದು ಹೊಸದಲ್ಲ. ಆ ಕಾಲದಲ್ಲಿ ನಮ್ಮ ಲ್ಲಿಯೇ ಒಬ್ಬರೊಬ್ಬರು ಒಂದೊಂದುಮತವನ್ನುಹಿಡಿದು ಭಿನ್ನಾಭಿಪ್ರಾಯ ವುಳ್ಳವರಾಗಿ, ಐಕಮತ್ಯವಿಲ್ಲದೆ ಕೊನೆಗೆ ಒಬ್ಬೊಬ್ಬರಿಗೆ ಮನಸ್ತಾಪವೂ ಹು ಟ್ಟುವಂತಾಯಿತು. ಇದರಿಂದಲ್ಲವೇ ವಿಭೀಷಣನೂ ನಮ್ಮನ್ನುಬಿಟ್ಟು ಶತ್ರು ಪಕ್ಷವನ್ನು ಸೇರಿಬಿಟ್ಟನು. ನನಗೂ ಆಗ, ಸೀತೆಯನ್ನು ರಾಮನಿಗೆ ಹಿಂತಿರು ಗಿ ಕೊಡುವುದೇ ಮೇಲೆಂದೂ, ಹಾಗಿಲ್ಲದಿದ್ದರೆ ಕಲಹಕ್ಕೆ ಕಾರಣವೆಂದೂ ಚೆನ್ನಾಗಿ ತಿಳಿತಿದ್ದಿತು.ನನ್ನ ನಿಶ್ಚಯದಂತೆಯೇ ಈಗ ಯುದ್ಧವು ಪ್ರಾಪ್ತವಾ ಗಿರುವುದನ್ನೂ ನಾವು ಕಣ್ಣಾರೆ ನೋಡುತ್ತಿರುವೆವು.ಎಲೆ ಮಹಾರಾಜನೆ!ನನ್ನ ಮತವು ಹೇಗಿದ್ದರೇನು?ಮುಖ್ಯವಾಗಿ ಇದುವರೆಗೆ ನೀನು ನನ್ನನ್ನುಭೂಷಣಾ ದಿದಾನಗಳಿಂದಲೂ,ಸಮ್ಮಾನದಿಂದಕೂಡಿದಪ್ರಿಯಭಾಷಣದಿಂದಲೂ,ಸಾಂ ತ್ವವಚನಗಳಿಂದಲೂ,ಎಷ್ಟೋವಿಧದಲ್ಲಿ ಸತ್ಕರಿಸಿರತಕ್ಕವನು.ಹೀಗೆ ನಿನ್ನಿಂದ ಅನೇಕವಿಧದಲ್ಲಿ ಸತ್ಕರಿಸಲ್ಪಟ್ಟ ನಾನು, ಈಗ ನಿನಗೆ ಕಷ್ಟಕಾಲವು ಒಂ ದೊದಗಿದಾಗ, ನಿನ್ನ ಮನಃಪ್ರೀತಿಗಾಗಿ ಯಾವ ಕಾರ್ಯವನ್ನು ತಾನೇ ಮಾ ಡಲೊಲ್ಲೆನು? ಯಾವುದನ್ನಾಜ್ಞಾಪಿಸಿದರೂ ಸಿದ್ಧನಾಗಿರುವೆನು. ಎಲೆ ರಾ ಜೇಂದ್ರನೆ! ನನಗೆ ನನ್ನ ಪ್ರಾಣಗಳಾಗಲಿ, ನನ್ನ ಮಕ್ಕಳಾಗಲಿ ,ನನ್ನ ಪತ್ನಿ ಯರಾಗಲಿ, ನನ್ನ ಧನಧಾನ್ಯಾದಿಸಮೃದ್ಧಿಗಳಾಗಲಿ ನಿನಗಿಂತಲೂ ಹೆಚ್ಚು ಪ್ರೇಮಪಾತ್ರಗಳಲ್ಲ. ನಿನ್ನನ್ನುಬಿಟ್ಟು ಅವುಗಳನ್ನು ರಕ್ಷಿಸಬೇಕಾದ ಆವಶ್ಯ ಕವೂ ನನಗಿಲ್ಲ. ಎಲೆ ಮಹಾರಾಜನೆ! ಇದೋ! ಈಗಲೇ ನಾನು ನಿನಗಾಗಿ ಯುದ್ಧವೆಂಬ ಅಗ್ನಿಕುಂಡದಲ್ಲಿ ನನ್ನಪ್ರಾಣಗಳನ್ನು ಆಹುತಿಮಾಡುವೆನು ನೋಡು" ಎಂದನು. ಸೇನಾಪತಿಯಾದ ಪ್ರಹಸ್ತನು ತನ್ನಪ್ರಭುವಾದ ರಾ ವಣನಿಗೆ ಈ ಮಾತನ್ನು ಹೇಳಿ, ಸಮೀಪದಲ್ಲಿದ್ದ ಕೆಲವು ಬಲಾಧ್ಯಕ್ಷರನ್ನು ನೋಡಿ"ಎಲೆ ಸೈನ್ಯಾಧಿಕಾರಿಗಳೆ! ಈಗಲೇ ನೀವು ದೊಡ್ಡ ರಾಕ್ಷಸಸೈನ್ಯವ ನ್ನು ಸಿದ್ಧಪಡಿಸಿಕೊಂಡು ಬನ್ನಿರಿ! ಈಗ ನಾನು ರಣರಂಗಕ್ಕೆ ಹೋಗಿ ಅಲ್ಲಿ ಸಿಡಿಲಿನಂತಿರುವ ನನ್ನ ಬಾಣಗಳ ವೇಗದಿಂದ ಸಮಸ್ತವಾನರಸೈನ್ಯವನ್ನೂ ಕೊಂದು,ಅವರ ರಕ್ತಮಾಂಸಗಳಿಂದ ಹದ್ದು,ಕಾಗೆ,ಮೊದಲಾದ ಮಾಂಸ

ಭಕ್ಷಕಗಳಾದ ಪಕ್ಷಿಗಳೆಲ್ಲಕ್ಕೂ ಔತನವನ್ನು ಮಾಡಿಸುವೆನು. ಈಗಲೇ ಆ ರ ಣಾಂಗಣದಲ್ಲಿರುವ ಮಾಂಸಭಕ್ಷಕಪ್ರಾಣಿಗಳೆಲ್ಲವೂವಾನರರ ರಕ್ತಮಾಂಸ ಗಳನ್ನು ತಿಂದು ತೇಗಿ ತೃಪ್ತಿಹೊಂದಲಿ!" ಎಂದನು. ಹೀಗೆ ಪ್ರಧಾನಸೇನಾ ಪತಿಯಾದ ಪ್ರಹಸ್ತನು ಹೇಳಿದೊಡನೆ, ಆ ಸೇನಾಧಿಕಾರಿಗಳೆಲ್ಲರೂ ಅತಿತ್ವ ರೆಯಿಂದ ಹೋಗಿ, ಅನೇಕರಾಕ್ಷಸಸೈನ್ಯಗಳನ್ನು ಸೇರಿಸಿ ತಂದು ರಾಕ್ಷಸನ ಅರಮನೆಯ ಮುಂದೆ ನಿಲ್ಲಿಸಿದರು.ಕ್ಷಣಮಾತ್ರದಲ್ಲಿ ಆ ಲಂಕೆಯೆಲ್ಲವೂ ಮದ ದಾನೆಗಳಿಂದ ತುಂಬಿದಂತೆ, ತೀಕ್ಷ್ಣಗಳಾದ ನಾನಾವಿಧಶಸ್ತ್ರಗಳನ್ನು ಧರಿ ಸಿದ ರಾಕ್ಷಸಸೈನಿಕರಿಂದ ಎಡೆಬಿಡದೆ ತುಂಬಿದಂತಾಯಿತು. ಆಗ ಯುದ್ಧಸ ನ್ನದ್ಧರಾದ ರಾಕ್ಷಸವೀರರೆಲ್ಲರೂ, ಅಗ್ನಿಹೋತ್ರಗಳಲ್ಲಿ ನಾನಾವಿಧಶಾಂತಿ ಹೋಮಗಳನ್ನು ಮಾಡುತಿದ್ದುದರಿಂದಲೂ, ಅಲ್ಲಲ್ಲಿ ಬ್ರಾಹ್ಮಣರನ್ನು ಗಂ ಧಪುಷ್ಪಾದಿಗಳಿಂದ ಸತ್ಕರಿಸುತಿದ್ದುದರಿಂದಲೂ, ಆ ಲಂಕೆಯೊಳಗಿನ ವಾ ಯುವು ಆಜ್ಯಗಂಧದಿಂದಲೂ, ಗಂಧಪುಷ್ಪಾದಿಗಳ ಸುವಾಸನೆಯಿಂದಲೂ, ಕೂಡಿ ಮನೋಹರವಾಗಿ ಬೀಸುತಿತ್ತು. ಆಗ ಯುದ್ಧಸನ್ನದ್ಧರಾದ ರಾಕ್ಷ ಸರೆಲ್ಲರೂಮಹೋತ್ಸಾಹಗೊಂಡು,ವಿಜಯಮಂತ್ರದಿಂದ ಮಂತ್ರಿತಗಳಾದ ನಾನಾವಿಧಪುಷ್ಪಮಾಲಿಕೆಗಳನ್ನು ಧರಿಸಿ,ಧನುರ್ಬಾಣಗಳನ್ನುಹಿಡಿದು,ಯು ದ್ಧಕವಚಗಳನ್ನಿಟ್ಟು,ಎಲ್ಲರೂ ಒಟ್ಟಾಗಿ ಸೇರಿ ಬಂದು, ತಮಗೆ ರಾಜನಾದ ರಾವಣನಿಗೆ ನಮಸ್ಕರಿಸಿ ಪ್ರಹಸ್ತನನ್ನು ಸುತ್ತಿನಿಂತರು. ಆಮೇಲೆ ಸೇನಾ ಪತಿಯಾದ ಪ್ರಹಸ್ತನು ಪ್ರಭುವಾದ ರಾವಣನಿಗೆ ನಮಸ್ಕರಿಸಿ, ಅ ವನ ಅನುಜ್ಞೆಯನ್ನು ಪಡೆದು, ಅತ್ತಲಾಗಿ ಭಯಂಕರವಾದ ರಣಭೇರಿಯು ನುಡಿಸಲ್ಪಡುತ್ತಿರಲು, ಸರ್ವಾಯುಧಗಳಿಂದ ಸಿದ್ಧವಾದ ತನ್ನ ದಿವ್ಯರಥವ ನ್ನೇರಿ ಕುಳಿತನು.ಅತ್ಯಂತವೇಗವುಳ್ಳ ಕುದುರೆಗಳಮೇಲೆ ಹೂಡಲ್ಪಟ್ಟು,ಉತ್ತ ಮಸಾರಥಿಯಿಂದ ಕೂಡಿಮೇಘಗರ್ಜನೆಯಂತೆ ಗಂಭೀರಧ್ವನಿಯುಳ್ಳುದಾಗಿ ದೃಢವಾಗಿದ್ದ ಆ ಪ್ರಹಸ್ತನ ರಥವು,ಚಂದ್ರನಂತೆ ಆಹ್ಲಾದಕರವಾಗಿಯೂ ಸೂರ್ಯನಂತೆ ತೇಜೋವಿಶಿಷ್ಟವಾಗಿಯೂ ಶೋಭಿಸುತಿತ್ತು. ಮತ್ತು ಮೇಲೆ ಕಟ್ಟಿದ ಅತಿದೃಢವಾದ ಸರ್ಪಧ್ವಜದಿಂದಲೂ, ಮೇಲಾದ ಮುಚ್ಚಳದಿಂ ದಲೂ,ಉತ್ತಮವಾದ ಚಕ್ರದಿಂದಲೂ, ಚಿನ್ನದ ಕಿಟಕಿಗಳಿಂದಲೂ ಕೂಡಿ ದ ಆ ರಥವು ಲೋಕದಲ್ಲಿ ಕಾಂತಿವಿಶಿಷ್ಟಗಳಾದ ಬೇರೆ ಎಲ್ಲಾವಸ್ತುಗಳ

ನ್ನೂ ತನ್ನ ಕಾಂತಿಯಿಂದ ಹಾಸ್ಯಮಾಡಿ ನಗುವಂತೆ ಕಾಣುತಿತ್ತು. ಪ್ರಹಸ್ತ ನು ರಾವಣಾಜ್ಞೆಯನ್ನು ಪಡೆದು ಆ ದಿವ್ಯರಥವನ್ನೇರಿ ಅನೇಕರಾಕ್ಷಸರ ಮ ಹಾಸೈನ್ಯದಿಂದ ಪರಿವೃತನಾಗಿ ಲಂಕೆಯಿಂದ ಹೊರಟನು. ಸೇನಾಪತಿಯಾ ದ ಆ ಪ್ರಹಸ್ತನು ರಥವನ್ನು ಮುಂದೆಬಿಟ್ಟೊಡನೆಯೇ ಮೇಘಧ್ವನಿಗಳಂತಿ ರುವ ಭೇರೀಧ್ವನಿಗಳೂ, ಇತರವಾದ್ಯಧ್ವನಿಗಳೂ, ಶಂಖಧ್ವನಿಗಳೂ, ಸಮುದ್ರ ಜಲವನ್ನು ಉಲ್ಲೋಲಕಲ್ಲೋಲವನ್ನಾಗಿ ಮಾಡುವಂತೆ ಕೇಳಿಸುತಿತ್ತು. ಪ್ರ ಹಸ್ತನರಥದಮುಂದೆ ಭಯಂಕರಸ್ವರೂಪವುಳ್ಳವರಾಗಿಯೂ, ಮಹಾಕಾಯ ವುಳ್ಳವರಾಗಿಯೂ ಇದ್ದ ಅನೇಕರಾಕ್ಷಸರುಭಯಂಕರಧ್ವನಿಯಿಂದ ಸಿಂಹನಾ ದವನ್ನು ಮಾಡುತ್ತ ನಡೆದುಬಂದರು. ನರಾಂತಕನೆಂದೂ, ಕುಂಭಹನುವೆಂ ದೂ, ಮಹಾನಾದನೆಂದೂ, ಸಮುನ್ನತನೆಂದೂ ಪ್ರಸಿದ್ಧರಾದ ಪ್ರಹಸ್ತನ ನಾಲ್ಕುಮಂತ್ರಿಗಳೂ ಅವನರಥವನ್ನು ಸುತ್ತಿಬರುತಿದ್ದರು. ಹೀಗೆ ಪ್ರಹಸ್ತ ನು, ಮದದಾನೆಗಳ ಸಮೂಹಕ್ಕೆಸಾಟಿಯಾಗಿ, ಅತಿಭಯಂಕರವಾಗಿದ್ದ ಆದೊ ಡ್ಡ ರಾಕ್ಷಸಸೈನ್ಯವನ್ನು ಬೇರೆಬೇರೆ ವ್ಯೂಹಗಳನ್ನಾಗಿ ವಿಭಾಗಿಸಿ ನಡೆಯಿಸಿ ಕೊಂಡುಬರುತಿದ್ದನು. ಎಲ್ಲರೂ ಲಂಕೆಯ ಪೂರ್ವದ್ವಾರಕ್ಕೆ ಹೊರಟುಬಂ ದರು. ಇಷ್ಟೊಂದು ಮಹಾಸೈನ್ಯದಿಂದ ಪರಿವೃತನಾಗಿ ಬರುತಿದ್ದ ಪ್ರಹ ಸ್ತನು, ಪ್ರಳಯಕಾಲದಲ್ಲಿ ಲೋಕನಾಶಕ್ಕಾಗಿ ಹೊರಟುಬರುವ ಯಮನಂ ತೆಯೇ ತೋರುತಿದ್ದನು. ಪ್ರಹಸ್ತನೂ, ಅವನನ್ನು ಸುತ್ತಿಬರುತಿದ್ದ ರಾ ಕ್ಷಸರೂ, ಆಗಾಗ ಮಾಡುವ ಸಿಂಹನಾದಧ್ವನಿಗೆ, ಲಂಕೆಯಲ್ಲಿರುವ ಸಮ ಸ್ತಜಂತುಗಳೂ ಭಯಗೊಂಡು, ವಿಕೃತಸ್ವರದಿಂದ ಕೂಗುತಿದ್ದುವು. ರಕ್ತ ಮಾಂಸಾಹಾರಿಗಳಾದ ಪಕ್ಷಿಗಳೆಲ್ಲವೂ, ಮೇಘಶೂನ್ಯವಾದ ಆಕಾಶದಲ್ಲಿ ಗುಂಪುಗೂಡಿ ಈ ಪ್ರಹಸ್ತನ ರಥವನ್ನು ಅಪಸವ್ಯವಾಗಿ (ಅಪ್ರದಕ್ಷಿಣ ವಾಗಿ) ಸುತ್ತಿಸುತ್ತಿಬರುತಿದ್ದುವು. (ಗರುಡಪಕ್ಷಿಗಳು ಅಮಂಗಳವನ್ನು ಸೂ ಚಿಸುತ್ತ ಪ್ರಹಸ್ತನ ರಥವನ್ನು ಪ್ರದಕ್ಷಿಣವಾಗಿ ಸುತ್ತಿದುವು.) ನೋಡುವ ವರಿಗೆ ಭಯವನ್ನು ಹುಟ್ಟಿಸುವಂತೆ ಮಾರ್ಗದಲ್ಲಿ ನರಿಗಳು ಬಾಯಿಂದ ಉರಿ ಯನ್ನು ಕಕ್ಕುತ್ತ ಊಳಿಡುತಿದ್ದುವು. ಆಕಾಶದಿಂದ ಉಲ್ಕೆಗಳು ಬಿದ್ದುವು. ಗಾ ಳಿಯು ಬಿರುಸಾಗಿ ಬೀಸಿತು. ಚಂದ್ರಸೂರ್ಯಾದಿಗ್ರಹಗಳೆಲ್ಲವೂ, ಪರಸ್ಪರನಿ ರೋಧಕಗಳಾಗಿ ಕಾಂತಿಗುಂದಿದ್ದುವು. ಮೇಘಗಳು ಭಯಂಕರವಾಗಿ ಧ್ವನಿ

ಮಾಡುತ್ತ, ಪ್ರಹಸ್ತನ ರಥದಮೇಲೆಯೂ, ಆ ರಥದಮುಂದಿರುವವರ ಮೇಲೆಯೂ, ರಕ್ತದ ಮಳೆಯನ್ನು ಕರೆಯುತಿದ್ದುವು. ಆ ಪ್ರಹಸ್ತನ ಧ್ವಜಾಗ್ರದಮೇಲೆ ಒಂದಾನೊಂದು ಗೃಧ್ರಪಕ್ಷಿಯು ದಕ್ಷಿಣಾಭಿಮುಖವಾಗಿ ಕುಳಿತು ತನ್ನ ಕೊಕ್ಕನ್ನು ಬಗ್ಗಿಸಿ, ತನ್ನ ರೆಕ್ಕೆಗಳೆರಡನ್ನೂ ಕೊಕ್ಕಿನಿಂದ ಕೆದರುತಿತ್ತು. ಈ ಸ್ಥಿತಿಯನ್ನು ನೋಡಿದೊಡನೆ, ಪ್ರಹಸ್ತನ ಮುಖಕಾಂತಿಯು ಕಂದಿ ಅವನ ಮುಖದಲ್ಲಿ ದೈನ್ಯವು ಕಂಡಿತು.ಇದಲ್ಲದೆ, ರಥವನ್ನು ನಡೆಸುತಿದ್ದ ಸಾರಥಿಯ ಕೈಯಿಂದ ಆಗಾಗ ಕುದುರೆಯನ್ನು ಹೊಡೆಯತಕ್ಕಚಾಟಿಯು ಜಾರಿ ಕೆಳಗೆ ಬಿಳುತಿದ್ದಿತು. ಈ ಪ್ರಹಸ್ತನು ಆಗಾಗ ಜೈತ್ರಯಾತ್ರೆಗೆ ಹೊರಟಾಗ ಅಷ್ಟವಸುಗಳಿಗೂ ದುರ್ಲಭವಾದ ಯಾವ ಮುಖಕಾಂತಿಯು ಅವನಿಗೆ ಸಹಜವಾಗಿರುತಿತ್ತೋ, ಆ ಕಾಂತಿಯೆಲ್ಲವೂ ಮುಹೂರ್ತಮಾತ್ರದಲ್ಲಿ ಕಂದಿಹೋಯಿತು. ಅವನ ಮುಖವು ಬಣ್ಣಗೆಟ್ಟಿತು. ಅವನ ಮನಸ್ಸಿನ ಉತ್ಸಾಹವೂ ಅಡಗುತ್ತಬಂದಿತು. ಅವನ ರಥಾಶ್ವಗಳು ಸಮಸ್ಥಳದಲ್ಲಿಯೂ ಕೂಡ ಆಗಾಗ ಕಾಲೆಡವಿ ಮುಗ್ಗರಿಸಿ ಬಿಳುತಿದ್ದುವು. ಬಲಪೌರುಷಗಳಿಂದ ಪ್ರಖ್ಯಾತಿಹೊಂದಿದ ಪ್ರಹಸ್ತನು ಹೀಗೆ ದೊಡ್ಡ ಸೈನ್ಯದೊಡನೆ ಬರುವುದನ್ನು ನೋಡಿ, ಇತ್ತಲಾಗಿ ಸಮಸ್ತವಾನರಸೈನಿಕರೂ ವಿವಿಧಾಯುಧಗಳನ್ನು ಧರಿಸಿ, ಯುದ್ಧೋನ್ಮುಖರಾಗಿ ನಿಂತರು. ಈ ವಾನರರು, ತಮ್ಮ ಯುದ್ಧಸಾಧನಗಳಿಗಾಗಿ, ಆತ್ಯಾತುರದಿಂದ ದೊಡ್ಡದೊಡ್ಡ ವೃಕ್ಷಗಳನ್ನೂ, ಶಿಲೆಗಳನ್ನೂ ಕಿಳುವಾಗ, ಅದರಿಂದ ಒಂದು ದೊಡ್ಡ ತುಮುಲಧ್ವನಿಯು ಹೊರಟಿತು. ಅತ್ತಲಾಗಿ ರಾಕ್ಷಸರೂ, ಇತ್ತಲಾಗಿ ವಾನರರೂ, ಮೇಲೆಮೇಲೆ ಪರಸ್ಪರಸ್ಪರ್ಧೆಯಿಂದ ಸಿಂಹನಾದಗಳನ್ನು ಮಾಡುತ್ತಿರುವಾಗ, ಒಬ್ಬರ ಧ್ವನಿಯನ್ನು ಕೇಳಿ ಮತ್ತೊಬ್ಬರಿಗೆ ಮೇಲೆಮೇಲೆ ರಣೋತ್ಸಾಹವೂ, ಸಂತೋಷವೂ ಹೆಚ್ಚುತಿತ್ತು. ವೇಗಶಾಲಿಗಳಾಗಿಯೂ, ಸಮರ್ಥರಾಗಿಯೂ ಇದ್ದ ವಾನರರಾಕ್ಷಸರಿಬ್ಬರೂ ಯುದ್ಧದಲ್ಲಿ ಪರಸ್ಪರಜಯಾಕಾಂಕ್ಷೆಯಿಂದ ಮಾಡುತಿದ್ದ ಮಹಾಧ್ವನಿಯು ಮೇಲೆಮೇಲೆ ಪ್ರಬಲವಾಯಿತು. ಹೀಗೆ ಪ್ರಹಸ್ತನು ದುರ್ಬುದ್ಧಿಯುಳ್ಳವನಾಗಿ, ವಾನರರನ್ನು ಗೆಲ್ಲಬೇಕೆಂಬ ದುರಾಸೆಯಿಂದ ಸುಗ್ರೀವನ ಸೈನ್ಯಕ್ಕಿದಿರಾಗಿ ಹೊರಟು, ಅಗ್ನಿಜ್ವಾಲೆಯಲ್ಲಿ ಬಿಳು

ವ ಶಲಭದಂತೆ ಆ ದೊಡ್ಡ ವಾನರಸೇನೆಯನ್ನು ಪ್ರವೇಶಿಸಿದನು. ಇಲ್ಲಿಗೆ ಐವತ್ತೇಳನೆಯ ಸರ್ಗವು.

---

ಪ್ರಹಸ್ತನು ನೀಲನಿಂದ ಹತನಾದುದು.

ಹೀಗೆ ಭಯಂಕರಪರಾಕ್ರಮವುಳ್ಳ ಪ್ರಹಸ್ತನು ದಂಡೆತ್ತಿಬರುವುದನ್ನು [1]ನೋಡಿ ಪರಂತಪನಾದ ರಾಮನು, ಅಂತಹ ಬಲಾಢ್ಯನಾದ ಶತ್ರುವನ್ನು ನೋಡುವುದರಿಂದುಂಟಾದ ರಣೋತ್ಸಾಹದಿಂದ ಮುಗುಳ್ನಗೆಗೂಡಿ, ಸಮೀಪದಲ್ಲಿದ್ದ ವಿಭೀಷಣನನ್ನು ಕುರಿತು, "ಎಲೆ ಮಹಾಬಾಹೂ ! ಬಹಳ ದೊಡ್ಡ ದೇಹವುಳ್ಳ ಆ ರಾಕ್ಷಸನಾವನು? ಅಪರಿಮಿತವಾದ ದೊಡ್ಡ ಸೇನೆಯನ್ನು ಕಟ್ಟಿಕೊಂಡು ಬರುವನಲ್ಲಾ ! ಅವನು ಬಹಳ ವೀರ್ಯವುಳ್ಳವನೆಂದು ತೋರುವುದು ! ಅವನ ಹೆಸರೇನು ಹೇಳು !" ಎಂದನು. ಅದಕ್ಕಾವಿಭೀಷಣನು ರಾಮನನ್ನು ಕುರಿತು. "ರಾಮಾ ! ಆ ರಾಕ್ಷಸನೇ ರಾವಣನಿಗೆ ಪ್ರಧಾನಸೇನಾಧಿಪತಿಯು ಅವನಿಗೆ ಪ್ರಹಸ್ತನೆಂದು ಹೆಸರು ! ಲಂಕೆಯಲ್ಲಿ ರಾಕ್ಷಸರಾಜನಾದ ರಾವಣನ ಸೈನ್ಯದಲ್ಲಿ ಮೂರರಲ್ಲೊಂದು ಪಾಲನ್ನು ಈಗ ಅವನು ತನ್ನೊಡನೆ ಕರೆತಂದಿರುವನು. ಇಷ್ಟು ಸೈನ್ಯವೂ ಈಗ ಅವನ ಆಜ್ಞಾಧೀನವಾಗಿ ಬಂದಿರುವುದು. ಅವನು ಬಹಳ ಬಲಾಢ್ಯನು. ಸರ್ವಾಸ್ತ್ರಗಳನ್ನೂ ತಿಳಿದವನು.ಮಹಾಶೂರನು. ಪರಾಕ್ರಮದಲ್ಲಿ ಪ್ರಸಿದ್ಧಿಹೊಂದಿದವನು"ಎಂದನು. ಇಷ್ಟರಲ್ಲಿ ಇತ್ತಲಾಗಿ ವಾನರಸೈನ್ಯವೆಲ್ಲವೂ,ಆ ಪ್ರಹಸ್ತನನ್ನು ನೋಡಿದೊಡನೆ ರೋಷದಿಂದುಕ್ಕುತ್ತ,ಮಹಾಧ್ವನಿಯಿಂದ ಗರ್ಜಿಸುತ್ತಿದ್ದುವು.ಭಯಂಕರ ಪರಾಕ್ರಮವುಳ್ಳವನಾಗಿಯೂ,ಭಯಂಕರವಾದದೊಡ್ಡ ದೇಹವುಳ್ಳವನಾಗಿಯೂ ಇದ್ದ ಆ ಪ್ರಹಸ್ತನು, ದೊಡ್ಡ ರಾಕ್ಷಸಸೇನೆಯಿಂ

---

1. ಲಂಕೆಯ ಪೂರ್ವೋತ್ತರದ್ವಾರಗಳಿಗೆ ಎಷ್ಟೋಯೋಜನಗಳ ದೂರವಿರುವಾಗ, ಉತ್ತರದ್ವಾರದಲ್ಲಿ ನಿಂತಿದ್ದ ರಾಮನು ಪೂರ್ವದ್ವಾರಕ್ಕೆ ಹೋದ ಪ್ರಹಸ್ತನನ್ನು ನೋಡಿದುದು ಹೇಗೆ ?" ಎಂದರೆ, ರಾಮನು ಈ ವಿಷಯವನ್ನು ಆಪ್ತವಾಕ್ಯದಿಂದ ಕೇಳಿದುದೇಹೊರತು ತಾನಾಗಿ ನೋಡಲಿಲ್ಲವು. ಆಪ್ತವಾಕ್ಯವನ್ನೇ ಪ್ರತ್ಯಕ್ಷಸಮಾನವಾಗಿ ತಿಳಿದು ಹೀಗೆ ಕೇಳಿದುದಾಗಿ ಗ್ರಾಹ್ಯವು.

ದ ಪರಿವೃತನಾಗಿ ಯುದ್ಧೋತ್ಸಾಹದಿಂದ ಗರ್ಜಿಸುತ್ತ ಬರುವುದನ್ನು ವಾನರರೆಲ್ಲರೂ ನೋಡುತಿದ್ದರು. ಆ ರಾಕ್ಷಸರೂ ವಾನರರನ್ನು ಜಯಿಸ ಬೇಕೆಂಬ ಆತುರದಿಂದ ಮುಂದೆ ಬರುವಾಗ, ಅವರವರು ಕೈಯಲ್ಲಿ ಹಿಡಿದಿದ್ದ ಕತ್ತಿಗಳು, ಶಕ್ತ್ಯಾಯುಧಗಳು, ಧನುರ್ಬಾಣಗಳು, ಶೂಲಗಳು, ಕಬ್ಬಿಣದೊನಕೆಗಳು, ಗದೆಗಳು, ಪ್ರಾಸಗಳು, ಪರಿಘಗಳು, ಹಲವುಬಗೆಯ ಗಂಡುಗೊಡಲಿಗಳು, ಇವೇ ಮೊದಲಾದ ಆಯುಧಗಳ! ಕಾಂತಿಯು, ದೂರದಿಂದಲೇ ಮಿಂಚುಹೊಡೆದಂತೆ ಥಳಥಳಿಸುತಿತ್ತು. ಇದನ್ನು ನೋಡಿ ಇತ್ತಲಾಗಿ ವಾನರರೂಕೂಡ ಪುಷ್ಪಿತಗಳಾದ ಗಿಡಗಳನ್ನೂ, ದೊಡ್ಡದೊಡ್ಡ ಶಿಲೆಗಳನ್ನೂ ಕಿತ್ತುಕೊಂಡು ಯುದ್ಧಕ್ಕೆ ಸಿದ್ಧರಾಗಿ ನಿಂತರು. ಹೀಗೆ ಬಹಳ ಮಂದಿ ವಾನರರೂ, ರಾಕ್ಷಸರೂ, ಯುದ್ಧಸನ್ನದ್ಧರಾಗಿ ಒಬ್ಬರನ್ನೊಬ್ಬರು ಸಮೀಪಿಸಿದಮೇಲೆ, ವಾನರರು ಶಿಲಾವರ್ಷಗಳಿಂದಲೂ, ರಾಕ್ಷಸರು ಬಾಣವರ್ಷಗಳಿಂದಲೂ. ಒಬ್ಬರಿಗೊಬ್ಬರು ಹೊಡೆದಾಡುವುದಕ್ಕೆ ತೊಡಗಿದರು. ಕ್ರಮಕ್ರಮವಾಗಿ ಯುದ್ಧವು ಪ್ರಬಲವಾಗಿ ಬಹಳ ಭಯಂಕರವಾಯಿತು. ಅನೇಕರಾಕ್ಷಸರು ಅಲ್ಲಲ್ಲಿ ಸಿಕ್ಕಿದ ಅನೇಕವಾನರರನ್ನು ಕೊಲ್ಲುತ್ತ ಬಂದರು. ಹಾಗೆಯೇ ವಾನರರೂ ಅನೇಕರಾಕ್ಷಸರನ್ನು ಕೊಲ್ಲುತ್ತ ಬಂದರು. ಕೆಲವು ರಾಕ್ಷಸಸೈನಿಕರು ವಾನರಸೈನ್ಯದಲ್ಲಿ ನುಗ್ಗಿ ಕೆಲವು ವಾನರರನ್ನು ಶೂಲಗಳಿಂದಿರಿದು ಕೊಂದರು. ಕೆಲವರನ್ನು ಚಕ್ರಾಯುಧಗಳಿಂದ ಕತ್ತರಿಸಿದರು. ಕೆಲವರನ್ನು ಪರಿಘಗಳಿಂದ ಬಡಿದರು. ಕೆಲವರನ್ನು ಕೊಡಲಿಗಳಿಂದ ಕಡಿದರು. ಹೀಗೆ ರಾಕ್ಷಸರ ಶೂಲಾದ್ಯಾಯುಧಗಳಿಗೆ ಸಿಕ್ಕಿದ ವಾನರರಲ್ಲಿ ಕೆಲವರು ಕ್ಷಣಮಾತ್ರದಲ್ಲಿಯೇ ಉಸಿರಡಗಿ ನೆಲಕ್ಕೆ ಬಿದ್ದರು. ಕೆಲವರು ಎದೆಯೊಡೆದು ಸತ್ತರು. ಕೆಲವರು ಬಾಣದಿಂದ ನಾಟಿದ ಮೈಯುಳ್ಳವರಾಗಿ ಸತ್ತುಬಿದ್ದರು. ಕೆಲವರು ಕತ್ತಿಗಳಿಂದ ಎರಡುತುಂಡಾಗಿ ಕತ್ತರಿಸಲ್ಪಟ್ಟ ದೇಹವುಳ್ಳವರಾಗಿ ಪ್ರಾಣಸಂಕಟದಿಂದ ಮಿಲಿಮಿಲಿಯಾಡಿ ಸತ್ತರು, ಕೆಲವರು ರಾಕ್ಷಸರ ಶೂಲಾಯುಧಗಳಿಂದ ಪಾರ್ಶ್ವಭಾಗಗಳಲ್ಲಿ ಕತ್ತರಿಸಲ್ಪಟ್ಟು ಕೆಳಗೆ ಬಿದ್ದರು. ಹಾಗೆಯೇ ಅತ್ತಲಾಗಿ ರಾಕ್ಷಸರೂಕೂಡ, ಅತಿಕೋಪಾವಿಷ್ಟರಾದ ವಾನರರ ಕೈಗೆ ಸಿಕ್ಕಿ, ಗಿಡಗಳಿಂದಲೂ, ಪರ್ವತಶಿಖರಗಳಿಂದಲೂ ಮುರಿದ ಮೈಯುಳ್ಳವರಾಗಿ, ಅಲ್ಲಲ್ಲಿ

ಸುತ್ತಲೂ ತಂಡತಂಡವಾಗಿ ಸತ್ತು ಚೂರ್ಣೀಭೂತರಾಗಿ ಬೀಳುತಿದ್ದರು. ಅಲ್ಲಲ್ಲಿ ವಾನರರು ಕೈಗೆ ಸಿಕ್ಕಿದ ರಾಕ್ಷಸರನ್ನು ವಜ್ರಾಯುಧದಂತೆ ಕಠಿನಗಳಾದ ಅಂಗೈಗಳಿಂದಲೂ, ಮುಷ್ಟಿಗಳಿಂದಲೂ ಅಪ್ಪಳಿಸುತ್ತಿರಲು, ಆ ರಾಕ್ಷಸರೆಲ್ಲರೂ, ವಾನರವೀರರ ಪ್ರಹಾರಕ್ಕೆ ತಡೆಯಲಾರದೆ, ಹಲ್ಲು ಮುರಿದು, ಕಣ್ಣಾಲಿಗಳು ಕಳಚಿ, ಬಾಯಿಂದ ರಕ್ತವನ್ನು ಕಾರುತ್ತ ಸತ್ತು ಕೆಳಗೆ ಬೀಳುತಿದ್ದರು. ಆ ರಣರಂಗದಲ್ಲಿ ಅಲ್ಲಲ್ಲಿ ಕೊಲ್ಲಲ್ಪಟ್ಟವರ ಆರ್ತಧ್ವನಿಯೂ, ಕೊಂದವರ ಸಿಂಹನಾದಧ್ವನಿಯೂ ಒಂದಾಗಿ ಸೇರಿ, ದೊಡ್ಡ ಕೋಲಾಹಲವು ಹೊರಟಿತು ವಾನರರಾಕ್ಷಸರಿಬ್ಬರೂ ಪರಸ್ಪರಕೋಪಾವೇಶವನ್ನು ತೋರಿಸುತ್ತ, ತಮ್ಮತಮ್ಮ ಚಾತುರ್ಯಕ್ಕೆ ತಕ್ಕಂತೆ ಯುದ್ಧವನ್ನು ನಡೆಸುತಿದ್ದರು. ಒಬ್ಬೊಬ್ಬರೂ ನಿರ್ಭಯರಾಗಿ ಶತ್ರುಗಳನ್ನಿದಿರಿಸಿ, ಕೋಪದಿಂದ ಕಣ್ಣಾಲಿಗಳನ್ನು ತಿರುಗಿಸುತ್ತ, ವಿಚಿತ್ರರೀತಿಯಿಂದ ಯುದ್ಧಕಾರ್ಯಗಳನ್ನು ನಡೆಸುತಿದ್ದರು. ಈ ನಡುವೆ ಪ್ರಹಸ್ತನ ಮಂತ್ರಿಗಳಾದ, ನರಾಂತಕ, ಕುಂಭಹನು, ಮಹಾನಾದ, ಸಮುನ್ನತರೆಂಬ ನಾಲ್ವರು ರಾಕ್ಷಸರೂ, ಅತ್ಯಾಕ್ರೋಶಗೊಂಡು, ಅಲ್ಲಲ್ಲಿ ಸಿಕ್ಕಿದ ವಾನರರನ್ನು ಸಂಹರಿಸುತ್ತ ಬಂದರು. ಹೀಗೆ ಮಹಾವೇಗದಿಂದ ವಾನರರಮೇಲೆ ಬಿದ್ದು ಅವರನ್ನು ಕೊಲ್ಲುತಿದ್ದ ಈ ಪ್ರಹಸ್ತಮಂತ್ರಿಗಳನ್ನು ನೋಡಿ ದ್ವಿವಿದನು, ಕೋಪದಿಂದ ಒಂದುಪರ್ವತಶಿಖರವನ್ನು ಕಿತ್ತುತಂದು, ಅದರಿಂದ ನರಾಂತಕನನ್ನು ಕೊಂದು ಕೆಡಹಿದನು. ಹಾಗೆಯೇ ಬಹಳವಾದ ಹಸ್ತಲಾಘವವುಳ್ಳದು ರ್ಮುಖನೆಂಬ ಕಪಿಯು ಒಂದು ದೊಡ್ಡಮರವನ್ನು ಕಿತ್ತುತಂದು, ಅದರಿಂದ ಸಮುನ್ನತನೆಂಬವನನ್ನು ಬಡಿದು ಕೆಡಹಿದನು. ತೇಜಸ್ವಿಯಾದ ಜಾಂಬವಂತನು ಒಂದು ದೊಡ್ಡ ಶಿಲೆಯನ್ನು ತಂದು ಮಹಾನಾದನೆಂಬವನ ಎದೆಗೆ ಗುರಿಯಿಟ್ಟು ಬೀಸಿ ಅವನನ್ನು ಚೂರ್ಣಮಾಡಿದನು. ತಾರನೆಂಬ ಕಪಿವೀರನು ಬಂದು ದೊಡ್ಡಮರವನ್ನು ಬೀಸಿ ಅದರಿಂದ ಕುಂಭಹನುವಿನ ತಲೆಯನ್ನು ಕತ್ತರಿಸಿ ಕೆಡಹಿದನು. ಇವೆಲ್ಲವನ್ನೂ ನೋಡಿ ರಥದಮೇಲಿದ್ದ ಪ್ರಹಸ್ತನು, ಈ ವಾನರರ ಕಾರ್ಯಕ್ಕಾಗಿ ಬಹಳಕೋಪಗೊಂಡು, ತನ್ನ ಮಹಾಧನುಸ್ಸನ್ನು ಕೈಕೆತ್ತಿಗೊಂಡು, ಭಯಂಕರವಾದ ಯುದ್ಧವನ್ನಾರಂಭಿಸಿದನು. ಆ ಮಹಾಯುದ್ಧದಲ್ಲಿ ಎರಡು ಸೇನೆಗಳಿಂದಲೂ ಹೊರಟ ದೊ

ಡ್ಡಧ್ವನಿಯು, ಪ್ರಳಯಕಾಲದಲ್ಲಿ ಕ್ಷೋಭಹೊಂದಿ ಕೊನೆಮೊದಲಿಲ್ಲದೆ ಕಾಣುತ್ತಿರುವ ಮಹಾಸಾಗರದ ಮೊರೆತದಂತೆ ಅತಿ ಭಯಂಕರವಾಗಿ ವ್ಯಾಪಿಸಿತು. ರಣಪಂಡಿತನಾದ ಪ್ರಹಸ್ತನು ಆ ಮಹಾಯುದ್ಧದಲ್ಲಿ ಅತ್ಯಾಕ್ರೋಶದಿಂದ ಎಡೆಬಿಡದೆ ಬಾಣವರ್ಷಗಳನ್ನು ಕರೆದು ಕಪಿಗಳನ್ನು ಕೊಲ್ಲುತ್ತಿದ್ದನು. ಆ ರಣರಂಗದಲ್ಲಿ ಸತ್ತುಬಿದ್ದ ಅನೇಕವಾನರರಾಕ್ಷಸರ ದೇಹಗಳೇ, ದೊಡ್ಡದೊಡ್ಡ ಪರ್ವತಗಳಂತೆ ಅಲ್ಲಿನ ಸಮಸ್ತಭೂಮಿಯನ್ನೂ ವ್ಯಾಪಿಸಿತು. ಆ ಯುದ್ಧಭೂಮಿಯ ಸಮಸ್ತಭಾಗವೂ ರಕ್ತಪ್ರವಾಹದಿಂದ ಮರೆಸಿ ಹೋಗಿರಲು, ಅಲ್ಲಿನ ಪ್ರದೇಶವೆಲ್ಲವೂ, ವಸಂತಕಾಲದಲ್ಲಿ ಪುಷ್ಪಿತಗಳಾದ ಮುತ್ತುಗದ ಮರಗಳಿಂದ ತುಂಬಿದ ವನಪ್ರದೇಶದಂತೆ ಕಾಣುತಿತ್ತು. ಆಗಿನ ಆ ಯುದ್ಧಭೂಮಿಯೇ ಒಂದು ಮಹಾನದಿಯಂತೆ ಕಾಣಿಸಿತು. ಅಲ್ಲಲ್ಲಿ ಹತರಾಗಿ ಬಿದ್ದ ವೀರರ ಶವಗಳೇ ದಡಗಳಂತಾದುವು. ರಕ್ತವೇ ಪ್ರವಾಹದಂತಾಯಿತು. ಯಕೃತ್ಪ್ಲೀಹಗಳೆಂದು ಕರೆಯಲ್ಪಡುವ ಹೃದಯಮಾಂಸಗಳೇ ಕೆಸರಿನಂತಾದುವು. ಹಾಗೆಯೇ ಕೆದರಿದ ನರಗಳೆಂಬ ಪಾಚಿಗಳಿಂದಲೂ, ಅಲ್ಲಲ್ಲಿ ತುಂಡಾಗಿ ಬಿದ್ದ, ತಲೆ, ಕೈ, ಕಾಲು ಮೊದಲಾದ ಅವಯವಗಳೆಂಬ ಮೀನುಗಳಿಂದಲೂ, ಬೆರಲು, ಕೂದಲು, ಮುಂತಾದ ಉಪಾಂಗಗಳೆಂಬ ಗರಿಕೆಗಳಿಂದಲೂ ಕೂಡಿ, ಯಮಸಾಗರವನ್ನು ಕುರಿತು ಪ್ರವಹಿಸುತ್ತಿರುವ ದೊಡ್ಡ ನದಿಯಂತೆ ತೋರುತಿತ್ತು. ಮತ್ತು ಅಲ್ಲಲ್ಲಿ ಸೇರಿದ ಹದ್ದುಗಳೇ ಹಂಸಗಣಗಳಂತೆಯೂ,ರಣಹದ್ದುಗಳೇ ಸಾರಸಗಳಂತೆಯೂ,ಮೇದಸ್ಸುಗಳೇನೊರೆಗಳಂತೆಯೂ,ಆರ್ತಧ್ವನಿಯೇಪ್ರವಾಹದ ಮೊರೆತದಂತೆಯೂ ತೋರಿಸಿತು. ಭೀರುಗಳಿಗೆ ದಾಟಲಸಾಧ್ಯವಾದ ಈ ರಣಭೂಮಿಯೆಂಬ ಮಹಾನದಿಯನ್ನು, ವಾನರರಾಕ್ಷಸರಿಬ್ಬರೂ ಸೇರಿ ನಿರ್ಮಿಸಿದುದಲ್ಲದೆ, ಮಳೆಗಾಲವು ಮುಗಿದಮೇಲೆ ಜನರು ಹಂಸಸಾರಸಾದಿ ಪಕ್ಷಿಗಳಿಂದ ತುಂಬಿದ ನದಿಯನ್ನು ದಾಟಿ ಹೋಗುವಂತೆ ಪ್ರಯತ್ನಪಟ್ಟು ದಾಟುತಿದ್ದರು. ಮದದಾನೆಗಳು ಕಮಲಧೂಳಿಯಿಂದ ತುಂಬಿದ ತಾವರೆ ಕೊಳಗಳಲ್ಲಿ ಮುಳುಗಿ ಮೇಲೆದ್ದುಬಂದಾಗ, ಅವುಗಳ ದೇಹವು ಪುಷ್ಪರೇಣುಗಳಿಂದ ಕೆಂಪೇರುವಂತೆ, ಈ ವಾನರರಾಕ್ಷಸರಿಬ್ಬರೂ ಆ ಯುದ್ಧನದಿಯನ್ನು ದಾಟಿಬರುವಾಗ,ಒಬ್ಬೊಬ್ಬರೂ ರಕ್ತದೇಹವುಳ್ಳವರಾಗಿದ್ದರು.

ಹೀಗೆ ಮಹಾಯುದ್ಧವು ನಡೆಯುತ್ತಿರುವಾಗ, ಪ್ರಹಸ್ತನು ರಥದಲ್ಲಿದ್ದು ತನ್ನ ಬಾಣಪರಂಪರೆಗಳಿಂದ ವಾನರಸೈನ್ಯವನ್ನು ಕೊಲ್ಲುತ್ತಿರಲು, ವಾನರಸೇನಾಪತಿಯಾದ ನೀಲನು ಅದನ್ನು ನೋಡಿ ಕೋಪದಿಂದುಬ್ಬಿದವನಾಗಿ, ಅವನ ಮೇಲೆ ನುಗ್ಗಿದನು. ಹೀಗೆ ನೀಲನು ಅಂತರಿಕ್ಷದಲ್ಲಿರುವ ಮೇಘಸಮೂಹಗಳಮೇಲೆ ಬಂದು ಬೀಳುವ ಬಿರುಗಾಳಿಯಂತೆ ತನ್ನ ಮೇಲೆ ನುಗ್ಗಿ ಬರುವುದನ್ನು ನೋಡಿ ರಾಕ್ಷಸಸೇನಾಪತಿಯಾದ ಪ್ರಹಸ್ತನು, ಸೂರ್ಯನಂತೆ ಹೊಳೆಯುವ ತನ್ನ ರಥವನ್ನು ಧೈರ್ಯದಿಂದ ಮುಂದೆ ಬಿಟ್ಟು ಕೊಂಡು ನೀಲನಿಗಿದಿರಾಗಿ ಬಂದನು. ಧನುರ್ಧಾರಿಗಳಲ್ಲಿ ಮೇಲೆನಿಸಿ ಕೊಂಡ ಆ ಪ್ರಹಸ್ತನು, ತನ್ನಬಿಲ್ಲನ್ನು ಆಕರ್ಣಾಂತವಾಗಿ ಎಳೆದು, ನೀಲನಮೇಲೆ ಅನೇಕಬಾಣಗಳನ್ನು ಪ್ರಯೋಗಿಸಿದನು. ಪ್ರಹಸ್ತನು ಪ್ರಯೋಗಿಸಿದ ಬಾಣಗಳೆಲ್ಲವೂ, ಕೋಪಗೊಂಡ ಕಾಲಸರ್ಪಗಳಂತೆ ವೇಗದಿಂದ ಹೊರಟು, ನೀಲನ ದೇಹವನ್ನು ಭೇದಿಸಿಕೊಂಡು ಭೂಮಿಗೂ ನಾಟಿಕೊಂಡುವು. ಅಗ್ನಿಯಂತೆ ಜ್ವಲಿಸುವ ಈ ತೀಕ್ಷ್ಣ ಬಾಣಗಳಿಂದ ಪ್ರಹರಿಸಲ್ಪಡುತ್ತಿರುವಾಗಲೂ ನೀಲನು ಅವುಗಳನ್ನು ಲಕ್ಷ್ಯಮಾಡದೆ, ಕುಪಿತನಾಗಿ, ಒಂದು ದೊಡ್ಡಮರವನ್ನು ಕಿತ್ತುಕೊಂಡು ತನಗಿದಿರಾಗಿ ಬರುತಿದ್ದ ಪ್ರಹಸ್ತನನ್ನು ಪ್ರಹರಿಸಿದನು. ರಾಕ್ಷಸಪುಂಗವನಾದ ಪ್ರಹಸ್ತನು ಈ ವೃಕ್ಷಪ್ರಹಾರದಿಂದ ನೊಂದು, ಕೋಪದಿಂದ ಸಿಂಹನಾದಮಾಡುತ್ತ, ನೀಲನಮೇಲೆ ಎಡೆಬಿಡದೆ ಬಾಣವರ್ಷಗಳನ್ನು ಕರೆಯುತ್ತಲೇ ಇದ್ದನು. ನೀಲನು ಮಹಾಬಲಾಢ್ಯನಾಗಿದ್ದರೂ,ಪ್ರಹಸ್ತನ ಬಾಣಗಳನ್ನು ಮೀರಿ ಮುಂದೆ ಹೋಗಲಸಮರ್ಥನಾಗಿ,ಶರತ್ಕಾಲದಲ್ಲಿ ಕ್ಷಣಕ್ಷಣಕ್ಕೆ ಬಂದು ಹೋಗುವ ಮಳೆಯ ಬಡಿತವನ್ನು,ವೃಷಭವು ಕಣ್ಮುಚ್ಚಿ ಸಹಿಸಿಕೊಂಡಿರುವಂತೆ, ಆ ಬಾಣವರ್ಷಗಳನ್ನು ತಾಳ್ಮೆಯಿಂದ ಕಣ್ಮುಚ್ಚಿ ಸಹಿಸುತಿದ್ದನು. ನೀಲನು ಬಹಳಧೈರ್ಯಶಾಲಿಯಾದುದರಿಂದ,ಆ ಬಾಣವರ್ಷದ ನೋವನ್ನೂ ಲಕ್ಷ್ಯಮಾಡದೆ ರೋಷದಿಂದುಬ್ಬಿ, ಒಂದು ಮಹಾವೃಕ್ಷವನ್ನು ಕಿತ್ತುಕೊಂಡು, ಮನೋವೇಗವುಳ್ಳ ಪ್ರಹಸ್ತನ ರಥಾಶ್ವಗಳನ್ನು ಅದರಿಂದ ಕೊಂದುಕೆಡಹಿದನು. ಮತ್ತು ಮಹಾಬಲಶಾಲಿಯಾದ ಆ ನೀಲನು, ಧೈರ್ಯದಿಂದ ಮುಂದೆ ನುಗ್ಗಿ,ಪ್ರಹಸ್ತನು ಹಿಡಿದಿದ್ದ ಮಹಾಧನುಸ್ಸನ್ನು ಕೈಯಿಂದ ಕಿತ್ತುಕೊಂಡು, ಅದನ್ನು

ಮುರಿದುಬಿಸುಟು, ಬಾರಿಬಾರಿಗೂ ಸಿಂಹನಾದಗಳನ್ನು ಮಾಡುತಿದ್ದನು. ರಾಕ್ಷಸಸೇನಾಧಿಪತಿಯಾದ ಪ್ರಹಸ್ತನಿಗೆ, ಕೈಯಲ್ಲಿದ್ದ ಬಿಲ್ಲೂ, ರಥಾಶ್ವಗಳೂ ಪ್ರತಿಹತಗಳಾಗಲು,ಅವನು ತನ್ನ ರಥದಲ್ಲಿದ್ದ ಭಯಂಕರವಾದ ಮುಸಲಾಯುಧವನ್ನು ಕೈಗೆತ್ತಿಕೊಂಡು, ರಥದಿಂದ ಕೆಳಗಿಳಿದನು. ವೇಗಶಾಲಿಗಳಾಗಿಯೂ, ಸಿಂಹಶಾರ್ದೂಲಗಳಂತೆ ಶಕ್ತಿಯುಳ್ಳವರಾಗಿಯೂ, ಸಿಂಹಶಾರ್ದೂಲಗಳಂತೆಯೇ ವೀರಕಾರ್ಯವುಳ್ಳವರಾಗಿಯೂ, ಯಾವ ಯುದ್ಧಗಳಲ್ಲಿಯೂ ಹಿಂಜರಿಯದ ಧೀರಸ್ವಭಾವವುಳ್ಳವರಾಗಿಯೂ, ವೃತ್ರಾಸುರ ದೇವೇಂದ್ರರಿಗೆ ಸಮಾನರಾಗಿಯೂ ಇದ್ದ ಆ ಸೇನಪತಿಗಳಿಬ್ಬರೂ ಪರಸ್ಪರಬದ್ಧವೈರವುಳ್ಳವರಾಗಿ, ಸರ್ವಾಂಗಗಳಲ್ಲಿಯೂ ರಕ್ತವನ್ನು ಸುರಿಸುತ್ತ, ಮದದಾನೆಗಳಂತೆ ಒಬ್ಬರನ್ನೊಬ್ಬರು ತಡೆದು, ಒಬ್ಬರನ್ನೊಬ್ಬರು ತೀಕ್ಷ್ಣದಂಷ್ಟ್ರಗಳಿಂದ ಭೇದಿಸುತ್ತ, ಯಶಃಕಾಮರಾಗಿ ಯುದ್ಧವನ್ನು ನಡೆಸಿದರು. ಇಷ್ಟರಲ್ಲಿ ಪ್ರಹಸ್ತನು, ತಾನು ಹಿಡಿದಿದ್ದ ಮುಸಲಾಯುಧದಿಂದ ನೀಲನ ನಡುನೆತ್ತಿಯ ಮೇಲೆ ಪ್ರಹರಿಸಲು, ಅವನ ನೆತ್ತಿಯಿಂದ ರಕ್ತವು ಸುರಿಯಲಾರಂಭಿಸಿತು. ನೀಲನು ಆ ಪ್ರಹಾರವನ್ನೂ ಲಕ್ಷ್ಯಮಾಡದೆ, ರಕ್ತದಿಂದ ತೊಯ್ದ ಮೈಯುಳ್ಳವನಾಗಿಯೇ ಒಂದು ದೊಡ್ಡ ವೃಕ್ಷವನ್ನು ಕಿತ್ತುತಂದು ಪ್ರಹಸ್ತನ ಎದೆಯಮೇಲೆ ಬೀಸಿದನು. ಪ್ರಹಸ್ತನೂ ಆ ಪೆಟ್ಟನ್ನು ಲಕ್ಷ್ಯಮಾಡದೆ, ತಾನು ಹಿಡಿದಿದ್ದ ಮುಸಲಾಯುಧದೊಡನೆ ನೀಲನ ಮೇಲೆ ನುಗ್ಗಿ ಬಂದನು. ಇಷ್ಟರಲ್ಲಿ ನೀಲನು, ಪ್ರಹಸ್ತನು ತನ್ನಮೇಲೆ ಅತ್ಯಾತುರದಿಂದ ನುಗ್ಗಿ ಬರುವುದನ್ನು ನೋಡಿ, ಒಂದು ದೊಡ್ಡ ಶಿಲೆಯನ್ನು ಕೈಗೆತ್ತಿಕೊಂಡು, ತನ್ನಮೇಲೆ ಯುದ್ಧಕಾಂಕ್ಷಿಯಾಗಿ ಮುಸಲವನ್ನು ಹಿಡಿದು ಬರುತಿದ್ದ ಪ್ರಹಸ್ತನ ತಲೆಯಮೇಲೆ ಬಿಸುಟನು. ಆಗ ಈ ದೊಡ್ಡ ಶಿಲೆಯ ಪ್ರಹಾರಕ್ಕೆ ಪ್ರಹಸ್ತನ ತಲೆಯು ಸಹಸ್ರಭಾಗವಾಗಿ ಸೀಳಿತು. [1]ಆ ಪ್ರಹಸ್ತನ ಕಾಂತಿಯೂ, ಇಂದ್ರಿಯಗಳೂ ಕೆಟ್ಟು, ಅವನು ಗತಪ್ರಾಣನಾಗಿ, ಬುಡವನ್ನು ಕಡಿದ ಮರದಂತೆ ಕೆಳಗೆ ಬಿದ್ದನು. ಶಿಲಾಪ್ರಹಾರದಿಂದ ಭಿನ್ನವಾದ ಆ ಪ್ರಹಸ್ತನ ತಲೆಯಿಂದ, ಪರ್ವತಪ್ರಾಂತದಿಂದ ಗಿರಿನದಿಗ

---

I. ಪಂಚಮಿಯದಿನದಲ್ಲಿ ಪ್ರಹಸ್ತವಧೆವೆಂದು ತಿಳಿಯಬೇಕು.

ಳು ಹೊರಡುವಂತೆ ರಕ್ತಪ್ರವಾಹವು:ಸುರಿಯುತಿತ್ತು.ಅದುವರೆಗೂ ರಣೋ ತ್ಸಾಹದಿಂದುಬ್ಬಿ ಹೆಮ್ಮೆಗೊಂಡಿದ್ದ ರಾಕ್ಷಸಸೈನ್ಯವೆಲ್ಲವೂ, ನೀಲನಿಂದ ಪ್ರಹಸ್ತನು ಸಂಹೃತನಾದುದನ್ನು ನೋಡಿದೊಡನೆ ಕೊಬ್ಬಡಗಿ, ಭಯ ದಿಂದ|ಲಂಕೆಯಕಡೆಗೆ ಓಡಿದುವು. ತಮಗೆ ಮುಖ್ಯಾಶ್ರಯನಾಗಿದ್ದ ಪ್ರಹ ಸ್ತನು ಸತ್ತುಬಿದ್ದುದನ್ನು ಕಂಡಮೇಲೆ ಅಲ್ಲಿದ್ದ ಸಮಸ್ತರಾಕ್ಷಸ ಸೈನಿ ಕರೂ, ವೇಗದಿಂದ ಬರುವ ಜಲಪ್ರವಾಹವು ಅಡ್ಡಲಾಗಿರುವ ಅಣೆಕಟ್ಟಿನ ಲ್ಲಿ ತಗುಲಿ ಪ್ರತಿಹತವಾಗಿ ಚದರಿಹಿಂದಿರುಗುವಂತೆ ಯುದ್ಧದಲ್ಲಿ ನಿಲ್ಲಲಾರ ದೆ ಥಟ್ಟನೆ ಹಿಂದೆಗೆದು ಪಲಾಯನಮಾಡಿದರು. ಪ್ರಧಾನಸೇನಾಧಿಪತಿ ಯು ಹತನಾದುದರಿಂದ ಇತರರಾಕ್ಷಸರೆಲ್ಲರೂ ಅನಾಥರಾಗಿ, ಏನೊಂ ದೂ ತೋರದೆ, ಹಿಂತಿರುಗಿ ರಾವಣನ ಬಳಿಗೆ ಹೋಗಿ, ಚಿಂತಾಪಾರವಶ್ಯ ದಿಂದ ಮೂಗರಂತೆ ಯಾವ ಮಾತನ್ನೂ ಆಡಲಾರದೆ ಮೌನವನ್ನವಲಂಬಿ ಸಿ, ತೀವ್ರವಾದ ದುಃಖಸಮುದ್ರದಲ್ಲಿ ಮುಳುಗಿ ಮೂರ್ಛೆಗೊಂಡವರಂ ತಿದ್ದರು. ಇತ್ತಲಾಗಿ ಜಯಶೀಲನಾದ ನೀಲನಾದರೋತನ್ನ, ಸಾಹಸ ಕಾರ್ಯ ಕ್ಕಾಗಿ ಸಮಸ್ತವಾನರರಿಂದಲೂ ಗೌರವಿಸಲ್ಪಡುತ್ತ ರಾಮಲಕ್ಷ್ಮಣರ ಬಳಿಗೆ ಬಂದುಸೇರಿ ಪರಮಸಂತೋಷದಿಂದಿದ್ದನು.ಇಲ್ಲಿಗೆ ಐವತ್ತೆಂಟನೆಯ ಸರ್ಗವು.

---

ಪ್ರಹಸ್ತನ ವಧವನ್ನು ಕೇಳಿ ರಾವಣನು ತಾನಾಗಿ ಯೇ ಯುದ್ಧಕ್ಕೆ ಹೊರಟುದು. ಸುಗ್ರೀವಾದಿಗಳು ರಾವಣನಿಂದ ಭಂಗಹೊಂದಿದುದು. ರಾವಣನ ಅಮೋ ಘವಾದ ಶಕ್ತಿಯಿಂದ ಲಕ್ಷ್ಮಣನಿಗೆ ಮೂರ್ಛೆಯುಂಟಾ ಗಿದ್ದುದು. ರಾಮರಾವಣಯುದ್ಧವು. ರಾವಣನ ಕಿ ರೀಟಭಂಗವು.

ರಾಕ್ಷಸರಿಗೆ ಪ್ರಧಾನಸೇನಾಪತಿಯಾದ ಪ್ರಹಸ್ತನು,ವಾನರಯೂ ಥಪನಾದ ನೀಲನಿಂದ ಯುದ್ಧದಲ್ಲಿ ಹತನಾಗಿ ಬಿದ್ದುದನ್ನು ಕಂಡೊಡನೆ, ಭಯಂಕರಾಯುಧಗಳನ್ನು ಧರಿಸಿದುದಾಗಿಯೂ, ಸಮುದ್ರದಂತೆ ತಡೆಯಿಲ್ಲ ದ ಮಹಾವೇಗವುಳ್ಳುದಾಗಿಯೂ ಇದ್ದ ರಾವಣಸೈನ್ಯವೆಲ್ಲವೂ ಭಯದಿಂದ ಲಂಕೆಗೆ ಪಲಾಯನಮಾಡಿದುವು. ಈ ರಾಕ್ಷಸಸೇನೆಯೆಲ್ಲವೂ ರಾವಣನ

ಮುಂದೆ ನಿಂತು, ಸೇನಾಪತಿಯಾದ ಪ್ರಹಸ್ತನು ನೀಲನಿಂದ ಹತನಾದ ಸಂಗತಿಯನ್ನು ತಿಳಿಸಿದುವು. ಇದನ್ನು ಕೇಳಿದೊಡನೆ ರಾವಣನಿಗೆ ತನ್ನ ಜಯದಲ್ಲಿ ನಂಬಿಕೆಯು ತಪ್ಪಿತು. ತನಗಿಂತಲೂ ಶತ್ರುಗಳೇ ಹೆಚ್ಚು ಬಲವುಳ್ಳವರೆಂದೂ ತೋರಿತು. ಹೀಗಿದ್ದರೂ ಅವನು ತನ್ನ ಹೆಮ್ಮೆಯನ್ನು ಬಿಡದೆ ಇಂತಹ ಸಂದರ್ಭಗಳಲ್ಲಿ ತಾನು ಆ ಶತ್ರುಗಳನ್ನಾಶ್ರಯಿಸಬೇಕಾಗಿದ್ದರೂ, ಆ ದಾರಿಯನ್ನು ಬಿಟ್ಟು,ಮೇಲೆಮೇಲೆ ಕೋಪವನ್ನೇ ಹೊಂದಿದವನಾದನು. ಯುದ್ಧದಲ್ಲಿ ಪ್ರಹಸ್ತನು ಹತನಾದುದನ್ನು ಕೇಳಿದೊಡನೆ ರಾವಣನು, ದುಃಖದಿಂದಲೂ, ಕೋಪದಿಂದಲೂ ಮೈಮರೆತವನಾಗಿ, ತನ್ನ ಮುಂದಿದ್ದ ರಾಕ್ಷಸಯೋಧರನ್ನು ಕುರಿತು,ದೇವೇಂದ್ರನು ದೇವತೆಗಳಿಗೆ ಆಜ್ಞೆಮಾಡುವಂತೆ ದರ್ಪದಿಂದ ಹೇಳುವನು. "ಎಲೈ,ವೀರಭಟರ!ಶತ್ರುಗಳ ವಿಷಯದಲ್ಲಿ ಇನ್ನು ನಾವು ಔದಾಸೀನ್ಯದಿಂದಿರಬಾರದು. ಆ ನಮ್ಮ ಶತ್ರುಗಳು, ಇಂದ್ರಾದಿಗಳ ಬಲವನ್ನೂ ಅಡಗಿಸಿದ ಮಹಾವೀರ್ಯವುಳ್ಳ ನಮ್ಮ ಸೇನಾಪತಿಯಾದ ಪ್ರಹಸ್ತನನ್ನು, ಅವನ ಕಡೆಯ ಸೈನಿಕರೊಡನೆಯೂ, ಗಜಾಶ್ವರಥತುರಂಗಬಲಗಳೊಡನೆಯೂ ಕೊಂದಿರುವರು.ಆದುದರಿಂದ ಇನ್ನುಮೇಲೆ ರಾಮನನ್ನಾಗಲಿ, ಅವನ ಕಡೆಯ ವಾನರರನ್ನಾಗಲಿ ಉಪೇಕ್ಷಿಸಿರುವುದು ಯುಕ್ತವಲ್ಲ. ನಾನೂ ಇನ್ನುಮೇಲೆ ಹಿಂದುಮುಂದು ನೋಡತಕ್ಕವನಲ್ಲ. ಆ ಶತ್ರುಗಳನ್ನು ನಾಶಮಾಡಿ ಜಯವನ್ನು ಕೈಕೊಳ್ಳುವುದಕ್ಕಾಗಿ ನಾನೇ ರಣರಂಗಕ್ಕೆ ಹೊರಡುವೆನು. ಆಹಾ!ಏನಾಶ್ಚರ್ಯವು? ನಮ್ಮಂತಹ ಪ್ರಬಲಬಲವುಳ್ಳವರನ್ನು ಅತ್ಯಲ್ಪಬಲವುಳ್ಳ ಆ ನರವಾನರರು ಕೊಲ್ಲುವುದೆಂದರೇನು? ಆದರೇನು ? ಇರಲಿ! ಈಗಲೇ ನಾನು ಹೊರಟು, ಕಾಡುಗಿಚ್ಚು ಬೆಂಗಾಡನ್ನು ದಹಿಸುವಂತೆ, ಆ ಸಮಸ್ತವಾನರಸೈನ್ಯವನ್ನೂ, ಲಕ್ಷ್ಮಣಸಹಿತನಾದ ರಾಮನನ್ನೂ, ನನ್ನ ಬಾಣಸಮೂಹಗಳಿಂದ ಸುಟ್ಟುರಿಪುವೆನು. (ಈಗಲೇ ನಾನು ಕಪಿಗಳ ರಕ್ತದಿಂದಈಭೂಮಿಯನ್ನೂ ತೃಪ್ತಿಹೊಂದಿಸುವೆನು.) ಎಂದು ಹೇಳಿದನು. ಉತ್ತರಕ್ಷಣದಲ್ಲಿಯೇ ಇಂದ್ರಶತ್ರುವಾದ ಆ ರಾವಣನು, ಅಗ್ನಿಯಂತೆ ಜಾಜ್ವಲ್ಯಮಾನವಾಗಿಯೂ, ಉತ್ತಮಾಶ್ವಗಳಲ್ಲಿ ಹೂಡಿದುದಾಗಿಯೂ, ಸರ್ವಾಲಂಕಾರಗಳಿಂದ ಶೋಭಿತವಾಗಿಯೂ ಇದ್ದ ತನ್ನ ರಥವನ್ನೇರಿದನು. ಅವನು ರಥವನ್ನೇರಿ ಕುಳಿತೊಡನೆಯೇ, ಮುಂದುಗಡೆಯ

ಲ್ಲಿ ಶಂಖ ಭೇರೀ ಪಣವಾದಿವಾದ್ಯಧ್ವನಿಗಳೂ, ರಾಕ್ಷಸ ಯೋಧರ ಭುಜಾ ಸ್ಫಾಲನಧ್ವನಿಗಳೂ, ಸಿಂಹನಾದಧ್ವನಿಗಳೂ ಆರಂಭಿಸಲ್ಪಟ್ಟುವು. ಆ ರಥದಸುತ್ತಲೂ,ವಂದಿಮಾಗಧರೇ ಮೊದಲಾದ ಸ್ತುತಿಪಾಠಕರು ಮನೋ ಜ್ಞಗಳಾದ ಜಯಸ್ತುತಿಗಳನ್ನು ಮಾಡುತ್ತಬಂದರು. ಹೀಗೆ ರಾವಣನು ಸಮಸ್ತಪರಿವಾರಗಳಿಂದಲೂ ಪೂಜಿತನಾಗಿ, ಯುದ್ಧಭೂಮಿಗೆ ಹೊರ ಟುಬರುವಾಗ, ಅವನ ಸುತ್ತಲೂ ಶಸ್ತ್ರಧಾರಿಗಳಾದ ಅನೇಕರಾಕ್ಷಸ ಯೋಧರು ಬರುತಿದ್ದರು. ಅವರಲ್ಲಿಯೋ ಒಬ್ಬೊಬ್ಬರೂ ಪರ್ವತದಂತೆ ಮಹೋನ್ನತವಾದ ದೇಹವುಳ್ಳವರು! ಒಬ್ಬೊಬ್ಬರೂ ನರಮಾಂಸಗಳನ್ನು ತಿಂದು ಕೊಬ್ಬಿದವರು! ಒಬ್ಬೊಬ್ಬರೂ ಕಾಲಮೇಘದಂತೆ ಕಪ್ಪಾದ ಮೈ ಯುಳ್ಳವರು! ಒಬ್ಬೊಬ್ಬರೂ ಕೆಂಡದಂತೆ ಕೆಂಪಾದ ಕಣ್ಣುಳ್ಳವರು. ಇಂ ತಹ ರಾಕ್ಷಸರಿಂದ ಪರಿವೃತನಾದ ಆ ರಾವಣನು, ಭೂತಗಣಗಳಿಂದ ಪರಿ ವೃತನಾದ ರುದ್ರನಂತೆಯೇ ಕಾಣುತಿದ್ದನು. ಈ ರೀತಿಯಲ್ಲಿ ಮಹಾತೇಜಸ್ವಿ ಯಾದ ರಾವಣನು ವೇಗದಿಂದ ತನ್ನ ಪಟ್ಟಣವನ್ನು ಬಿಟ್ಟು ಹೊರಟು ಬಂದು, ಇತ್ತಲಾಗಿ ಮಹೋಗ್ರವಾಗಿಯೂ, ಮಹಾಸಮುದ್ರದಂತೆಯೂ, ಮೇಘದಂತೆಯೂ ಗಂಭೀರಧ್ವನಿಯುಳ್ಳದಾಗಿಯೂ, ಶಿಲೆಗಳನ್ನೂ, ವೃ ಕ್ಷಗಳನ್ನೂ, ಬೆಟ್ಟಗಳನ್ನೂ, ಯುದ್ಧಸಾಧನಗಳನ್ನಾಗಿ ಹಿಡಿದು ಸಿದ್ಧರಾ ಗಿಯೂ ಇದ್ದ ವಾನರಸೈನಿಕರನ್ನು ಕಂಡನು. ಇತ್ತಲಾಗಿ ಸರ್ಪರಾಜನಾ ದ ವಾಸುಕಿಯಂತೆ ನೀಡಿದ ತೋಳುಗಳುಳ್ಳವನಾಗಿ, ವಾನರಸೇನೆಯ ಮ ಧ್ಯದಲ್ಲಿದ್ದ ಶ್ರೀರಾಮನೂ ಕೂಡ, ಲಂಕೆಯ ಕಡೆಯಿಂದ ಅತಿಪ್ರಚಂಡ ವಾಗಿ ಬರುತಿದ್ದ, ಆ ದೊಡ್ಡರಾಕ್ಷಸಸೈನ್ಯವನ್ನು ನೋಡಿದನು. ಸಪರಿವಾ ರನಾಗಿ ಬರುತಿದ್ದ ಆ ರಾವಣನನ್ನು ಕಂಡೊಡನೆ ಶ್ರೀರಾಮನ ಮುಖವು ಯುದ್ಧೋತ್ಸಾಹದಿಂದ ಕಳೆಯೇರಿತು. ಆಗ ರಾಮನು ಶಸ್ತ್ರಧಾರಿಗಳಲ್ಲಿ ಮೇಲೆನಿಸಿದ ವಿಭೀಷಣನನ್ನು ಕುರಿತು, "ವಿಭೀಷಣಾ! ಯಾರವನು? ಅವ ನ ಅಟ್ಟಹಾಸವೇನು ? ಚಿತ್ರಗಳಾದ ಧ್ವಜಪತಾಕೆಗಳಿಂದಲೂ, ವಿವಿಧಾ ಯುಧಗಳಿಂದಲೂ, ಪ್ರಾಸಖಡ್ಗಶೂಲಗಳೇ ಮೊದಲಾದ ಇತರಾಯುಧ ಗಳಿಂದಲೂ ಶೋಭಿಸುತ್ತಿರುವ ಆ ರಾಕ್ಷಸಸೈನ್ಯವೆಲ್ಲಿಯದು ? ಐರಾವ ತಕ್ಕೆಣೆಯಾದ ಮದದಾನೆಗಳಿಂದ ಕೂಡಿ, ಶೂರರಾಕ್ಷಸರಿಂದ ತುಂಬಿದ

ಆ ಸೈನ್ಯವು ಯಾರಿಗೆ ಸೇರಿದುದು?"ಎಂದು ಕೇಳಿದನು. ಇದನ್ನು ಕೇಳಿ ಇಂ ದ್ರನಿಗೆಣೆಯಾದ ಪರಾಕ್ರಮವುಳ್ಳ ವಿಭೀಷಣನು, ರಾಮನಿಗೆ ಆ ರಾಕ್ಷಸ ಸೈನ್ಯದ ಮಹಾಮಹಿಮೆಯನ್ನು ವರ್ಣಿಸಿ ಹೇಳತೊಡಗಿ "ಎಲೆ ಮ ಹಾರಾಜನೆ ! ಅದೋ ನೋಡು ! ಬಾಲಸೂರ್ಯನಂತೆ ಕೆಂಪೇರಿದ ಮುಖವು ಳ್ಳವನಾಗಿ, ಗಜಾರೂಢನಾಗಿ, ತನ್ನ ದೇಹಭಾರದಿಂದ ಆ ಆನೆಯ ತಲೆಯ ನ್ನೂ ನಡುಗಿಸುವಂತೆ ಅದ್ಭುತಾಕಾರವುಳ್ಳವನಾಗಿ ಬರುತ್ತಿರುವವನಿಗೆ ಅ ಕಂಪನನೆಂದು ಹೆಸರು. ಅವನು ರಾವಣನ ಮಗನು. ಅದೋ ! ಅಲ್ಲಿ ಇಂ ದ್ರಧನುಸ್ಸಿನಂತಿರುವ ದೊಡ್ಡಧನುಸ್ಸನ್ನು ಹಿಡಿದು, ಸಿಂಹಧ್ವಜವುಳ್ಳ ರಥವನ್ನೇರಿ, ದೊಡ್ಡ ಕೊಂಬುಳ್ಳ ಮದದಾನೆಯಂತೆ ಭಯಂಕರವಾಗಿ ಬಿ ಚ್ಚಿದ ಕೋರೆಯುಳ್ಳವನಾಗಿ, ಬರುತ್ತಿರುವವನೇ ಇಂದ್ರಜಿತ್ತೆಂಬವನು. ಇ ವನು ಬ್ರಹ್ಮಾನುಗ್ರಹದಿಂದ ಶತ್ರುಗಳ ಕಣ್ಣಿಗೆ ಕಾಣದೆ ಯುದ್ಧಮಾಡುವ ಅಸಾಧಾರಣವರವನ್ನು ಪಡೆದವನು. ರಾಮಾ ! ಅದೋ ನೋಡು! ವಿಂ ಧ್ಯಪರ್ವತದಂತೆ ಮಹೋನ್ನತನಾಗಿಯೂ, ಅಸ್ತಮಯಪರ್ವತದಂತೆ ಇ ತರರ ತೇಜಸ್ಸನ್ನು ತಗ್ಗಿಸತಕ್ಕವನಾಗಿಯೂ, ಮಹೇಂದ್ರಪರ್ವತದಂತೆ ನಿಶ್ಚ ಲನಾಗಿಯೂ ರಥದಲ್ಲಿ ಕುಳಿತು, ಧನುರ್ಧಾರಿಯಾಗಿ ಬರುತ್ತಿರುವವನೇ ಅತಿಕಾಯನೆಂಬವನು. ರಾಕ್ಷಸರಲ್ಲಿ ಈತನು ಅತಿರಥನೆನಿಸಿರುವನು. ಮಹಾ ವೀರನು. ಇವನ ದೊಡ್ಡ ದೇಹದಿಂದಲೇ ಇವನಿಗೆ ಅತಿಕಾಯನೆಂಬ ಹೆಸರು ಬಂದಿರುವುದು. ಅದೋ ! ಅಲ್ಲಿ, ಆಗಲೇ ಉದಿಸಿದ ಸೂರ್ಯನಂತೆ ಕೆಂಪೇ ರಿದ ಕಣ್ಣಾಲೆಯುಳ್ಳವನಾಗಿ, ಘಂಟಾಧ್ವನಿಯಿಂದೊಪ್ಪುತ್ತಿರುವ ಮದ ದಾನೆಯ ಮೇಲೆ ಕುಳಿತು, ಅಟ್ಟಹಾಸದಿಂದ ಗರ್ಜಿಸುತ್ತ ಬರುವವನಿಗೆ ಮಹೋದರನೆಂದು ಹೆಸರು. ಈತನೂ ಮಹಾವೀರನು. ಅದೋ ! ಅಲ್ಲಿ ನಾನಾವಿಧಗಳಾದ ಚಿನ್ನದೊಡವೆಗಳಿಂದಲಂಕೃತವಾಗಿ, ಸಂಧ್ಯಾರಾಗದಿಂ ದ ಕೂಡಿದ ಬೆಟ್ಟದಂತೆ ಮಹೋನ್ನತವಾದ ಕುದುರೆಯನ್ನೇರಿ,ಥಳಥಳಿಸು ವ ಪ್ರಾಸವನ್ನು ಕೈಯಲ್ಲಿ ಹಿಡಿದು, ಸಿಡಿಲಿನಂತೆ ಮಹಾವೇಗದಿಂದ ರಾಕ್ಷ ಸನೊಬ್ಬನು ಬರುವನಲ್ಲವೆ!ಅವನಿಗೆ ಪಿಶಾಚನೆಂದು ಹೆಸರು.ಅದೋ!ಅಲ್ಲಿಇಂ ದ್ರನ ವಜ್ರಾಯುಧವನ್ನೂ ಕೂಡ ತನ್ನ ಕೈಗೆಳಗಿಟ್ಟುಕೊಳ್ಳುವಂತೆ ಮಹಾ ವೇಗವುಳ್ಳುದಾಗಿ, ಮಿಂಚಿನಂತೆ ಥಳಥಳಿಸುವ ತೀಕ್ಷ್ಣಶೂಲವನ್ನು ಕೈಯಲ್ಲಿ

ಹಿಡಿದು, ಪರ್ವತದಂತಿರುವ ದೊಡ್ಡ ವೃಷಭವನ್ನೇರಿ ಬರುತ್ತಿರು ವವನು ತ್ರಿಶಿರನೆಂಬ ರಾಕ್ಷಸನು. ವೀರ್ಯದಲ್ಲಿ ಈತನು ಬಹಳಪ್ರಖ್ಯಾತಿ ಹೊಂದಿದವನು. ಅದೋ! ಅಲ್ಲಿ ಕಾಲಮೇಘದಂತೆ ಕಪ್ಪುಮೈಯುಳ್ಳವ ನಾಗಿಯೂ, ಅಗಲವಾಗಿ ಉಬ್ಬಿದ ಎದೆಯುಳ್ಳವನಾಗಿಯೂ, ಸರ್ಪಚಿಹ್ನೆ ವುಳ್ಳ ಧ್ವಜದಿಂದ ಶೋಭಿತನಾಗಿಯೂ, ಸರ್ವಾಯುಧಸನ್ನದ್ಧನಾಗಿಯೂ, ಆಗಾಗ ತನ್ನ ಬಿಲ್ಲಿನ ಹೆದೆಯನ್ನು ಆಕರ್ಣಾಂತವಾಗಿ ಎಳೆದು.ಲೀಲೆಯಿಂದ ಧನುಷ್ಟಂಕಾರಮಾಡುವವನಾಗಿಯೂ ಎಚ್ಚರಿಕೆಯಿಂದ ಬರುತ್ತಿರುವ ಆ ರಾಕ್ಷಸನು ಕುಂಭನೆಂದು ಹೆಸರುಗೊಂಡವನು. ಅದೋ! ಅಲ್ಲಿ ಚಿನ್ನ ದಿಂದಲೂ, ವಜ್ರಮಣಿಗಳಿಂದಲೂ ಅಲಂಕೃತವಾಗಿ, ಕಾಂತಿಯಿಂದ ದೇ ದೀಪ್ಯಮಾನವಾಗಿ, ಹೊಗೆಯಾಡುವಂತೆ ಕಾಣುತ್ತಿರುವ ದೊಡ್ಡ ಪರಿಘ ವನ್ನು ಹಿಡಿದು ಬರುತ್ತಿರುವವನಿಗೆ ನಿಕುಂಭನೆಂದು ಹೆಸರು. ರಾಕ್ಷಸಸೈ ನ್ಯಕ್ಕೆ ಇವನೇ ಧ್ವಜದಂತೆ ಪ್ರಧಾನಭೂತನಾಗಿರುವನು. ಇವನ ವೀರಕಾರ್ಯ ಗಳು ಮಹಾದ್ಭುತಗಳಾಗಿಯೂ, ಅತಿಭಯಂಕರಗಳಾಗಿಯೂ ಇರುವುವು. ಅದೋ! ಅಲ್ಲಿ ಧನುರ್ಬಾಣಗಳಿಂದಲೂ, ಕತ್ತಿಗಳಿಂದಲೂ ತುಂಬಿರುವುದಾಗಿ, ಧ್ವಜಾಲಂಕೃತವಾಗಿ, ಅಗ್ನಿಯಂತೆ ಧಗಧಗಿಸುತ್ತಿರುವ ರಥವನ್ನೇರಿ ಘೋರ ಸ್ವರೂಪದಿಂದ ಬರುತ್ತಿರುವ ಆ ರಾಕ್ಷಸನಿಗೆ ನರಾಂತಕನೆಂದು ಹೆಸರು.ಇವ ನು ವೀರ್ಯದಲ್ಲಿ ಸಮಸ್ತರಾಕ್ಷಸರಿಗಿಂತಲೂ ಮೇಲೆನಿಸಿಕೊಂಡವನು. ಈತ ನು,ಶತ್ರುಗಳುಸಿಕ್ಕದಿರುವಾಗತನ್ನಮೈನವೆಯನ್ನಾರಿಸಿಕೊಳ್ಳುವುದಕ್ಕಾಗಿ,ಆ ಗಾಗಪರ್ವತಶಿಖರಗಳನ್ನುಗುದ್ದಿ ಹೋರಾಡುವಸ್ವಭಾವವುಳ್ಳವನು.ನಾನಾ ವಿಧಭಯಂಕರಸ್ವರೂಪವುಳ್ಳವುಗಳಾಗಿಯೂ, ಹೆಬ್ಬುಲಿಗಳಂತೆಯೂ, ಒಂ ಟಗಳಂತೆಯೂ, ಆನೆಗಳಂತೆಯೂ, ಮೃಗಗಳಂತೆಯೂ,ಕುದುರೆಗಳಂತೆಯೂ ಮುಖವುಳ್ಳವುಗಳಾಗಿಯೂ, ಯಾವಾಗಲೂ ಕೋಪದಿಂದ ತಿರುಗುತ್ತಿರುವ ಕಣ್ಣಾಲೆಗಳುಳ್ಳವಾಗಿಯೂ ಇರುವ ಅನೇಕಭೂತಗಳಿಂದ ಪರಿವೇಷ್ಟಿತನಾ ಗಿಆಸೇನೆಯಮಧ್ಯದಲ್ಲಿ ಬರುತ್ತಿರುವ ಪ್ರಧಾನರಾಕ್ಷಸನನ್ನುನೋಡಿದೆಯಾ? ಅವನೇ ನಿನಗೆ ಪರಮವೈರಿಯಾದ ರಾವಣನು.ಅವನೇ ಸಮಸ್ತದೇವತೆಗಳ ಕೆ ಚ್ಚನ್ನೂ ಮುರಿದವನು. ಅದೋ!ಪೂರ್ಣಚಂದ್ರನಂತೆ ಪ್ರಕಾಶಿಸುತ್ತ ಸಣ್ಣ ಸಣ್ಣ ಸಲಾಕೆಗಳಿಂದ ಕೂಡಿದ ಸರ್ವೋತ್ತಮವಾದ ಶ್ವೇತಛತ್ರವು

ಕಾಣುವುದು ನೋಡು. ಆ ಛತ್ರದಿಂದ ಶೋಭಿತವಾದ ರಥದಲ್ಲಿ ಕುಳಿತಿರು ವವನೇ ರಾಕ್ಷಸಚಕ್ರವರ್ತಿಯು. ಅವನೇ ಅಷ್ಟೊಂದು ಮಹಾಪ್ರಭಾವ ದಿಂದ ಪ್ರಸಿದ್ಧನಾಗಿ, ಭೂತಗಳಿಂದ ಪರಿವೃತನಾದ ರುದ್ರನಂತೆ ಅನೇಕ ವೀರ ರಾಕ್ಷಸರಿಂದ ಪರಿವೃತನಾಗಿರುವನು. ಅದೋ! ಅವನ ತಲೆಯಲ್ಲಿ ರುವ ಅನರ್ಘ್ಯವಾದ ಕಿರೀಟದ ಸೊಗಸನ್ನು ನೋಡು! ಆಡುತ್ತಿರುವ ಕರ್ಣ ಕುಂಡಲಗಳಿಂದ ಕಳೆಯೇರಿದ ಅವನ ಮುಖವನ್ನು ನೋಡು! ಹಿಮವತ್ಪ ರ್ವತದಂತೆಯೂ, ವಿಂಧ್ಯಪರ್ವತದಂತೆಯೂ, ಕಾಣುತ್ತಿರುವ ಅವನ ಭಯಂ ಕರವಾದ ಆಕಾರವನ್ನು ನೋಡು! ರಾಮಾ! ಆತನು ಸಾಮಾನ್ಯನಲ್ಲ! ಆಗಾಗ ಮಹೇಂದ್ರಯಮಾದಿಗಳ ಕೊಬ್ಬನ್ನು ಮುರಿದು ಬಂದವನು. ಸೂರ್ಯನಂತೆ ಮಹಾದ್ಭುತತೇಜಸ್ಸಿನಿಂದ ಕೂಡಿದ ಆ ನಿನ್ನ ವೈರಿಯನ್ನು ಚೆನ್ನಾಗಿ ನೋಡು!" ಎಂದನು. ಆಗ ರಾಮನು ರಾವಣನ ಮಹಾದ್ಭುತ ತೇಜಸ್ಸನ್ನೂ, ಅಟ್ಟಹಾಸವನ್ನೂ ನೋಡಿ ಆಶ್ಚರ್ಯಗೊಂಡವನಾಗಿ, ವಿಭೀಷಣ ನನ್ನು ಕುರಿತು, "ವಿಭೀಷಣಾ! ನಿಜವಾಗಿಯೂ ರಾಕ್ಷಸಚಕ್ರವರ್ತಿ ಯಾದ ಈ ರಾವಣನ ತೇಜಸ್ಸು ಅತ್ಯದ್ಭುತವಾಗಿರುವುದು. ಆಹಾ! ಅವನ ತೇಜಸ್ಸೇನು? ಅವನ ಪ್ರತಾಪವೇನು! ಸೂರ್ಯನು ತನ್ನ ಕಿರಣಗಳಿಂದ ನೋಡುವವರ ಕಣ್ಣನ್ನು ಕೋರೈಸುವಂತೆ ಇವನ ಕಾಂತಿಯೂ ಕೂಡ ಕಣ್ಣಿಂದ ನೋಡಲಸಾಧ್ಯವಾಗಿರುವುದು! ಇವನ ರೂಪವು ಸುತ್ತಲೂ ಮಹಾದ್ಭುತತೇಜಸ್ಸಿನಿಂದ ಮರೆಗೊಂಡಂತಿದ್ದರೂ ವ್ಯಕ್ತವಾಗಿ ಕಾ ಣುತ್ತಿರುವುದು. ಆಹಾ! ರಾಕ್ಷಸ ಚಕ್ರವರ್ತಿಯೆನಿಸಿದ ಈತನ ದೇಹಕಾಂ ತಿಯನ್ನು ನೋಡಿದರೆ, ದೇವದಾನವರಲ್ಲಿ ಬೇರೆ ಯಾರಿಗೂ ಇಷ್ಟೊಂದು ಮಹಾದ್ಭುತವಾದ ತೇಜಸ್ಸಿರುವಂತೆ ತೋರಲಿಲ್ಲ. ಇಂತಹ ಅದ್ಭುತದೇಹ ವು ಬೇರೆ ಯಾರಿಗೂ ಇರದು! ಇವನನ್ನು ಸುತ್ತಿ ಬರುತ್ತಿರುವ ರಾಕ್ಷಸಯೋ ಧರ ರೂಪವಾದರೂ ಸಾಮಾನ್ಯವಲ್ಲ! ಒಬ್ಬೊಬ್ಬರೂ ಪರ್ವತದಂತೆ ಮ ಹಾಕಾಯವುಳ್ಳವರು! ಒಬ್ಬೊಬ್ಬರೂ ಪರ್ವತಗಳನ್ನೆತ್ತಿ ಹೋರಾಡುವಷ್ಟು ದೇಹ ಬಲವುಳ್ಳವರು! ಒಬ್ಬೊಬ್ಬರೂ ಥಳಥಳಿಸುವ ಮಹಾಯುಧಗಳನ್ನು ಹಿಡಿದು ಬಂದಿರುವರು! ಒಬ್ಬೊಬ್ಬರೂ ಮಹಾತೇಜಸ್ಸಿನಿಂದ ಬೆಳಗುತ್ತಿ ರುವರು! ಇಂತಹ ಮಹಾದ್ಭುತತೇಜಸ್ಸುಳ್ಳವರಾಗಿಯೂ, ಭಯಂಕರ

ಪರಾಕ್ರಮವುಳ್ಳವರಾಗಿಯೂ ಇರುವ ಅನೇಕರಾಕ್ಷಸರು ಅವನ ಆಜ್ಞಾಧೀನರಾಗಿ ಅವನನ್ನು ಸುತ್ತಿ ಬರುತ್ತಿರುವರು. ಈ ರಾವಣನಿಗೆ ರಾಕ್ಷಸರಾಜಪದವಿಯು ಯುಕ್ತವಾಗಿಯೇ ಇರುವುದು ! ಹೀಗೆ ಘೋರರಾಕ್ಷಸರಿಂದ ಪರಿವೇಷ್ಟಿತನಾದ ಈ ರಾವಣನು, ಪ್ರಶಸ್ತದೇಹವುಳ್ಳ ಕ್ರೂರಭೂತಗಳಿಂದ ಪರಿವೃತನಾದ ಕಾಲಾಂತಕನಂತೆಯೇ ಕಾಣುತ್ತಿರುವನು ! ವಿಭೀಷಣಾ ! ಆದಕೇನು ! ಇರಲಿ ! ಪರಮಪಾಪಾತ್ಮನಾದ ಈ ರಾವಣನು ಈಗ ದೈವಿಕವಾಗಿ ನನ್ನಕಣ್ಣಿಗೆ ಬಿದ್ದನು.ಈತನು ನನ್ನಪ್ರಿಯಪತ್ನಿಯಾದ ಸೀತೆಯನ್ನು ಕದ್ದುಯ್ದುದರಿಂದ ನನಗುಂಟಾಗಿರುವ ಕೋಪವನ್ನು ಈಗಲೇ ಇವನ ಮೇಲೆ ತೀರಿಸಿಕೊಳ್ಳುವೆನು!" ಎಂದು ಹೇಳಿ, ವೀರ್ಯವಂತನಾದ ಆ ರಾಮನು, ತನ್ನ ದಿವ್ಯಧನುಸ್ಸನ್ನು ಕೈಗೆತ್ತಿಕೊಂಡು, ಉತ್ತಮಬಾಣಗಳನ್ನೂ ತನ್ನ ಬತ್ತಳಿಕೆಯಿಂದ ಹೊರಕ್ಕೆ ತೆಗೆದು, ತಮ್ಮನಾದ ಲಕ್ಷ್ಮಣನೊಡನೆ ಸೇರಿ ಯುದ್ಧಸನ್ನದ್ಧನಾಗಿ ನಿಂತನು. ಅತ್ತಲಾಗಿ ರಾಕ್ಷಸಚಕ್ರವರ್ತಿಯಾದ ರಾವಣನು, ಮಹಾಬುದ್ಧಿಮಂತನಾದುದರಿಂದ, ಈನಡುವೆ ಬಲಾಢ್ಯರಾದ ತನ್ನ ಕಡೆಯ ರಾಕ್ಷಸರನ್ನು ನೋಡಿ, "ಎಲೈ ಭಟರೆ! ನಿಮ್ಮಲ್ಲಿ ಕೆಲವರು ನಮ್ಮ ಪಟ್ಟಣದ ಒಳಬಾಗಿಲುಗಳಲ್ಲಿಯೂ, ಕೆಲವರು ಹೊರಬಾಗಿಲುಗಳಲ್ಲಿಯೂ ಕಾವಲಿರಬೇಕು.ಕೆಲವರು ಅವುಗಳ ಪಾರ್ಶ್ವಗಳಲ್ಲಿ,ಕಾವಲುಗಾರರ ವಾಸಕ್ಕಾಗಿ ಏರ್ಪಟ್ಟಿರುವ ಚರ್ಯಾಗೃಹಗಳಲ್ಲಿ ಎಚ್ಚರಿಕೆಯಿಂದ ಕಾಯುತ್ತಿರಬೇಕು. ಭಯಪಡಕೂಡದು. ನಿಮ್ಮೆಲ್ಲರೊಡನೆ ನಾನು ಇತ್ತಲಾಗಿ ಹೊರಟುಬಂದಿರುವೆನೆಂಬ ಸಂಜನ್ನು ತಿಳಿದರೆ, ಈ ಕಪಿಗಳೆಲ್ಲರೂ ಸೇರಿ ನಮ್ಮಪಟ್ಟಣದಲ್ಲಿ ರಾಕ್ಷಸಯೋಧರಾರೂ ಇಲ್ಲವೆಂಬುದುಕ್ಕಾಗಿ, ಒಳಗೆ ನುಗ್ಗಿ ಕೊಳ್ಳೆಹೊಡೆಯಬಹುದು. ಆದುದರಿಂದ ನೀವೆಲ್ಲರೂ ಬಹಳ ಎಚ್ಚರಿಕೆಯಿಂದಿರಬೇಕು"ಎಂದು ಅವರಿಗೆ ಆಜ್ಞೆಮಾಡಿ ಕಳುಹಿಸಿದನು. ಅವರೆಲ್ಲರೂ ರಾವಣಾಜ್ಞೆಯಂತೆ ಆಯಾಸ್ಥಾನಗಳಿಗೆ ಹೊರಟುಹೋದರು. ಆ ಮೇಲೆ ಇತ್ತಲಾಗಿ ರಾವಣನು, ಮಹಾಮತ್ಸ್ಯವು ತುಂಬಿದ ಸಮುದ್ರವನ್ನು ಕಲಕುವಂತೆ ವಾನರಸೈನ್ಯವನ್ನಿದಿರಿಸಿ ಅದನ್ನು ಚದರಿಸಿದನು. ಹೀಗೆ ರಾಕ್ಷಸಾಧಿಪತಿಯಾದ ರಾವಣನು ದೇದೀಪ್ಯಮಾನಗಳಾದ ಧನುರ್ಬಾಣಗಳನ್ನು ಹಿಡಿದು ಯುದ್ಧಕ್ಕಾಗಿ ವೇಗದಿಂದ ಮೇಲೆ ಬಿದ್ದುಬರುವುದ

ನ್ನು ನೋಡಿ, ವಾನರೇಶ್ವರನಾದ ಸುಗ್ರೀವನು, ದೊಡ್ಡ ಪರ್ವತಶಿಖರ ವೊಂದನ್ನು ಕಿತ್ತುಕೊಂಡು. ರಾವಣನನ್ನಿದಿರಿಸಿ, ಅನೇಕವೃಕ್ಷಗಳಿಂದ ತುಂಬಿದ ಆ ಪರ್ವತಶಿಖರವನ್ನು ಅವನಿಗೆ ಗುರಿಯಿಟ್ಟು ಬೀಸಿ ಬಡಿದನು. ಆ ಪರ್ವತಶಿಖರವು ಮೇಲೆ ಬೀಳುವಷ್ಟರಲ್ಲಿಯೇ ರಾವಣನು, ಸುವರ್ಣಪುಂಖಗಳುಳ್ಳ ಬಾಣಗಳನ್ನು ಪ್ರಯೋಗಿಸಿ, ಅದನ್ನು ತುಂಡುಮಾಡಿ ಕೆಡಹಿದನು. ದೊಡ್ಡದೊಡ್ಡ ಮರಗಳಿಂದ ತುಂಬಿದ ಆ ಪರ್ವತಶಿಖರವು ತನ್ನ ಬಾಣಗಳಿಂದ ತುಂಡಾಗಿ ಕೆಳಗೆ ಬಿದ್ದಮೇಲೆಯೂ ತಿರುಗಿ ರಾಕ್ಷಸೇಂದ್ರನಾದ ರಾವಣನು, ಮೃತ್ಯುಸಮಾನವಾಗಿಯೂ, ಸರ್ಪದಂತೆ ವೇಗವುಳ್ಳುದಾಗಿಯೂ ಇದ್ದ ಮತ್ತೊಂದು ಬಾಣವನ್ನು ಬಿಲ್ಲಿನಲ್ಲಿ ಸಂಧಾನಮಾಡಿದನು. ವಾಯುವಿನಂತೆ ವೇಗವುಳ್ಳುದಾಗಿಯೂ, ಕಿಡಿಗಳನ್ನು ಕಾರುವ ಬೆಂಕಿಯಂತೆ ದೇದೀಪ್ಯಮಾನವಾಗಿಯೂ, ಸಿಡಿಲಿಗೆ ಸಮಾನವಾದ ಮಹಾರ್ಭಟವುಳ್ಳುದಾಗಿಯೂ ಇದ್ದ ಆ ಬಾಣವನ್ನು ಆಕರ್ಣಾಂತವಾಗಿ ಸೆಳೆದು, ಸುಗ್ರೀವನನ್ನು ಕೊಲ್ಲಬೇಕೆಂಬ ಅತ್ಯಾಕ್ರೋಶದಿಂದ ಅದನ್ನು ಪ್ರಯೋಗಿಸಿದನು. ಮಹೇಂದ್ರನ ವಜ್ರಾಯುಧದಂತೆ ಆಕಾರವುಳ್ಳುದಾಗಿಯೂ, ತೀಕ್ಷ್ಣವಾದ ಮೊನೆಯುಳ್ಳುದಾಗಿಯೂ ಇದ್ದ ಆ ಬಾಣವು, ರಾವಣನಿಂದ ಪ್ರಯೋಗಿಸಲ್ಪಟ್ಟೊಡನೆ, ಅತಿವೇಗದಿಂದ ಬಂದು, ಷಣ್ಮುಖನು ಪ್ರಯೋಗಿಸಿದ ಮಹೋಗ್ರಶಕ್ತಿಯು ಕ್ರೌಂಚವನ್ನು ಭೇದಿಸುವಂತೆ, ಸುಗ್ರೀವನ ದೇಹವನ್ನು ಭೇದಿಸಿಕೊಂಡು ಹೋಯಿತು. ಆ ಕ್ಷಣವೇ ಸುಗ್ರೀವನು ಬಾಣದಿಂದ ಪೀಡಿತನಾಗಿ ಪ್ರಜ್ಞೆತಪ್ಪಿ ಕೂಗಿಡುತ್ತ ನೆಲಕ್ಕೆಬಿದ್ದನು. ಸುಗ್ರೀವನು ಮೂರ್ಛಿತನಾಗಿ ನೆಲಕ್ಕೆ ಬಿದ್ದುದನ್ನು ನೋಡಿ ರಣರಂಗದಲ್ಲಿದ್ದ ರಾಕ್ಷಸರೆಲ್ಲರೂ, ಸಂತೋಷದಿಂದ ಸಿಂಹನಾದಗಳನ್ನು ಮಾಡಿದರು. ಆಮೇಲೆ ತೀಕ್ಷ್ಣವಾದ ಕೋರೆಗಳುಳ್ಳ ಗವಯನೂ, ಗವಾಕ್ಷನೂ, ಋಷಭನೂ, ಜ್ಯೋತಿರ್ಮುಖನೂ, ನಭನೂ, ಬಹಳ ಕೋಪಗೊಂಡವರಾಗಿ, ತಮ್ಮ ಮೈಯನ್ನು ಬೆಳೆಸಿಕೊಂಡು, ದೊಡ್ಡದೊಡ್ಡ ಬೆಟ್ಟಗಳನ್ನೂ ಕೈಗೆತ್ತಿಕೊಂಡು ರಾಕ್ಷಸರಾಜನಮೇಲೆ ನುಗ್ಗಿ ಅವುಗಳನ್ನು ಅವನ ಮೇಲೆ ಬೀಸಿದರು. ಇಷ್ಟರಲ್ಲಿಯೇ ರಾವಣನು ತೀಕ್ಷ್ಣಬಾಣಗಳಿಂದ ಅವರ ಪ್ರಹಾರಗಳನ್ನು ತಪ್ಪಿಸಿಕೊಂಡು, ಚಿನ್ನದ ಹಿಡಿಗಳುಳ್ಳ ಬಾಣಗಳನ್ನು ತೆಗೆದು ಆವಾನರರನ್ನು

ಮೇಲೆಮೇಲೆ ಪೀಡಿಸುತಿದ್ದನು. ವಾನರರೆಲ್ಲರೂ ಆ ರಾಕ್ಷಸನ ಬಾಣ ಗಳಿಂದ ಭೇದಿಸಲ್ಪಟ್ಟ ಮೈಯುಳ್ಳವರಾಗಿ ಕೈಸಾಗದೆ ಕೆಳಗೆ ಬಿದ್ದರು. ಅತ್ತಲಾಗಿ ರಾವಣನೂ ಕೂಡ, ಈ ಸಮಸ್ತ ವಾನರಸೈನ್ಯವನ್ನೂ ಎಡೆಬಿ ಡದೆ ತನ್ನ ಬಾಣಗಳಿಂದ ಮುಚ್ಚುತಿದ್ದನು. ಹೀಗೆ ಮಹಾವೀರರೆನಿಸಿಕೊಂಡ ಪ್ರಸಿದ್ಧವಾನರರೆಲ್ಲರೂ ರಾವಣನ ಬಾಣಪ್ರಹಾರದಿಂದ ನೊಂದು ಕೆಳಗೆ ಬಿದ್ದು ಕೂಗಿಡುತ್ತ, ಪ್ರಾಣಭಯವೆಂಬ ಶಲ್ಯದಿಂದ ನಾಟಿದ ಹೃದಯವು ಳ್ಳವರಾಗಿ, ಲೋಕಶರಣ್ಯನಾದ ರಾಮನ ಕಾಲುಗಳಲ್ಲಿ ಬಿದ್ದು ಮರೆಹೊಕ್ಕ ರು. ಆಗ ಮಹಾತ್ಮನಾಗಿಯೂ, ಮಹಾಧನುರ್ಧಾರಿಯಾಗಿಯೂ ಇರುವ ರಾಮನು, ಆ ವಾನರರನ್ನು ರಕ್ಷಿಸುವುದಕ್ಕಾಗಿ, ತನ್ನ ಬಿಲ್ಲನ್ನು ತೆಗೆದುಕೊಂ ಡು ಬೇಗನೆ ಮುಂದೆ ಹೊರಟನು. ಇಷ್ಟರಲ್ಲಿ ಲಕ್ಷ್ಮಣನು ರಾಮನ ಬಳಿಗೆ ಬಂದು ಕೈಮುಗಿದು, ಸಾರಯುಕ್ತವಾದ ಮಾತಿನಿಂದ ಆತನನ್ನು ಕುರಿತು "ಅಣ್ಣಾ! ದುರಾತ್ಮನಾದ ಈ ರಾವಣನನ್ನು ವಧಿಸುವುದೇನೂ ನಿನಗೊಂದು ದೊಡ್ಡದಲ್ಲ! ಪೂಜ್ಯನಾದ ನಿನ್ನ ಪರಾಕ್ರಮಕ್ಕೆ ಇದು ಅತ್ಯಲ್ಪಕಾರ್ಯವು. ಈ ನೀಚನಿಗಿದಿರಾಗಿ ನಿಂತು ಯುದ್ಧಮಾಡುವುದೇ ನಿನಗೆ ಯೋಗ್ಯವಲ್ಲ. ಆದುದರಿಂದ ಆ ಕಾರ್ಯಕ್ಕೆ ನನ್ನನ್ನು ನಿಯಮಿಸು! ನಾನೇ ಅವನನ್ನು ಕೊಂ ದು ಬರುವೆನು. ಅದಕ್ಕೆ ತಕ್ಕಶಕ್ತಿಯು ನನಗುಂಟು. ಆದರೆ ನಿನ್ನಾಜ್ಞೆಯಿ ಲ್ಲದೆ ನಾನೇ ಸ್ವತಂತ್ರಿಸಲಾರೆನು." ಎಂದನು. ಆಗ ಮಹಾತೇಜಸ್ವಿಯಾಗಿ ಯೂ, ಸತ್ಯಪರಾಕ್ರಮನಾಗಿಯೂ ಇರುವ ರಾಮನು, ಲಕ್ಷ್ಮಣನ ವಿನಯವಾ ಕ್ಯಕ್ಕೆ ಸಂತೋಷಗೊಂಡವನಾಗಿ "ವತ್ಸ ಲಕ್ಷ್ಮಣಾ! ಒಳ್ಳೆಯದು! ನೀನೇ ಹೋಗಿ ಯುದ್ಧಮಾಡು! ಅಲ್ಪಪರಾಕ್ರಮವುಳ್ಳವನೆಂದು ಅವನಲ್ಲಿ ಅಲಕ್ಷ್ಯವನ್ನುಮಾತ್ರ ತೋರಿಸದೆ, ಯುದ್ಧದಲ್ಲಿ ಎಚ್ಚರಿಕೆಯಿಂದಿರು. ಅವನು ಸಾಮಾನ್ಯನೆಂದು ತಿಳಿಯಬೇಡ! ಮಹಾವೀರ್ಯವುಳ್ಳವನು. ಆಶ್ಚರ್ಯಕರವಾದ ಪರಾಕ್ರಮವುಳ್ಳವನು. ಅವನು ಕ್ರುದ್ಧನಾದಪಕ್ಷದಲ್ಲಿ ಮೂರುಲೋಕ ವೂ ಒಂದಾಗಿ ದಂಡೆತ್ತಿಬಂದರೂ ಅವನನ್ನಿದಿರಿಸಿ ನಿಲ್ಲಲಾರದು. ಆ ರಾವ ಣನು ಒಂದಸ್ತ್ರವನ್ನು ಸಂಧಾನಮಾಡುವಂತೆ ತೋರಿಸಿ, ಬೇರೊಂದಸ್ತ್ರ ವನ್ನು ಸಂಧಾನಮಾಡುವನು. ಒಂದಸ್ತ್ರವನ್ನು ಪ್ರಯೋಗಿಸಿದಂತೆ ನಟಿಸಿ, ಬೇರೊಂದಸ್ತ್ರವನ್ನು ಪ್ರಯೋಗಿಸುವನು. ಆದುದರಿಂದ ನೀನು ಆಗಾಗ ಅವ

ನ ಸಂಚುಗಳನ್ನು ತಿಳಿದು ಯತ್ನದಿಂದ ಯುದ್ಧಮಾಡಬೇಕು! ನೀನೂ ಕ
ನಿಗೆ ಸಂಚನ್ನು ಕೊಡದಂತೆ ಎಚ್ಚರಿಕೆಯಿಂದಿರಬೇಕು. ವತ್ಸಲಕ್ಷ್ಮಣು
ಹೀಗೆ ನೀನು ಎಚ್ಚರಿಕೆಯಿಂದ ಕಣ್ಣಿಟ್ಟು ಕಾಯುತ್ತ, ನಿನ್ನ ಧನುವಿ
ಯ ಚಾತುರ್ಯದಿಂದಲೇ ನಿನ್ನನ್ನು ರಕ್ಷಿಸಿಕೊಳ್ಳಬೇಕು"ಎಂದನು. ರಾವಾ
ಹೇಳಿದ ಬುದ್ಧಿವಾದನ್ನು ಕೇಳಿ ಲಕ್ಷ್ಮಣನು ಸಂತೋಷದಿಂದ ಆತನ
ಕೊಂಡು, ಅವನಿಗೆ ಪ್ರದಕ್ಷಿಣವನ್ನು ಮಾಡಿ, ನಮಸ್ಕರಿಸಿ ಯುದ್ಧ
ಹೊರಟನು. ಆನೆಯ ಸುಂಡಿಲಿನಂತೆ ಭುಜವುಳ್ಳ ಆ ಲಕ್ಷ್ಮಣನು ಮು
ಹೋಗಿ, ಅಲ್ಲಿ ದೇದೀಪ್ಯಮಾನವಾದ ಭಯಂಕರಧನುಸ್ಸನ್ನು ಕೈಯಿಂ
ಹಿಡಿದು ವಾನರರಮೇಲೆ ಬಾಣವರ್ಷವನ್ನು ಕರೆಯುತಿದ್ದ ರಾವಣನನ್ನ
ಬಾಣದಿಂದ ಗಾಯಪಟ್ಟು ಚದುರುತ್ತಿರುವ ವಾನರರನ್ನೂ ನೋಡಿದ
ಇಷ್ಟರಲ್ಲಿ ಮಹಾತೇಜಸ್ವಿಯಾಗಿಯೂ, ವಾಯುಪುತ್ರನಾಗಿಯೂ ಇ
ಹನುಮಂತನು,ವಾನರರಮೇಲೆ ಬಾಣವರ್ಷವನ್ನು ಕರೆಯುತ್ತಿರುವ ರಾ
ನನ್ನಿದಿರಿಸುವುದಕ್ಕಾಗಿ,ಲಕ್ಷ್ಮಣನು ಬರುತ್ತಿರುವುದನ್ನು ನೋಡಿ,ತಾನೇ ಸ
ಡಲು ಮುಂದೆ ನುಗ್ಗಿ ರಾವಣನ ಬಾಣಸಮೂಹಗಳನ್ನು ತಡೆದು ಅವ
ರಾಗಿ ಓಡಿದನು. ಧೀಮಂತನಾದ ಆ ಹನುಮಂತನು ರಾವಣನ ರಥ
ಸಮೀಪಿಸಿದೊಡನೆ ತನ್ನ ಬಲದೋಳನ್ನು ಮೇಲಕ್ಕೆತ್ತಿ, ರಾವಣನನ್ನು ಹೆ
ಸುತ್ತ, ಅವನನ್ನು ಕುರಿತು, "ಎಲೆ ರಾವಣಾ! ಸಾಕು ನಿಲ್ಲಿಸು!
ದೇವದಾನವಯಕ್ಷಗಂಧರ್ವರಾಕ್ಷಸರಲ್ಲಿ ಯಾರೊಬ್ಬರಿಂದಲೂ ಮರಣ
ದಂತೆ ವರವನ್ನು ಪಡೆದು ಬಂದಿರಬಹುದು.ಆದರೇನು?ವಾನರರಿಂದ
ನಿನಗೆ ಎಂದಿಗೂ ಭಯವು ತಪ್ಪದು. ಇದೋ!ಐದುಕವಲುಗಳುಳ್ಳ
ಬಲದೋಳನ್ನೆತ್ತಿರುವೆನು ನೋಡು. ಈ ನನ್ನ ಭುಜವೇ ನಿನ್ನನ್ನು ಕೊ
ನಿನ್ನ ದೇಹದಲ್ಲಿ ಬಹುಕಾಲದಿಂದ ಸೇರಿಕೊಂಡಿರುವ ಜೀವಾತ್ಮನನ್ನು ಹೊ
ಕ್ಕೆ ಕಿತ್ತೆಸೆಯುವುದು" ಎಂದನು. ಹನುಮಂತನ ವಾಕ್ಯವನ್ನು ಕೇಳಿ ಭ
ರಪರಾಕ್ರಮವುಳ್ಳ ರಾವಣನು, ಕೋಪದಿಂದ ಕೆಂಪೇರಿದ ಕಣ್ಣುಳ್ಳ
ಗಿ, "ಎಲೆ ವಾನರಾ! ಹಾಗೆಯೇ ಆಗಲಿ! ನಿರ್ಭಯವಾಗಿ ನಿಂತು
ದಾದಮಟ್ಟಿಗೆ ಶೀಘ್ರದಲ್ಲಿಯೇ ಪ್ರಹರಿಸು! ಯಾವುದೋ ಒಂದು
ಕಪಿಯು ರಾಕ್ಷಸಚಕ್ರವರ್ತಿಯಾದ ರಾವಣನನ್ನು ಕೈಯೆತ್ತಿ ಹೊಡೆ

...ನೂ ಕೀರ್ತಿಯಾದರೂ ನಿನಗೆ ಸ್ಥಿರವಾಗಿ ನಿಲ್ಲಲಿ! ನನಗೂ ನಿನ್ನ ಶಕ್ತಿಯೆಷ್ಟೆಂ
...ಷ್ಟ್ರಿಗು ತಿಳಿಯುವುದು. ಆಮೇಲೆ ನಾನು ನಿನ್ನನ್ನು ನೋಡಿಕೊಳ್ಳುವೆನು." ಎಂದ
...ನುಮಿ. ರಾವಣನ ಮಾತನ್ನು ಕೇಳಿ ತಿರುಗಿ ಆಂಜನೇಯನು ಅವನನ್ನು ಕುರಿತು
... ರಾವಾವಣಾ! ನೀನು ನನ್ನ ಶಕ್ತಿಯನ್ನು ಈಗ ಹೊಸದಾಗಿ ತಿಳಿಯಬೇಕೆ?
...ತನ್ನ...ದಲೇ ನಾನು ನಿನ್ನ ಮಗನಾದ ಅಕ್ಷಕುಮಾರನನ್ನು ಇದೇ ಮುಷ್ಟಿ
...ಯುಳಿಂದ ಕೊಂದು ಕೆಡಹಿದೆನಲ್ಲವೆ? ಅದನ್ನು ಸ್ಮರಿಸಿಕೊಂಡು ನೋಡು"
... ನುಡಿದನು. ಈ ಮಾತನ್ನು ಕೇಳಿದಕ್ಷಣವೇ ರಾವಣನು ತನ್ನ ಭುಜವನ್ನೆತ್ತಿ
...ಯಿಂ ಆಂಜನೇಯನ ಎದೆಯಮೇಲೆ ಅಂಗೈಯಿಂದ ಹೊಡೆದನು. ರಾವಣನ ಅಂಗೈ
...ಏಟಿಗೆ ಹನುಮಂತನ ದೇಹವು ಅದಿರಿಹೋಯಿತು. ಹಾಗಿದ್ದರೂ ಆಂಜನೇ
...ಡಿದನು ಮಹಾವೀರ್ಯವುಳ್ಳವನಾಗಿಯೂ, ಧೀರನಾಗಿಯೂ ಇದ್ದುದರಿಂದ,
... ಇಷಮಾತ್ರದವರೆಗೆ ಹಾಗೆಯೇ ನಿಂತಿದ್ದು, ಮನಸ್ಸಿಗೆ ಸ್ಥೈರ್ಯವನ್ನು ತಂದು
... ರಾ...ಂಡು, ಕೋಪದಿಂದ ಕೈಯನ್ನೆತ್ತಿ ರಾವಣನನ್ನು ಪ್ಪಳಿಸಿದನು. ಬ...
...ನೇ ಸವುಂಟಾದಾಗ ಪರ್ವತವು ನಡುಗುವಂತೆ ನಾದಮಾಡ ನಗುತ್ತಿರುವನು. ಮ
...ಅವ. ಹಸ್ತಪ್ರಹಾರಕ್ಕೆ ರಾವಣನ ಬಾಣಪ್ರಹಾರಕ್ಕೆ ಸಿಕ್ಕದಂತೆ ಧ್ವಜಾಗ್ರದಿಂ
...ರಥದ ಧ್ವಜವನ್ನು ...ಯಮೇಲೆ ಹಾರಿಬೀಳುವನು. ತಲೆಯಿಂದ ಅವನ ಕೈಯಲ್ಲಿದ್ದ
...ನ್ನ ಪತೆಗಳ... ತುದಿಗೆ ಹಾರುವನು. ಅಲ್ಲಿಂದ ಪುನಃ ಕಿರೀಟವನ್ನು ಮೆಟ್ಟಿಕೊಂಡು
...! ...ಖಾಗ್ರಕ್ಕೆ ಹಾರುವನು. ಹೀಗೆ ನಿಂತಲ್ಲಿ ನಿಲ್ಲದೆ, ಅಲ್ಲಿಂದಲ್ಲಿಗೆ ಹಾರಾಡುತ್ತಿ
...ರಣುವ ನೀಲನ ಸಂಚಾರಚಾತುರ್ಯವನ್ನು ನೋಡಿ, ಲಕ್ಷ್ಮಣನೂ, ಹನುಮಂ
...ದಮನನೂ, ರಾಮನೂ ಆತ್ಯಾಶ್ಚರ್ಯಗೊಂಡರು. ಮಹಾತೇಜಸ್ವಿಯಾದ ರಾವಣ
... ಕೂಡ ನೀಲನ ಲಾಘವಕ್ಕಾಗಿ ವಿಸ್ಮಯಗೊಂಡಿದ್ದು, ಕೊನೆಗೆ ಅವ
...ನನ್ನು ನಿಗ್ರಹಿಸಿಬಿಡಬೇಕೆಂದು, ಅದ್ಭುತಕಾಂತಿಯುಳ್ಳ ಆಗ್ನೇಯಾಸ್ತ್ರವನ್ನು
...ನ್ನ ಹೂಡಿದನು. ಇತ್ತಲಾಗಿ ವಾನರರೆಲ್ಲರೂ ನೀಲನ ದೇಹಲಾಘವದಿಂದ ಸಂ
...ಭ್ರಾಂತನಾದ ರಾವಣನನ್ನು ನೋಡಿ ಸಂತೋಷದಿಂದುಬ್ಬುತ್ತ ಸಿಂಹನಾ
...ದಮಾಡುತಿದ್ದರು. ಈ ವಾನರರ ಸಿಂಹನಾದಧ್ವನಿಯು, ರಾವಣನಿಗೆ
...ಮತ್ತಷ್ಟು! ಕೋಪವನ್ನು ಹೆಚ್ಚಿಸಿತು. ಇವರ ಅಟ್ಟಹಾಸಗಳನ್ನು ನೋಡಿರಾ
...ವಣನು ಮುಹೂರ್ತಕಾಲದವರೆಗೆ ಏನೊಂದೂ ತೋರದೆ ಭ್ರಮೆಹಿಡಿದಂ
...ದ್ದನು. ಕೊನೆಗೆ ರಾವಣನು ಆಗ್ನೇಯಾಸ್ತ್ರದಿಂದ ಮಂತ್ರಿತವಾದ ಬಾಣ

ಹರಿಂದೇನು?ಒಂದೇ ಮುಷ್ಟಿಪ್ರಹಾರದಿಂದ ನಾನು ನಿನ್ನನ್ನು ಯಮಪುರಿಗೆ ಕಳುಹಿಸಿಬಿಡುವೆನು"ಎಂದನು. ಈ ಮಾತನ್ನು ಕೇಳಿ ರಾವಣನಿಗೆ ಮಿತಿಮೀರಿ ಕೋಪವು ಹುಟ್ಟಿತು. ಅವನ ಕಣ್ಣುಗಳೆಲ್ಲವೂ ಕೆಂಡದಂತೆ ಕೆಂಪಾದುವು. ಆಗ ವೀರ್ಯವಂತನಾದ ರಾವಣನು, ತನ್ನ ಬಲಗೈಯನ್ನು ಮೇಲಕ್ಕೆತ್ತಿ, ಘೃಣವಾದ ಮುಷ್ಟಿಯನ್ನು ಹಿಡಿದು ಹನುಮಂತನ ಎದೆಯಮೇಲೆ ಗುದ್ದಿದನು. ಆ ಪ್ರಹಾರದಿಂದ ತಿರುಗಿ ಹನುಮಂತನ ದೇಹವು ನಡುಗಿ ಸಿಶ್ಚೇಷ್ಟವಾಯಿತು. ಇಷ್ಟರಲ್ಲಿ ಅತಿರಥನಾದ ರಾವಣನು,ಹನುಮಂತನು ಮೂರ್ಛಿತನಾದನೆಂಬುದನ್ನು ತಿಳಿದು,ಶೀಘ್ರದಲ್ಲಿ ತನ್ನ ರಥವನ್ನು ನಡೆಸಿಕೊಂಡು ನೀಲನೆಂಬ ವಾನರಸೇನಾಪತಿಯಮೇಲೆ ನುಗ್ಗಿದನು. ಬಹಳ ಪರಾಕ್ರಮಿಯಾದ ಆ ದಶಕಂಠನು ಮರ್ಮಬೇಧಕಗಳಾಗಿಯೂ, ಸರ್ಪಗಳಂತೆ ಕ್ರೂರಗಳಾಗಿಯೂ, ಭಯಂಕರಗಳಾಗಿಯೂ ಇರುವ ಬಾಣಗಳಿಂದ ವಾನರಬಲಾಧ್ಯಕ್ಷನಾದ ನೀಲನನ್ನು ಪೀಡಿಸಿದನು. ಈ ಬಾಣಗಳಿಂದ ಪೀಡಿತನಾದ ನೀಲನು, ಒಂದೇ ಕೈಯಿಂದ ನನ್ನ ದರಿಸುವುದಕ್ಕಾಗಿ,ಲಕ್ಷ್ಮ[illegible]ಗವನ್ನು ಕಿತ್ತುತಂದು, ರಾವಣನ ದಲು ಮುಂದೆ ನುಗ್ಗಿ ರಾವಣನ ಬಾಣಸಮೂಹ[illegible]ಯಾಗಿಯೂ, [illegible] ರಾಗಿ ಓಡಿದನು. ಧೀಮಂತನಾದ ಆ ಹನುಮಂತನು [illegible] ರಥಕ್ಕೆ ಸಮೀಪಿಸಿದೊಡನೆ ತನ್ನ ಬಲದೋಳನ್ನು ಮೇಲಕ್ಕೆತ್ತಿ, ರಾವಣನನ್ನು [illegible] ಸುತ್ತ, ಅವನನ್ನು ಕುರಿತು, "ಎಲೆ ರಾವಣಾ ! ಸಾಕು ನಿಲ್ಲಿಸು! [illegible] ದೇವದಾನವಯಕ್ಷಗಂಧರ್ವರಾಕ್ಷಸರಲ್ಲಿ ಯಾರೊಬ್ಬರಿಂದಲೂ ಮರಣವಿಲ್ಲ ದಂತೆ ವರವನ್ನು ಪಡೆದು ಬಂದಿರಬಹುದು.ಆದರೇನು?ವಾನರರಿಂದ ಮಾತ್ರ ನಿನಗೆ ಎಂದಿಗೂ ಭಯವು ತಪ್ಪದು. ಇದೋ!ಐದುಕವಲುಗಳುಳ್ಳ ಈ ನನ್ನ ಬಲದೋಳನ್ನೆತ್ತಿರುವೆನು ನೋಡು. ಈ ನನ್ನ ಭುಜವೇ ನಿನ್ನನ್ನು ಕೊಂದು ನಿನ್ನ ದೇಹದಲ್ಲಿ ಬಹುಕಾಲದಿಂದ ಸೇರಿಕೊಂಡಿರುವ ಜೀವಾತ್ಮನನ್ನು ಹೊರಕ್ಕೆ ಕಿತ್ತೆಸೆಯುವುದು" ಎಂದನು. ಹನುಮಂತನ ವಾಕ್ಯವನ್ನು ಕೇಳಿ ಭಯಭ್ರಾಂತರಪರಾಕ್ರಮವುಳ್ಳ ರಾವಣನು, ಕೋಪದಿಂದ ಕೆಂಪೇರಿದ ಕಣ್ಣುಳ್ಳವನಾಗಿ, "ಎಲೆ ವಾನರಾ ! ಹಾಗೆಯೇ ಆಗಲಿ ! ನಿರ್ಭಯವಾಗಿ ನಿಂತು [illegible] ದಾದಮಟ್ಟಿಗೆ ಶೀಘ್ರದಲ್ಲಿಯೇ ಪ್ರಹರಿಸು! ಯಾವುದೋ ಒಂದು [illegible] ಕಪಿಯು ರಾಕ್ಷಸಚಕ್ರವರ್ತಿಯಾದ ರಾವಣನನ್ನು ಕೈಯೆತ್ತಿ ಹೊಡೆ[illegible]

ಲ್ಲಿ ಸಿಕ್ಕಿದ ಅಶ್ವಕರ್ಣ, ಆಲ, ಸಾಲೆ, ಪುಷ್ಪಿತವಾದ ಮಾವು, ಮೊದಲಾದ ನಾನಾಜಾತಿಯ ವೃಕ್ಷಗಳನ್ನು ಸಾಲುಸಾಲಾಗಿ ಕಿತ್ತುತಂದು, ಆ ವೃಕ್ಷಗಳನ್ನೆಲ್ಲಾ ರಾವಣನಮೇಲೆ ಎಡೆಬಿಡದೆ ಪ್ರಯೋಗಿಸುತಿದ್ದನು.ರಾವಣನಾದರೋ ಈ ವೃಕ್ಷಗಳೆಲ್ಲವನ್ನೂ ನಡುದಾರಿಯಲ್ಲಿಯೇ ತನ್ನ ಬಾಣಗಳಿಂದ ತುಂಡುತುಂಡಾಗಿ ಕತ್ತರಿಸಿದುದಲ್ಲದೆ, ಅಗ್ನಿಪುತ್ರನಾದ ಆ ನೀಲನಮೇಲೆಯೂ ಭಯಂಕರವಾದ ಬಾಣವರ್ಷವನ್ನು ಕರೆಯುತಿದ್ದನು. ಮೇಘವು ಪರ್ವತದಮೇಲೆ ಮಳೆಯನ್ನು ಕರೆಯುವಂತೆ ರಾವಣನು ತನ್ನಮೇಲೆ ಎಡೆಬಿಡದೆ ಬಾಣಗಳನ್ನು ಕರೆಯುತ್ತಿರಲು, ನೀಲನು ಕ್ಷಣಮಾತ್ರದಲ್ಲಿ ತನ್ನ ದೇಹವನ್ನು ಬಹಳ ಸೂಕ್ಷ್ಮವಾಗಿ ಮಾಡಿಕೊಂಡು, ತಟ್ಟನೆ ಮೇಲೆ ಹಾರಿ ರಾವಣನ ಧ್ವಜಾಗ್ರದಲ್ಲಿ ಬಂದು ಕುಳಿತನು. ನೀಲನು ತನ್ನ ಧ್ವಜಾಗ್ರದಲ್ಲಿ ಬಂದು ಕುಳಿತಿರುವುದನ್ನುನೋಡಿ, ರಾವಣನಿಗೆ ಮೇಲೆಮೇಲೆ ಆಕ್ರೋಶವು ಹೆಚ್ಚಿ, ಕೋಪಾಗ್ನಿಯಿಂದುರಿಯುವಂತಿದ್ದನು. ರಾವಣನು ಕೋಪದಿಂ ನಹಾರಿ ನೆಗೆಯುತಿದ್ದಷ್ಟೂ ನೀಲನು ಸಿಂಹನಾದಮಾಡಿ ನಗುತ್ತಿರುವನು.ಮತ್ತು ಆಗ ನೀಲನು ರಾವಣನ ಬಾಣಪ್ರಹಾರಕ್ಕೆ ಸಿಕ್ಕದಂತೆ ಧ್ವಜಾಗ್ರದಿಂ ರಾವಣನ ತಲೆಯಮೇಲೆ ಹಾರಿಬಿಳುವನು. ತಲೆಯಿಂದ ಅವನ ಕೈಯಲ್ಲಿದ್ದ ಧನುಸ್ಸಿನ ತುದಿಗೆ ಹಾರುವನು. ಅಲ್ಲಿಂದ ಪುನಃ ಕಿರೀಟವನ್ನು ಮೆಟ್ಟಿಕೊಂಡು ಧ್ವಜಾಗ್ರಕ್ಕೆ ಹಾರುವನು. ಹೀಗೆ ನಿಂತಲ್ಲಿ ನಿಲ್ಲದೆ, ಅಲ್ಲಿಂದಲ್ಲಿಗೆ ಹಾರಾಡುತ್ತಿರುವ ನೀಲನ ಸಂಚಾರಚಾತುರ್ಯವನ್ನು ನೋಡಿ, ಲಕ್ಷ್ಮಣನೂ, ಹನುಮಂತನೂ, ರಾಮನೂ ಅತ್ಯಾಶ್ಚರ್ಯಗೊಂಡರು. ಮಹಾತೇಜಸ್ವಿಯಾದ ರಾವಣನೂಕೂಡ ನೀಲನ ಲಾಘವಕ್ಕಾಗಿ ವಿಸ್ಮಯಗೊಂಡಿದ್ದು, ಕೊನೆಗೆ ಅವನನ್ನು ನಿಗ್ರಹಿಸಿಬಿಡಬೇಕೆಂದು,ಅದ್ಭುತಕಾಂತಿಯುಳ್ಳ ಆಗ್ನೇಯಾಸ್ತ್ರವನ್ನು ಹೂಡಿದನು. ಇತ್ತಲಾಗಿ ವಾನರರೆಲ್ಲರೂ ನೀಲನ ದೇಹಲಾಘವದಿಂದ ಸಂಭ್ರಾಂತನಾದ ರಾವಣನನ್ನು ನೋಡಿ ಸಂತೋಷದಿಂದುಬ್ಬುತ್ತ ಸಿಂಹನಾದಮಾಡುತಿದ್ದರು. ಈ ವಾನರರ ಸಿಂಹನಾದಧ್ವನಿಯು, ರಾವಣನಿಗೆ ಮತ್ತಷ್ಟು! ಕೋಪವನ್ನು ಹೆಚ್ಚಿಸಿತು.ಇವರ ಅಟ್ಟಹಾಸಗಳನ್ನು ನೋಡಿರಾವಣನು ಮುಹೂರ್ತಕಾಲದವರೆಗೆ ಏನೊಂದೂ ತೋರದೆ ಭ್ರಮೆಹಿಡಿದಂತಿದ್ದನು. ಕೊನೆಗೆ ರಾವಣನು ಆಗ್ನೇಯಾಸ್ತ್ರದಿಂದ ಮಂತ್ರಿತವಾದ ಬಾಣ

ವನ್ನೆತ್ತಿ, ಧ್ವಜಾಗ್ರದಲ್ಲಿದ್ದ ನೀಲನನ್ನು ನಟ್ಟಕಣ್ಣಿಂದ ದುರದುರನೆ ನೋಡಿದನು. ಮತ್ತು ಮಹಾತೇಜಸ್ವಿಯಾದ ಆ ರಾಕ್ಷಸಚಕ್ರವರ್ತಿಯು, ನೀಲನನ್ನು ನೋಡಿ ಕೋಪದಿಂದ "ಎಲೈ ಚಪಲಸ್ವಭಾವವುಳ್ಳ ವಾನರನೆ! [1] ನೀನು ದೊಡ್ಡಮಾಯೆಯನ್ನು ಹಿಡಿದು ಇಷ್ಟೊಂದು ಚಾತುರ್ಯವನ್ನು ತೋರಿಸುವಂತಿದೆ. ಅದರೇನು? ಈಗಲೂ ನಿನಗೆ ಶಕ್ತಿಯಿದ್ದಪಕ್ಷದಲ್ಲಿ ನಿನ್ನ ಪ್ರಾಣವನ್ನು ನೀನು ರಕ್ಷಿಸಿಕೊಳ್ಳುವವನಾಗು? ಎಲೆ ವಾನರಾ! ನೀನು ನಿನ್ನ ರೂಪಗಳನ್ನು ಬೇರೆಬೇರೆ ವಿಧದಿಂದ ಕ್ಷಣಕ್ಷಣಕ್ಕೂ ಮಾರ್ಪಡಿಸಿಕೊಂಡು ಅನೇಕವಿಧವಾದ ಮಾಯೆಯನ್ನು ತೋರಿಸುವೆಯಷ್ಟೆ? ಹಾಗಿದ್ದರೂ ಈಗ ನಾನು ಅಗ್ನಿಮಂತ್ರದಿಂದಭಿಮಂತ್ರಿಸಿ ಪ್ರಯೋಗಿಸಿರುವ ಈ ಬಾಣವು ನಿನ್ನನ್ನು ಬಿಡಲಾರದು. ನೀನು ಎಷ್ಟೇ ತಂತ್ರಗಳನ್ನು ನಡೆಸಿದರೂ ನಿನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳಲಾರೆ. ಇದು ನಿನ್ನ ಜೀವವನ್ನು ನೀಗಿಸುವುದರಲ್ಲಿ ಸಂದೇಹವಿಲ್ಲ" ಎಂದನು. ಮಹಾಬಾಹುವಾದ ಆ ರಾಕ್ಷಸೇಶ್ವರನು ಹೀಗೆಂದು ಹೇಳಿ, ಅಗ್ನಿಮಂತ್ರದಿಂದ ಬಾಣವನ್ನಭಿಮಂತ್ರಿಸಿ, ಬಿಲ್ಲಿನಲ್ಲಿ ಸಂಧಾನಮಾಡಿ ನೀಲನಮೇಲೆ ಪ್ರಯೋಗಿಸಿದನು. ಅಗ್ನಿಮಂತ್ರದಿಂದ ಮಂತ್ರಿಸಲ್ಪಟ್ಟ ಆ ಬಾಣವು ನೀಲನ ಎದೆಯಲ್ಲಿ ನಾಟಿದೊಡನೆಯೇ, ಆತನು ಅದರ ಜ್ವಾಲೆಯಿಂದ ದಗ್ಧನಾಗಿ ತಟ್ಟನೆ ಧ್ವಜಾಗ್ರದಿಂದ ಕೆಳಗೆ ಬಿದ್ದನು. ಆದರೆ ಆ ನೀಲನು ಅಗ್ನಿದೇವನ ಮಗನಾದುದರಿಂದ, ತಂದೆಯಾದ ಆ ಅಗ್ನಿಯ ಅನುಗ್ರಹದಿಂದಲೂ,ತನ್ನ ತೇಜಃಪ್ರಭಾವದಿಂದಲೂ ನೆಲದಮೇಲೆ ಬಿದ್ದಾಗಲೂ ಮೊಳಕಾಲುಗಳನ್ನೂರಿ ಆಗಲೂ ಪ್ರಾಣಸಹಿತನಾಗಿಯೇ ನಿಂತಿದ್ದನು. ಆದರೆ ಅವನಿಗೆ ಮೈಮೇಲೆ ಪ್ರಜ್ಞೆಯು ತಪ್ಪಿತು. ಹೀಗೆ ನೀಲನು ಮೂರ್ಛಿತನಾಗಿರುವುದನ್ನು

---

1 ಇಲ್ಲಿ ನೀಲನು ತನ್ನ ದೇಹಲಾಘವದಿಂದ ಕ್ಷಣಕ್ಷಣಕ್ಕೂ ಧ್ವಜಾಗ್ರದಲ್ಲಿಯೂ, ಧನುರಗ್ರದಲ್ಲಿಯೂ, ಕಿರೀಟಾಗ್ರದಲ್ಲಿಯೂ ಕಾಣಿಸಿಕೊಳ್ಳುವುದನ್ನು ನೋಡಿದಾಗ ರಾವಣನಿಗೆ, ನೀಲನು ಮಾಯಾಬಲದಿಂದಲೇ ಹಾಗೆ ಅನೇಕರೂಪಗಳನ್ನು ಸೃಷ್ಟಿಸಿಕೊಂಡು ಎಲ್ಲಾಕಡೆಗಳಲ್ಲಿಯೂ ಕಾಣುತ್ತಿರುವನೆಂಬ ಭ್ರಾಂತಿಯು ಹುಟ್ಟಿ ಹೀಗೆ ಹೇಳಿದುದಾಗಿ ತಿಳಿಯಬೇಕು.

ನೋಡಿ ರಾವಣನು, ಮುಂದಿನ ಶತ್ರುವನ್ನಿದಿರಿಸುವುದರಲ್ಲಿ ಆತುರವುಳ್ಳನಾಗಿ, ಮೇಘಧ್ವನಿಯಂತೆ ಶಬ್ದಿಸುತ್ತಿರುವ ತನ್ನ ರಥವನ್ನು ಲಕ್ಷ್ಮಣನಿದ್ದ ಕಡೆಗೆಬಿಟ್ಟನು. ಹೀಗೆ ರಾವಣನು ಲಕ್ಷ್ಮಣನ್ನಿದಿರಿಸಿ ಹೋಗುತ್ತಿರುವಾಗ, ತನಗಡ್ಡಲಾಗಿ ಬಂದ ಸುಗ್ರೀವಾದಿಗಳನ್ನು ನಿಗ್ರಹಿಸಿ ತಡೆದು, ಕೋಪದಿಂದ ಜ್ವಲಿಸುತ್ತ, ಸಮಸ್ತಭೂಮಿಯನ್ನೂ ನಡುಗಿಸುವಂತೆ ಧನುಷ್ಟಂಕಾರವನ್ನು ಮಾಡಿದನು. ಇಷ್ಟರಲ್ಲಿ ಮಹಾಬಲಾಢ್ಯನಾದ ಲಕ್ಷ್ಮಣನು, ತನಗಿದಿರಾಗಿ ದೊಡ್ಡ ಧನುಷ್ಟಂಕಾರದೊಡನೆ ರಥಸ್ಥನಾಗಿ ಬರುತಿದ್ದ ರಾವಣನನ್ನು ನೋಡಿ, "ರಾಕ್ಷಸೇಂದ್ರಾ! ಭಲೆ! ಇದೀಗಸರಿ! ನಿನಗೆ ವಾನರರೊಡನೆ ಯುದ್ಧವೇಕೆ? ನನ್ನೊಡನೆ ಯುದ್ಧಮಾಡು" ಎಂದನು. ಹೀಗೆ ಲಕ್ಷ್ಮಣನು ಯುದ್ಧಕ್ಕೆ ಕರೆಯುವುದನ್ನು ನೋಡಿ ರಾವಣನು, ಆ ಲಕ್ಷ್ಮಣನ ಗಂಭೀರವಾದ ಕಂಠಸ್ವರವನ್ನೂ, ಭಯಂಕರವಾದ ಆತನ ಜ್ಯಾಶಬ್ದವನ್ನೂ ಕೇಳಿ, ಯುದ್ಧಸನ್ನದ್ಧನಾಗಿ ನಿಂತಿದ್ದ ಆ ಲಕ್ಷ್ಮಣನ ಸಮೀಪಕ್ಕೆ ಬಂದು, ಕೋಪದಿಂದ ಅವನನ್ನು ಕುರಿತು "ಲಕ್ಷ್ಮಣಾ! ನಿನಗೆ ವಿನಾಶಕಾಲಕ್ಕಾಗಿಯೇ ಈ ವಿಪರೀತಬುದ್ಧಿಯು ಹುಟ್ಟಿದಂತಿದೆ. ಭಾಗ್ಯವಶದಿಂದ ನೀನು ನನ್ನ ಕಣ್ಣಿಗೆ ಗೋಚರಿಸಿದೆ. ಈಗಲೇ ನನ್ನ ಬಾಣಗಳಿಂದ ಪೀಡಿತನಾಗಿ ನೀನು ಯಮಪುರಿಗೆ ಹೋಗಬೇಕಾಗುವುದು" ಎಂದನು. ಹೀಗೆ ರಾವಣನು ಬಿಳೀ ಕೋರೆಹಲ್ಲುಗಳಿಂದ ಭಯಂಕರನಾಗಿ ಆರ್ಭಟಿಸಿ ಗರ್ಜಿಸುತ್ತ ಬಂದು ನಿಂತುದನ್ನು ನೋಡಿಯೂ ಲಕ್ಷ್ಮಣನು, ಅವನನ್ನು ಹುಲ್ಲಿಗಿಂತಲೂ ಕಡೆಯಾಗಿ ಭಾವಿಸಿ "ಎಲೇ ರಾಕ್ಷಸರಾಜಾ? ನಿಜವಾಗಿಯೂ ದೊಡ್ಡ ಪ್ರಭಾವವುಳ್ಳವರು ನಿನ್ನಹಾಗೆ ಆತ್ಮಸ್ತುತಿಯನ್ನುಮಾಡಿ ಗರ್ಜಿಸಲಾರು. ನೀನು ಮಹಾ ಪಾಪಿಷ್ಠನಾದುದರಿಂದಲೇ ಹೀಗೆ ಆತ್ಮಸ್ತುತಿಯಲ್ಲಿ ಪ್ರವರ್ತಿಸಿರುವೆ! ಎಲೆ ರಾಕ್ಷಸಾ? ನಿನ್ನ ಬಲಪರಾಕ್ರಮಗಳನ್ನು ನಾನು ಕಾಣೆನೆ? ಹಿಂದೆ ನೀನು ನಿರ್ಜನಪ್ರದೇಶದಲ್ಲಿಯೂ ನಮ್ಮ ಭಯಕ್ಕಾಗಿ ಯತಿವೇಷದಿಂದ ಬಂದು ಸೀತೆಯನ್ನು ಕದ್ದುತಂದವನಲ್ಲವೆ? ಶತ್ರುಗಳನ್ನು ಭಯಪಡಿಸತಕ್ಕ ನಿನ್ನ ಪ್ರತಾಪವು ನನಗೆ ಆಗಲೇ ಚೆನ್ನಾಗಿ ತಿಳಿಯಿತು. ರಾವಣಾ! ಹೆಚ್ಚು ಮಾತಿನಿಂದೇನು? ಇದೋ! ಧನುರ್ಬಾಣಗಳನ್ನು ಹಿಡಿದು ಸಿದ್ಧನಾಗಿ ನಿಂತಿರುವೆನು. ಮುಂದೆ ಬಂದು ಯುದ್ಧಕ್ಕೆ ನಿಲ್ಲು! ವ್ಯರ್ಥವಾದ ನಿನ್ನ

ಆತ್ಮಸ್ತುತಿಯಿಂದ ಫಲವೇನು?"ಎಂದನು.ಲಕ್ಷ್ಮಣನು ಹೇಳಿದ ಈ ದರ್ಪದ
ಮಾತನ್ನು ಕೇಳಿ ರಾವಣನು ಕೋಪದಿಂದ ಜ್ವಲಿಸುತ್ತ, ಚಿನ್ನದ ಹಿಡಿಗಳು
ಳ್ಳ ಏಳುಬಾಣಗಳನ್ನು ಆತನಮೇಲೆ ಪ್ರಯೋಗಿಸಿದನು. ಲಕ್ಷ್ಮಣನೂ
ಹಾಗೆಯೇ ಸುವರ್ಣಪುಂಖಗಳುಳ್ಳ ತೀಕ್ಷ್ಣಬಾಣಗಳಿಂದ, ರಾವಣನ ಬಾಣ
ಗಳನ್ನು ಕತ್ತರಿಸಿ ಕೆಡಹಿದನು. ಮೈಮುರಿದು ಬೀಳುವ ಮಹಾಸರ್ಪಗಳಂತೆ
ತನ್ನ ಬಾಣಗಳು ತುಂಡಾಗಿ ಬಿದ್ದುದನ್ನು ನೋಡಿ ರಾವಣನಿಗೆ ಇನ್ನೂ
ಕೋಪವು ಹೆಚ್ಚಿತು. ಆ ಕೋಪದಿಂದ ಮೈಮರೆತು ತಿರುಗಿ ಪರಂಪ
ರೆಯಾಗಿ ಬಾಣಗಳನ್ನು ಬಿಡುವುದಕ್ಕೆ ತೊಡಗಿದನು. ಇತ್ತಲಾಗಿ ಲಕ್ಷ್ಮಣ
ನೂ ತನ್ನ ಬಾಣಗಳಿಂದ ಅವುಗಳನ್ನು ಕತ್ತರಿಸುತ್ತ,ರಾವಣನನ್ನೂ ಪ್ರಹರಿ
ಸುತಿದ್ದನು. ಲಕ್ಷ್ಮಣನು ಮೇಲೆಮೇಲೆ ಕ್ಷುರಾಕಾರದ (ಕ್ಷೌರದ ಕತ್ತಿಯ
ಆಕಾರವುಳ್ಳ) ಕೆಲವು ಬಾಣಗಳನ್ನೂ, ಅರ್ಧಚಂದ್ರಾಕಾರದ ಮೊನೆಯು
ಳ್ಳ ಕೆಲವು ಬಾಣಗಳನ್ನೂ, ಕಿವಿಗಟ್ಟದಂತಿರುವ ಕವಲುಬಾಣಗಳನ್ನೂ,
ಭಲ್ಲದಂತಿರುವ ಬಾಣಗಳನ್ನೂ ತನ್ನ ಬಿಲ್ಲಿನಿಂದ ಪ್ರಯೋಗಿಸಿ, ಆ ರಾವಣನ
ಬಾಣಗಳನ್ನು ತುಂಡುಮಾಡಿ ಕೆಡಹುತಿದ್ದನು. ಇವನ ಧೈರ್ಯವು ಮೇಲೆಮೇ
ಲೆ ಹೆಚ್ಚುತಿತ್ತೇ ಹೊರತು ಸ್ವಲ್ಪವಾದರೂ ಕದಲಲಿಲ್ಲ.ಆಗ ರಾವಣನು,ತಾ
ನು ಪ್ರಯೋಗಿಸಿದ ಬಾಣಸಮೂಹಗಳೆಲ್ಲವನ್ನೂ ಲಕ್ಷ್ಮಣನು ವಿಫಲವಾ
ಗಿ ಮಾಡುವುದನ್ನು ನೋಡಿ, ಆತನ ಬಾಣಪ್ರಯೋಗಚಾತುರ್ಯಕ್ಕಾಗಿ ತ
ನ್ನಲ್ಲಿ ತಾನೇ ವಿಸ್ಮಯಪಡುತ್ತ, ತಿರುಗಿ ಅದಕ್ಕಿಂತಲೂ ತೀಕ್ಷ್ಣಗಳಾದ ಬಾ
ಣಗಳನ್ನು ಪ್ರಯೋಗಿಸಿದನು. ಅದನ್ನು ನೋಡಿ ಇತ್ತಲಾಗಿ ಲಕ್ಷ್ಮಣನೂ
ಕೂಡ ಆಗಲೇ ರಾವಣನನ್ನು ಕೊಂದುಬಿಡಬೇಕೆಂದೆಣಿಸಿ, ಇಂದ್ರನ ವ
ಜ್ರಾಯುಧಕ್ಕೂ, ಸಿಡಿಲಿಗೂ ಸಮಾನವಾದ ವೇಗವುಳ್ಳುದಾಗಿ,ಅಗ್ನಿಜ್ವಾಲೆ
ಯಂತಿದ್ದ ಕೆಲವು ತೀಕ್ಷ್ಣ ಬಾಣಗಳನ್ನು ತೆಗೆದು,ಧನುಸ್ಸಿನಲ್ಲಿ ಸಂಧಾನಮಾ
ಡಿ ಪ್ರಯೋಗಿಸಿದನು. ಈ ಬಾಣಗಳನ್ನೂ ರಾವಣನು ತನ್ನ ಬಾಣಗಳಿಂದ
ಖಂಡಿಸಿದನು.ಹೀಗೆ ಲಕ್ಷ್ಮಣನ ಬಾಣಗಳನ್ನು ಖಂಡಿಸಿದಮೇಲೆ ರಾವಣನು,
ಅವನನ್ನು ಕೊಂದೇಬಿಡಬೇಕೆಂದು ನಿಶ್ಚಯಿಸಿ,ತನಗೆ ಬ್ರಹ್ಮದೇವನ ಅನುಗ್ರ
ಹಬಲದಿಂದ ಬಂದುದಾಗಿಯೂ,ಪ್ರಳಯಕಾಲಾಗ್ನಿಯಂತೆ ದೇದೀಪ್ಯಮಾನ
ವಾಗಿಯೂ ಇದ್ದ ಒಂದು ಬಾಣವನ್ನು ತೆಗೆದು,ಲಕ್ಷ್ಮಣನ ಲಲಾಟದಲ್ಲಿ ನಾ



೨೪೪೩. ಲಕ್ಷ್ಮಣನು ರಾವಣಶಕ್ತಿತಾಡಿತನಾಗಿ ಮೂರ್ಛೆಹೊಂದಿದುದು.

ರಾಮ ರಾವಣಯುದ್ಧವು.

ಟಿದನು. ಈ ಬಾಣಹತಿಯಿಂದ ಲಕ್ಷ್ಮಣನು ಬಹಳ ನೊಂದವನಾಗಿ ಪ್ರಜ್ಞೆ ತಪ್ಪಿದಂತಾದರೂ, ಕೈಯಿಂದ ಸಡಿಲಿ ಬೀಳುತಿದ್ದ ಧನುಸ್ಸನ್ನು ಪ್ರಯತ್ನದಿಂದ ಹಿಡಿದು ನಿಂತು, ತಿರುಗಿ ಕ್ಷಣಕಾಲದಮೇಲೆ ಚೇತರಿಸಿಕೊಂಡು, ಅತಿತೀಕ್ಷ್ಣವೇಗವುಳ್ಳ ಬಂದು ಬಾಣವನ್ನು ಪ್ರಯೋಗಿಸಿ, ರಾವಣನ ಕೈಯಲ್ಲಿದ್ದ ಧನುಸ್ಸನ್ನು ಕತ್ತರಿಸಿಕಡಹಿದನು. ಆ ರಾವಣನ ಕೈಯಲ್ಲಿದ್ದ ಬಿಲ್ಲು ಮುರಿದಮೇಲೆ ತಿರುಗಿ ರಾವಣನ ಮೈಗೆಗುರಿಯಿಟ್ಟು, ಮೂರುಬಾಣಗಳನ್ನು ಪ್ರಯೋಗಿಸಿದನು. ಈ ತೀಕ್ಷ್ಣಬಾಣಗಳಿಂದ ರಾವಣನು ಬಹಳವಾಗಿ ನೊಂದು ಮುಹೂರ್ತಕಾಲದವರೆಗೆ ಮೂರ್ಛೆಹೊಂದಿದ್ದು, ತಿರುಗಿ ಪ್ರಯತ್ನದಿಂದ ಚೇತರಿಸಿಕೊಂಡನು. ರಾವಣನು ಬಹಳಸಮರ್ಥನಾಗಿಯೂ, ದೇವಶತ್ರುವಾಗಿಯೂ ಇದ್ದರೂ, ಲಕ್ಷ್ಮಣನ ಬಾಣಗಳಿಂದ ಅವನ ಕೈಯಲ್ಲಿದ್ದ ಬಿಲ್ಲು ಮುರಿದುಬಿದ್ದಿತು. ಅವನ ದೇಹವು ಜರ್ಝರಿತವಾಯಿತು. ಸರ್ವಾಂಗಗಳಲ್ಲಿಯೂ ರಕ್ತವು ಕಿತ್ತುಕೊಂಡಿತು. ಅವನ ಮೈಯೆಲ್ಲವೂ ಮೇದಸ್ಸಿನಿಂದ ತೊಯ್ದಂತಾಯಿತು. ಈ ತನ್ನ ದುರವಸ್ಥೆಯನ್ನು ನೋಡಿ ರಾವಣನು, ಮಿತಿಮೀರಿದ ಕೋಪಾವೇಶವನ್ನು ಹೊಂದಿ, ಹೇಗಾದರೂ ಲಕ್ಷ್ಮಣನನ್ನು ಕೊಲ್ಲಬೇಕೆಂಬ ನಿರ್ಧಾರದಿಂದ, ಪೂರ್ವದಲ್ಲಿ ತನಗೆ ಬ್ರಹ್ಮಾನುಗ್ರಹದಿಂದ ಲಭಿಸಿದ ಒಂದು ಶಕ್ತ್ಯಾಯುಧವನ್ನು ಕೈಗೆತ್ತಿಕೊಂಡನು. ಹೊಗೆಯಿಲ್ಲದ ಅಗ್ನಿಜ್ವಾಲೆಯಂತೆ ದೇದೀಪ್ಯಮಾನವಾಗಿಯೂ, ನೋಡುವಾಗಲೇ ಸಮಸ್ತವಾನರರಿಗೂ ಭಯವನ್ನು ಹುಟ್ಟಿಸತಕ್ಕದಾಗಿಯೂ ಇದ್ದ ಆಶಕ್ತಿಯನ್ನು ಮಹಾವೇಗದಿಂದ ಲಕ್ಷ್ಮಣನ ಕಡೆಗೆ ಪ್ರಯೋಗಿಸಿದನು. ಈ ಮಹಾದ್ಭುತಶಕ್ತಿಯು ತನ್ನಮೇಲೆ ಬರುವುದನ್ನು ನೋಡಿದೊಡನೆ ಲಕ್ಷ್ಮಣನು ಅದನ್ನು ಖಂಡಿಸಬೇಕೆಂದೆಣಿಸಿ, ಹುತಮಾಡಿದ ಬೆಂಕಿಗೆ ಸಮಾನಗಳಾದ ಅನೇಕತೀಕ್ಷ್ಣಬಾಣಗಳನ್ನು ಪ್ರಯೋಗಿಸಿದನು. ಏನಾದರೇನು ! ಲಕ್ಷ್ಮಣನು ಎಷ್ಟೇ ಬಾಣಗಳಿಂದ ತಡೆಯುತಿದ್ದರೂ, ಆ ಶಕ್ತಿಯು ತನ್ನ ವೇಗವನ್ನು ಬಿಡದೆ ಲಕ್ಷ್ಮಣನ ವಿಶಾಲವಾದ ಎದೆಯಲ್ಲಿ ನಾಟಿತು. ರಘುಕುಲವೀರನಾದ ಲಕ್ಷ್ಮಣನು ಬಹಳ ಶಕ್ತಿಮಂತನಾಗಿದ್ದರೂ, ರಾವಣಪ್ರಯುಕ್ತವಾದ ಶಕ್ತಿಯ ವೇಗವನ್ನು ತಡೆಯಲಾರದೆ, ಅದರಿಂದ ಪ್ರಹೃತನಾಗಿ ಅದರ ಮಹಾಜ್ವಾಲೆಗೆ ಸಿಕ್ಕಿ ಮೂರ್ಛೆಬಿದ್ದನು. ಹೀ

ಗೆ ಲಕ್ಷ್ಮಣನು ಮೂರ್ಛಿತನಾಗಿ ಬಿದ್ದುದನ್ನು ನೋಡಿದೊಡನೆ, ರಾವಣನು ಸಂತೋಷದಿಂದ ತಟ್ಟನೆ ಮುಂದೆ ಬಂದು, ತನ್ನ ಎರಡು ತೋಳುಗಳಿಂದಲೂ ಆಲಕ್ಷ್ಮಣನನ್ನು ಹಿಡಿದೆತ್ತಿಕೊಂಡುಹೋಗುವುದಕ್ಕೆ ಯತ್ನಿಸಿದನು. ಆದರೇನು? ಒಂದುವೇಳೆ ¹ ಹಿಮವತ್ಪರ್ವತವನ್ನಾಗಲಿ, ಮಂದರಪರ್ವತವ

---

1 ಇಲ್ಲಿ "ಹಿಮವಾನ್ಮಂದರೋ ಮೇರುಸ್ತ್ರೈಲೋಕ್ಯಂ ವಾ ಸಹಾಮರೈ: । ಶಕ್ಯಂ ಭುಜಾಭ್ಯಾಮುದ್ಧರ್ತುಂ ನ ಸಂಖ್ಯೇ ಭರತಾನುಜ:" ಎಂದು ಮೂಲವು. ವಿಶೇಷಾರ್ಥವು—ಇಲ್ಲಿ ಲಕ್ಷ್ಮಣನು ತನ್ನ ತೋಳುಗಳಿಂದೆತ್ತಬೇಕೆಂದು ಪ್ರಯತ್ನಿಸಿ ಬಂದ ರಾವಣನನ್ನು ಋಷಿಯು ಸಾಮಾನ್ಯೋಕ್ತಿಯಿಂದ ಪರಿಹಾಸಮಾಡುವುದಾಗಿ ಭಾವವು. (ಹಿಮವಾನ್) "ಧೈರ್ಯೇಣ ಹಿಮವಾನಿವ" ಎಂಬುದಾಗಿ ಸಮಸ್ತ ಧೀರರಿಗೂ ಉಪಮಾನವೆನಿಸಿಕೊಳ್ಳುವ ಹಿಮವತ್ಪರ್ವತವನ್ನಾದರೂ ತನ್ನ ಭುಜಗಳಿಂದೆತ್ತುವುದಕ್ಕೆ ರಾವಣನಿಗೆ ಸಾಧ್ಯವಾಗಬಹುದು. ಅದರಲ್ಲಿ ಏಕದೇಶವಾದ ಕೈಲಾಸವನ್ನು ಅವನು ಮೊದಲು ಕದಲಿಸಿರುವುದೇ ಇದಕ್ಕೆ ನಿದರ್ಶನವು. ಮತ್ತು (ಮಂದರ:) ಸಮಸ್ತಸಾಗರಗಳಲ್ಲಿಯೂ ಪ್ರಧಾನವಾಗಿ, ಬಹಳ ಗಂಭೀರವೆನಿಸಿದ ಕ್ಷೀರಸಮುದ್ರವನ್ನೇ ಮೊದಲು ಕಲಕಿದ ಮಂದರ ಪರ್ವತವನ್ನಾದರೂ ಭುಜಗಳಿಂದೆತ್ತುವುದಕ್ಕೆ ಸಾಧ್ಯವು.ಇದಕ್ಕೆ ನಿದರ್ಶನವಾಗಿ ಪೂರ್ವದಲ್ಲಿ ರಾವಣನಿಂದ ಪರಾಜಿತರಾದ ದೇವತೆಗಳೇ ಅದನ್ನು ಕಿತ್ತು ತಂದು ಸಮುದ್ರದಲ್ಲಿ ಹಾಕಿರುವರು. ಮತ್ತು, (ಮೇರು:) ಸಕಲಕುಲಪರ್ವತಗಳಿಗೂ ತಿಲಕಪ್ರಾಯವಾದ ಮೇರುವನ್ನಾದರೂ ಕಿತ್ತು ತರಬಹುದು. ಇದಕ್ಕೆ ನಿದರ್ಶನವಾಗಿ ಪೂರ್ವದಲ್ಲಿ ವಾಯುವು ಆ ಮೇರುಪರ್ವತದ ಶಿಖರಭೂತವಾದ ಲಂಕೆಯನ್ನು ಸಮುದ್ರಮಧ್ಯದಲ್ಲಿ ತಂದಿಟ್ಟನು. (ತ್ರೈಲೋಕ್ಯಂ) ಪಂಚಾಶತ್ಕೋಟಿವಿಸ್ತೀರ್ಣವುಳ್ಳದಾಗಿ, ತನಗೆ ಬೇರೊಂದು ಪರಿಮಾಣವಿಲ್ಲದೆ ತನಗೆ ತಾನೇ ಪರಿಮಾಣವಾದ ಮೂರುಲೋಕಗಳನ್ನೂ ಕಿತ್ತು ತರುವುದಕ್ಕೆ ಸಾಧ್ಯವಾಗಬಹುದು. ಇದಕ್ಕೆ ನಿದರ್ಶನವಾಗಿ, ಪೂರ್ವದಲ್ಲಿ ಹಿರಣ್ಯಾಕ್ಷನು ಅದರಲ್ಲಿ ಏಕದೇಶವಾದ ಭೂಮಿಯನ್ನು ಸುರುಟಿಕೊಂಡು ಹೋಗಿರುವನು. ಇದರಮೇಲೆ (ಸಹಾಮರೈ:) ತ್ರೈಲೋಕ್ಯ ನಿರ್ವಾಹಕರಾದ ದೇವತೆಗಳೊಡನೆ ಕೂಡಿರುವಾಗಲೂ ಆ ತ್ರೈಲೋಕ್ಯವನ್ನು ಕದಲಿಸುವುದು ಶಕ್ಯವು. ಏಕೆಂದರೆ,ದೇವಾಧಿಪತಿಯಾದ ಇಂದ್ರನು ತನ್ನ (ರಾವಣನ) ಮಗನಿಂದಲೇ ನಿಗ್ರಹಿಸಲ್ಪಟ್ಟಿರುವನು. ಹೀಗಿದ್ದರೂ (ಭರತಾನುಜ:) ರಾವಣನ ತಮ್ಮನಿಗೆ ತಮ್ಮನಾದ ಲಕ್ಷ್ಮಣನುಮಾತ್ರ ಆಯುದ್ಧದಲ್ಲಿ ರಾವಣನ ತೋಳುಗಳಿಂದ ಕದಲಿಸುವುದಕ್ಕೆ ಸಾಧ್ಯವಾಗಲಿಲ್ಲವೆಂದರ್ಥವು. ರಾಮನಿಗೆ ಚತುರ್ಥಾಂಗರೂಪವಾದ ಲಕ್ಷ್ಮಣನನ್ನು ಕೈಯಿಂದೆತ್ತುವುದಕ್ಕೂ ಶಕ್ತನಾಗದ ರಾವಣನು ರಾಮನೊಡನೆ, ಹೇಗೆ ಯುದ್ಧಮಾಡಬಲ್ಲನೆಂಬ ಭಾವವೂ ಸೂಚಿತವಾಗುವುದು. ಮತ್ತು ಇಲ್ಲಿ (ಭುಜಾಭ್ಯಾಂ)

ನ್ನಾಗಲಿ, ಮೇರುಪರ್ವತವನ್ನಾಗಲಿ, ಸಮಸ್ತದೇವಸಮೂಹದಿಂದ ಕೂಡಿದ ಮೂರುಲೋಕವನ್ನಾಗಲಿ, ಕೈಗಳಿಂದೆತ್ತಿ ಹಿಡಿಯಬಹುದೇಹೊರತು, ಆಗ ರಣರಂಗದಲ್ಲಿ ಮಲಗಿದ ಲಕ್ಷ್ಮಣನನ್ನುಮಾತ್ರ ಮೇಲಕ್ಕೆತ್ತುವುದು ಯಾರೊಬ್ಬರಿಗೂ ಸಾಧ್ಯವಲ್ಲವು. ಬ್ರಹ್ಮಸಂಬಂಧಿಯಾದ ಆ ಶಕ್ತಿಯು ವಕ್ಷಸ್ಥಲದಲ್ಲಿನಾಟಿದಕ್ಷಣವೇ ಲಕ್ಷ್ಮಣನು ಅಪ್ರಮೇಯವಾಗಿಯೂ,[1]ವಿಷ್ಣುದೇವನಿಗೆ ಅಂಶಭೂತವಾಗಿಯೂ ಇರುವ ತನ್ನ ನಿಜಸ್ವರೂಪವನ್ನು ಸ್ಮರಿ

---

ಎಂಬ ದ್ವಿವಚನವನ್ನು ಹೇಳಿರುವುದರಿಂದ, ಹಿಮವತ್ಪರ್ವತಾದಿಗಳನ್ನು ಎರಡೇ ಭುಜಗಳಿಂದ ರಾವಣನು ಮೇಲಕ್ಕೆತ್ತಬಲ್ಲವನಾಗಿದ್ದರೂ, ಈ ಲಕ್ಷ್ಮಣನನ್ನೆತ್ತುವುದಕ್ಕೆ ಇಪ್ಪತ್ತು ತೋಳುಗಳನ್ನುಪಯೋಗಿಸಿಯೂ ಸಾಧ್ಯವಾಗಲಿಲ್ಲವೆಂದು ಸೂಚಿತವಾಗುವುದು. (ಸಂಖ್ಯೇ) ಯುದ್ಧದಲ್ಲಿ, ಎಂಬುದರಿಂದ, ದುಹೃದಯರಾದವರಿಗೆ ಮಾತ್ರವೇ ಅಸಾಧ್ಯವೆಂದು ಸೂಚಿತವು. ಇದಕ್ಕೆ ನಿದರ್ಶನವಾಗಿ ಮುಂದೆ ಹನುಮಂತನು ಈ ಲಕ್ಷ್ಮಣನನ್ನು ರಾಮನಬಳಿಗೆ ಎತ್ತಿಕೊಂಡು ಹೋಗುವುದಕ್ಕೆ ಪ್ರಯತ್ನಿಸಿದಾಗ, ಅವನು ಅನುಕೂಲಹೃದಯನಾಗಿದ್ದುದರಿಂದಲೇ ಆ ಕಾರ್ಯವು ಅವನಿಗೆ ಸುಲಭಸಾಧ್ಯವಾಯಿತೆಂದೂ ಸೂಚಿಸಲ್ಪಟ್ಟಿರುವುದು.

1 ಲಕ್ಷ್ಮಣನ ದೇಹಕ್ಕೆ ಇಷ್ಟು ಭಾರವುಂಟಾಗುವುದಕ್ಕೆ ಕಾರಣವೇನೆಂದರೆ, ಅವನಲ್ಲಿರುವ ವಿಷ್ಣ್ವಂಶವೇ ಹೊರತು ಬೇರೆಯಲ್ಲವು. ಲಕ್ಷ್ಮಣನು ಅಂತಹ ತನ್ನ ಸ್ವರೂಪವನ್ನು ಸ್ಮರಿಸಿದುದುಮಾತ್ರವೇಹೊರತು ಆಗ ಬೇರೆ ಯಾವ ವ್ಯಾಪಾರವನ್ನೂ ಮಾಡಲಿಲ್ಲವಾದುದರಿಂದ, ಆ ಗುರುತ್ವವು ಅವನಿಗೆ ಯಾವಾಗಲೂ ಸ್ವಾಭಾವಿಕವೆಂದೇ ಏರ್ಪಡುವುದು. ಇಲ್ಲದೆ ಗುರುತ್ವವು ಕೇವಲಸ್ಮರಣಮಾತ್ರದಿಂದ ಹೊಸದಾಗಿ ಸಂಭವಿಸಲಾರದಷ್ಟೆ! ಸ್ವಕೀಯಾಂಶಸ್ಮರಣದಿಂದಲೇ ಲಕ್ಷ್ಮಣನು ತನಗೆ ಮೊದಲಿಲ್ಲದಗುರುತ್ವವನ್ನುಂಟುಮಾಡಿಕೊಂಡನೆಂದು ಹೇಳಬಾರದೆ, ಎಂದರೆ, ಆ ವಿಚಾರವು ಇಲ್ಲಿ ಪದಾರ್ಥರೂಪವಾಗಿಯಾಗಲಿ, ವಾಕ್ಯಾರ್ಥರೂಪವಾಗಿಯಾಗಲಿ ಕಾಣುವುದಿಲ್ಲ. ಸ್ವರೂಪಸ್ಮರಣವೇ ಗುರುತ್ವವನ್ನುಂಟುಮಾಡುವುದಕ್ಕೆ ಕಾರಣವೆಂದು ಹೇಳುವುದಕ್ಕೂ ಪ್ರಮಾಣವಿಲ್ಲ. ಅಥವಾ ಇಲ್ಲಿ ಲಕ್ಷ್ಮಣನು ತನ್ನ ವಿಪತ್ಪರಿಹಾರಾರ್ಥವಾಗಿಯೇ ಆ ವಿಷ್ಣುರೂಪವನ್ನು ಸ್ಮರಿಸಿಕೊಂಡಿರಬಾರದೆ ? ಎಂದರೆ, ಅದೂ ಇಲ್ಲ. ತಾನೇ ವಿಷ್ಣುರೂಪಿಯಾದುದರಿಂದ ತನಗೆ ವಿಪತ್ಪರಿಹಾರವು ತಾನೇಹೊರತು ಬೇರೆಯಲ್ಲವು. ಅಥವಾ ತಾನು ನಟಿಸುತ್ತಿರುವ ಮನುಷ್ಯಭಾವನೆಯು ತಪ್ಪಿಹೋದ ಪಕ್ಷದಲ್ಲಿ ತನಗೆ ತಾನೇ ಗುರುತ್ವವುಂಟಾಗುವುದರಿಂದ ಅದಕ್ಕಾಗಿ ವಿಷ್ಣುಸ್ಮರಣವಾಗಿರಬಾರದೆ ? ಎಂದರೆ, ಮನಸ್ಸಿನ ಭಾವನೆಯು ಲೌಕಿಕರಿ.

ಸಿಕೊಂಡನು. ಹಾಗೆ ಲಕ್ಷ್ಮಣನು ತನ್ನ ದಿವ್ಯಸ್ವರೂಪವನ್ನು ಸ್ಮರಿಸಿ
ದುದರಿಂದಲೇ, ರಾವಣನು ಅವನನ್ನೆತ್ತುವುದಕ್ಕಾಗಿ ತನ್ನ ಸಮಸ್ತಭುಜ
ನ್ನೂ ಉಪಯೋಗಿಸಿ ಎಷ್ಟೋಪ್ರಯತ್ನಪಟ್ಟರೂ, ದಾನವರ ಕೆಟ್ಟ
ಸುವುದಕ್ಕಾಗಿಯೇ ಮನುಷ್ಯರೂಪದಿಂದವತರಿಸಿದ ಆ ಲಕ್ಷ್ಮಣನನ್ನು
ಸಿಕೊಂಡು ಹೋಗುವುದಕ್ಕೆ ಅವನಿಗೆ ಸಾಧ್ಯವಿಲ್ಲದೆ ಹೋಯಿತು.ಇಷ್ಟ
ವಾಯುಪುತ್ರನಾದ ಹನುಮಂತನು ರಾವಣನ ಕ್ರೂರಕಾರ್ಯವನ್ನು ನೋ
ಕೋಪಗೊಂಡವನಾಗಿ, ಮೈತಿಳಿಯದೆ ಮುಂದೆ ನುಗ್ಗಿ, ವಜ್ರದಂತಿ
ತನ್ನ ಮುಷ್ಟಿಯಿಂದ ರಾವಣನ ಎದೆಯಮೇಲೆ ಹೊಡೆದನು. ಈ ಮುಷ್ಟಿ
ಹಾರದಿಂದ ರಾಕ್ಷಸೇಶ್ವರನಾದ ರಾವಣನ ಮೈಕಟ್ಟು ಸಡಿಲಿತು.ಆವನ
ಹವು ನಡುಗಿತು. ನಿಲ್ಲಲಾರದೆ ಮೊಳಕಾಲೂರಿ ಕೆಳಗೆ ಬಿದ್ದನು. ಅವನ ಕ
ವೆಗಳಲ್ಲಿ ರಕ್ತವು ಕಿತ್ತುಕೊಂಡಿತು. ನೋವಿನಿಂದ ತತ್ತಳಿಸುತ್ತ,ತನ್ನ ರಥ
ಮೇಲೆಯೇ ನಿಶ್ಚೇಷ್ಟನಾಗಿ ಬಿದ್ದಿದ್ದನು. ಅವನಿಗೆ ಮೈಮೇಲೆ ಪ್ರಜ್ಞೆಯ
ತಪ್ಪಿತು. ಅವನ ಮನಸ್ಸಿನ ಸ್ಥೈರ್ಯವೂ ತಪ್ಪಿತು. ಹೀಗೆ ಭಯಂಕರಪ
ಕ್ರಮವುಳ್ಳ ಆ ರಾವಣನು ಮೂರ್ಛಿತನಾಗಿ ಬಿದ್ದುದನ್ನು ನೋಡಿ, ಆ
ಶದಲ್ಲಿದ್ದ ಮಹರ್ಷಿಗಳೂ, ಸಿದ್ಧಚಾರಣಾದಿಗಳೂ, ಇಂದ್ರಾದಿದೇವ
ಳೂ, ವಾನರರೂ ಸಂತೋಷದಿಂದ ಸಿಂಹನಾದಗಳನ್ನು ಮಾಡಿದ
ಈ ನಡುವೆ ಇತ್ತಲಾಗಿ ತೇಜಸ್ವಿಯಾದ ಹನುಮಂತನು, ರಾವಣನ ಶಕ್ತ್ಯಾ
ಯುಧದಿಂದ ನೊಂದು ಮಲಗಿದ್ದ ಲಕ್ಷ್ಮಣನನ್ನು ತನ್ನ ಎರಡು ತೋಳುಗಳ
ದಲೂ ಎತ್ತಿ ತಂದು ರಾಮನ ಸಮೀಪದಲ್ಲಿ ಬಿಟ್ಟನು. ಆ ಲಕ್ಷ್ಮಣ
ದೇಹವನ್ನೆತ್ತಿಹಿಡಿಯುವುದಕ್ಕೆ ಅಂತಹ ಮಹಾಬಲವುಳ್ಳ ರಾವಣನಿಗೆ ಸಾ
ಧ್ಯವಲ್ಲದೆ ಹೋದರೂ, [1] ಹನುಮಂತನು ಆತನಿಗೆ ಅನುಕೂಲಮನಸ್ಸುಳ್ಳ

ಗೆ ತಿಳಿಯಲಾರದಾದುದರಿಂದ ಹಾಗೂ ಹೇಳುವುದು ಸರಿಯಲ್ಲ. ಇಲ್ಲವೆ ಮನು
ಭಾವನೆಯೆಂಬುದಕ್ಕೆ ಉಪಾಯತ್ವವನ್ನೂ ಹೇಳಲಾಗದು. ಆದುದರಿಂದ ಆ ವಸ್ತು
ಸ್ವಭಾವದಿಂದಲೇ ಭಕ್ತರಿಗೆ ಹಗುರವಾಗಿಯೂ, ವಿರೋಧಿಗಳಿಗೆ ಭಾರವಾಗಿಯ
ಇರುವುದೆಂದು ತಿಳಿಯಬೇಕು. ಇದಕ್ಕಾಗಿಯೇ ಅಚಿಂತ್ಯವೆಂಬ ವಿಶೇಷಣವು.

1 ಇದಕ್ಕೆ ಮೊದಲು ಲಕ್ಷ್ಮಣನು ಹಿಮವದಾದಿಗಳಿಗಿಂತಲೂ ಭಾರವುಳ್ಳವ
ದುದರಿಂದ ಅಕಂಪ್ಯನೆಂದು ಹೇಳಲ್ಪಟ್ಟಿತು. ಇಲ್ಲಿ "ಅಂತಹ ಲಕ್ಷ್ಮಣನನ್ನು ದಿಂದು ಸ